# ಕುಮಾರವ್ಯಾಸ ಭಾರತ ಓದು

## ಕೀಚಕನ ಪ್ರಸಂಗ
## ಮತ್ತು
## ಉತ್ತರ ಕುಮಾರನ ಪ್ರಸಂಗ

ಸಿ ಪಿ ನಾಗರಾಜ

# ಕುಮಾರವ್ಯಾಸ ಭಾರತ ಓದು

## ಕೀಚಕನ ಪ್ರಸಂಗ

ಮತ್ತು

## ಉತ್ತರ ಕುಮಾರನ ಪ್ರಸಂಗ

**ಸಿ.ಪಿ.ನಾಗರಾಜ**

**ನಾಗು ಸ್ಮಾರಕ ಪ್ರಕಾಶನ**
೭೫, ೫ನೆಯ ಕ್ರಾಸ್, ‘ಎ ‘ಬ್ಲಾಕ್, ಕ್ರಿಷ್ಣ ಗಾರ್ಡನ್
ಆರ್.ವಿ.ಕಾಲೇಜು ಪೋಸ್ಟ್, ಬೆಂಗಳೂರು–೫೬೦ ೦೫೯

**KUMARAVYASA BHARATA ODU--KICHAKANA PRASANGA AND UTTARA KUMARANA PRASANGA**
by C.P.Nagaraja, published by Nagu Smaraka Prakashana, 75, 5 th cross, 'A' block, Krishna Garden, Bengaluru-560059. Mobile: 9986347521

| | | |
|---|---|---|
| First Edition | : | 2024 |
| Page | : | 342 |
| Price | : | **Rs. 400/-** |
| Paper | : | Stora Cremy |
| Size | : | Demy 1/8 |
| Copy right | : | Author |
| Cover Design | : | C. Ravikumar |
| Page Layout | : | Harish K.R., 8553184584 |

**ಪ್ರತಿಗಳು ದೊರೆಯುತ್ತವೆ:**

ಆರ್.ಸುಧೀಂದ್ರ ಕುಮಾರ್
# 9, 20ನೆಯ ಮೈನ್, 3ನೆಯ ಕ್ರಾಸ್
ವಿಜಯನಗರ 2ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು–570017
ಮೊ. 8892626269

Printed at

KAMADHENU
PRINT-N-PACK
PASSION FOR PRINT

# ಮುನ್ನುಡಿ

ಸಿ.ಪಿ.ನಾಗರಾಜ ಅವರು ಕಳೆದ ಒಂದು ದಶಕದಿಂದ ನಾನು ಗಮನಿಸಿದ ಹಾಗೆ ಕನ್ನಡ ಅಧ್ಯಾಪಕರಾಗಿ ಪಾಠ ಪ್ರವಚನ ಮಾಡುವ ವೃತ್ತಿಯಿಂದ ನಿವೃತ್ತಿಯಾಗಿದ್ದರೂ, ನಿರಂತರವಾಗಿ ಓದುವ ಪ್ರವೃತ್ತಿಯನ್ನು ಕಡೆಗಣಿಸಿದವರಲ್ಲ. ನಾನು ರಂಗಕರ್ಮಿಯಾಗಿ ಅವರ "ಭಾಗೀರಥಿ–ಅಂಬೆ–ಹಾವು –ಅಂಗಿ ಬಟ್ಟೆ–ಒಂದು ರೂಪಾಯಿ–ಕಳ್ಳರಿದ್ದಾರೆ ಎಚ್ಚರಿಕೆ–ಹೆಣದ ಹಣ" ನಾಟಕಗಳನ್ನು ಮತ್ತು ಅವರ ಪಿಎಚ್.ಡಿ., ಬರಹ 'ಕನ್ನಡ ಬಯ್ಗುಳಗಳ ಓದು' ಕೃತಿಯನ್ನು ಓದಿ, ಅವರ ಸಮಾಜ ಅಧ್ಯಯನದ ಅರುಹು ಕುರುಹುಗಳನ್ನು ಮತ್ತು ಸಾಂಸ್ಕೃತಿಕ ವಿಭಿನ್ನ ಅಭಿವ್ಯಕ್ತಿಗಳನ್ನು ಕುತೂಹಲದಿಂದ ಗಮನಿಸಿದ್ದೇನೆ. ಸಾಹಿತ್ಯ ವಿದ್ಯಾರ್ಥಿಯಾದ ನಾನು ಹಲವು ಜ್ಞಾನಶಾಖೆಗಳಿಂದ ಗಳಿಸಿದ ಅರಿವು ಮತ್ತು ಸಾಂಸ್ಕೃತಿಕವಾಗಿ ವಿಭಿನ್ನ ನೆಲೆಗಳ ಹುಡುಕಾಟದ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಸಿ.ಪಿ.ನಾಗರಾಜ ಅವರ ಸರ್ವಜ್ಞ ವಚನಗಳ ಓದು–ಹನ್ನೆರಡನೆಯ ಶತಮಾನದ ಶಿವಶರಣಶರಣೆಯರ ವಚನಗಳ ಓದು–ಕನಕದಾಸರ 'ರಾಮಧಾನ್ಯ ಪ್ರಸಂಗ ಓದು'–ಲಕ್ಷೀಶ ಕವಿಯ 'ಸೀತಾಪರಿತ್ಯಾಗ ಪ್ರಸಂಗ ಓದು'–ಪಂಪ ಭಾರತ ಪ್ರಸಂಗ ಓದು–ಪ್ರಥಮ ಆಶ್ವಾಸದ ೮ ಪ್ರಸಂಗ' ಮತ್ತು ಒಂದು ನೂರ ಏಳು ಪ್ರಸಂಗಗಳಿಂದ ಕೂಡಿರುವ 'ಪಂಪ ಭಾರತ ಪ್ರಸಂಗ' ಕೃತಿಗಳನ್ನು ಅವಲೋಕಿಸಿದ್ದೇನೆ.

ಅವರ ಇತ್ತೀಚಿನ 'ಕುಮಾರವ್ಯಾಸ ಭಾರತ ಓದು' ಬರಹ ಕೃತಿರೂಪದಲ್ಲಿ ಪ್ರಕಟಗೊಳ್ಳಲು ಸಿದ್ಧವಾಗಿದೆ. ಈ ಮೊದಲೇ ಅವರು ಪಂಪ ಭಾರತವನ್ನು ಅವರ ನೋಟ ಕ್ರಮದಲ್ಲೆ ಓದಿ, ಅದನ್ನು ನಾಟಕ ರೂಪದಲ್ಲಿ ಪ್ರಕಟಿಸಿದ್ದಾರೆ. ಇದೀಗ ಕುಮಾರವ್ಯಾಸ ಭಾರತ ಕಾವ್ಯದ ಎರಡು ನಾಟಕೀಯ ಪ್ರಸಂಗಗಳನ್ನು ಪ್ರದರ್ಶಕ

ಕಲೆಯಾದ ನಾಟಕ ಪ್ರಕಾರದಲ್ಲಿ ಓದುಗರ ಮುಂದಿಟ್ಟಿದ್ದಾರೆ.

ನಡುಗನ್ನಡದಲ್ಲಿ ರಚನೆಗೊಂಡಿರುವ ಕುಮಾರವ್ಯಾಸ ಭಾರತದ ವಿರಾಟ ಪರ್ವದಿಂದ ಆಯ್ದ ಪದ್ಯಗಳನ್ನು ನಾಟಕದ ರೂಪದಲ್ಲಿ ಅಳವಡಿಸಿ, ಭಾರತದ ಮಹಾನ್ ಪಾತ್ರಗಳನ್ನು ರಂಗದಲ್ಲಿ ಪ್ರೇಕ್ಷಕರೊಡನೆ ನೇರವಾಗಿ ಸಂವಹನ ಗೊಳಿಸುವ ರೂಪಕವಾಗಿ ಕಲ್ಪಿಸಿದ್ದಾರೆ. ಇದುವರೆಗೂ ಮತ್ತು ಈಗಲೂ ಗಮಕಿಗಳ ಮೂಲಕ ಶ್ರವ್ಯಕಾವ್ಯವಾಗಿ ಪ್ರಸಿದ್ಧಿಯಾಗಿರುವ ಕುಮಾರವ್ಯಾಸನ ಕನ್ನಡ ಭಾರತದ ಎರಡು ಪ್ರಸಂಗಗಳನ್ನು ದೃಶ್ಯಕಾವ್ಯದ ರೂಪದಲ್ಲಿ ಪರಿಭಾವಿಸಿಕೊಂಡು ರಂಗದಲ್ಲಿ ನಟನಟಿಯರ ಮೂಲಕ ಪ್ರಯೋಗಕ್ಕೆ ರಂಗಪಠ್ಯದ ಮಾದರಿಯನ್ನು ರೂಪಿಸಿದ್ದಾರೆ.

ಆಧುನಿಕ ಕಾಲದ ಕನ್ನಡದ ಮಹಾಕವಿ ಕುವೆಂಪು ಅವರು ನಡುಗನ್ನಡದ ಮಹಾಕವಿ ಕುಮಾರವ್ಯಾಸನನ್ನು ಕುರಿತು;

**"ಕುಮಾರವ್ಯಾಸನು ಹಾಡಿದನೆಂದರೆ**
**ಕಲಿಯುಗ ದ್ವಾಪರವಾಗುವುದು**
**ಭಾರತ ಕಣ್ಣಲಿ ಕುಣಿಯುವುದು ಮೈಯಲಿ**
**ಮಿಂಚಿನ ಹೊಳೆ ತುಳುಕಾಡುವುದು."**

ಎಂದು ಮನದುಂಬಿ ಹಾಡಿದ್ದಾರೆ. ಗಮಕಿಗಳಿಂದ ಭಾವಗಳ ಏರಿಳಿತದ ಸುಶ್ರಾವ್ಯವಾದ ಹಾಡುವಿಕೆಯ ಮೂಲಕ ಕೇಳುಗರನ್ನು ಮಾನಸಿಕವಾಗಿ ದ್ವಾಪರಯುಗದ ಕಾಲಘಟ್ಟಕ್ಕೆ ಕರೆದೊಯ್ಯುವ ಕುಮಾರವ್ಯಾಸನ ಕಥನಕಾವ್ಯದ ಅದ್ಭುತ ಕವಿತಾಶಕ್ತಿ ಮತ್ತು ರೂಪಕ ಪ್ರಪಂಚದ ಮಹಾಪಾತ್ರಗಳೆಲ್ಲವೂ ಮತ್ತೊಮ್ಮೆ ಜೀವ ತಳೆದು ಬೆರಗುಗಣ್ಣಿನ ನಮ್ಮೊಂದಿಗೆ ವ್ಯವಹರಿಸುವ ಪಾತ್ರಗಳಾಗುತ್ತವೆ.

**ತಿಳಿಯ ಹೇಳುವೆ ಕೃಷ್ಣ ಕಥೆಯನು**
**ಇಳೆಯ ಜಾಣರು ಮೆಚ್ಚುವಂತಿರೆ**
**ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ**
**ಹಲವು ಜನ್ಮದ ಪಾಪರಾಶಿಯ**
**ತೊಳೆವ ಜಲವಿದು ಶ್ರೀಮದಾಗಮ**
**ಕುಲಕೆ ನಾಯಕ ಭಾರತಾಕೃತಿ ಪಂಚಮ ಶ್ರುತಿಯ.**

ಶ್ರೀಕೃಷ್ಣನ ಪರಮಭಕ್ತನಾದ ಕುಮಾರವ್ಯಾಸ ಭಾರತದಲ್ಲಿ ಭಿನ್ನಭಿನ್ನ ಭಾವಾಭಿವ್ಯಕ್ತಿಯ ಮಾನವರು ಕೃಷ್ಣನ ಮಾರ್ಗದರ್ಶನದಂತೆ ನಡೆದುಕೊಳ್ಳುತ್ತಾರೆ. ಕೃಷ್ಣನೇ ಎಲ್ಲಾ ಗುಣಾವಗುಣಗಳ ಪಾತ್ರಗಳನ್ನು ಕಥನಕಾವ್ಯದ ಕೇಂದ್ರ ಸ್ಥಾನದಲ್ಲಿ ನೆಲೆಗೊಳಿಸಿ, ತನ್ನ ಕಪಟ ನಾಟಕಕ್ಕೆ ತಾನೇ ಸೂತ್ರಧಾರಿಯಾಗಿ, ತನ್ನ ಸುತ್ತಲೂ ಗಿರಕಿ ಹೊಡೆಯುವ ಪಾತ್ರಗಳ ರುದ್ರರಮಣೀಯವಾದ ಅನುಭವಕ್ಕೆ ಪೂರಕ ವಾಗುವಂತೆ ರಂಗಸ್ಥಳವನ್ನು ಸಜ್ಜುಗೊಳಿಸಿ, ವ್ಯಕ್ತಿತ್ವಗಳ ದರ್ಶನವನ್ನು

ಮಾಡಿಸುತ್ತಾನೆ. ಕೃಷ್ಣಭಕ್ತಿಯ ಆವೇಶದಲ್ಲಿ ಮೈಮರೆತು ಕವಿತೆ ಕವಲುದಾರಿ ಹಿಡಿದಾಗ, ತಾನು ಬರೆಯುತ್ತಿರುವುದು ಕುರುವಂಶದ ಕಥೆಯೆಂಬುದು ಮರೆತರೆ "ತಿಳಿಯ ಹೇಳುವೆ ಕೃಷ್ಣ ಕಥೆಯನು"–"ನರನಾಟಕವ ತಾನೇ ನಟಿಸಿ ತೋರಿಸುವ ಮುಖ್ಯ ಸೂತ್ರಧಾರಿ" ಎಂದು ತನ್ನ ಕಾವ್ಯವನ್ನು ಮುಂದುವರಿಸುತ್ತಾನೆ. ಈ ಕಥೆ ಹಲವು ಜನ್ಮದ ಪಾಪ ತೊಳೆಯುವ ಜಲವಿದು ಎಂದು ತಿಳಿಯ ಹೇಳುತ್ತಾನೆ. ಅಲೌಕಿಕ ಪಾತ್ರವಾದ ಶ್ರೀಕೃಷ್ಣನು ನಾರಾಯಣನಾಗಿ ಮಾರ್ಗದರ್ಶನವನ್ನು ಮಾಡಿಸುವ ರಕ್ತಮಾಂಸದಿಂದ ಕೂಡಿರುವ ಮಾನವ ಪಾತ್ರವಾಗಿದ್ದಾನೆ.

ಮಹಾಭಾರತದ ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ಕಥೆಯೊಂದು ಇದ್ದೇ ಇರುತ್ತದೆ. ಕೃಷ್ಣನ ಪಾತ್ರ ಮಾತ್ರ ತನ್ನ ಸ್ವಂತದ ಕಥೆಯಿರದ ಪಾತ್ರವಾಗಿದೆ. ಕೃಷ್ಣನ ಕಥೆ ಬರುವುದು ಪಾಂಡವ–ಕೌರವರ ಕಥೆಯೊಂದಿಗೆ ಬೆರೆತಿರುವುದರಿಂದ. ಕೃಷ್ಣನ ಮೂಲಕ ಭಾರತದ ಇತರ ಪಾತ್ರಗಳ ಕಥೆಯನ್ನು ಕಾವ್ಯಮಯ ದೃಶ್ಯಕಾವ್ಯ ವಾಗಿಸಿದ್ದು ಕುಮಾರವ್ಯಾಸನ ನಾಟ್ಯೀಕರಿಸುವ ಮಹಾಪ್ರತಿಭಾಶಕ್ತಿಯಿಂದ.

**ವೇದಪುರುಷನ ಸುತನ ಸುತನ ಸ**
**ಹೋದರನ ಮೊಮ್ಮಗನ ಮಗನ ತ**
**ಳೋದರಿಯ ಮಾತುಳನ ಮಾವನನತುಳ ಭುಜಬಲದಿ**
**ಕಾದಿ ಗೆಲಿದವನಣ್ಣನವ್ವೆಯ**
**ನಾದಿನಿಯ ಜಠರದಲಿ ಜನಿಸಿದ**
**ನಾದಿ ಮೂರುತಿ ಸಲಹೊ ಗದುಗಿನ ವೀರನಾರಾಯಣ**

ಈ ಪದ್ಯವು ಕೃಷ್ಣ ಮತ್ತು ಅವನೊಂದಿಗೆ ವ್ಯವಹರಿಸುವ ಪಾತ್ರಗಳೆಲ್ಲ ಇಟ್ಟು ಕೊಂಡಿರುವ ರಕ್ತಸಂಬಂಧಗಳನ್ನು ಕುರಿತು ಹೇಳುವ ಕಥೆ. ಕೃಷ್ಣನನ್ನು ಮೆಚ್ಚಿಸುವ ಕಾವ್ಯ.ಕುಮಾರವ್ಯಾಸನಿಗೂ ಪೂರ್ವದಲ್ಲಿ ಬರಿ ರಾಮನ ಕುರಿತ ಮಹಾಕಾವ್ಯ ಗಳನ್ನು ಗಮನಿಸಿದ ಕಾರಣಕ್ಕೆ 'ಭಾರತ ಕಥಾಮಂಜರಿ ' ಬರೆಯುವ ಪ್ರೇರಣೆಗೆ ಈ ಪಠ್ಯ ಸಾಕ್ಷಿಯಾಗುತ್ತದೆ.

**ತಿಣಿಕಿದನು ಫಣಿರಾಯ ರಾಮಾ**
**ಯಣದ ಕವಿಗಳ ಭಾರದಲಿ ತಿಂ**
**ತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ**
**ಬಣಗು ಕವಿಗಳ ಲೆಕ್ಕಿಪನೆ ಸಾ**
**ಕೆಣಿಸಿದಿರು ಶುಕರೂಪನಲ್ಲವೆ**
**ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ.**

ಎಂದು ತನ್ನ ಹಿಂದಿನ ಕವಿಗಳು ರಾಮಕಥೆಯ ಭಾರದಲ್ಲಿ ಫಣಿರಾಯನು ಭಾರ ಹೊರಲಾರದೆ ಬಸವಳಿದ ಬಗೆಗೆ ಮತ್ತು ರಘುವಂಶದ ರಾಮನ ಚರಿತೆಯಲ್ಲಿ ಕಾಲಿಡಲು ಜಾಗವಿಲ್ಲದಷ್ಟು ಆಕ್ರಮಿಸಿಕೊಂಡಿರುವುದನ್ನು ವ್ಯಂಗ್ಯದಿಂದ ವರ್ಣಿಸುತ್ತಾನೆ. ತಾನು ಕೃಷ್ಣನ ಕಥೆಯನ್ನು ಲೋಕಮೆಚ್ಚುವ ಹಾಗೆ ಹೇಳುವುದಕ್ಕೆ ಹೆಮ್ಮೆಪಡುತ್ತಾನೆ. ಇವನ ಕಥನ ಕಾವ್ಯ ನವರಸಭರಿತವಾದರೂ ಸಂಸ್ಕೃತ ಕಾವ್ಯದ ಅಷ್ಟಾದಶ ವರ್ಣನೆಯ ವ್ಯಾಕರಣದ ನಿಯಮಗಳ ಗೋಜಿಗೆ ಹೋಗದೆ ತನ್ನದೇ ಶೈಲಿಯಿಂದ ರಚನೆಗೊಂಡಿದೆ.

ಸಂಸ್ಕೃತ ಕಾವ್ಯ ಮೀಮಾಂಸೆಯ ರೀತಿ ರಿವಾಜುಗಳನ್ನು ಕಡೆಗಣಿಸಿ ದೇಸಿ ನೆಲೆಯಲ್ಲಿ ಕಾವ್ಯ ಕಥೆಯನ್ನು ನಿರೂಪಿಸುವ ಸಲುವಾಗಿ ಸಂಸ್ಕೃತ ಕವಿಗಳು ಪ್ರತಿಪಾದಿಸುವ ಕಾವ್ಯ ಕಟ್ಟುವ ಕಲೆಗಾರಿಕೆಗೆ ಪರ್ಯಾಯವಾದ ತನ್ನ ಹೊಸ ಕಾವ್ಯ ಕಸುಬನ್ನು ಬಹಳ ಹೆಮ್ಮೆಯಿಂದ ಹೇಳಿಕೊಳ್ಳುವುದು ಹೀಗೆ–

**ಹಲಗೆ ಬಳಪವ ಪಿಡಿಯದೊಂದ**
**ಗ್ಗಳಿಕೆ ಪದವಿಟ್ಟಳುಪದೊಂದ**
**ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ**
**ಬಳಸಿ ಬರೆಯಲು ಕಂಟಪತ್ರದ**
**ವುಲಹುಗೆಡದಗ್ಗಳಿಕೆಯೆಂಬೀ**
**ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ.**

ನಿರಂಕುಶಮತಿಯಾದ ಕುಮಾರವ್ಯಾಸ ತನಗೆ ಸೂಕ್ತವೆನಿಸದ ಮೂಲಭಾರತದ ಕಥಾನಕಗಳನ್ನು ಕೈಬಿಟ್ಟಿದ್ದಾನೆ. ತನಗೆ ಬೇಕಾದ ರೀತಿ ರೂಪಾಂತರಿಸಿದ್ದಾನೆ. ಇಲ್ಲವೇ ಮೂಲಭಾರತದಲ್ಲಿಲ್ಲದ ಕಥನಗಳನ್ನು ಸೇರಿಸಿದ್ದಾನೆ. ಕನ್ನಡದ ಪಂಪ ಭಾರತ ಮತ್ತು ಸಂಸ್ಕೃತದ ವ್ಯಾಸಭಾರತಗಳಲ್ಲಿ ಎಲ್ಲಿಯೂ ಅಭಿವ್ಯಕ್ತಗೊಳ್ಳದ ಹೊಸ ಸನ್ನಿವೇಶಗಳು ಕುಮಾರವ್ಯಾಸನ ಕನ್ನಡ ಭಾರತದಲ್ಲಿ ಕಂಡುಬರುತ್ತವೆ. ಮೇಲಿನ ಪದ್ಯವನ್ನು ವಿಶ್ಲೇಷಣೆ ಮಾಡಿರುವ ಕನ್ನಡ ವಿಮರ್ಶಾಲೋಕ ಕುಮಾರವ್ಯಾಸನನ್ನು 'ನಾಲ್ಕು ಅಗ್ಗಳಿಕೆಗಳ ನಾರಣಪ್ಪ' ಎಂದು ಗುರುತಿಸಿವೆ. ತಾನು ಹಲಗೆ ಬಳಪ ಹಿಡಿದವನಲ್ಲ; ಒಂದು 'ಪದ' ಹಾಕಿದರೆ ಅದನ್ನು ಪುನಃ ಅಳಿಸುವ ಗೋಜಿಗೆ ಹೋಗಲಿಲ್ಲ. ಬರೆಯುವಾಗ ಕಂಟಪತ್ರದ ಉಲುಹು ಎಂದೂ ಕೆಟ್ಟದ್ದಿಲ್ಲ ಎಂಬ ಹೆಮ್ಮೆ ಇದೆ. ಕುಮಾರವ್ಯಾಸನು ಸಂಸ್ಕೃತ ಸಾಹಿತ್ಯಕ್ಕೆ ಅದರ ಕಾವ್ಯ ಮೀಮಾಂಸೆಗೆ ತೀವ್ರ ವಿರೋಧವನ್ನು ಮತ್ತು ಕಾವ್ಯಗಳಲ್ಲಿ ನವರಸಗಳಿರಬೇಕು, ಪದಗಳ ಪ್ರೌಢಿಮೆ ಅಧಿಕವಾಗಿರಬೇಕು ಎಂಬುದನ್ನು ತಿರಸ್ಕರಿಸಿದ.

ಕುಮಾರವ್ಯಾಸ ಕಾವ್ಯದ ಆರಂಭದಲ್ಲೆ ತನ್ನ ಭಾರತವು ಈವರೆಗಿನ ಎಲ್ಲಾ 'ಕಾವ್ಯಕೆ ಗುರು' ಎಂದು ಸ್ಪಷ್ಟಪಡಿಸುವ ಈ ಪದ್ಯ–ಭಾರತೀಯ ವರ್ಣವ್ಯವಸ್ಥೆಯ

ಶ್ರೇಣೀಕರಣದ ನೆಲೆಯನ್ನು ಅನುಸರಿಸಿ ಯಾವ ಯಾವ ವರ್ಣಗಳಿಗೆ ಯಾವ ಜ್ಞಾನ ಬೋಧಿಸುತ್ತದೆ ಎನ್ನುವುದನ್ನು ನೋಡಿ–

**ಅರಸುಗಳಿಗಿದು ವೀರ ದ್ವಿಜರಿಗೆ**
**ಪರಮ ವೇದದ ಸಾರ ಯೋಗೀ**
**ಶ್ವರರ ತತ್ವವಿಚಾರ ಮಂತ್ರೀಜನಕ್ಕೆ ಬುದ್ಧಿಗುಣ**
**ವಿರಹಿಗಳ ಶೃಂಗಾರ ವಿದ್ಯಾ**
**ಪರಿಣತರಲಂಕಾರ ಕಾವ್ಯಕೆ**
**ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ.**

ಯುದ್ಧದಲ್ಲಿ ವಿಜಯ ಮತ್ತು ಹೆಣ್ಣಿನೊಂದಿಗೆ ಶೃಂಗಾರ ಇವೆರಡೇ ಕ್ಷತ್ರಿಯರ ಜೀವನದ ಪರಮ ಪುರುಷಾರ್ಥದ ಸಾರ ಎಂಬ ಚಿತ್ರಣವೇ ಮಹಾಕಾವ್ಯಗಳಲ್ಲಿ ಅಧಿಕ. ಕವಿಗಳೂ ಶೃಂಗಾರರಸಪ್ರಿಯರು.ಶೃಂಗಾರರಸದ ಬಗ್ಗೆ ಲೆಕ್ಕವಿಲ್ಲದಷ್ಟು ಕಾವ್ಯ ಹೊಸೆಯಬಲ್ಲರು.ಕುಮಾರವ್ಯಾಸ ಸ್ವಲ್ಪ ವಿಭಿನ್ನವಾದ ಕವಿ.ಇವನ ಕಾವ್ಯದಲ್ಲಿ ಸುಖಲೋಲುಪತೆಯ ಶೃಂಗಾರದ ಬದಲಿಗೆ 'ವಿಷಾದದ ಶೃಂಗಾರ'– 'ವಿರಹಿಗಳ ಶೃಂಗಾರ' ಬರುತ್ತದೆ. ಕೀಚಕ ಮತ್ತು ದ್ರೌಪದಿ ನಡುವಣ ಬಲಾತ್ಕಾರದ ಶೃಂಗಾರವು ಕೀಚಕನ ಸಾವಿಗೆ ಕಾರಣವಾಗುತ್ತದೆ.

ನಮ್ಮ ಇಂದಿನ ರಾಜಕಾರಣವನ್ನು ಕುರಿತು ಅಂದೇ ಹೇಳಿದ ಈ ಪದ್ಯ ಗಮನಿಸಿದರೆ ಮಹಾಕವಿಗಳು ಕಾಲಜ್ಞಾನವನ್ನು ತಮ್ಮ ಕಾವ್ಯ ಜಗತ್ತಿನಲ್ಲಿ ಅಡಗಿಸಿಡಬಲ್ಲರು ಎಂಬುದಕ್ಕೆ ದ್ಯೋತಕವಾಗಿದೆ.

**ಅರಸು ರಾಕ್ಷಸ ಮಂತ್ರಿಯೆಂಬುವ**
**ಮೊರೆವ ಹುಲಿ ಪರಿವಾರ ಹದ್ದಿನ**
**ನೆರವಿ ಬಡವರ ಬಿನ್ನಪವನ್ನಿನ್ನಾರು ಕೇಳುವರು**
**ಉರಿವುರಿವುತಿದೆ ದೇಶ ನಾವಿ**
**ನ್ನಿರಲು ಬಾರದೆನುತ್ತ ಜನ ಬೇ**
**ಸರಿನ ಬೇಗೆಯಲಿರದಲೇ ಭೂಪಾಲ ಕೇಳೆಂದ.**

ಕುಮಾರವ್ಯಾಸನ ರಾಜನೀತಿಯ ಅರಿವಿನ ನುಡಿಯು ವರ್ತಮಾನದ ಪ್ರಭುತ್ವದ ರಾಜಕೀಯ ವ್ಯವಸ್ಥೆಗೆ ಕನ್ನಡಿ ಹಿಡಿದಿದೆ. ನಮ್ಮ ಭಾರತ ಈಗ ಅಮೃತ ಕಾಲದ ಹೊಂಗನಸಿನಲ್ಲಿ ಮುಳುಗೇಳುತ್ತಿರುವ ಸಂದರ್ಭಕ್ಕೆ ಪೂರಕವಾದ ಸಾಕ್ಷಿಯಾಗಿದೆ. ಕುಮಾರವ್ಯಾಸನ ಕಾಲದ ಕಾವ್ಯ ನಮ್ಮ ವರ್ತಮಾನ ಕಾಲದ್ದಾಗದಿದ್ದರೂ ಅದು ಧ್ವನಿಸುವ ಸತ್ಯ ಕಾಲಾತೀತವಾಗಿದೆ; ದೇಶಾತೀತವಾಗಿದೆ.ಅದು ಲೋಕ ಸತ್ಯದ ಮಾತಾಗಿ ಇಂದಿಗೂ ಚಿರಂಜೀವತ್ವ ಪಡೆದುಕೊಂಡಿದೆ. ಪ್ರಭುತ್ವ ರಾಜಕಾರಣವು ಜನವಿರೋಧಿ, ಜೀವವಿರೋಧಿ ಜನದ್ರೋಹಿಯಾದಾಗಲೆಲ್ಲ ಈ

ಕಾವ್ಯದ ಸಾಲುಗಳು ವ್ಯವಸ್ಥೆಯ ವಾಸ್ತವವನ್ನು ಎತ್ತಿ ತೋರಿಸುತ್ತಿರುತ್ತವೆ. ಜನರನ್ನು ಎಚ್ಚರಿಸುವ ನುಡಿಯಾಗುತ್ತವೆ. ಇವಿಷ್ಟು ಮಾತುಗಳು–ಕುಮಾರವ್ಯಾಸನ ಚಿಂತನ ಪ್ರಪಂಚದ ಓದಿನ ಅರಿವಿನಿಂದ ನಾನು ಪಡೆದುಕೊಂಡಿರುವುದು.

ಸಿ.ಪಿ.ನಾಗರಾಜ ಅವರು ಕುಮಾರವ್ಯಾಸ ಭಾರತ ಮಹಾಕಾವ್ಯದ ವಿರಾಟಪರ್ವದ ಎರಡನೆಯ ಮತ್ತು ಮೂರನೆಯ ಸಂಧಿಯಿಂದ ಆಯ್ದ ೧೬೬ ಪದ್ಯಗಳನ್ನು ನಾಟಕ ಪ್ರಕಾರಕ್ಕೆ ಅಳವಡಿಸಿ 'ಕೀಚಕನ ಪ್ರಸಂಗ' ವನ್ನು ರಚಿಸಿದ್ದಾರೆ. ವಿರಾಟಪರ್ವದ ಅಯ್ದನೆಯ ಸಂಧಿಯಿಂದ ೪೭ ಪದ್ಯಗಳನ್ನು ಮತ್ತು ಆರನೆಯ ಸಂಧಿಯಿಂದ ೬೬ ಪದ್ಯಗಳನ್ನು, ಒಂಬತ್ತನೆಯ ಸಂಧಿಯಿಂದ ೪೧ ಪದ್ಯಗಳನ್ನು ಹತ್ತನೆಯ ಸಂಧಿಯಿಂದ ೨೮ ಪದ್ಯಗಳನ್ನು ಆಯ್ಕೆ ಮಾಡಿಕೊಂಡು ಒಟ್ಟು ೧೮೨ ಪದ್ಯಗಳನ್ನು 'ಉತ್ತರಕುಮಾರನ ಪ್ರಸಂಗ' ವನ್ನು ರಚಿಸಿ, ಈ ಎರಡು ಪ್ರಸಂಗ ಗಳನ್ನು 'ಕುಮಾರವ್ಯಾಸ ಭಾರತ ಓದು' ಎಂಬ ತಲೆಬರಹದಲ್ಲಿ ಕೃತಿಯನ್ನಾಗಿ ಸಂಕಲಿಸಿ ನಾಟಕಪ್ರಿಯರ ಮುಂದಿಟ್ಟಿದ್ದಾರೆ. ನಾನು ರಂಗಕರ್ಮಿಯಾಗಿರುವ ಕಾರಣಕ್ಕೆ ಮುನ್ನುಡಿಯ ಮಾತುಗಳನ್ನು ಬರೆಯುವ ಜವಾಬ್ದಾರಿಯನ್ನು ನನಗೆ ಪ್ರೀತಿಯಿಂದ ವಹಿಸಿದ್ದಾರೆ.

ಕನ್ನಡ ನಾಟಕ ರಚನೆ ಮತ್ತು ಕನ್ನಡ ನಾಟಕ ಪ್ರಯೋಗಗಳನ್ನು ಅವಲೋಕಿಸಿದಾಗ ಆಧುನಿಕ ಕನ್ನಡ ರಂಗಭೂಮಿಯು ವರ್ತಮಾನದ ಜನ ಜೀವನದ ಬದುಕನ್ನು ಚಿತ್ರಿಸಲು ಪುರಾಣ,ಇತಿಹಾಸ, ಜಾನಪದ, ಐತಿಹ್ಯದ ಕಥಾನಕಗಳನ್ನು ಹೆಚ್ಚಾಗಿ ಆಶ್ರಯಿಸಿರುವುದು ಕಂಡುಬರುತ್ತದೆ. ಪುರಾಣ, ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ, ಭಾಗವತ ಪುರಾಣಗಳ ಕಥಾಲೋಕದ ಪಾತ್ರಗಳನ್ನು ವರ್ತಮಾನ ಕಾಲದಲ್ಲಿಟ್ಟು ಅರ್ಥೈಸುವ ಇಲ್ಲವೇ ಹೊಸ ದೃಷ್ಟಿಕೋನದಿಂದ ರಂಗಕ್ಕೆ ಅಳವಡಿಸುವ ಪರಂಪರೆ ಮುಂದುವರಿದು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿಯೂ ಪ್ರಜಾಪ್ರಭುತ್ವದ ಆಶಯ, ಮೌಲ್ಯಗಳನ್ನು ಹೊಸಬಗೆಯಲ್ಲಿ ನಿರ್ವಹಿಸುತ್ತಿರುವುದನ್ನು ಕಾಣಬಹುದು.

"ರಾಮಾಯಣ ಮಹಾಭಾರತ ಇತರ ಯಾವುದೇ ಕತೆಗಳಾಗಿರಲಿ ಅವನ್ನು ಬಿಸಾಡುವುದಲ್ಲ. ಚಿನ್ನದ ಆಭರಣಗಳನ್ನು ಹಳೆಯದೆಂದು ಬಿಸಾಡದೆ, ಅದನ್ನೆಲ್ಲ ಕರಗಿಸಿ, ಆ ಚಿನ್ನವನ್ನು ನಮ್ಮ ಇಷ್ಟಕ್ಕೆ ಅನುಸಾರವಾಗಿ ನಾವು ಬೇರೆ ರೀತಿಯಲ್ಲಿ ಆಭರಣ ಮಾಡಿಸಿಕೊಂಡು ಉಪಯೋಗಿಸುತ್ತೇವೆ. ಆಭರಣದ ರೂಪ ಯಾವುದಾದರೂ ಇರಲಿ, ಆಭರಣದ ವಸ್ತು ಇದೆಯಲ್ಲಾ ಅದು ತುಂಬಾ ಬೆಲೆಯುಳ್ಳದ್ದು, ಹಾಗೆಯೆ ರಾಮಾಯಣ ಮಹಾಭಾರತ ಇತರ ಯಾವುದೇ ಕತೆಗಳಿರಲಿ ಅವನ್ನು ಬಿಸಾಡುವುದಲ್ಲ. ಅವನ್ನು ಕರಗಿಸಿ ನಮ್ಮ ಹೊಸ ಧ್ಯೇಯ ಹೊಸ ಇಷ್ಟಗಳಿಗೆ ಅನುಸಾರವಾಗಿ ಅವುಗಳನ್ನು ಸಾಹಿತ್ಯದಲ್ಲಿ ಎರಕ

ಹೊಯ್ಯಬೇಕು. ಏಕೆಂದರೆ ಆ ಎರಕಗಳ ಮೂಲಕ ಆ ಕಥಾ ವ್ಯಕ್ತಿಗಳ ಮೂಲಕ ನೀವು ನಿಮ್ಮ ಧ್ಯೇಯಗಳನ್ನು ಪ್ರಸಾರ ಮಾಡಲು ತುಂಬಾ ಸುಲಭವಾಗುತ್ತದೆ, ಜನಗಳಿಗೆ ಬೇಗ ಹಿಡಿಸುತ್ತದೆ" ಎಂಬ ರಾಷ್ಟ್ರಕವಿ ಕುವೆಂಪು ಅವರ ಮಾತನ್ನು ಅಕ್ಷರಶಃ ಆಧುನಿಕ ಕನ್ನಡ ರಂಗಭೂಮಿಯಲ್ಲಿ ಹಿರಿಯ–ಕಿರಿಯ ನಾಟಕಕಾರರು ಅನುಸರಿಸುತ್ತಿರುವ ಕಾರಣಕ್ಕೆ ಮಹಾಕಾವ್ಯಗಳ 'ನರೇಟೀವ್ಸ್'ನಿಂದ ಹಿಡಿದು ಕನ್ನಡದ ಆದಿಕವಿ ಪಂಪ, ರನ್ನ, ಕುಮಾರವ್ಯಾಸ, ಹನ್ನೆರಡನೆಯ ಶತಮಾನದ ಶರಣ ಚಳುವಳಿಯ ಸಂಗತಿಗಳನ್ನು ಆಧುನಿಕ ನಾಟಕಗಳ ವಸ್ತುವಾಗಿಸಿಕೊಂಡು, ವರ್ತಮಾನಕ್ಕೆ ಮುಖಾಮುಖಿಯಾಗಿಸಿ ರಚಿಸಿರುವ ನಾಟಕಗಳು ಅಸಂಖ್ಯ ಲೆಕ್ಕದಲ್ಲಿ ದೊರೆಯುತ್ತವೆ.

ಕುವೆಂಪು ಅವರೇ ತಮ್ಮ ಮಾತಿಗೆ ಪೂರಕವಾಗಿ ಮಹಾಕಾವ್ಯಗಳ ಕಥಾನಕ ಗಳನ್ನು ವೈಚಾರಿಕ, ವೈಜ್ಞಾನಿಕ ದೃಷ್ಟಿಯಿಂದ ಅನುಸಂಧಾನಗೊಳಿಸಿ 'ಜಲಗಾರ' 'ಶೂದ್ರ ತಪಸ್ವಿ' 'ಬೆರಳ್ಗೆ ಕೊರಳ್' 'ಸ್ಮಶಾನ ಕುರುಕ್ಷೇತ್ರ' 'ನನ್ನ ಗೋಪಾಲ' 'ಚಂದ್ರಹಾಸ' ಮುಂತಾದ ನಾಟಕಗಳನ್ನು ಹಳಗನ್ನಡ/ನಡುಗನ್ನಡ ಭಾಷೆಯಲ್ಲಿಯೇ ರಚಿಸಿ ಆಧುನಿಕ ಕನ್ನಡ ರಂಗಭೂಮಿಯಲ್ಲಿ ವಿಚಾರಕ್ರಾಂತಿಯ ಅಲೆಗಳನ್ನೇ ಎಬ್ಬಿಸಿದರು. ನವೋದಯ ಕಾಲಘಟ್ಟದ ಕನ್ನಡದ ಎಲ್ಲ ಪ್ರಮುಖ ಸಾಹಿತಿಗಳು ಹೊಸಗನ್ನಡವನ್ನು ತಮ್ಮ ನಾಟಕಗಳ ಭಾಷೆಯಾಗಿ ಬಳಸದೆ ಪ್ರಜ್ಞಾಪೂರ್ವಕವಾಗಿ ಹಳಗನ್ನಡ ನುಡಿಯನ್ನೆ ಕಾವ್ಯಮಯಗೊಳಿಸಿ ನಾಟಕ ರಚಿಸಿದರು. ಹಳಗನ್ನಡ ಭಾಷೆಗಿರುವ ರೂಪಕಶಕ್ತಿಯನ್ನು ಪ್ರಚುರಗೊಳಿಸಿದರು.

ಆದರೆ ಹಳಗನ್ನಡ/ನಡುಗನ್ನಡ ಭಾಷಾ ಬಳಕೆಯ ನಾಟಕವು ರಂಗದಲ್ಲಿ ಪ್ರದರ್ಶನಗೊಂಡಾಗ ಕೆಲವರ ಅಕ್ಷರಸ್ಥರ ಪ್ರತಿಕ್ರಿಯೆ ಹೀಗಿತ್ತು: ಕುವೆಂಪು ಅವರ 'ಶೂದ್ರ ತಪಸ್ವಿ' ನಾಟಕವನ್ನು ರಂಗಾಯಣದಲ್ಲಿ ನಾನು ನಿರ್ದೇಶನ ಮಾಡಿ ಪ್ರದರ್ಶನ ಮಾಡಿದಾಗ ಒಂದು ತಮಾಷೆಯ ಘಟನೆ ನಡೆಯಿತು. ಅದನ್ನು ಇಲ್ಲಿ ಪ್ರಸ್ತಾಪಿಸುವುದರಿಂದ ಭಾಷೆಯ ಮಹತ್ವ ಅರಿವಾಗುವುದು ಎಂಬ ಕಾರಣಕ್ಕೆ ಹೇಳುತ್ತಿದ್ದೇನೆ. ಹಂಪಿ ಉತ್ಸವದಲ್ಲಿ ರಂಗಾಯಣದ ಕಲಾವಿದರು 'ಶೂದ್ರ ತಪಸ್ವಿ' ನಾಟಕವನ್ನು ಪ್ರದರ್ಶಿಸಿದರು. ನಾಟಕ ಮುಗಿದ ಮೇಲೆ ಕನ್ನಡ ಅಧ್ಯಾಪಕ ರೊಬ್ಬರು ನನ್ನ ಬಳಿ ಬಂದು "ಏನ್ ಸಾರ್, ಕುವೆಂಪು ಅವರು ಶೂದ್ರ ತಪಸ್ವಿಯನ್ನು ಕನ್ನಡದಲ್ಲಿ ಬರೆದಿರುವುದಲ್ಲವಾ?... ನೀವು ತಮಿಳಿನಲ್ಲಿ ಯಾಕೆ ಪ್ರದರ್ಶಿಸುತ್ತಿರುವಿರಿ?–ಎಂಬ ಪ್ರಶ್ನೆ ಕೇಳಿದರೆ, ನಾನು ಏನು ಉತ್ತರ ಹೇಳುವುದು. ಇದೇ ನಾಟಕವನ್ನು ನಮ್ಮ ನೆರೆಯ ತೆಲಂಗಾಣದ (ಆಗ ಆಂಧ್ರಪ್ರದೇಶ) ರಂಗ ತಂಡಕ್ಕಾಗಿ ಕೆ.ವೈ.ನಾರಾಯಣ ಸ್ವಾಮಿ ಅವರು ತೆಲುಗು ಭಾಷೆಗೆ ಅನುವಾದಿಸಿದ 'ಶೂದ್ರ ತಪಸ್ವಿ' ಪ್ರದರ್ಶನ ನೋಡಿದ ಅಲ್ಲಿಯ ಜಿಲ್ಲಾಧಿಕಾರಿಯೊಬ್ಬರು "ಶ್ರೀರಾಮ

ನೀಲಮೇಘಶಾಮುಡು, ನೀವು ರಾಮನಿಗೆ ಬಿಳಿ ವಸ್ತ್ರ ತೊಡಿಸಿದ್ದೀರಿ. ಮುಖವರ್ಣಿಕೆ ನೀಲಿಬಣ್ಣವಿಲ್ಲ. ಅಲ್ಲದೆ ಶಂಬೂಕನನ್ನು ರಾಮ ಕೊಲ್ಲಬೇಕು. ನಿಮ್ಮ ನಾಟಕದಲ್ಲಿ ಶ್ರೀರಾಮನ ಬ್ರಹ್ಮಾಸ್ತ್ರವನ್ನೇ ಶಂಭೂಕನಿಗೆ ನಮಸ್ಕರಿಸುವಂತೆ ತೋರಿಸಿದ್ದೀರಿ. ಇದು ಅಪದ್ಧಂ' ಎಂದು ಸಿಟ್ಟುಮಾಡಿಕೊಂಡು ಮಾತಿಗಿಳಿದರು. ವಾಲ್ಮೀಕಿ, ಭವಭೂತಿ ರಾಮಾಯಣಗಳಲ್ಲಿ ರಾಮನು ಶಂಭೂಕನನ್ನು ಕೊಲ್ಲುವ ಚಿತ್ರಣವಿದೆ. ಆದರೆ ಕುವೆಂಪು ಬರೆದ ಶೂದ್ರತಪಸ್ವಿಯಲ್ಲಿ ರಾಮ ಮತ್ತು ಬ್ರಾಹ್ಮಣನೊಡನೆ ತಾರ್ಕಿಕವಾದ ಮಾತುಕತೆ ನಡೆದು, ನಿಜದ ರಾಮತ್ವವನ್ನು ಸಾರುವ ಸಾರವಿದೆ ಎಂದು ಅವರಿಗೆ ತಿಳಿಯ ಹೇಳಿ ಸಮಾಧಾನಪಡಿಸಿದರೂ ಅವರು ಒಪ್ಪದ ಮನಸ್ಥಿತಿಯಲ್ಲಿದ್ದರು.

ಇಂದು ರಘುರಾಮ–ಸೀತಾರಾಮ–ದಶರಥರಾಮ–ಕೌಶಲ್ಯಾರಾಮ–ಅಯೋಧ್ಯಾ ರಾಮ ಕೇವಲ ಯಾವ ಸಂಬಂಧವೂ ಇಲ್ಲದ 'ಜೈ ಶ್ರೀರಾಮ' ಆಗಿರುವುದು ಸಾಂಸ್ಕೃತಿಕ ರಾಜಕಾರಣದ ಒಂದು ನಮೂನೆ ಅಷ್ಟೆ. ಒಂದು ಸ್ಥಗಿತಗೊಂಡ ಮನಸ್ಥಿತಿಯು ಎಂಥ ಅಪಾಯಕಾರಿ ವಾತಾವರಣವನ್ನು ಸಾಂಸ್ಕೃತಿಕವಾಗಿ ನಿರ್ಮಿಸಬಲ್ಲದು ಎಂಬುದನ್ನು ಕಣ್ಣಾರೆ ಕಾಣುತ್ತಿದ್ದೇವೆ. ಧರ್ಮ ಮತ್ತು ರಾಜಕಾರಣ ಅಧಿಕಾರದಲ್ಲಿ ಬೆಸುಗೆಯಾದರೆ ಪುರಾಣಕಾವ್ಯದ ಪಾತ್ರಗಳು ಜನರ ಹಕ್ಕುಗಳನ್ನು, ಸ್ವಾತಂತ್ರ್ಯವನ್ನು, ಪರಂಪರೆ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಹತ್ತಿಕ್ಕಬಲ್ಲವು. ರಾಜಕಾರಣದಲ್ಲಿ ಮತಗಳಿಸುವ ಪ್ರಚಾರದ ಪಾತ್ರಗಳಾಗಿಯೂ ಪ್ರಭಾವ ಬೀರಬಲ್ಲವು ಎಂಬುದು ಮನದಟ್ಟಾಗುತ್ತಿದೆ.

ಸಭಾಪರ್ವದಲ್ಲಿ ನಾರದ ಯುಧಿಷ್ಠಿರನಿಗೆ "ನಿಮ್ಮ ತಂದೆಯಾದ ಪಾಂಡು ರಾಜನು ಈಗ ಯಮಲೋಕದಲ್ಲಿ ನರಕವಾಸಿಯಾಗಿದ್ದಾನೆ. ಆತನು ಯಾಯಾತಿ, ಜನಕ, ನಳ ಮುಂತಾದ ರಾಜರಂತೆ ದೇವಲೋಕದಲ್ಲಿ ದೇವೇಂದ್ರನ ಸಭೆಯಲ್ಲಿ ಸ್ಥಾನವನ್ನು ಪಡೆಯುವಂತಾಗಬೇಕಾದರೆ ರಾಜಸೂಯ ಎಂಬ ಯಾಗವನ್ನು ಮಾಡಬೇಕು" ಎಂದು ಪ್ರೇರೇಪಿಸುತ್ತಾನೆ. ರಾಜಸೂಯ ಯಾಗವನ್ನು ಮಾಡುವ ರಾಜನು ತನ್ನ ಸುತ್ತಮುತ್ತಣ ರಾಜರ ಮೇಲೆ ದಂಡೆತ್ತಿ ಹೋಗಿ ಅವರನ್ನು ಗೆದ್ದು ಇಲ್ಲವೇ ಶರಣಾಗತರನ್ನಾಗಿ ಮಾಡಿಕೊಂಡು ಪ್ರಾಂತ್ಯಗಳನ್ನು ವಶಪಡಿಸಿಕೊಂಡು , ಅಪಾರವಾದ ಪ್ರಮಾಣದಲ್ಲಿ ಕಪ್ಪಕಾಣಿಕೆಗಳನ್ನು ಪಡೆದು ಇಲ್ಲವೇ ಸಂಪತ್ತನ್ನು ಲೂಟಿ ಮಾಡಿ ತಂದು ವೈಭವದಿಂದ ಯಾಗವನ್ನು ಮಾಡಬೇಕಿತ್ತು. ಇಂತಹ ಸಾಮ್ರಾಜ್ಯವಾದದ ಯುದ್ಧ ತಂತ್ರಗಳು ಹಿಂದಿನ ಕಾಲದಲ್ಲಿ ಮಾತ್ರವಲ್ಲ, ಇಂದು ಕೂಡ ನಡೆಯುತ್ತಿದ್ದು ರಷ್ಯ, ಉಕ್ರೇನ್, ಇರಾನ್–ಇಸ್ರೇಲ್ ನಡುವಣ ಯುದ್ಧಗಳ ಹಿಂದೆ ಅಮೆರಿಕಾದಂತಹ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಯುದ್ಧಕೋರತನವನ್ನು

ಹಿಂದಿನ ರಾಜಸತ್ತೆಗಳು ನಡೆಸುತ್ತಾ ಬಂದಿರುವ ಚರಿತ್ರೆಯೂ ಕುಮಾರವ್ಯಾಸನ ಕಾವ್ಯದಲ್ಲಿ ದಾಖಲಾಗಿದೆ.

ನಾಟಕವೆಂಬುದು ಸಮುದಾಯದ ಸಮಷ್ಟಿ ಕಲೆಯಾಗಿರುವುದರಿಂದ "ಒಂದು ದೇಶ–ಒಂದು ಭಾಷೆ–ಒಂದು ಚುನಾವಣೆ–ಒಬ್ಬ ನಾಯಕ" ಎಂಬ ತತ್ವದಲ್ಲೆ ನಾಟಕ ಕಲೆಯೂ 'ಏಕವ್ಯಕ್ತಿ' ಪ್ರದರ್ಶನಕ್ಕೆ ತನ್ನನ್ನು ತಾನು ಮರುರೂಪಿಸಿ ಕೊಳ್ಳುತ್ತಿದೆ ಎನಿಸುತ್ತಿದೆ. ಉದಾಹರಣೆ: ಮಹಾಭಾರತದಲ್ಲಿ ಬರುವ ಅಸಂಖ್ಯಾತ ಪಾತ್ರಗಳನ್ನು ನಿರ್ವಹಿಸಲು ರಂಗತಾಲೀಮು ಮತ್ತು ಪ್ರಯೋಗಕ್ಕೆ ಸಿದ್ಧಪಡಿಸಲು ಸಮಯದ ಅವಶ್ಯಕತೆಯಿದೆ. ಇಂದು ಜನರು ಪೂರ್ಣಪ್ರಮಾಣದ ನಾಟಕ ನೋಡುವುದಿಲ್ಲ. ಎರಡು ಗಂಟೆಗೆ ಅಧಿಕವಾದ ನಾಟಕವನ್ನು ನೋಡುವುದಕ್ಕೆ ಸಿದ್ಧರಿಲ್ಲ. ಇಂತಹ ಸಂದರ್ಭದಲ್ಲಿ ಒಬ್ಬರೆ 'ಏಕಪಾತ್ರ' ಅಭಿನಯಕ್ಕೂ ಸಜ್ಜಾಗಲು ಪುರಾಣ ಪಾತ್ರಗಳು ನಟ ನಟಿಯರಿಗೆ ಸರಳವಾದ ಆಸರೆಯಾಗಿವೆ. ಹಲವು ಪಾತ್ರಗಳು ಮತ್ತು ಸಂಗತಿಗಳು ಇದೀಗ ಸಂಕೀರ್ಣಕಲೆಯ ಏಕಾಂಕವಾಗುತ್ತಿವೆ.

ಸಿ.ಪಿ.ನಾಗರಾಜ ಅವರು ಸಿದ್ಧಪಡಿಸಿರುವ 'ಕುಮಾರವ್ಯಾಸ ಭಾರತ ಓದು' ಎಂಬ ಕೃತಿಯು ಈ ಎಲ್ಲ ಸಂಗತಿಗಳ ಮೇಲೆ ಬೆಳಕು ಚೆಲ್ಲುವ ಆಶಯವನ್ನು ಇಟ್ಟುಕೊಳ್ಳದೆ, ಇಂದಿನ ತಲೆಮಾರಿನ ಹೊಸ ಓದುಗರಿಗೆ ನೆರವಾಗಲೆಂದು ನಡುಗನ್ನಡದ ನುಡಿರಚನೆಯ ಕಾವ್ಯವನ್ನು ಸಂಭಾಷಣೆಯ ರೂಪದಲ್ಲಿ ಜೋಡಿಸಿ ಎರಡು ಪ್ರಸಂಗಗಳನ್ನು ಕೊಟ್ಟಿದ್ದಾರೆ.

ಕುಮಾರವ್ಯಾಸನ ವಿರಾಟಪರ್ವ ಆಧರಿಸಿದ ಒಂದು ಆಧುನಿಕ ನಾಟಕವನ್ನು ಎಚ್.ಎಲ್.ಪುಷ್ಪ ಅವರು 'ಪರ್ವಾಪರ್ವ' ಎಂಬ ಹೆಸರಿನಲ್ಲಿ ಈ ಮೊದಲು ರಚಿಸಿದ್ದಾರೆ. ಇಂದಿನ ಕಾಲದಲ್ಲಿ ಅಬಲೆಯರಾದ ಮಹಿಳೆಯರ ಮೇಲೆ ದಿನ ನಿತ್ಯ ನಡೆಯುವ ದೈಹಿಕ, ಮಾನಸಿಕ ಅತ್ಯಾಚಾರಗಳನ್ನು ಮತ್ತು ಸಂಸಾರದ ಬಿಕ್ಕಟ್ಟು ಗಳನ್ನು ಬಿಂಬಿಸಲು ಅವರು ಸಹ ಕುಮಾರವ್ಯಾಸ ಭಾರತದಿಂದ ಪ್ರಭಾವಿತರಾಗಿ ಈ ಕಾಲದ ಸಂಕಟಗಳನ್ನು, ಪುರುಷರ 'ಉತ್ತರಕುಮಾರನ ಪೌರುಷ' ತೋರುವ ಪ್ರಸಂಗಗಳನ್ನು ತಮ್ಮ ಕಲ್ಪನಾಶಕ್ತಿಯಿಂದ ಸ್ವತಂತ್ರ ನಾಟಕ ರಚಿಸಿದ್ದಾರೆ. ಆದರೆ ಸಿ.ಪಿ.ನಾಗರಾಜ ಅವರು ಮೂಲ ಪದ್ಯಗಳನ್ನು ಆಶ್ರಯಿಸಿ ಕವಿಯ ನಾಟ್ಯ ಪ್ರತಿಭಾಶಕ್ತಿಯನ್ನು ಅನಾವರಣಗೊಳಿಸುವ ಕೆಲಸವಷ್ಟನ್ನೇ ಮಾಡಿದ್ದಾರೆ. ತಮ್ಮ ಯಾವ ಕಲ್ಪನೆಯನ್ನು ನಾಟಕಕ್ಕೆ ಸೇರಿಸದೆ ಇಲ್ಲವೇ ಕುಮಾರವ್ಯಾಸನೊಂದಿಗೆ ಸಮೀಕರಿಸಿ ನೋಡದೆ ಕವಿಯ ಪದ್ಯಗಳನ್ನು ಮಾತ್ರ ನಾಟಕರೂಪದಲ್ಲಿ ಜೋಡಿಸಿಕೊಟ್ಟಿರುವುದು ನಡುಗನ್ನಡ ಕಾವ್ಯದ ಆಸ್ವಾದನೆಯನ್ನು ಇಂದಿನ ಓದುಗರು ಸುಲಭವಾಗಿ ಸವಿಯುವುದಕ್ಕೆ ನೆರವಾಗಿದೆ.

ವಿರಾಟಪರ್ವದಿಂದ ಆಯ್ದುಕೊಂಡ ಪದ್ಯಗಳಿಗೆ 'ಪದ ವಿಂಗಡಣೆ ಮತ್ತು ತಿರುಳು' ಎಂಬ ವಿಭಾಗದಲ್ಲಿ ಕಾವ್ಯದ ಪ್ರತಿ ಪದದ ಅರ್ಥವನ್ನು ಮೂಲ ಕಾವ್ಯದ ಜೊತೆಯಲ್ಲಿ ಅರ್ಥೈಸಿರುವುದು ಪ್ರಶಂಸನೀಯವಾದ ಕೆಲಸವಾಗಿದೆ.ನಮ್ಮ ಇಂದಿನ ಶಿಕ್ಷಣ ವ್ಯವಸ್ಥೆಯು ಹಳೆಗನ್ನಡ ಮತ್ತು ನಡುಗನ್ನಡ ಕಾವ್ಯ ಕಥನಗಳನ್ನು ಓದಲು ಮತ್ತು ಅರ್ಥಮಾಡಿಕೊಳ್ಳಲು ಓದುಗರು ಪ್ರಯಾಸಪಡುತ್ತಿರುವ ಕಾರಣಕ್ಕೆ ಕನ್ನಡ ಭಾಷೆಯ ಬೋಧನೆಯಲ್ಲಿ ಹಳೆಗನ್ನಡ ಪಠ್ಯಗಳನ್ನೇ ಕೈಬಿಡುವ ನಿರ್ಧಾರಕ್ಕೆ ಬಹು ಪಾಲು ಬಂದಿದೆ. ಶಾಲಾ ಕಾಲೇಜು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಈ ಮೂಲಕವಾದರೂ ನಮ್ಮ ಮಹಾಕವಿಗಳ ಹಳೆಗನ್ನಡ ಮತ್ತು ನಡುಗನ್ನಡದ ಪದ್ಯಗಳನ್ನು ಅರ್ಥಮಾಡಿಕೊಳ್ಳಲಿ ಎಂಬ ಕಾರಣಕ್ಕೆ ಕಾವ್ಯದಲ್ಲಿರುವ ನಾಟಕೀಯ ಪ್ರಸಂಗಗಳನ್ನು ಈ ರೀತಿಯಲ್ಲಿ ಕಟ್ಟಿಕೊಡಲಾಗಿದೆ.

ಕುಮಾರವ್ಯಾಸನ ಪದ್ಯಗಳು ಹೊಸ ಓದುಗರಿಗೆ ಸುಲಭವಾಗಲಿ ಎಂಬ ಆಶಯದಿಂದ ಸಿ.ಪಿ.ನಾಗರಾಜ ಅವರು ಕಾವ್ಯರಚನೆಯನ್ನು ನಾಟಕ ರೂಪದಲ್ಲಿ ಮಾತುಗಳಾಗಿ ಅಳವಡಿಸಿ, ಪದಗಳಿಗೆ ಅರ್ಥಗಳನ್ನು ಮತ್ತು ನಡುಗನ್ನಡ ವಾಕ್ಯಗಳಿಗೆ ಹೊಸಗನ್ನಡದಲ್ಲಿ ತಿರುಳನ್ನು ಬರೆದಿರುವುದು ಕಾವ್ಯದ ಅಧ್ಯಯನದಲ್ಲಿ ಹೊಸಬಗೆಯದು ಎನಿಸುತ್ತದೆ. ಉದಾಹರಣೆ:

ಉತ್ತರಕುಮಾರನ ಪ್ರಸಂಗ

**ಕುಮಾರವ್ಯಾಸನ ಪದ್ಯ:**

**ನೂಕು ಕುನ್ನಿಯನಾಹವದ ಭೀ**
**ತಾಕುಲನ ತಾನೀಗ ಹೆಂಡಿರ**
**ಸಾಕಿ ಬದುಕುವ ಲೌಲ್ಯತೆಯನೊಟ್ಟೈಸಿ ಬಂದೆನಗೆ**
**ಕಾಕ ಬಳಸುವನಿವನು ತಾನು**
**ದ್ರೇಕಿಸಿಯೆ ಸಮರದಲಿ ನಿಲಲು ಪಿ**
**ನಾಕಧರನಿಗೆ ನೂಕದೆಂದನು ಸತಿಯರಿದಿರಿನಲಿ.**

**ಸಿ.ಪಿ.ನಾಗರಾಜ ಅವರು ಅಳವಡಿಸಿರುವ ನಾಟಕ ರೂಪ :**

**ಉತ್ತರಕುಮಾರ:** ಕುನ್ನಿಯನು ನೂಕು. ತಾನೀಗ ಆಹವದ ಭೀತಾಕುಳನು. ಇವನು ಹೆಂಡಿರ ಸಾಕಿ ಬದುಕುವ ಲೌಲ್ಯತೆಯಲಿ ಒಟ್ಟೈಸಿ ಬಂದು, ಎನಗೆ ಕಾಕ ಬಳಸುವನು. ತಾನು ಉದ್ರೇಕಿಸಿಯೆ ನಿಲಲು ಸಮರದಲಿ ಪಿನಾಕಧರನಿಗೆ ನೂಕದು.

(ಎಂದನು ಸತಿಯರ ಇದಿರಿನಲಿ)

## ಪದ ವಿಂಗಡಣೆ ಮತ್ತು ತಿರುಳು:

**ಕುನ್ನಿ=ನಾಯಿ ಮರಿ**/ವ್ಯಕ್ತಿಯ ಬಗ್ಗೆ ತಿರಸ್ಕಾರ ಮತ್ತು ನಿಂದನೆಯನ್ನು ಸೂಚಿಸುವ ಬಯ್ಗುಳದ ಪದವಾಗಿ ಬಳಕೆಗೊಂಡಿದೆ.

**ಕುನ್ನಿಯನು ನೂಕು**=ಈ ನಾಯಿಮರಿಯನ್ನು ಹೊರಕ್ಕೆ ಹಾಕು. ಈ ರಣಹೇಡಿಯನ್ನು ಹೊರಕ್ಕೆ ತಳ್ಳಿರಿ; ತಾನ್+ಈಗ; ತಾನ್=ಈತನು; ಆಹವ=ಯುದ್ಧ/ಕಾಳೆಗ; ಭೀತ+ಆಕುಳನು; ಭೀತಿ=ಹೆದರಿಕೆ/ಅಂಜಿಕೆ; ಆಕುಳ=ತುಂಬಿದ/ಆವರಿಸಿದ; ಭೀತಾಕುಳ=ಹೆದರಿಕೆಯಿಂದ ಕೂಡಿದವನು; **ತಾನೀಗ ಆಹವದ ಭೀತಾಕುಳನು**=ಈಗ ಈತನು ಕಾಳೆಗದ ಹೆದರಿಕೆಯಿಂದ ನಡುಗುತ್ತಿದ್ದಾನೆ; ಲೌಲ್ಯತೆ=ಅತಿಯಾಸೆ/ಗೀಳು; ಒಟ್ಟೈಸು=ಮುತ್ತು/ಕವಿ; ಕಾಕು=ಸುಳ್ಳು/ಕೆಲಸಕ್ಕೆ ಬಾರದ ಮಾತು; **ಇವನು ಹೆಂಡಿರ ಸಾಕಿ ಬದುಕುವ ಲೌಲ್ಯತೆಯಲಿ ಒಟ್ಟೈಸಿ ಬಂದು, ಎನಗೆ ಕಾಕ ಬಳಸುವನು**=ಇವನು ಜೀವವನ್ನು ಉಳಿಸಿಕೊಂಡು ತನ್ನ ಹೆಂಡಿರೊಡನೆ ಬಾಳಬೇಕೆಂಬ ದುರಾಸೆಯಿಂದ ಕೂಡಿದವನಾಗಿ ರಣರಂಗದಿಂದ ಓಡಿಬಂದು ನನ್ನ ಮುಂದೆ ಕೆಲಸಕ್ಕೆ ಬಾರದ ಮಾತುಗಳನ್ನಾಡುತ್ತಿದ್ದಾನೆ; ಉದ್ರೇಕಿಸು=ಕೆರಳು/ಆವೇಶಗೊಳ್ಳು; ಸಮರ=ಯುದ್ಧ/ಕಾಳೆಗ; ಪಿನಾಕಧರ=ಶಿವ; ನೂಕು=ಶಕ್ಯವಾಗು/ಸಾಧ್ಯವಾಗು; **ತಾನು ಉದ್ರೇಕಿಸಿಯೆ ನಿಲಲು ಸಮರದಲಿ ಪಿನಾಕಧರನಿಗೆ ನೂಕದು ಎಂದನು ಸತಿಯರ ಇದಿರಿನಲಿ**=ನಾನು ಕೆರಳಿ ನಿಂತರೆ ರಣರಂಗದಲ್ಲಿ ನನ್ನನ್ನು ಎದುರಿಸಲು ಶಿವನಿಗೆ ಸಾಧ್ಯವಾಗದು ಎಂದು ರಾಣಿವಾಸದ ಹೆಂಗಸರ ಮುಂದೆ ಉತ್ತರಕುಮಾರನು ನುಡಿದನು;

ಮೊದಲ ಸಲ ಕುಮಾರವ್ಯಾಸನ ಪದ್ಯಗಳ ಓದಿನ ಪ್ರವೇಶಕ್ಕೆ ತೊಡಗುವವರಿಗೆ ಮತ್ತು ನಾಟಕದಲ್ಲಿನ ಪಾತ್ರದ ಮಾತುಗಳನ್ನು ಕಂಠಪಾಠ ಮಾಡಿಕೊಂಡು ಪ್ರೇಕ್ಷಕರ ಮುಂದೆ ಅಭಿನಯಿಸುವ ನಟನಟಿಯರಿಗೆ ಈ ಮಾದರಿಯ ಸರಳ ಅರ್ಥದ ವಿವರಣೆಯು ರಂಗಪಠ್ಯವನ್ನು ಕಟ್ಟಿಕೊಳ್ಳಲು ನೆರವಿಗೆ ಬರುತ್ತದೆ.

ಕೃತಿಯ ಪ್ರಸ್ತುತತೆಗೆ ಕೊನೆಯಲ್ಲಿ ಕೆಲವು ಮಾತುಗಳನ್ನು , ಅತಿ ಅವಶ್ಯವಿರುವುದರಿಂದ ಮತ್ತು ಸಿ.ಪಿ.ನಾಗರಾಜ ಅವರ ಈ ನಾಟಕದ ಅವತರಣಿಕೆಯು ಭಾಷೆಯ ದೃಷ್ಟಿಯಿಂದ ಮಹತ್ವದ್ದಾಗಿರುವುದರಿಂದ ಹೇಳಬೇಕಾಗಿದೆ. ವಿಜ್ಞಾನವು ಮಾಹಿತಿ ತಂತ್ರಜ್ಞಾನದ ವೈವಿಧ್ಯತೆಯನ್ನು ಸರಕು ರೂಪದಲ್ಲಿ ನಮ್ಮೆದುರಿಗೆ ಹರಡಿದೆ. ಜ್ಞಾನದ ಬದಲಿಗೆ ಸದ್ಯ ಮಾಹಿತಿಯೇ ಅರಿವಿನ ಜಾಗವನ್ನು ಆವರಿಸಿ, ಮಾಹಿತಿ ತಂತ್ರಜ್ಞಾನವೇ ಆಧುನಿಕ ಜ್ಞಾನವೆಂಬ ಹುಸಿ ಕಲ್ಪನೆಯನ್ನು ಸೃಷ್ಟಿಸಿದೆ. ಈ ನಿಟ್ಟಿನಲ್ಲಿ ಭಾಷೆಯನ್ನು ಸಾಂಸ್ಕೃತಿಕ ರಾಜಕಾರಣದ ಒಂದು 'ಟೂಲ್ ಕಿಟ್' ಆಗಿ ಬಹಳ ವ್ಯವಸ್ಥಿತವಾಗಿ ಅಧಿಕಾರ ರಾಜಕಾರಣ ಬಳಸಿಕೊಳ್ಳುತ್ತಿದೆ. ಶಿಕ್ಷಣವೆಂಬುದು

ಈಗ ಉದ್ಯಮವಾಗಿರುವುದರಿಂದ 'ಅರಿವು' ವ್ಯಾಪಾರದ ಸರಕಾಗುತ್ತಿರುವ ದುರಂತಕಾಲದಲ್ಲಿ ನಾಡು ನುಡಿಯ ದೃಷ್ಟಿಯಿಂದ ಕುವೆಂಪು ಅವರು ಹೇಳಿದ ಈ ಮಾತು ಅತಿ ಮುಖ್ಯವೆಂದು ಅನಿಸುತ್ತಿದೆ.

"ನಾನು ರಾಜ್ಯದ ದೃಷ್ಟಿಯಿಂದ ಕರ್ನಾಟಕದವನು; ಭಾಷೆಯ ದೃಷ್ಟಿಯಿಂದ ಕನ್ನಡಿಗನು; ಆದರೆ ಸಂಸ್ಕೃತಿಯ ದೃಷ್ಟಿಯಿಂದ ಮತ್ತು ಭಾರತೀಯ ದೃಷ್ಟಿಯಿಂದ ಭಾರತೀಯನು. ನನ್ನ ಕರ್ಣಾಟಕತ್ವ ಭಾರತೀಯತ್ವಕ್ಕೆ ಎಂದಿಗೂ ಎದುರು ನಿಲ್ಲುವುದಿಲ್ಲ." ಆದರೆ ಈ ಕವಿ ನುಡಿ ಇಂದು ವಿಭಿನ್ನ ನೆಲೆಯಲ್ಲಿ ಅರ್ಥೈಸಿ ಕೊಳ್ಳುವಂತೆ ನಮ್ಮ ರಾಜಕಾರಣ ಒಕ್ಕೂಟದ ಜನತಂತ್ರ ವ್ಯವಸ್ಥೆಯು ಸರ್ವಾಧಿಕಾರದ ಆವರಣಕ್ಕೆ ತನ್ನನ್ನು ಹೊಂದಿಸಿಕೊಳ್ಳಲು ಹವಣಿಸುತ್ತಿರುವುದು ಸ್ಪಷ್ಟವಾಗಿದೆ.

ಇಂದು ಏಕ ಭಾಷೆ, ರಾಷ್ಟ್ರ ಭಾಷೆ, ಏಕ ರಾಷ್ಟ್ರ, ಏಕಮತ, ರಾಷ್ಟ್ರಧರ್ಮ ಎಂಬ ಪರಿಕಲ್ಪನೆಗಳು ಫ್ಯಾಸಿಸ್ಟ್ ಚಿಂತನೆಯ ತಾತ್ವಿಕತೆಯ ನೆಲೆಯಿಂದ ರೂಪು ಗೊಂಡಿವೆ. ಇವು ಭಾರತದ ಬಹುತ್ವ, ಬಹುಭಾಷೆ, ಬಹುಸಂಸ್ಕೃತಿ, ಬಹು ಜನಾಂಗಗಳ ಪರಂಪರೆಗೆ ವಿರುದ್ಧವಾದುದ್ದು.

ಎಲ್ಲವನ್ನೂ ಏಕಗೊಳಿಸಿ ನೋಡುವ ಕ್ರಮದ ಕಾಲಘಟ್ಟದಲ್ಲಿ 'ಹಿಂದಿ' ಒಂದೇ ರಾಷ್ಟ್ರ ಭಾಷೆ ಮತ್ತು ವ್ಯಾವಹಾರಿಕ ಭಾಷೆ ಎಂಬ ಚಿಂತನೆ ಬಹುಸಂಸ್ಕೃತಿಯ ಮತ್ತು ಬಹುಭಾಷಾಭಿವ್ಯಕ್ತಿಯ ಸ್ವಾತಂತ್ರ್ಯವನ್ನು ಅಂತ್ಯಗೊಳಿಸುವ ಹುನ್ನಾರದ ಒಂದು ಭಾಗವೇ ಆಗಿದೆ ಎನ್ನಬಹುದು.

ನಡುಗನ್ನಡ ನುಡಿಯಲ್ಲಿ ರಚನೆಗೊಂಡಿರುವ ಕುಮಾರವ್ಯಾಸ ಭಾರತ ಕಥಾ ಮಂಜರಿಯ ಪಾತ್ರಗಳು ಇಂದಿನ ನಮ್ಮ ಕಾಲಕ್ಕೂ ವಾಸ್ತವ ಜಗತ್ತಿನ ಸಂಗತಿಗಳನ್ನು ಕಲಾತ್ಮಕವಾಗಿ ಪ್ರತಿಪಾದಿಸುತ್ತಿವೆ. ಅವನ್ನು ಅದೇ ನುಡಿಗಟ್ಟಿನಲ್ಲಿ ನಾಟಕ ರೂಪದಲ್ಲಿ ಜೋಡಿಸಿ, ಪ್ರತಿ ಪದವನ್ನು ಅರ್ಥಸಹಿತ ವಿವರವಾಗಿ ತಿಳಿಯ ಹೇಳುವ ಸಿ.ಪಿ.ನಾಗರಾಜ ಅವರ 'ಕುಮಾರವ್ಯಾಸ ಭಾರತ ಓದು' ಕೃತಿಯ ಓದಿನಿಂದ ನನ್ನ ಅರುಹು ವಿಸ್ತರಿಸಿದ್ದಲ್ಲದೇ, ಇಂತಹ ನಾಟಕ ರೂಪಗಳು ಕುಮಾರವ್ಯಾಸ ಭಾರತದಲ್ಲಿ ಇನ್ನೆಷ್ಟಿದೆಯೋ ಎಂಬ ಬೆರಗು ನನ್ನದಾಯಿತು.

ಕನ್ನಡ ರಂಗಭೂಮಿಯಲ್ಲಿ ವೈವಿಧ್ಯಮಯ ಪ್ರಯೋಗ ನಡೆಯುತ್ತಿರುವ ಈ ಸಮಯದಲ್ಲಿ ನಟನಟಿಯರ ವಾಚಿಕ, ಆಂಗಿಕ, ಆಹಾರ್ಯ ಅಭಿನಯದ ಮೂಲಕ ನಡುಗನ್ನಡ ನುಡಿರಚನೆಯು ಅಭಿವ್ಯಕ್ತಗೊಂಡರೆ , ಕನ್ನಡ ಭಾರತದ ಕಾವ್ಯ ಭಾಷೆಯ ಲಾಲಿತ್ಯ ರೂಪಕ ಪ್ರಪಂಚದ ವಿಸ್ಮಯಗೊಳಿಸುವ ಶಬ್ದಕಾವ್ಯಗಳು ದೃಶ್ಯಕಾವ್ಯಗಳಾಗಿ ಕನ್ನಡಿಗರನ್ನು ರಂಜಿಸಬಲ್ಲವು. ಕುಮಾರವ್ಯಾಸನ ಕಾವ್ಯ

ನುಡಿಗಳೇ ಸಂಭಾಷಣೆಯ ರೂಪದಲ್ಲಿ ಸಂವಹನಗೊಂಡಾಗ ಆಗುವ ಅನುಭವ ವಿಭಿನ್ನವಾಗಿರುತ್ತದೆ ಎಂದು ನಮ್ರವಾಗಿ ನಂಬಿರುವೆ.

ವ್ಯಾಸಭಾರತಕ್ಕೂ ವಿಭಿನ್ನವಾದ ಕುಮಾರವ್ಯಾಸ ಭಾರತದ ವಿರಾಟಪರ್ವದ ಎರಡು ಪ್ರಸಂಗಗಳನ್ನು ಓದುಗರಿಗೆ ನಾಟಕರೂಪದಲ್ಲಿ ಜೋಡಿಸಿಕೊಟ್ಟಿರುವ ಈ ಕೃತಿಯಲ್ಲಿ 'ಮೂಲ ಪಠ್ಯದ ನಾಟಕ ರೂಪ, ಪದವಿಂಗಡಣೆ ಮತ್ತು ತಿರುಳು ' ಜತೆಗೂಡಿ ಪುಸ್ತಕದ ಗಾತ್ರ ಹೆಚ್ಚಾಯಿತಲ್ಲವೇ ಎನ್ನಿಸದಿರದು. ಆದರೆ ಪಂಪ, ರನ್ನ. ಜನ್ನ, ರಾಘವಾಂಕ, ಕನಕದಾಸ, ಲಕ್ಷ್ಮೀಶ, ಕುಮಾರವ್ಯಾಸ ಮುಂತಾದ ಮಹಾಕವಿಗಳ ಸೃಜನಶೀಲ ಸಂಕಥನಗಳನ್ನು ನಮ್ಮ ಕಾಲದಲ್ಲಿಯೂ ಮೂಲರೂಪದಲ್ಲಿಯೇ ಓದಲು ಮತ್ತು ಅರ್ಥಮಾಡಿಕೊಳ್ಳಲು ನೆರವಾಗುವ ಇಂತಹ ಬರಹಗಳ ಪುಟಗಳು ಹೆಚ್ಚಾದರೂ ಓದುಗರಿಗೆ ಮತ್ತು ರಂಗಕರ್ಮಿಗಳಿಗೆ ತುಂಬಾ ಉಪಯುಕ್ತವಾಗಿದೆ.

ಈ ಕೃತಿಯನ್ನು ನಾನು ಸಿ.ಪಿ.ನಾಗರಾಜ ಅವರು ಕನ್ನಡ ರಂಗಭೂಮಿಗೆ ನೀಡಿರುವ ಒಂದು ಒಳ್ಳೆಯ ಕೊಡುಗೆ ಎಂದು ತಿಳಿದಿದ್ದೇನೆ. ಇದೇ ಮಾದರಿಯಲ್ಲಿ ಇವರಿಂದ ಈಗಾಗಲೇ ಪ್ರಕಟಗೊಂಡಿರುವ 'ಪಂಪ ಭಾರತ ಪ್ರಸಂಗ ಓದು–ಪ್ರಥಮ ಆಶ್ವಾಸದ ಎಂಟು ಪ್ರಸಂಗಗಳು'; ಒಂದು ನೂರ ಏಳು ಪ್ರಸಂಗಗಳಿಂದ ಕೂಡಿರುವ 'ಪಂಪ ಭಾರತ ಪ್ರಸಂಗ' ಮತ್ತು ಈಗ ಪ್ರಕಟಗೊಳ್ಳುತ್ತಿರುವ 'ಕುಮಾರವ್ಯಾಸ ಭಾರತ ಓದು' ಕೃತಿಯ ಎರಡು ಪ್ರಸಂಗಗಳು ರಂಗದಲ್ಲಿ ಜೀವತಳೆಯಲಿ ಎಂಬ ಹಾರೈಕೆಯೊಡನೆ ಸಿ.ಪಿ.ನಾಗರಾಜ ಅವರನ್ನು ಅಭಿನಂದಿಸುತ್ತೇನೆ.

**ಸಿ.ಬಸವಲಿಂಗಯ್ಯ**<br>
ರಂಗ ನಿರ್ದೇಶಕರು

# ನನ್ನ ನುಡಿ

ಕುಮಾರವ್ಯಾಸ ಭಾರತದ ವಿರಾಟಪರ್ವದಲ್ಲಿ ಚಿತ್ರಣಗೊಂಡಿರುವ ಕಾವ್ಯ ಸನ್ನಿವೇಶಗಳಲ್ಲಿ ಕೆಲವು ಪದ್ಯಗಳನ್ನು ಆಯ್ದುಕೊಂಡು, ಅವನ್ನು ನಾಟಕ ರೂಪಕ್ಕೆ ಅಳವಡಿಸಿ 'ಕೀಚಕನ ಪ್ರಸಂಗ ' ಮತ್ತು 'ಉತ್ತರ ಕುಮಾರನ ಪ್ರಸಂಗ' ಎಂಬ ಎರಡು ಪ್ರಸಂಗಗಳನ್ನು ರಚಿಸಿ, ಕಾವ್ಯದ ನುಡಿರಚನೆಗಳಿಗೆ ಟಿಪ್ಪಣಿಯನ್ನು ಬರೆದಿದ್ದೇನೆ. ಗುರುಗಳಾದ ಕೆ.ವಿ.ನಾರಾಯಣ ಅವರು ನನ್ನ ಓದು ಮತ್ತು ಬರಹಕ್ಕೆ ಮಾರ್ಗದರ್ಶನ ನೀಡಿದ್ದಾರೆ.

ಈ ಎರಡು ಪ್ರಸಂಗಗಳು ೨೩ ಕಂತುಗಳಲ್ಲಿ ಅಂತರ್ ಜಾಲದಲ್ಲಿ ಮೂಡಿ ಬರುವ ಹೊನಲು ಮಿಂದಾಣದಲ್ಲಿ (honalu.net) ಪ್ರಕಟಗೊಂಡಿವೆ. ಹೊನಲು ಮಿಂದಾಣದ ಸಂಪಾದಕರು ಮತ್ತು ಓದುಗರು ಈ ಬರಹಕ್ಕೆ ಉತ್ತೇಜನ ನೀಡಿದ್ದಾರೆ.

ಕನ್ನಡ ರಂಗಭೂಮಿಯಲ್ಲಿ ಹೆಸರಾಂತ ರಂಗ ನಿರ್ದೇಶಕರಾದ ಸಿ.ಬಸವಲಿಂಗಯ್ಯನವರನ್ನು ಈ ಬರಹಕ್ಕೆ ಮುನ್ನುಡಿಯ ರೂಪದಲ್ಲಿ ತಮ್ಮ ಅನಿಸಿಕೆಯನ್ನು ತಿಳಿಸಬೇಕೆಂದು ಕೋರಿಕೊಂಡಾಗ, ನನ್ನ ಕೋರಿಕೆಯನ್ನು ಮನ್ನಿಸಿ, ಉತ್ತೇಜನದ ನುಡಿಗಳನ್ನಾಡಿದ್ದಾರೆ.

ಗುರುಗಳಾದ ಬಿ.ಎ.ವಿವೇಕ ರೈ ಅವರು ನಾನು ೨೦೨೩ ನೆಯ ಇಸವಿಯಲ್ಲಿ ಪ್ರಕಟಿಸಿದ್ದ 'ಪಂಪ ಭಾರತ ಪ್ರಸಂಗ' ಗ್ರಂಥವನ್ನು ಓದಿ ೧೪ ನೆಯ ಜೂನ್ ೨೦೨೪ರಂದು ಬರೆದಿದ್ದ ಪತ್ರವನ್ನು ಈ ಕೃತಿಯಲ್ಲಿ ಅನುಬಂಧವನ್ನಾಗಿ ಸೇರಿಸಿಕೊಂಡಿದ್ದೇನೆ.

ಈ ಬರಹದ ಕರಡು ಪ್ರತಿಯನ್ನು ಓದಿದ ನನ್ನ ಗುರುಹಿರಿಯರು ಮತ್ತು ಗೆಳೆಯರು ಮೆಚ್ಚುಗೆಯ ನುಡಿಗಳನ್ನಾಡಿದ್ದಾರೆ. ನನ್ನೆಲ್ಲಾ ಬರಹಗಳ ಮೊದಲ ಓದುಗಳಾದ ನನ್ನ ಹೆಂಡತಿ ಗಾಯತ್ರಿ ತನ್ನ ಅನಿಸಿಕೆಯನ್ನು ತಿಳಿಸಿದ್ದಾಳೆ. ಗೆಳೆಯರಾದ ಆರ್. ಸುಧೀಂದ್ರ ಕುಮಾರ್ ಅವರು ನಾನು ಬರೆದು ಪ್ರಕಟಿಸಿದ ಪುಸ್ತಕವನ್ನು ಓದುಗರಿಗೆ ತಲುಪಿಸಲು ನೆರವಾಗುತ್ತಿದ್ದಾರೆ.

ಕುಮಾರವ್ಯಾಸ ಭಾರತದ ಓದಿಗೆ ನೆರವಾದ ಗುರುಹಿರಿಯರಿಗೆ, ಗೆಳೆಯರಿಗೆ, ಸಂಪಾದಕರಿಗೆ ಮತ್ತು ಮುನ್ನುಡಿಯನ್ನು ಬರೆದುಕೊಟ್ಟಿರುವ ಮಿತ್ರರಾದ ಸಿ.ಬಸವಲಿಂಗಯ್ಯನವರಿಗೆ ಮತ್ತು ಪತ್ರವನ್ನು ಪ್ರಕಟಿಸಲು ಅನುಮತಿ ನೀಡಿದ ಗುರುಗಳಾದ ಬಿ.ಎ.ವಿವೇಕ ರೈ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ಸಿ.ಪಿ.ನಾಗರಾಜ**
ಬೆಂಗಳೂರು

# ಓದಿಗೆ ನೆರವಾದ ಪುಸ್ತಕಗಳು

೧. **ಕುವೆಂಪು**
**ಮತ್ತು**
**ಮಾಸ್ತಿ ವೆಂಕಟೇಶ ಅಯ್ಯಂಗಾರ್** (ಸಂಪಾದಕರು):

**ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ**

ಪ್ರಕಾಶನ: ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ
ಪ್ರಕಟಣೆಯ ವರ್ಷ: ೧೯೫೮

೨. **ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ (ಪ್ರಧಾನ ಸಂಪಾದಕರು):**
**ಜಿ.ಎನ್. ನರಸಿಂಹ ಮೂರ್ತಿ (ಸಂಯೋಜಕ ಸಂಪಾದಕರು)**

**ಕುಮಾರವ್ಯಾಸ ಭಾರತ ಎಂಬ ಕರ್ಣಾಟ ಭಾರತ ಕಥಾಮಂಜರಿ**

ಸಂಪುಟ ೧ ಮತ್ತು ೨
ಪ್ರಕಟಣೆಯ ವರ್ಷ : ೨೦೨೨
ಪ್ರಕಾಶಕರು: ಕನ್ನಡ ಗಣಕ ಪರಿಷತ್ತು, ಬೆಂಗಳೂರು.
ಸಹಕಾರ: ಕರ್ನಾಟಕ ಸರ್ಕಾರ ಮತ್ತು ಕುಮಾರವ್ಯಾಸ ಅಧ್ಯಯನ ಪೀಠ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು.

# ಪರಿವಿಡಿ

# ಕುಮಾರವ್ಯಾಸ

**ಕಾಲ** : ಕ್ರಿ.ಶ. ೧೪೦೦

**ಊರು** : ಕೋಳಿವಾಡ ಗ್ರಾಮ. ಈಗಿನ ಗದಗ ಜಿಲ್ಲೆ, ಕರ್ನಾಟಕ ರಾಜ್ಯ

**ಕವಿಯ ಮೆಚ್ಚಿನ ದೇವರು:** ಗದುಗಿನ ವೀರನಾರಾಯಣ

**ರಚಿಸಿದ ಕಾವ್ಯ:** ಕರ್ಣಾಟ ಭಾರತ ಕಥಾಮಂಜರಿ

(ಹತ್ತು ಪರ್ವಗಳು. ಭಾಮಿನಿ ಷಟ್ಪದಿಯ ೮,೨೭೦ ಪದ್ಯಗಳು.)

ಕುಮಾರವ್ಯಾಸ ಕವಿಯ ವ್ಯಕ್ತಿಗತ ಜೀವನದ ವಿವರಗಳು ತಿಳಿದು ಬಂದಿಲ್ಲ. ನಿಜ ಜೀವನದಲ್ಲಿ 'ನಾರಣಪ್ಪ' ಎಂಬ ಹೆಸರು ಕವಿಗೆ ಇದ್ದಿರಬಹುದೆಂದು ಸಾಹಿತ್ಯ ಚರಿತ್ರಕಾರರಲ್ಲಿ ಕೆಲವರು ಊಹಿಸಿದ್ದಾರೆ. 'ಕುಮಾರವ್ಯಾಸ' ಎಂಬುದು ಕವಿಯ ಕಾವ್ಯನಾಮ. ಗದುಗಿನ ಭಾರತ/ಕುಮಾರವ್ಯಾಸ ಭಾರತ ಎಂಬ ಹೆಸರುಗಳಿಂದಲೂ ಈ ಕಾವ್ಯವು ಜನಪ್ರಿಯವಾಗಿದೆ.

# ಕೀಚಕನ ಪ್ರಸಂಗ

(ಕುಮಾರವ್ಯಾಸ ಭಾರತ ಕಾವ್ಯದಲ್ಲಿನ ವಿರಾಟಪರ್ವದ ಎರಡನೆಯ ಮತ್ತು ಮೂರನೆಯ ಸಂಧಿಯಿಂದ ಆಯ್ದ ೧೬೬ ಪದ್ಯಗಳನ್ನು ನಾಟಕ ರೂಪಕ್ಕೆ ಜೋಡಿಸಲಾಗಿದೆ.)

## ಪಾತ್ರಗಳು

**ಕೀಚಕ** : ಕೇಕಯ ಮತ್ತು ಮಾಲವಿ ದಂಪತಿಯ ಮಗ. ವಿರಾಟರಾಜನ ಹೆಂಡತಿಯಾದ ಸುದೇಷ್ಣೆಯ ತಮ್ಮ.

**ಸುದೇಷ್ಣೆ** : ವಿರಾಟರಾಜನ ಹೆಂಡತಿ. ಪಟ್ಟದ ರಾಣಿ. ಕೀಚಕನ ಅಕ್ಕ.

**ಸೈರಂಧ್ರಿ / ದ್ರೌಪದಿ** : ಪಾಂಡವರ ಮಡದಿ. ಈಗ ವಿರಾಟನಗರಿಯ ಪಟ್ಟದ ರಾಣಿ ಸುದೇಷ್ಣೆಯ ರಾಣಿವಾಸದಲ್ಲಿ ದಾಸಿಯಾಗಿದ್ದಾಳೆ.

**ಬಾಣಸಿಗ / ಭೀಮ** : ಪಾಂಡುರಾಜ ಮತ್ತು ಕುಂತಿಯ ಮಗ. ಈಗ ವಿರಾಟರಾಜನ ಅರಮನೆಯ ಅಡುಗೆಮನೆಯಲ್ಲಿ ಬಾಣಸಿಗನಾಗಿದ್ದಾನೆ.

**ಕಂಕಭಟ್ಟ / ಧರ್ಮರಾಯ:** ಪಾಂಡುರಾಜ ಮತ್ತು ಕುಂತಿಯ ಮಗ. ಈಗ ವಿರಾಟರಾಜನ ಆಪ್ತ ಪರಿಚಾರಕನಾಗಿದ್ದಾನೆ.

**ಕೀಚಕನ ಸೋದರರು :** ೧೦೫ ಮಂದಿ

**ವಿರಾಟನಗರದ ಪ್ರಜೆಗಳು**

# ಕೀಚಕನ ಪ್ರಸಂಗ

## ನೋಟ-೧

ಕೇಳು ಜನಮೇಜಯ ಧರಿತ್ರೀಪಾಲ, ನಿಮ್ಮಯ ಪೂರ್ವ ಪೃಥ್ವೀಪಾಲರು ವಿರಾಟನಗರಿಯಲಿ ಗುಪುತದಿಂದ ಇದ್ದರು. ಹತ್ತು ತಿಂಗಳ ಮೇಲೆ ಕಾಲ ಸವೆದುದು. ಮತ್ತೊಂದು ಅತಿಶಯೋಕ್ತಿಯನು ವಿಸ್ತರದೊಳು ಅರುಪುವೆನು ಆಲಿಸೈ ಎಂದನಾ ಮುನಿಪ. ಆ ವಿರಾಟನ ರಾಜಧಾನಿಯೊಳು ಈ ವಿಳಾಸದಿ ಮುಸುಕಿ ತಾವ್ ಪರಸೇವೆಯಲಿ ಪಾಂಡವರು ಹತ್ತು ಮಾಸವನು ಕಳೆದರು. ರಾವಣನು ಮುನ್ನಂದು ಸೀತಾದೇವಿಗೆ ಅಳುಪಿದ ಕಥೆಯ ವೋಲ್ ಸಂಭಾವಿಸಿದ ಕೀಚಕ ವಿಡಂಬವ ಕೇಳು ಭೂಪಾಲ.

ಒಂದು ದಿವಸ ವಿರಾಟನ ಅರಸಿಯ ಮಂದಿರಕ್ಕೆ ಆಕೆಯ ತಮ್ಮ ಅತುಳ ಭುಜಬಲ ಕೀಚಕನು ಓಲೈಸಲೆಂದು ಐತಂದನು. ಹಿಂದೆ ಮುಂದೆ ಇಕ್ಕೆಲದ ಸತಿಯರ ಸಂದಣಿಯ ಮಧ್ಯದಲಿ ಮೆರೆವ ಅರವಿಂದ ವದನೆಯ ಕಂಡು ಕಾಣಿಕೆಗೊಟ್ಟು ಪೊಡಮಟ್ಟ ಅನುಜನನು ಅಂಗನೆ ತೆಗೆದಪ್ಪಿ ಮನದಣಿಯಲು ಸಿಂಹಾಸನದ ಕೆಲದಲಿ ತತ್ ಸಹೋದರನ ಕುಳ್ಳಿರಿಸಿ ಮನ್ನಿಸಿದಳೈ.

ತನುಪುಳಕ ತಲೆದೋರಲು ಅವನು ಉಬ್ಬಿನಲಿ ಸತ್ಕೃತನಾಗಿ ಸುದೇಷ್ಣೆಯ ಮೇಳದ ಅಬಲೆಯರ ಕಮಳಾನನೆಯರನು ಕಂಡನು. ಅವಯವದ ಪರಿಮಳದ ಪಸರಕೆ ಕವಿವ ತುಂಬಿಯ ಸಾರ ಸಂಗೀತವನು ಕೇಳುತ ಅವರ ಮಧ್ಯದಲಿ ನದಿಗಳೊಳ್ ಜಾಹ್ನವಿಯ, ಅಮಲ ತಾರಾ ನಿವಹದಲಿ ರೋಹಿಣಿಯವೋಲ್, ಸುರ ಯುವತಿಯರಲಿ ಊರ್ವಶಿಯವೋಲ್ ಪಾಂಚಾಲ ನಂದನೆಯ ಅವ ಕಂಡನು. ಅವನು ಮೊದಲೊಳು ಅವಳ ಅಂಗವಟ್ಟವನು ಒದವಿ ನೋಡಿದೊಡೆ ಅಲ್ಲಿಯೇ ಗಾಢದಲಿ ನೆಟ್ಟವು.

ಆಲಿಗಳನು ಅಲುಗಿ ಕೀಳಲು ಅರಿದಾಯ್ತು. ಮದನ ಮಸೆದೋರಿದನು. ಹೂಗಣೆ ಹೃದಯವನು ತಾಗಿದುದು. ಹರ ಹರ... ಖಳನು ಒಂದು ನಿಮಿಷದಲಿ ಹೆದರಿದನು ಹಮ್ಮೈಸಿದನು. **"ನಿಂದು ನೋಡಿದ ದ್ರೌಪದಿಯ ಮೊಗದ ಅಂದವನು ಕಂಡಾಗ ಕೀಚಕ ನೊಂದನು"** ಎನೆ ಮೊಗ ತೆಗೆಯಲು ಕಾಮ ಕೈಗೂಡಿ ಎಚ್ಚನು. ಅಂದು ಕೀಚಕ ಬೆರಗಾದನು.

**ಕೀಚಕ** : (ತನ್ನ ಮನದಲ್ಲಿಯೇ)

**ಇಂದು ವಿಳಾಸಿನಿ ಮನವನು ತಳೆದಳು.**

(ಎಂದು ಭಾವಿಸಿ ಕದಪಿನಲಿ ಕರತಳವ ಚಾಚಿದನು)

ತಿಳಿ... ಇವಳಾರು... ಇವಳು ಮೂಜಗವ ಮೋಹಿಪ ತಿಲಕವೋ... ಕಾಮಂಗೆ ಕಟ್ಟಿದ ಕಳನ ಭಾಷೆಗೆ ನಿಂದ ಮಾಸಾಳೋ...ಮಹಾದೇವ ಕೊಲೆಗಡಿಗ ಕಂದರ್ಪಕನ ಕೂರಲಗೊ...ಮದನನ ಸೊಕ್ಕಿದಾನೆಯೊ... ನಳಿನಮುಖಿ ಇವಳಾರ ಸತಿ...

(ಎಂದು ಅಳುಪಿ ನೋಡಿದನು.)

ಜಗವ ಕೆಡಹಲು ಜಲಜವಿಶಿಖನು ಬಿಗಿದ ಬಲೆಯಿವಳಲ್ಲಲೇ. ಯೋಗಿಗಳ ಯತಿಗಳನು ಎಸಲು ಕಾಮನು ಮಸೆದ ಕೂರಲಗು.

(ಕೀಚಕ ಮುಗುದನಾದನು. ಕಾಮನ ಅಂಬುಗಳು ಎದೆಯಲಿ ಉಗಿದವು. ನಟ್ಟ ದೃಷ್ಟಿಯ ತೆಗೆಯಲಾಗದೆ ಸೋತು ಪಾತಕವ ನೆನೆದ. ಚಿತ್ತ ಸೂರೆಹೋಯಿತು. ಕಂಗಳು ಮಾರುಹೋದವು. ಖಳನ ಧೈರ್ಯವು ತೂರಿ ಪೋದುದು. ಕರಣದಲಿ ಕಳವಳದ ಬೀಡಾಯ್ತು. ಮೀರಿ ಪೊಗುವ ಅಂಗಜನ ಶರದಲಿ ಹೃದಯ ಡೋರುವೋಯಿತು.)

ಕಣ್ ಇರಿಗಾರೆ ಇವಳಾರು

(ಎನುತ ನಿಮಿಷದಲಿ ಗಜಬಜಿಸಿದನು.)

ರತಿಯ ಚೆಲುವು ಅಂತಿರಲಿ.... ಸಿರಿ ಪಾರ್ವತಿಯ ರೂಪು ಅಂತಿರಲಿ... ಬೊಮ್ಮನ ಸತಿಯ ಸೊಬಗು ಅಂತಿರಲಿ... ಈ ಬಾಲಕಿಯ ರೂಪಿಂಗೆ ಪ್ರತಿಯ ಕಾಣೆನು. ಪಾಂಡವರ ದುರುಪತಿಯ ರೂಪಿಂಗೆ ಐದು ಮಡಿ. ಈ ಸತಿಯ ವಿಭ್ರಮವು ಎನ್ನಯ ಮನವನು ಐದಿತು.

(ಎನುತ ಇರ್ದ. ಅರಿವು ತಲೆಕೆಳಗಾಯ್ತು. ಧೈರ್ಯದ ನಿರಿಗೆ ನಗೆಗೆ

ಎಡೆಯಾಯ್ತು. ಲಜ್ಜೆಯ ಹೊರಗೆ ಬರಿದೊರೆಯಾಯ್ತು. ಭಯ ಬೀಜ ಕರಿಮೊಳೆವೋಯ್ತು. ಮರವೆ ಗರಿಗಟ್ಟಿತು. ಮನೋಭವನ ಇರಿಗೆಲಸ ಬಲುಹಾಯ್ತು. ಆತನ ತನುವಿನ ಅಂತಸ್ತಾಪದ ಏಳ್ಗೆಯನು ಹೊಗಳುವಡೆ ಅರಿಯೆನು. ಲಜ್ಜೆ ಬೀಳುಗೊಂಡುದು. ಮಹಿಮೆಯ ಕೀಲು ಕಳಚಿತು. ದ್ರುಪದ ತನುಜೆಯನು ಆಲಿಯಲಿ ನುಂಗಿದನು. ಮನದಲಿ ಸತಿಯ ಸೆರೆವಿಡಿದು...)

**ಕೀಚಕ** : ಅಕ್ಕ, ಬಿನ್ನಹವು ಕೇಳು, ನಿಮ್ಮಡಿ ಓಲೆಕಾತಿಯರೊಳಗೆ ಮೀಟಿನ ಮೇಲುಗೈ ಇವಳು ಆವಳು.

(ಎಂದು ಅಗ್ರಜೆಯ ಬೆಸಗೊಂಡ)

**ಸುದೇಷ್ಣೆ** : ಈಕೆ ಗಂಧರ್ವರ ರಮಣಿ. ನಮ್ಮಾಕೆಯಾಗಿರೆ ಮಾನ್ಯ ವೃತ್ತಿಯೊಳು ಈಕೆಯನು ಸಲಹುವೆವು. ಇವಳ ವಲ್ಲಭರು ಬಲ್ಲಿದರು. ನಿಂದಿರು. ಕಾಕನಾಡದಿರು. ಈಕೆ ನಿನಗೆ ಅಹಳಲ್ಲ. ಸಾಕು, ಬಿಡಾರಕ್ಕೆ ನೀ ಹೋಗು.

(ಎನುತ ನಿಜ ಅನುಜನ ಬೀಳ್ಕೊಟ್ಟಳು.)



## ನೋಟ–೨

ಕೀಚಕನ ಅಂತಃಕರಣ ತಾರಿತು. ಕಾಮನ ಕೂರುಗಣೆ ಕಾಲಿಕ್ಕಿದವು. ಮನದ ಏರು ಮುಚ್ಚದು. ದುಗುಡ ಬಲಿದುದು. ಢಗೆ ಮೀರಿ ಮೈದೋರೆ ಮುಸುಕು ಮೋರೆಯಲಿ ನಿಜ ಮಂದಿರಕೆ ಬಂದನು. ಮರುದಿವಸ ಅರಮನೆಯ ಬಾಗಿಲಲಿ ದ್ರೌಪದಿಯನು ತಲೆಮಾರಿ ಕಂಡನು. ತನ್ನೊಡನೆ ಬಹ ಗಾವಳಿಯ ಪರಿವಾರವನು ಕಳುಹಿದನು. ತನ್ನಯ ಬಳಿಯ ಹಡಪದ ಬಾಲಕನ ಹಿಂದಿಕ್ಕಿ ನಡೆತಂದು, ಒಲಿದು ಸಿಂಹದ ಸತಿಗೆ ನರಿ ಮನವು ಅಳುಪುವಂತಿರೆ, ಗರುಡನ ಅರಸಿಗೆ ನಲಿದು ಫಣಿ ಬಯಸುವವೋಲು ಬಾಲಕಿಯ ಬಳಿಗೆ ಐದಿದ. ಆಗಳೆ ಖಳನ ಮನದ ಇಂಗಿತವನು ತಿಳಿದು ಕಾಮಿನಿ ಬೆದರಿದಳು.

**ಸೈರಂಧ್ರಿ** : (ತನ್ನ ಮನದೊಳಗೆ)

ಕಳವಳಿಗ ಸೋತನು, ಕೆಟ್ಟೆನು

(ಎಂದಳು. ತೊಲಗೆ ಹಿಂದಡಿಯಿಡಲು ಕೀಚಕನು ಅಳುಕದೆ ಐತಂದು ಅಬುಜವದನೆಯ ಬಳಿಗೆ ಬಂದನು.)

**ಕೀಚಕ** : ನುಡಿಸಲಾಗದೆ ತರಳೆ ನೀನು?

**ಸೈರಂಧ್ರಿ** : ಎಲೆ ಮರುಳೆ, ಬೇಡ ಅಳುಪದಿರು. ಕೂರಲಗ ಕೊರಳಿಗೆ ಬಯಸದಿರು. ಕಳವಳಿಸದಿರು. ನಿನ್ನ ಅರಮನೆಗೆ ಕೈಯೊಡನೆ ತೆರಳುವುದು. ಅಕಟ... ಬೇಡ. ಸುಲಭೆ ನಾ ನಿನಗಲ್ಲ. ನಿನ್ನನು ಕೆಲರು ನಗುವರು. ಪರದ ಸದ್ಗತಿ ತೊಲಗುವುದು.

**ಕೀಚಕ** : ಎಲೆಗೆ ಸೈರಂಧ್ರಿ, ನಿಲ್ಲು. ಕಾಮನ ಬಲ್ಲೆಹದ ಬಲು ಗಾಯ ತಾಗಿತು. ನೀನು ಔಷಧಿಯ ಬಲ್ಲೆ. ಎನ್ನೊಡಲ ರಕ್ಷಿಸಿಕೊಂಬುದು. ಮೆಲ್ಲನೆ ಅಡಿಯಿಡು. ಮಾತ ಮನ್ನಿಸು. ಚೆಲ್ಲೆಗಂಗಳನು ಎನ್ನ ಮುಖದಲಿ ಚೆಲ್ಲಿ ವಿಗತಜೀವನನ ಸಪ್ರಾಣಿಸಲು ಬೇಹುದು. ಎಲೆಗೆ ಪಾತಕಿ, ನಿನ್ನ ಕಣ್ಣೆಂಬ ಅಲಗಿನಲಿ ತನ್ನೆದೆಯ ನೋಯಿಸಿ ತೊಲಗಬಹುದೇ. ನಿನ್ನ ಮನದೊಳಗೆ ಕರುಣವಿಲ್ಲವೆ. ಒಲಿದು ಬಂದೆನು. ಕಾಮನ ಊಳಿಗ ಬಲುಹು. ಎನ್ನಯ ಭಯವ ತಗ್ಗಿಸಿ ತಲೆಯ ಕಾಯಲುಬೇಕು.

(ಎನುತ ಕೀಚಕನು ಕೈಮುಗಿದ.)

**ಸೈರಂಧ್ರಿ** : ಪರರ ಸತಿಗೆ ಅಳುಪಿದೊಡೆ ಪಾತಕ ದೊರಕುವುದು. ನಿಜಲಕ್ಷ್ಮಿ ತೊಲಗುಗು. ಧರೆಯೊಳು ಅಗ್ಗದ ಕೀರ್ತಿ ಮಾಸುಗು. ಗತಿಗೆ ಕೇಡಹುದು. ಕೊರಳು ಹಲವಾದ ಅಸುರನು ಅಂತಕಪುರವನು ಐದಿದ ಕಥೆಯ ನೀ ಕೇಳ್ದು ಅರಿಯಲಾ. ಕಡುಪಾಪಿ ಹೋಗು.

**ಕೀಚಕ** : ಮೇಲೆ ಸದ್ಗತಿ ಬೆಂದು ಹೋಗಲಿ. ಕಾಲನವರು ಐತರಲಿ. ಬಂಧುಗಳು ಏಳಿಸಲಿ. ತನ್ನವರು ತೊಲಗಲಿ. ರಾಣಿಯರು ಬಿಡಲಿ. ಬಾಲೆ, ನಿನಗೆ ಆನು ಒಲಿದೆ. ಕಾಮನ ಕೋಲು ಎನ್ನನು ಮರಳಲು ಈಯದು. ಲೋಲಲೋಚನೆ ಬಿರುಬ ನುಡಿಯದೆ ತನ್ನನು ಉಳುಹು. ಎಳನಗೆಯ ಬೆಳುದಿಂಗಳನು ನೀ ತಳಿತು ತಾಪವ ಕೆಡಿಸು. ಅಕಟ... ಮಧುರದ ಮೆಲುನುಡಿಯ ಸುಧೆಯಿಂದ ತೃಷ್ಣೆಯನು ಪರಿಹರಿಸು. ಅಳಿಮನದ ಬಡತನವ ನಿನ್ನಯ ಕಳಶ ಕುಚ ಲಕ್ಷ್ಮಿಯಲಿ ಕಳೆ. ಕಾಂತೆ, ಮನದ ಒಲವನು ಇತ್ತಲು ತಿದ್ದಬೇಹುದು.

(ಕೇಳಿ ಕಿವಿ ಮುಚ್ಚಿದಳು. ತನ್ನಯ ಮೇಳದ ಐವರ ನೆನೆದು)

**ಸೈರಂಧ್ರಿ** : ಹರ ಹರ... ಶೂಲಪಾಣಿ... ಮುಕುಂದ

(ಎನುತವೆ ರವಿಯನು ಈಕ್ಷಿಸುತ...)

ಕಾಳು ಮೂಳನಲಾ... ಖಳಾಗ್ರಣಿ ಮೇಲುಗಾಣನಲಾ. ಮದಾಂಧನ ಸೋಲಿಸುವರು ಆರುಂಟು.

(ಎನುತ ತಲೆಬಾಗಿದಳು ತರಳೆ.)

**ಸೈರಂಧ್ರಿ** : ಎಲೆ ದುರಾತ್ಮ, ಮಹಾಪರಾಧವ ಬಳಸುವರೆ. ನಿನ್ನಯ ಕುಲದ ಬೇರನು ಬಯಲಿಂಗೆ ಕೊಯ್ವರೇ. ಹೆತ್ತವರು ಮಕ್ಕಳುಗಳು ಎಂಬ

ಈ ಬದುಕು ಮಾಣದೆ ಎಳಸಿಕೊಂಬಂತೆ ಆಯಿತು. ಇದರಿಂದ ಆವುದು ಬಹುದು. ಹಳಿವು ಹೊದ್ದದೆ. ಕಾತರಿಸದಿರು, ಮಂದಿವಾಳದ ಮಾತುಗಳು ಸಾಕು. ಅಕಟ... ತೊಲಗೈ. ಸೋತಡೇನು ಅದು ಮನುಜ ಧರ್ಮದ ಚಿತ್ತಚಪಲವಲ. ಈ ತತು ಕ್ಷಣ ಜಾರು. ಆತಗಳು ಕೇಳಿದಡೆ ಸೈರಿಸರು. ತನ್ನವರು ದೇವವ್ರಾತದಲಿ ಬಲ್ಲಿದರು.

**ಕೀಚಕ** : ಕಾಮನ ಡಾವರವು ಘನ. ತನಗೆ ಸಾವು ತಪ್ಪದು. ನಿನ್ನ ನೆರೆದೇ ಸಾವೆನಲ್ಲದೆ, ಕಾಮನ ಅಂಬಿಂಗೆ ಒಡಲನು ಒಪ್ಪಿಸೆನು. ಭಾವೆ, ಎನ್ನ ನೂಕದಿರು. ವರ ರಾಜೀವಮುಖಿ, ಕೃಪೆ ಮಾಡು. ತನ್ನಯ ಜೀವನವನು ಉಳುಹು.

(ಎನುತ ಕಮಲಾನನೆಗೆ ಕೈಮುಗಿದ.)

**ಸೈರಂಧ್ರಿ** : ಮರುಳತನ ಬೇಡ. ಎಲವೊ, ತಾನು ಗಂಧರ್ವರಿಗೆ ಹೆಂಡತಿ. ತನ್ನವರು ಬಲ್ಲಿದರು. ನಿನ್ನಯ ದುರುಳತನವನು ಸೈರಿಸರು. ಸೊರಹದಿರು. ಅಪಕೀರ್ತಿ ನಾರಿಯ ನೆರೆಯದಿರು. ನೀ ನಿನ್ನ ನಿಳಯಕೆ ಮರಳುವುದು ಲೇಸು.

(ಎಂದು ತೃಣವನು ಹಿಡಿದು ಸಾರಿದಳು. ದ್ರೌಪದಿಗೆ ಖಳ ನುಡಿದನು.)

**ಕೀಚಕ** : ಎನ್ನ ಆಟೋಪವನು ನೀನು ಅರಿಯೆ. ಬಡವರ ಕೋಪವು ಔಡಿಗೆ ಮೃತ್ಯು. ನಿನ್ನವರು ಎನ್ನನು ಏಗುವರು. ಅವರ ಆಪೆನು. ಅಂತಿರಲಿ ನೀನು ಎನಗೆ ಓಪಳಾದರೆ ಸಾಕು. ಮಲೆತಡೆ ಆ ಪಿನಾಕಿಗೆ ತೆರಳುವೆನೆ. ಬಳಿಕ ಅಲ್ಲಿ ನೋಡು. ಹುಳುಕನಲ್ಲಾ ತುಂಬಿ... ಕೋಗಿಲೆ ಗಳಹನಲ್ಲಾ... ಶಶಿ ವಸಂತನ ಬಲುಹು ಮಾನ್ಯರನು ಇರಿಯದೇ... ತಂಗಾಳಿ ಧಾರ್ಮಿಕನೆ... ಖಳನಲಾ ಮಾಕಂದ... ಮನೋಭವನು ಲೋಕದ ಕೊಲೆಗಡಿಗನಲ್ಲಾ... ಪಾಪಿ, ಇಳಿಕೆ ಗೊಂಬರೆ ಒಲಿಯದೆ ಕೊಲುವರೇ!

**ಸೈರಂಧ್ರಿ** : ನಿನ್ನನು ಒಲಿದು ನಾವು ಕೊಲ್ಲೆವು. ಕೊಲುವ ಸುಭಟರು ಬೇರೆ. ಬಯಲಿಗೆ ಹಲವ ಗಳಹಿದರೇನು ಫಲವಿಲ್ಲ. ಅಕಟ, ಸಾರಿದೆನು. ತಿಳುಪಿದೊಡೆ ಎನ್ನವರು ನಿನ್ನಯ ತಲೆಯನು ಅರಿದೂ ತುಷ್ಟರಾಗರು. ನಿನ್ನ ಅನ್ವಯ ಅಬ್ಧಿಯನು ಕಲಕುವರು. ಕುಲದೊಳು ಒಬ್ಬನು ಜನಿಸಿ ವಂಶವನು ಅಳಿದನು. ಅಕಟಕಟ ಎಂಬ ದುರ್ಯಶವು ಉಳಿವುದಲ್ಲದೆ ಲೇಸಗಾಣೆನು. ಬರಿದೆ ಗಳಹದಿರು. ನಿನ್ನ ಅಖಿಳ

ರಾಣಿಯರು **"ಕೊಲೆಗಡಿಕೆಯೋ ಪಾಪಿ ಹೆಂಗಸು ಹಲಬರನು ಕೊಲಿಸಿದಳು ಸುಡಲೆಂದು"** ಅಳಲುವರು.

**ಕೀಚಕ** : ಮರುಳೇ, ಹರಿ ವಿರಂಚಿಗಳು ಆದೊಡೆಯು ಸಂಗರದೊಳು ಎನಗೆ ಇದಿರಿಲ್ಲ. ತರುಣಿ, ನಿನ್ನೊಡನೆ ಏನು. ತೋರಾ... ನಿನ್ನ ವಲ್ಲಭರ.

**ಸೈರಂಧ್ರಿ** : ಪರಸತಿಯ ಸೆರೆಗೈಯೆ ಕೋಡಗವಿಂಡು ನೆರೆದು ಮುತ್ತಿತು. ಅರಿಯಾಯ್ತು. ಸುಭಟನು ಅಂತಕನ ನಗರಿಗೆ ಸರಿದನು.

**ಕೀಚಕ** : ನೀರೆ ನೂಕದಿರು. ಎನ್ನ ಮನ ಮುಮ್ಮಾರುವೋದುದು. ನೀನು ಚಿತ್ತವ ಸೂರೆಗೊಂಡು ಈ ಮದನನ ಅಂಬಿಂಗೆ ಒಡಲ ಹೂಣಿಸುವೆ. ಜಾರದಿರು. ಎನ್ನೆದೆಗೆ ತಾಪವ ಬೀರದಿರು. ಎನಗೆ ಕಾರುಣ್ಯವನು ಕೈದೋರು. ಅಕಟ... ಕಮಲಾಕ್ಷಿ ಮರಣವ ಮಾಣಿಸು.

**ಸೈರಂಧ್ರಿ** : ಮರುಳೆ, ಮನದ ವಿಕಾರ ಮಾರಿಯ ಸರಸವಾಡುವರು ಉಂಟೆ. ಮೃತ್ಯುವ ನೆರೆವರೇ. ದಳ್ಳುರಿಯ ಪ್ರತಿಮೆಯನು ಅಪ್ಪುವರೆ. ಬಯಸಿ ಸರಳಿಗೆ ಅಂಗೈಸುವರೆ. ಪಾಪಿಯೆ, ನಿನ್ನ ಅರಮನೆಗೆ ಮರಳು. ಎನ್ನಯ ಗರುವ ಗಂಡರು ಕಡಿದು ಹರಹುವರು.

**ಕೀಚಕ** : ತೋಳ ತೆಕ್ಕೆಯ ತೊಡಿಸಿ ಕಾಮನ ಕೋಲ ತಪ್ಪಿಸು. ಖಳನ ಕಗ್ಗೊಲೆ ಊಳಿಗವ ಕೇಳು. ಉಸುರದಿಹರೆ ಸಮರ್ಥರಾದವರು. ಸೋಲಿಸಿದ ಗೆಲವಿಂದ ಬಲು ಮಾತಾಳಿ ಇವನು ಎನ್ನದಿರು. ಹರಣದ ಮೇಲೆ ಸರಸವೆ ಕಾಯಬೇಹುದು. ಕಾಂತೆ ಕೇಳು, ಉಳಿದ ತನ್ನ ಅರಸಿಯರ ನಿನ್ನಯ ಬಳಿಯ ತೊತ್ತಿರ ಮಾಡುವೆನು. ಕೇಳು ಎಲಗೆ, ತನ್ನ ಒಡಲಿಂಗೆ ಒಡೆತನ ನಿನ್ನದಾಗಿರಲಿ. ಲಲನೆ, ನಿನ್ನೊಳು ನಟ್ಟ ಲೋಚನ ತೊಲಗಲಾರದು. ತನ್ನ ಕಾಯವ ಬಳಲಿಸದೆ ಕೃಪೆ ಮಾಡಬೇಹುದು.

(ಎನುತ್ತ ಕೈ ಮುಗಿದ.)

**ಸೈರಂಧ್ರಿ** : ಈ ಅಧಮನ ಅನ್ಯಾಯವು ಧರ್ಮ ಮಾರ್ಗ ನ್ಯಾಯವನು ಮಿಗೆ ಗೆಲುವುದು. ಸ್ಥಾಯಿಗಳ ತಿಮಿರಕ್ಕೆ ಭಾಸ್ಕರಗೆ ಆವುದು ಅಂತರವು. ಎನ್ನವರು ಕಾಯರು. ಅವರ ಕೈಗುಣದ ಆಯತವ ಬಲ್ಲವರೆ ಬಲ್ಲರು. ನಾಯಿ ಸಿಂಹಕ್ಕೆ ಇದಿರೆ, ಫಡ... ಹೋಗು.

(ಎಂದು ತಿರುಗಿದಳು.)



## ನೋಟ–೩

ಹೂಣೆ ಹೊಕ್ಕುದು. ಆಕೆಯ ಮಾತಿನಲಿ ವಿರಹದ ಆಸೆಯ ಕಾಣೆನು. ಮುಂಗಾಣಿಕೆಯಲೇ ಮನದ ಸರ್ವಸ್ವ ಸೂರೆ ಹೋದುದು. ತ್ರಾಣ ಸಡಿಲಿತು. ಬುದ್ಧಿ ಕದಡಿ ಕೃಪಾಣಪ್ರಾಣಿ ವಿರಾಟರಾಯನ ರಾಣಿಯ ಅರಮನೆಗೆ ಐದಿದನು. ನಿಜಾಗ್ರಜೆಯ ಕಂಡನು. ಹಣೆಯನು ಅಂಘ್ರಿಗೆ ಚಾಚಲು, ಎತ್ತಿದಳು ಅಣಕಿಗನ ತೆಗೆದು ಅಪ್ಪಿ...

**ಸುದೇಷ್ಣೆ :** ಮದವಾರಣನೆ ಕುಳ್ಳಿರು...

(ಎನುತ್ತ ಆ ಸಹೋದರನ ನೋಡಿದಳು. ಹೆಣ ಮುಸುಡು ಬಿದ್ದಿದೆ. ತನ್ನಲ್ಲಿಯೇ)

ಕಡುಪಾಪಿ, ಲತಾಂಗಿಯ ಕೆಣಕಿದನೊ. ವಂಶವ ಹಣಿದವಾಡದೆ ಮಾಣನು. ಏಗುವೆನು.

(ಎನುತ ಮರುಗಿದಳು).

ನಿಜಾಕಾರ ಕುಲಶಿರೋಮಣಿ, ಅಗ್ಗದ ಮಹಿಮೆ ಅಳುಕಿತು. ಮುಸುಡಿನ ಬೆಳಕು ಕಂದಿತು. ಬಹಳ ಚಿಂತಾಜಲಧಿಯೊಳಗೆ ಅದ್ದಂತೆ ಸೊಂಪು ಅಡಗಿತು. ಹೇಳು ಚಿತ್ತದ ನೆಲೆಯನು.

**ಕೀಚಕ :** (ನಸುನಾಚಿ)

ಮದನನ ಹಿಳುಕು ಸುಮತಿಯ ಸೀಳೆ ಬಳಿಕ ಇಂತು.
(ಎಂದನು ಅವ ನಗುತ)

ಬೇರೆ ಬಿನ್ನಹವೇನು. ನಿನ್ನ ಓಲಗದ ಸತಿಯರಲಿ ಅವಳು... ಸತಿಯರ ನೂರು ಮಡಿ ಚೆಲುವಿನಲಿ ಚಿತ್ತವ ಸೂರೆಗೊಂಡಿಹಳು. ಮದನಂಗೆ ಮಾರಿದಳು. ಜೀವಸಲಾರೆನು. ಆಕೆಯನು ಒಳಗುಮಾಡಿಸಿ ತೋರಿದೊಡೆ, ತನ್ನ ಒಡಲೊಳು ಅಸುವಿಂಗೆ ನಿರ್ವಾಹ ಅಹುದು.

**ಸುದೇಷ್ಣೆ :** ಕೀರ್ತಿಲತೆ ಕುಡಿಯೊಣಗಿತಯ್. ಮದನಾರ, ನಾದಯ್ ಕುಲಕೆ ಕಾಲನ ಮೂರ್ತಿ ನೀನು ಅವತರಿಸಿದ್ಯೆ. ಕುಲವ ಸಂಹರಿಸಿದ್ಯೆ. ಸ್ಫೂರ್ತಿಗೆಡೆ ಮನುಜರಿಗೆ ರಾವಣನ ಅರ್ತಿಯಪ್ಪುದನು ಅರಿಯಲಾ. ಕಡುಧೂರ್ತತನಕೆ ಅಂಜುವೆನು.

(ಎನುತ ನಳಿನಾಕ್ಷಿ ನಡುಗಿದಳು.)

ಪರವಧುವಿನಲಿ ಬೇಟವೇ... ಪರವಿತ್ತದಲಿ ಕೈಮಾಟವೇ... ರಾಜಪುತ್ರರಿಗೆ ಕದನದಲಿ ತೆಗೆದೋಟವೇ. ಆಟವಿಕರ ಒಡಗೂಡಿ ಕಲಿತು ವಿರಾಟನನು ಕೊಲಲು ಎಣಿಸಿದ್ಯೆ. ಗುಣವೇ, ನಿನ್ನ ಆಟಕೆ ಅಂಜುವೆನು.

(ಎನುತ ತರಳಾಕ್ಷಿ ಮುಖದಿರುಹಿದಳು.)

ಅವಳ ಗಂಡರು ಸುರರು. ಸುರರಿಗೆ ನವಗೆ ಅದು ಆವ ಅಂತರವು. ಮುಳಿದೊಡೆ ದಿವಿಜ ದಳಕೆ ಇದಿರಾರು. ನಮ್ಮನು ಅದಾರು ಕಾವವರು. ಅವಳ ತೊಡಕೇ ಬೇಡ. ಸತಿಯರ ನಿವಹದಲಿ ನೀನು ಆರ ಬಯಸಿದಡೆ ಅವಳ ನಾ ಮುಂದಿಟ್ಟು ಮದುವೆಯನು ಒಲಿದು ಮಾಡುವೆನು.

**ಕೀಚಕ :** ಅಕ್ಕ.... ಮರುಳೌ, ಚಿತ್ತವು ಅವಳಲಿ ಸಿಕ್ಕಿ ಬೇರ್ವರಿಯಿತ್ತು. ಮನವ ಬೇರೆ ಇರಿಸಿ ಬರಿದೇ ಮಿಕ್ಕ ಡಿಂಬಕೆ ಮದುವೆಯುಂಟೇ. ಮಕ್ಕಳಾಟಿಕೆಯಾದಡೆ ಆಗಲಿ. ತಕ್ಕರು ಅಲ್ಲ ಎಂದು ಎನಲಿ. ಸಲಹುವಡೆ ಅಕ್ಕ, ತನಗೆ ಸೈರಂಧ್ರಿಯನು ಸೇರಿಸಬೇಕು. ಇತರರ ಮಾತು ಸೊಗಸದು. ಮಿಕ್ಕವರ ರೂಹನು ಕಣ್ಣುಗಳು ಒಗಡುವವು. ಉಳಿದವರ ನಾಮಗಳು ನಾಲಿಗೆಗೆ ಹಗೆಗಳು ಆಗಿಹವು. ಸೆಗಳಿಕೆಯ ಸಸಿಯಾದೆನು. ಎನ್ನಯ ಬಗೆಯ ಸಲಿಸೌ. ಹರಿದ ಕರುಳಿನ ಮೃಗದ ಮರಿಯನು ಸಲಹಬೇಕು.

(ಎಂದು ಪದಕೆ ಎರಗಿದನು. ಆಲಿ ನೀರೇರಿದವು. ತಮ್ಮನ ಮೇಲೆ ಮೋಹ ತಳಿತುದು. ಅಂಗನೆ ಕಾಲನ ಪಾಳಯಕೆ ಕೈಗೊಟ್ಟಳು. ಖಳನ ನೆಗಹಿದಳು.)

**ಸುದೇಷ್ಣೆ :** ಏಳು ಭವನಕೆ ಹೋಗು. ತರುಣಿಯ ನಾಳೆ ನಾ ಕಳುಹುವೆನು. ಪರಸತಿ ಮೇಳ ಲೇಸಲ್ಲ.

(ಎನುತ ನಿಜಾನುಜನ ಬೀಳ್ಕೊಟ್ಟಳು.)



# ನೋಟ–೪

ಮನದೊಳಗೆ ಗುಡಿಗಟ್ಟಿದನು. ಮಾನಿನಿಯ ಕರುಣಾಪಾಂಗ ರಸಭಾಜನವು ಪುಣ್ಯವಲಾ ಎನುತ ಅಗ್ರಜೆಯ ಬೀಳ್ಕೊಂಡನು. ಮನದೊಳು ಒದವಿದ ಮರುಳುತನದ ಉಬ್ಬಿನಲಿ ಮನೆಯನು ಹೊಕ್ಕನು. ಇತ್ತಲು ದಿನಕರಂಗೆ ಬೀಡು ಆಯಿತ್ತು. ವರ ದಿಗಂಗನೆಯು ಇಟ್ಟ ಚಂದನದ ಎರಕವೋ... ಮನುಮಥನ ರಾಣಿಯ ಕರದಲಿಹ ಕನ್ನಡಿಯೊ...ಮದನನ ಬಿರುದಿನ ಒಡ್ಡಣವೊ... ಸುರತ ವಿರಹಿಯ ಸುಡುವ ಕೆಂಡದ ಹೊರಳಿಯೊ...ಹೇಳು ಎನಲು, ಹಿಮಕರನು ರಜನಿ ಮಧ್ಯದೊಳು ಜನಿಸಿದ. ಅವನಿ ಮಿಗೆ... ತಳತಳಿಸೆ.... ಚಕ್ರಾಂಕ ಯುಗ ಬೆಚ್ಚಿದವು. ಮರಿದುಂಬಿ ಕುಮುದವ ತಾವು ಕಚ್ಚಿದವು. ಅಂಬುಜರಾಜಿ ಮುಸುಡುಗಳನು ಮುಚ್ಚಿದವು. ಸಾಗರದ ತೆರೆಗಳು ತವತವಗೆ ಹೆಚ್ಚಿದವು. ಜಾರೆಯರು ಬೆಚ್ಚಿದರು. ಅಕಟ, ಚಂದ್ರಮ ಸಕಲ ವಿಯೋಗಜನ ಮನಕೆ ಕಿಚ್ಚನಿಕ್ಕಿದನು. ಖಳನ ವಿರಹದ ತಾಪದ ಉರಿ ವೆಗ್ಗಳಿಸೆ ತನ್ನ ಅರಮನೆಗೆ ಬಂದನು. ಕಳವಳಿಗ ತಳಿರ ಹಾಸಿನಲಿ 'ಹಾಯ್' ಎನುತ ಕೆಡೆದನು.

**ಕೀಚಕ** : (ತನ್ನಲ್ಲಿಯೇ)

ನಳಿನವೈರಿಯ ಸುಳಿವು ತನ್ನಯ ಕೊಲೆಗೆ ಬಂದುದು. ಪಾಪಿ ಕಮಲಜ ಚಲಿತಲೋಚನೆಗೆ ಇನಿತು ಚೆಲುವಿಕೆಯ ಏಕೆ ಮಾಡಿದನು.

(ಹಾಸಿದ ಎಳೆ ತಳಿರು ಒಣಗಿದವು. ಹೊಗೆ ಸೂಸಿದಾ ಸುಯಿಲಿನಲಿ ಮೆಲ್ಲನೆ ಬೀಸುತಿಹ ಸುಳಿವಾಳೆ ಎಲೆ ಝಳ ಹೊಯ್ದು ಬಾಡಿದವು. ಈ ಕೀಚಕನ ಕಗ್ಗೊಲೆಗೆ ಕುಸುಮಾಸ್ತ್ರನು ಆ ಸಸಿಯ... ಕೋಗಿಲೆಯ... ತುಂಬಿಯನು... ಆ ಸರೋಜವ ಮಲ್ಲಿಗೆಯ ಕೈವೀಸಿದನು. ಒಡಲೊಳು ವೀಳೆಯದ ಕರ್ಪುರದ ಹಳಕುಗಳು

ಉರಿದುದು. ಅಮಳ ಗಂಧದ ಸರಸ ಕರ್ದಮ ಕರಿಕುವರಿದುದು. ಪೂಸಿದ ಅಂಗದಲಿ ಹೊರಳೆ ನೀರಿನ ಪೊಟ್ಟಣವು ದಳ್ಳುರಿಯೊಲಾದುದು. ಕೀಚಕನ ದೆಸೆಗೆ ಬಲಿದ ಚಂದ್ರಿಕೆ ಕರಗಿ ಕಡುಗಿದ ತವರವಾದುದು. ಅರರೆ, ಕೀಚಕನ ಕಾಮಾಗ್ನಿ ತಾಪದಲಿ ಪರಿಮಳದಿ ಸುಳಿವ ಆಲವಟ್ಟದೊಳಿರದೆ ಪೂಸಿದ ಗಂಧ ಕರ್ಪುರವು ಸೀದವು. ಪರಮ ಪಾತಿವ್ರತೆಗೆ ಅಳುಪಿ ತಾನು ಹರಣದ ಆಸೆಯ ಮರೆದು ಚಂದ್ರಕಾಂತದ ಮೇಲು ಮಚ್ಚಿನಲಿ ಪಾತಕ ಹೊರಳುತ ಇರ್ದನು. ಅರೆಗಳಿಗೆ ಯುಗವಾಗಿ ಇರುಳನು ನೂಕಿದನು.) ❖

## ನೋಟ–೫

ಕೇಳು ಜನಮೇಜಯ ಮಹೀಪತಿ ನಯವಿಹೀನೆ ಸುದೇಷ್ಣೆ ಪಾಂಚಾಲಿಯನು ಕರೆಸಿದಳು. ಬಂದಾಕೆಯನು ಬೆಸಸಿದಳು.

**ಸುದೇಷ್ಣೆ :** ಎಲೆಗೆ, ಅನುಜಾಲಯದಲಿ ಉತ್ತಮ ಮಧುವ ನೀ ಝಡಿತೆಯಲಿ ತಹುದು.

(ಎಂದು ಕಡುಪಾಪಿಯ ಮನೋಧರ್ಮವನು ಮೃತ್ಯುವನು ಬಯಸಿದಳು)

**ಸೈರಂಧ್ರಿ :** ದೇವಿ. ಅಲ್ಲಿಗೆ ಅಮ್ಮೆನು. ನಿಮ್ಮಯ ತಮ್ಮ ದುರುಳನು. ಲೇಸು ಹೊಲ್ಲೆಹವು ಎಮ್ಮ ತಾಗುವುದು. ಆತನು ಅಳಿದರೆ ಬಳಿಕ ಹಳಿವು ಎಮಗೆ. ನಿಮ್ಮ ನಾವು ಓಲೈಸಿ ನಿಮಗೆ ವಿಕರ್ಮವನು ಮಾಡುವುದು ನಮಗೆ ಅದು ಧರ್ಮವಲ್ಲ. ಉಳಿದವರ ಕಳುಹುವುದು.

**ಸುದೇಷ್ಣೆ :** ಸುಡು, ಏತಕೆ ಮನದ ಗರ್ವವ ನುಡಿವೆ. ನಿನ್ನಿಂದ ಎನಗೆ ಮೇಣ್ ಎನ್ನವರಿಗೆ ಹಾನಿ ಹರಿಬಗಳು ಉಂಟೇ. ಅನುಜನು ಆರೆಂದು ಅರಿಯೆ. ಸಾಕು, ಆತನ ಸಮೀಪಕೆ ಹೋಗಿ ಬಾ, ನಡೆ.

(ಎನಲು ಕೈಕೊಂಡು ಅಬಲೆ ಹೊರವಂಟಳು ನಿಜಾಲಯವ...)

**ಸೈರಂಧ್ರಿ :** (ಕೀಚಕನ ಮನೆಯತ್ತ ಹೋಗುತ್ತ... ತನ್ನಲ್ಲಿಯೇ)

ಅರಿಯೆನು ಎಂದೊಡೆ, ದೇವಿ ನೇಮಿಸಲು ಇದಾವ ಧರ್ಮವು. ಶಿವ... ಶಿವ ಈ ಹದ, ಅವರಿಗೆ ಸಾವನು ತಹುದು. ಬದ್ಧ ವಿಘಾತಿಯಿದು. 'ಬಲುಹು ಸೇವಿಸುವದೇ ಕಷ್ಟ' ಎಂಬುದು ಕೋವಿದರ ಮತ. ಶಿವ... ಶಿವಾ ರಾಜೀವಲೋಚನ ಕೃಷ್ಣ ಬಲ್ಲನು.

(ಎನುತ್ತ ಗಮಿಸಿದಳು... ತನ್ನಲ್ಲಿಯೇ...)

ಹರಿ ಹರಿ ಶ್ರೀಕಾಂತ... ದಾನವ ಹರ... ಮುರಾರಿ... ಮುಕುಂದ ಗತಿ ಶೂನ್ಯರಿಗೆ ನೀನೇ ಗತಿಯಲ್ಲೈ ಗರುವಾಯಿ ಕೆಟ್ಟೆನಲ್ಲೈ. ಕುರುಕುಲಾಗ್ರಣಿ ಸೆಳೆದ ವಸ್ತ್ರಾಕರುಷಣದ ಭಯ ಮತ್ತೆ ಬಂದಿದೆ. ಕರುಣಿ ನೀನೇ ಬಲ್ಲೆ.

(ಎನುತ ಅಬುಜಾಕ್ಷಿ ಅಡಿಯಿಟ್ಟಳು. ಸುರಪ ಶಿಖಿ ಯಮ ನಿರುತಿ ವರುಣ ಆದ್ಯರಿಗೆ ವಂದಿಸಿ, ಕಣ್ಣೆವೆಯ ಬಿಗಿದು ಅರೆಗಳಿಗೆ ನಿಂದು, ಅಂಬುಜಮಿತ್ರನ ಭಜಿಸಿ ಕಂದೆರೆಯೆ, ತರಣಿ ದೈತ್ಯನ ಮುರಿವ ಕಾಹ ತರುಣಿಗೆ ಕೊಟ್ಟನು. ಮಂದ ಮಂದೋತ್ತರದ ಗಮನದೊಳು ಕೀಚಕನ ಮನೆಗೆ ಅಬಲೆ ಬಂದಳು)



# ನೋಟ–೬

ಚಾರು ನೂಪುರ ಝುಣಝುಣದ ಝೇಂಕಾರ ರವದ ಉಬ್ಬಿನಲಿ ಭವನ ಮಯೂರ ಕುಣಿದವು. ವರಕಟಾಕ್ಷದ ಮಿಂಚು ಥಳಥಳಸೆ, ಆರು ಹೊಗಳುವರು ಅಂಗವಟ್ಟದ ಸೌರಭದ ಭಾರಣೆಗೆ ತುಂಬಿಯ ಸಾರ ಕಟ್ಟಿತು. ಕೀಚಕಾಲಯಕೆ ಅಂಗನೆ ಬಂದಳು. ಮನುಮಥನ ಮದದಾನೆ, ಕಂದರ್ಪನ ಮಹಾ ಮಂತ್ರಾದಿ ದೇವತೆ, ಜನವು ಮರುಳಹ ಮದ್ದು, ಸಂಸೃತಿ ಸುಖದ ಸಾಕಾರೆ, ಮನಸಿಜನ ಮಸೆದ ಅಲಗು, ಮುನಿ ಮೋಹನ ತಿಲಕ, ಲಾವಣ್ಯಸಾಗರ ಜನಿತ ಲಕ್ಷ್ಮಿ ಲತಾಂಗಿ ಕೀಚಕನ ಮನೆಗೆ ಬಂದಳು. ಕುಡಿತೆಗಂಗಳ ಚಪಲೆ, ಉಂಗುರವಿಡಿಯ ನಡುವಿನ ನೀರೆ, ಹಂಸೆಯ ನಡೆಯ ಗಮನದ ಮೌಳಿಕಾತಿ, ಪಯೋಜ ಪರಿಮಳದ ಕಡುಚೆಲುವೆ ಬರಲು ಅವನ ತನು ನಡನಡುಗಿ ನಿಂದುದು.

**ಕೀಚಕ** : (ತನ್ನಲ್ಲಿಯೇ)

ಅದಾವ ಹೆಂಗಸು ಪಡೆದಳು ಈ ಚೆಲುವಿಕೆಯನು...

(ಎನುತ ಅಂಗನೆಯ ಈಕ್ಷಿಸಿದನು)

ಇದು ಅರಿದು ನೆತ್ತರುಗಾಣದ ಅಲಗು... ನೆರೆ ಬಿಗಿಯೆ ಮೈ ಬಾಸುಳೇಳದ ಹುರಿ ಬಲಿದ ನೇಣು... ಸೋಂಕಿದೊಡೆ ಹೊಗೆ ಮಸಗದ ಎದೆಗಿಚ್ಚು... ಅರರೆ ಕಂಗಳ ಧಾರೆ ಯಾವನ ಕೊರಳ ಕೊಯ್ಯದು... ಅದಾವನ ಅರಿಕೆಯ ಹುರುಳು ಗೆಡಿಸದು... ಶಿವ ಶಿವ ಅದಾವ ನಿಲುವನು. ಆವ ಜನ್ಮದ ಸುಕೃತ ಫಲ ನೆರೆದು ಈ ವಧುವ ಸೇರಿದರೊ... ಧನ್ಯರು ತಾವಲಾ... ಈ ವನಿತೆಯಲ್ಲಿಂದ ಪೂರ್ವದ ಸುಖದ ಸರ್ವಸ್ವ ಭಾವಿಸಲು ಸುಕೃತಾವಳಿಗಳಿಂದ ಮೇಣ್ ಇನ್ನಾವುದು ಅತಿಶಯ ಉಂಟು.

(ಎನುತ ಖಳರಾಯನು ಇದಿರೆದ್ದ...)

**ಕೀಚಕ** : ತರುಣಿ, ಬಾ ಕುಳ್ಳಿರು. ಮದಂತಃಕರಣದ ಎಡರು ಅಡಗಿತ್ತು. ಕಾಮನ ದುರುಳತನಕೆ ಇನ್ನು ಅಂಜುವೆನೆ. ನೀನು ಎನಗೆ ಬಲವಾಗೆ ಇಂದುವಿಗೆ... ಮಧುಕರಗೆ.... ಕೋಗಿಲೆಗೆ ಬಿರುದ ಕಟ್ಟುವೆನು.

(ಎಂದು ಖಳನು ಅಬ್ಬರಿಸಿ ನುಡಿಯಲು, ಇಂದುಮುಖಿ ಖಾತಿಗೊಂಡು ಇಂತು ಎಂದಳು.)

**ಸೈರಂಧ್ರಿ** : ಬಯಲ ನುಡಿದೊಡೆ ಬಾಯಿ ಹುಳುವುದು. ಎಲವೋ ಕೆಡದಿರು. ನಾಯಿತನ ಬೇಡ. ರಾಯನ ಅಂಗನೆ ಮಧುವ ತರಲೆಂದು ಕಳುಹೆ ಬಂದೆನು. ಸಾಯಬೇಕೇ ಹಸಿದ ಶೂಲವ ಹಾಯಿ ಹೋಗು.

**ಕೀಚಕ** : ನಿನ್ನ ಬೈಗಳು ತನ್ನನು ನೋಯಿಸುವವೇ...

(ಎನುತವೆ ಸತಿಯ ತುಡುಕಿದನು. ಕರವನು ಒಡೆಮುರುಚಿದಳು. ಬಟ್ಟಲ ಧರೆಯೊಳು ಈಡಾಡಿದಳು. ಸತಿ ಮೊಗದಿರುಹಿ ಬಾಗಿಲ ದಾಂಟಿ ಭಯದಲಿ ನಡುಗಿ ಡೆಂಡಣಿಸಿ ತರಳೆ ಹಾಯ್ದಳು. ಮೊಲೆಯ ಜಘನದ ಭರದಿ ಬಡನಡು ಮುರಿಯದಿಹುದೇ ವರ ಸಭಾಗ್ಯತೆ ಎನಲು ಸಭೆಗೆ ರಭಸದೊಳು ಓಡಿದಳು.)



# ನೋಟ–೭

ಒಡನೆ ಬೆಂಬತ್ತಿದನು. ತುರುಬನು ಹಿಡಿದು...

**ಕೀಚಕ** : ತೊತ್ತಿನ ಮಗಳೆ, ಹಾಯ್ದರೆ ಬಿಡುವೆನೆ ಫಡ.

(ಎನುತ ಕಾಲಲಿ ಒಡೆಮೆಟ್ಟಿ ಹೊಯ್ದನು. ಬಿರುಗಾಳಿಯಲಿ ಸೈಗೆಡೆದ ಕದಳಿಯ ಕಂಬದಂತಿರೆ ಕಾಂತೆ ಕೆಡೆದು ರಕುತವ ಕಾರಿ, ಹುಡಿಯಲಿ ಮುಡಿ ಹೊರಳಿ ಒರಳಿದಳು. ಸೂರ್ಯನು ಕೊಟ್ಟ ದಾನವನು **'ಕರುಳ ತೆಗೆ... ಅಡಗನು ತಿನ್ನು'** ಎನುತ ಅಬ್ಬರಿಸಿ ಉರವಣಿಸಿ ಕೀಚಕನ ಹೊಯ್ದನು. ಹಿಡಿದು ಕುಸುಬಿದನು. ದುರುಳ ನಡೆ ಕೆಡೆದು ಎದ್ದು ನಿಮಿಷದೊಳು ಒರಳುತ ಆಲಯಕೆ ಓಡಿದನು. ಬಳಿಕ ಅರಸ ಮೊದಲಾದ ಅಖಿಳ ಜನ ಭಯ ಹೊಯ್ದು ನಡುಗಿತ್ತು. ಹೊಡೆ ಮರಳಿ ಮುರಿದೆದ್ದು, ತುರುಬಿನ ಹುಡಿಯ ಕೊಡಹುತ, ಮೊಲೆಗೆ ಮೇಲುದ ತೊಡಿಸಿ, ಗಲ್ಲದ ರಕುತವನು ಬೆರಳಿಂದ ಮಿಡಿ ಮಿಡಿದು...)

**ಸೈರಂಧ್ರಿ** : ಖಳನು ಹೆಂಗುಸ ಬಡಿಯೆ ಹಿರಿಯರು ನೋಡುತ್ತಿಹರೆ... ನುಡಿಯಲಾಗದೆ ಹಿಡಿದ ಮೌನದ ಹೊತ್ತು ಲೇಸು.

(ಎಂದು ಅಬಲೆ ಹಲುಬಿದಳು.)

ಶಿವ ಶಿವಾ...ಪಾಪಿಗಳು...ಪತಿಯಾದವರ ಸುಯ್ಲು ತಾಗಲಿ. ಅಕಟ, ನಾಲುವರ ನಡುವಣ ಹಾವು ಸಾಯದು. ನಿರಪರಾಧಿಯನು ಖಳನು ಅವಗಡಿಸಿದನು. ಧರ್ಮದ ವಿವರ ಸುದ್ದಿಯನು ಆಡದ ಈ ಜನನಿವಹ ಘೋರಾರಣ್ಯವಾಯ್ತು.

(ಎಂದು ತರಳೆ ಒರಳಿದಳು.)

ಎಲವೊ ದೇಶಿಗ ಕಂಕಭಟ್ಟನೆ, ಗಡ...ಹಲವು ಧರ್ಮವ ಬಲ್ಲೆ... ನೃಪ ತಿಲಕಗೆ ಅರುಹುದೇನು... ಸಂನ್ಯಾಸಿಗಳಿಗೆ ಉಚಿತವಿದು ತಿಳಿಯೆ. ದೇಶಿಗರಿಂಗೆ ದೇಶಿಗರ ಒಲವು ಸಮನಿಸಬೇಕು. ಸಭೆಯಲಿ ಬಲವಿಹೀನರಿಗೆ ಆಪ್ತರಿಲ್ಲ.

(ಎಂದು ಅಬಲೆ ಒರಲಿದಳು. ಧೈರ್ಯವನು ನೆರೆ ಬಲಿದು, ಮೇಲಣ ಕಾರ್ಯಭಾಗವನು ಅರಿದು, ನೃಪಜನವರ್ಯ ಧರ್ಮನಂದನನು ನೋಡದೆ ನುಡಿಸದೆ ಇದ್ದನು. **"ಶೌರ್ಯಕೆ ಅವಸರವಲ್ಲ. ನಮಗೀ ಆರ್ಯನ ಅನುಜ್ಞೆ"** ಎನುತ್ತ ಬಳಿಕ ಆ ತುರ್ಯರು ಪಾರ್ಥ ಯಮಳರು ಬಲಿದ ದುಗುಡದಲಿ ಇದ್ದರು. **'ಅಕಟಾ, ನೊಂದಳು ಸತಿ'** ಎನುತ ಭೀಮ ಮನನೊಂದು ಸ್ವೈವೆರಗಾಗಿ ಖತಿಯಲಿ ಕುಂದಿ ನಸು ಮೈ ಬಾಗಿ ರೋಷದೊಳು ಔಡನು ಒಡೆ ಅವುಚಿ, ಮಂದಿ ಅರಿಯದವೊಲು ಕುಚೇಷ್ಟೆ ಯೊಳೊಂದಿ ರಾಜಾಲಯದ ಮುಂದಣ ಮರನನು ಮೆಲ್ಲನೆ ಬಾಗಿ ನೋಡಿದನು. ಅಂದು ಆ ಭೀಮ ಒಳಗೆ ನಿಶ್ಚೈಯಿಸಿದನು.)

**ಭೀಮ :** (ತನ್ನಲ್ಲಿಯೇ)

ಮೊದಲಲಿ ಇವಳ ಬಡಿದ ಈ ಖಳನನು ಹಿಳಿದು ಹಿಂಡುವೆನು. ಬಳಿಕ ಇವನ ಒಡಹುಟ್ಟಿದರನು... ಇವನ ಅಖಿಳ ಬಾಂಧವರ, ವಿಗಡ ವಿರಾಟರಾಯನ ಕೊಲುವೆನು. ಅರಿಯದ ಮುನ್ನ ಕೌರವ ಕುಲವ ಸವರುವೆನು.

(ಎಂದು ಆ ಭೀಮ ಕಿಡಿಕಿಡಿಯೋದನು. ಆತನ ಇಂಗಿತದ ಅನುವನು ಅರಿತು ಮಹೀತಳಾಧಿಪ ಧರ್ಮಸುತನು...)

**ಧರ್ಮಸುತ :** ವಲಲ, ಅತಿ ಕಾತರಿಸದಿರು. ಸೈರಿಸು ಸೈರಿಸು. ಅಕಟ... ಈ ತರುವ ಮುರಿಯದಿರು. ಸುಜನವ್ರಾತಕೆ ಆಶ್ರಯವು. ನಿನ್ನಯ ಬಾಣಸಿನ ಮನೆಗೆ ಊರ ಹೊರಗೆ ಮಹಾತಿಶಯ ತರುವುಂಟು. ಧರ್ಮಮಯ ತರು ಇದನು ಮುರಿಯದಿರು. ಎಮ್ಮ ಮಾತನು ಕೇಳು.

(ಎನಲು ಸುಮ್ಮನೆ ಭೀಮನು ಓಲಗದಿಂದ ಮಿಗೆ ದುಗುಡದಲಿ ಸರಿದನು.)

**ಧರ್ಮಸುತ :** (ಸೈರಂಧ್ರಿಯನ್ನು ಕುರಿತು)

ಮಾನಿನಿ, ನಿನಗೆ ಕರ್ಮಫಲವಿದು. ನಿಮ್ಮ ಭವನಕೆ ಹೋಗು. ಈ ಸಭೆ ಶಿಕ್ಷಿಸಲಮ್ಮದು. ಆತನು ಮತ್ಸ್ಯಭೂಪತಿಯ ಬಗೆಯನು. ಕೋಪಕೆ

ಅವಸರವಲ್ಲ. ಪತಿಗಳು ನಿನ್ನವರು ಕಾಪುರುಷರೇ. ಪರಿತಾಪವನು ಬೀಳ್ಕೊಡು. ನೀನು ಪತಿವ್ರತೆ ಪುಣ್ಯವದು. ಕ್ಷಮೆಯು ದೀಪವಲ್ಲಾ ಅಖಿಳ ದೋಷಾಪಹಾರವು. ಆ ಕ್ಷಮೆಯು ಶೌರ್ಯ ಧರ್ಮದ ರೂಪು ನೆಲೆ.

(ಎನಲು ಬಳಿಕ ಇಂದುಮುಖಿ ಎಂದಳು)

**ಸೈರಂಧ್ರಿ :** ಮೂರೇ ಬಾರಿ ನೀರು ಹೊರಗಿಕ್ಕುವುದು. ಬಳಿಕ ಅದು ಪಾಪಿ ಜಾಡಿಸೆ ಸೈರಿಸದು. ಅನ್ಯಾಯ ಬಹುಳತೆಗೆ ಏನ ಮಾಡುವೆನು. ಸೈರಣೆಗೆ ತಾನು ಅವಧಿಯಿಲ್ಲಾ. ಪೌರುಷವು ಕಡು ಬಂಜೆಯಾಯಿತು. ಆರಯಿಕೆಯಲಿ ಜುಣುಗಿ ಜಾರುವಿರಿ.

**ಸಭಿಕರು :** ಅರರೆ, ಹೆಂಗಸು ದಿಟ್ಟೆ. ಮೋನದೊಳು ಇರಲಿ. ಇದಾವ ಅಂತರವು. ರಾಯನ ಹೊರೆಯಲಿ ಈ ಬಾಯ್ಬಡಿಕತನ ಗರುವಾಯಿಯೇ?

(ಎನಲು ಲಲಿತಾಂಗಿ ಕೆರಳಿದಳು)

**ಸೈರಂಧ್ರಿ :** ಇಲ್ಲಿಯ ಹಿರಿಯರಲಿ ಹುರುಳಿಲ್ಲ. ಮಾರುತಿಗೆ ಅರುಹುವೆನು. ಬಳಿಕ ಆದುದಾಗಲಿ

(ಎನುತ ತಿರುಗಿದಳು.)



## ನೋಟ–೮

(ಆ ಸುದೇಷ್ಣೆಯ ಮನೆಗೆ ಬರಲು ಅವಳು ಈ ಸತಿಯ ನುಡಿಸಿದಳು.)

**ಸುದೇಷ್ಣೆ :** ತಂಗಿ, ವಿಳಾಸವು ಅಳಿದಿದೆ...ಮುಖದ ದುಗುಡವು...ಇದೇನು ಹದನ?

**ಸೈರಂಧ್ರಿ :** ಈಸು ಮರವೆಯೆ. ಇದು ಅರಸುತನದ ಮಹಾ ಸಗಾಢಿಕೆ. ಎಮ್ಮ ನೀವು ಅಪಹಾಸ ಮಾಡುವಿರಿ. ನಿಮ್ಮ ಒಡಹುಟ್ಟಿದನು ದುರುಳ. ನೀವು ಅರಸುಗಳು ತಿರುಕುಳಿಗಳು. ಆವು ಇನ್ನು ಇರಲುಬಾರದು. ನೃಪತಿ ತಪ್ಪಿದೊಡೆ ಆರು ಕಾವವರು. ಕರೆಸಿ ಬುದ್ಧಿಯ ಹೇಳಿ. ಎನ್ನನು ಹೊರೆಯ ಲಾಪರೆ ಹೊರೆಯಿರಿ. ಅಲ್ಲದಡೆ ಅರಸಿ ಎನ್ನನು ಕಳುಹುವುದು.

**ಸುದೇಷ್ಣೆ :** ಲಲನೆ ಕೇಳು, ಅನ್ಯಾಯದವರನು ಕೊಲಿಸುವೆನು. ಭಯ ಬೇಡ. ಪರಸತಿಗೆ ಅಳುಪಿದವನು ಒಡಹುಟ್ಟಿದನೆ. ಕಡುಪಾಪಿ ಹಗೆ.

**ಸೈರಂಧ್ರಿ :** ಕೊಲಿಸುವಡೆ ನೀವೇಕೆ. ತಪ್ಪಿನ ಬಳಿಯಲಿ ಎನ್ನಾತಗಳು ಕೀಚಕ ಕುಲವ ಸವರುವರು. ಎನಗೆ ಕಾರಣವಿಲ್ಲ... ಸಾರಿದೆನು.

(ಎಂದು ಬೀಳ್ಕೊಂಡು ಅಬಲೆ ತನ್ನಯ ಮಂದಿರಕೆ ಬಂದು ಒಳಗೊಳಗೆ ಮನನೊಂದು ಸ್ವೈರೆಗಾಗಿ ಚಿಂತಿಸಿ ಹಗಲ ನೂಕಿದಳು.)

**ಸೈರಂಧ್ರಿ :** (ತನ್ನಲ್ಲಿಯೇ)

ಕೊಂದುಕೊಂಬೆನೆ ಆತ್ಮಘಾತಕ ಹಿಂದೆ ಹತ್ತದೆ ಮಾಣದು... ಏಗುವೆನು...

(ಎಂದು ದ್ರೌಪದಿ ತನ್ನ ಮನದಲಿ ಹಿರಿದು ಮರುಗಿದಳು)

ಆರಿಗೆ ಉಸುರುವೆನು... ಆರ ಸಾರುವೆನು... ಆರಿಗೆ ಒರಲುವೆನು... ಆರಿಗೆ ಅರುಹುವೆನು...ಆರ ಬೇಡುವೆನು... ಅಕಟ, ಹೆಂಗಸು ಜನ್ಮವನು ಸುಡಲಿ...ಘೋರ ಪಾತಕಿ ಎನ್ನವೊಲು ಮುನ್ನ ಆರು ನವೆದವರುಂಟು. ಮರಣವು ಬಾರದೆ.

(ಎಂದು ಶಶಿವದನೆ ಬಸುರನು ಹೊಯ್ದು ಒರಲಿದಳು.)

ಯಮಸುತಂಗೆ ಅರುಹುವೆನೆ ಧರ್ಮಕ್ಷಮೆಯ ಗರ ಹೊಡೆದಿಹುದು. ಪಾರ್ಥನು ಮಮತೆಯುಳ್ಳವನು ಎಂಬೆನೇ, ತಮ್ಮಣ್ಣನ ಆಜ್ಞೆಯಲಿ ಭ್ರಮಿತನಾಗಿಹನು. ಉಳಿದರಿಬ್ಬರು ರಮಣರು ಇವರು ಈ ನಾಯ ಕೊಲಲು ಅಕ್ಷಮರು. ಎಲ್ಲರೊಳು ಕಲಿಭೀಮನೇ ಮಿಡುಕುಳ್ಳ ಗಂಡನು, ನಿಸ್ಸಂದೇಹ. ಹಾನಿ ಹರಿಬಕೆ ನಿಲ್ಲದೆ ಅಂಗೈಸುವನು. ಕಡು ಹೀಹಾಳಿಯುಳ್ಳವನು. ಖುಲ್ಲನಿವನ ಉಪಟಳವನು ಆತಂಗೆ ಎಲ್ಲವನು ಹೇಳುವೆನು. ಬಳಿಕ ಅವನಲ್ಲಿ ಹುರುಳಿಲ್ಲದೊಡೆ ಘೋರತರ ವಿಷವ ಕುಡಿವೆನು.

(ಎನುತ ನಿಲಯವನು ಹೊರವಂಟು...)



# ನೋಟ–೯

ಕಂಗಳ ಬೆಳಗು ತಿಮಿರವ ಕೆಡಿಸೆ, ಕಂಕಣ ಲಲಿತ ಝೇಂಕೃತಿಯಿಂದ ತೂಗುವ ವಾಮಭುಜಲತೆಯ ಒಲಿದು ಮೇಲುದು ನೂಕಿ ನಡುಗುವ ಮೊಲೆಯ ಭರದಲಿ ಅಡಿಯಿಡುತ, ಬಾಣಸಿನ ಮನೆಗೆ ಕಳವಳದ ಕರಣದ ಮುಗುದೆ ಬಂದಳು.

ಕೆಲದಲಿ ಒಟ್ಟಿದ ಪತ್ರ ಶಾಕಾವಳಿಯ ಫಲರಾಶಿಗಳ, ಕಳವೆಯ ಹೊಳೆವುತಿಹ ರಾಜಾನ್ನದಕ್ಕಿಯ, ಸಾಲ ಹರಿಯಣದ, ಕೆಲಬಲದ ಸಂಭಾರ ಚೂರ್ಣದ, ವಿವಿಧ ಭಕ್ಷ್ಯಾವಳಿಯ ತಳಿತ ಬೋನದ ಬಾಣಸದೊಳಗೆ ಮತ್ತಗಜಗಮನೆ ಬಂದಳು.

ತರಿದ ಕುರಿಗಳ, ಹಂದಿಯ ಅಡಗಿನ ಜುರಿತ ರಕುತದ, ಮೊಲನ ಖಂಡದ, ತಿರಿದ ಗುಬ್ಬಿಯ, ಕೀಸಿ ಸೀಳಿದ ನವಿಲ ಲಾವುಗೆಯ, ತುರುಗಿದ ಎಲುವಿನ ಸಾಲ, ಸುಂಟಿಗೆ ಮೆರೆವ ಮಾಂಸದ ರಾಸಿಗಳ, ಹರಿದ ಎರಕೆಗಳ ಅಡಬಲದ ಮನೆಯ ಕಂಡು ಅಬಲೆ ಹೊಗಳಿದಳು.

**ಸೈರಂಧ್ರಿ** : (ತನ್ನಲ್ಲಿಯೇ)

ಈ ಸೂವಾರ ವಿದ್ಯೆಯ ಭೀಮನು ಆರಲಿ ಅರಿದನೊ. ಭಾಪು... ವಿಧಿ ಮುನಿದು ಆರನು ಆವ ಅಂಗದಲಿ ಬರಿಸದು. ಶಿವ ಶಿವ...

(ಎನುತ ನಾರಿ ನಸುನಗುತ ಒಳಗೆ ಹೊಕ್ಕು, ಬಕಾರಿ ಮಂಚದೊಳು ಇರಲು, ನಿದ್ರಾಭಾರ ವಿಹ್ವಲಕರಣನನು ಲಲಿತಾಂಗಿ ಹೊದ್ದಿದಳು.)

ಎಬ್ಬಿಸಲು ಭುಗಿಲ್ ಎಂಬನೋ...ಮೇಣ್... ಒಬ್ಬಳೇ ಏತಕೆ ಬಂದೆ...

ಮೋರೆಯ ಮಬ್ಬು ಇದೇಕೆ ಎಂದು ಎನ್ನ ಸಂತೈಸುವನೊ... ಸಾಮದಲಿ ತುಬ್ಬುವುದೊ... ತಾ ಬಂದ ಬರವು... ಇದು ಜನದ ಮನಕೆ ನಿಬ್ಬರವಲಾ. ಇನ್ನು ಎಬ್ಬಿಸಿಯೆ ನೋಡುವೆನು.

(ಎನುತ ವಲ್ಲಭನ ಸಾರಿದಳು. ಮೆಲ್ಲ ಮೆಲ್ಲನೆ ಮುಸುಕ ಸಡಿಲಿಸಿ, ಗಲ್ಲವನು ಹಿಡಿದು ಅಲುಗಲು, ಅಪ್ರತಿಮಮಲ್ಲನು ಎದ್ದನು. ಪಾಂಚಾಲ ನಂದನೆಯ ನೋಡಿದನು.)

**ಭೀಮ** : ವಲ್ಲಭೆಯೆ ಬರವೇನು. ಮುಖದಲಿ ತಲ್ಲಣವೆ ತಲೆದೋರುತಿದೆ. ತಳುವಿಲ್ಲದೆ ಉಸುರು. ಇರುಳೇಕೆ ಬಂದೆ. ಲತಾಂಗಿ ಹೇಳು. ಬಾಣಸದ ಭವನದ ನಾರಿಯರು ಸೈರಿಸರು. ದುರ್ಜನರು ಖುಲ್ಲ ಕುಠಾರರು. ಇವರು ಅರಮನೆಯ ನಾಯ್ಗಳು. ನಾವು ದೇಶಿಗರು. ಕೆಲರು ಅರಿಯದಂತಿರೆ ಭಾರವಿದು. ನಾರಿ ನೀ ಹೇಳು. ಇದು ಆರ ದೆಸೆಯಿಂದ ದುಗುಡವು ಆಯಿತು.

(ಎನಲು ಇಂದುಮುಖಿ ಇಂತು ಎಂದಳು.)

**ದ್ರೌಪದಿ** : ನಿನ್ನೆ ಹಗಲು ಅರೆಯಟ್ಟಿ ಕೀಚಕ ಕುನ್ನಿ ರಾಜ ಸಭೆಯಲಿ ಒದೆದನು. ನಿನ್ನ ವಂದಿಗರು ಇರಲು ಉಚಿತವೇ ತನಗೆ ಪರಿಭವ. ಎನ್ನನು ಅವ ಬೆಂಬಳಿಯ ಬಿಡ. ಇನ್ನು ನಾನು ಬದುಕುವಳಲ್ಲ. ಪಾತಕ ನಿನ್ನ ತಾಗದೆ ಮಾಣದು.

(ಎನಲು ಭೀಮ ಖತಿಗೊಂಡ.)

**ಭೀಮ** : ನಿನ್ನ ಹರಿಬಕೆ ಉಸುರಲಾಗದು. ಮಿಸುಕುವವರು ಆವಲ್ಲ. ಹೆಂಡಿರ ಗಸಣಿಗೊಂಬವರಲ್ಲ. ಹುದುವಿನ ಗಂಡತನ. ಇದನು ಶಶಿವದನೆ ಸುಡು. ಈ ಕಷ್ಟ... ಅಪದೆಸೆಯವರು ನಾವಲ್ಲ. ನಿನ್ನವರು ಅಸಮ ಸಾಹಸರು. ಉಳಿದ ನಾಲ್ವರಿಗೆ ಅರುಹು ಹೋಗು.

ದ್ರೌಪದಿ : ರಮಣ ಕೇಳು, ಉಳಿದವರು ತನ್ನನು ರಮಿಸುವರು. ಮಾನಾರ್ಥವೆನೆ ನಿರ್ಗಮಿಸುವರು. ನೀನಲ್ಲದೆ ಉಳಿದವರು ಉಚಿತ ಬಾಹಿರರು. ಮಮತೆಯಲಿ ನೀ ನೋಡು. ಚಿತ್ತದ ಸಮತೆಯನು ಬೀಳ್ಕೊಡು. ಕುಠಾರನ ಯಮನ ಕಾಣಿಸಿ ಕರುಣಿಸು.

(ಎಂದಳು ಕಾಂತೆ ಕೈಮುಗಿದು.)

**ಭೀಮ** : ಕಲಹಕಾದೊಡೆ ನಾವು. ರಮಿಸುವರು ಉಳಿದವರು. ಬಳಿಕೇನು

ಗಾದೆಯ ಬಳಕೆ. ಕೆಲಬರು ಗಳಿಸಿದೊಡೆ, ಕೆಲರು ಉಂಡು ಜಾರುವರು. ನಿನ್ನಯ ಹಳಿವು ಹರಿಬವ ಹೇಳಿ ಚಿತ್ತವ ತಿಳುಹಿಕೊಂಬುದು. ಧರ್ಮಜನ ಹೊರೆಗೆ ನಾವು ಭೀತರು. ಅಳುಕಿ ನಡೆವವರಲ್ಲ.

**ದ್ರೌಪದಿ** : ಹೆಂಡತಿಯ ಹರಿಬದಲಿ ಒಬ್ಬನೆ ಗಂಡುಗೂಸೇ ವೈರಿಯನು ಕಡಿ ಖಂಡವನು ಮಾಡುವನು ಮೇಣ್ ತನ್ನ ಒಡಲನು ಇಕ್ಕುವನು. ಗಂಡರೈವರು ಮೂರು ಲೋಕದ ಗಂಡರು... ಒಬ್ಬಳನು ಆಳಲಾರಿರಿ. ಗಂಡರೋ ನೀವ್ ಭಂಡರೋ ಹೇಳು. ಅಂದು ಕೌರವ ನಾಯಿ ಸಭೆಯಲಿ ಉನ್ನತಿಯ ತಂದು ತೋರಿದನು. ಬಳಿಕ ಇಂದು ಕೀಚಕ ಕುನ್ನಿ ರಾಜ ಸಭೆಯೊಳಗೆ ಒದೆದನು. ಅಂದು ಮೇಣ್ ಇಂದು ಆದ ಭಂಗಕೆ ಕುಂದು ಅದಾವುದು ನೀವು ಬಲ್ಲಿದರು ಎಂದು ಹೊಕ್ಕರೆ... ಹೆಣ್ಣ ಕೊಂದಿರಿ.

(ಎಂದಳು ಇಂದುಮುಖಿ)

**ಭೀಮ** : ದಾನವರು ಮಾನವರೊಳು ಎನ್ನ ಅಭಿಮಾನವನು ಕೊಂಬವನ ಹೆಸರನು ಅದು ಏನನೆಂಬೆನು. ನೊಂದು ನುಡಿದೊಡೆ ಎಮಗೆ ಖಾತಿಯಿಲ್ಲ . ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ ಮಾನಿನಿ. ನೀನು ತೋರಿದ ಪರಿಯಲಿ ಎಂಬುದು. ಭೀತಿ ಬೇಡ.

ಅಂದು ದುಶ್ಶಾಸನನ ಕರುಳನು ತಿಂದಡಲ್ಲದೆ ತಣಿವು ದೊರೆಕೊಳದು ಎಂದು ಹಾಯ್ದೊಡೆ, ಆ ವ್ಯಥೆಯ ಹಲುಗಿರಿದು ಮಾಣಿಸಿದನು. ಇಂದು ಕೀಚಕ ನಾಯನು ಎರಗುವೆನು ಎಂದು ಮರನನು ನೋಡಿದರೆ 'ಬೇಡ' ಎಂದ ಹದನನು ನೀನು ಕಂಡೆ. ಎನಗುಂಟೆ ಅಪರಾಧ.

ಹೆಣ್ಣ ಹರಿಬಕ್ಕೊಸುಗವೆ ತಮ್ಮಣ್ಣನ ಆಜ್ಞೆಯ ಮೀರಿ ಕುಂತಿಯ ಚಿಣ್ಣ ಬದುಕಿದನು ಎಂದು ಕುಜನರಾದವರು ನುಡಿವರು. ಅಣ್ಣನವರಿಗೆ ದೂರುವುದು. ಇವು ನಾವು ಉಣ್ಣದುರಿ. ರಾಯನ ಆಜ್ಞೆಯ ಕಣ್ಣಿಯಲಿ ಬಿಗಿವಡೆದು ಕೆಡೆದೆವು. ಕಾಂತೆ ಕೇಳು, ಫಲುಗುಣನ ಹೊದ್ದುವುದು. ಯಮನಂದನನ ಪಾದಕೆ ಬಿದ್ದು ಮನವನು ತಿದ್ದುವುದು. ಸಹದೇವ ನಕುಲರ ಕೈಯಲಿ ಎನಿಸುವುದು. ಗೆದ್ದು ಕೊಡುವರು. ನಿನ್ನ ಪಾಲಿಸದೆ ಇದ್ದರಾದೊಡೆ ದೋಷವು ಅವರನು ಹೊದ್ದುವುದು.

ನೀನು ಎನ್ನ ಬರಿದೇ ಕಾಡಬೇಡ. ಗಂಡ ಗರ್ವವ ನುಡಿಯೆವು.

ಎಮ್ಮಯ ದಂಡಿ ತಾನದು ಬೇರೆ. ನಾವು ಈ ಭಂಡತನದಲಿ ಬದುಕಲು ಅರಿಯೆವು. ಧರ್ಮಗಿರ್ಮವನು ಕೊಂಡು ಕೊನರುವರಲ್ಲ.

ರಾಯನನು ಅಂಡಲೆದು ಕೀಚಕನ ತಲೆಯನು ಚೆಂಡನಾಡಿಸು ರಮಣಿ... ಮೇಣ್... ಅರ್ಜುನಗೆ ಹೇಳು. ತರುಣಿ, ದಿಟ ಕೇಳ್ ಇಂದು ಮೊದಲಾಗೆ ನೀ ನಾಲ್ವರಿಗೆ ಅರಸಿ. ನಾವು ಎಡೆಮುರಿದವರು. ನಿನ್ನಯ ಸೂಳು ಪಾಳೆಯವ ಬಿಟ್ಟವರು. ಅರಸನನು ಪ್ರಾರ್ಥಿಸುವುದು. ಅರ್ಜುನ ವರ ನಕುಲ ಸಹದೇವರಿಗೆ ವಿಸ್ತರಿಸಿ ಹೇಳ್ವುದು. ನಮ್ಮೊಡನೆ ಫಲಸಿದ್ಧಿಯಿಲ್ಲ.

(ಕೇಳುತಿದ್ದಳು. ಕೊರಳ ಸೆರೆ ಗೋನಾಳಿಗೆ ಔಕಿತು. ಅಕಟ... ಬಿಕ್ಕಿ ಬಿಕ್ಕಿ ವಿಲೋಲಲೋಚನೆಯು ಬಾಷ್ಪವಾರಿಯಲಿ ನೆನೆದಳು. ಶೂಲ ಮರು ಮೊನೆಗೊಂಡವೊಲು... ಸುಳಿವಾಳೆ ಝುಳ ತಾಗಿದವೊಲು...ಉದರ ಜ್ವಾಲೆ ನೆತ್ತಿಗೆ ನಿಲುಕೆ, ಅಬಲೆ ಬಿಸುಸುಯ್ದು ಹಲುಬಿದಳು. ಕೆಂದಳದ ಸೆಕೆಯಲಿ ಕಪೋಲವು ಕಂದಿ ಕಸರಿಕೆಯಾಯ್ತು. ನಿಡುಸುಯಿಲಿಂದ ಏಕಾವಳಿಯ ಮುತ್ತುಗಳು ಸೀಕರಿಯೋದವು. ಸಂದಣಿಸಿದ ಎವೆಗಳಲಿ ಬಾಷ್ಪದ ಬಿಂದು ತಳಿತುದು. ನಟ್ಟ ದೃಷ್ಟಿಯೊಳು ಇಂದುಮುಖಿ ಸೈಗರೆದು ಅಡಿಗಡಿಗೆ ಶಿರವ ತೂಗಿದಳು.)

**ದ್ರೌಪದಿ** : ಆವ ಹೆಂಗುಸನು ಅಳಲಿಸಿದೆನು...ಇನ್ನಾವ ಧರ್ಮವನು ಅಳಿದೆನೋ... ತಾನು ಆವ ಪಾಪದ ಫಲಕೆ ಸಂಚಕಾರವನು ಪಿಡಿದೆನೊ... ಎನ್ನವೋಲು ಆವ ಹೆಂಗಸು ನವೆದಳು... ಆವಳ ಅಳಲಿದು... ಲೋಕದಲಿ ಯಾವಳು ಎನ್ನದಂದ ಮಗಳ ಪಡೆದವಳು

(ಎನುತ ತಾ ಮರುಗಿದಳು.)

ಭುವನದೊಳು ನಾರಿಯರು ಎನ್ನವೊಲು ಭಂಗಿತರು ಇನ್ನು ಹುಟ್ಟದೆ ಇರಲಿ. ಗಂಡರು ಭೀಮ ಸನ್ನಿಭರು ಇನ್ನು ಜನಿಸಲು ಬೇಡ. ಮುನ್ನಿನವರೊಳಗೆ ಎನ್ನವೊಲು ಪಾಂಡವರವೊಲು ಸಂಪನ್ನ ದುಃಖಿಗಳಾರು ನವೆದರು.

(ಎಂದು ದ್ರೌಪದಿಯು ಹಲುಬಿದಳು.)

ಆವ ಗರಳವ ಕುಡಿವೆನೋ...ಮೇಣ್ ಆವ ಬೆಟ್ಟವನು ಅಡರಿ ಬೀಳ್ವೆನೊ... ಹಾಸರೆಯ ಗುಂಪಿನಲಿ... ಯಾವ ಮಡುವನು ಹೊಗುವೆನೋ... ಆವ ಕುಂತವ ಹಾಯ್ವೆನೋ...ಮೇಣ್ ಆವ

ಪಾವಕನೊಳಗೆ ಹೊಗುವೆನೋ... ಎನಗೆ ಸಾವು ಸಮನಿಸದೆ

(ಎನುತ ನಳಿನಾಕ್ಷಿ ಮರುಗಿದಳು)

ಅಂದು ಪಾಪಿ ಕೌರವನು ಮಂದೆಗೆ ಎಳೆದನು. ಬಳಿಕ ಅರಣ್ಯ ವಾಸದೊಳು ಸೈಂಧವ ಬಂದು ಮುಂದಲೆವಿಡಿದು ಎನ್ನನು ಎಳದೊಯ್ದ. ಇಂದು ಕೀಚಕ ನಾಯ ಕಾಲಲಿ ನಾನು ನೊಂದೆ. ಈ ಮೂರು ಬಾರಿಯೆ ಬಂದ ಭಂಗವೆ ಸಾಕು.

(ಎನುತ ಇಂದುಮುಖಿ ಬಸವಳಿದಳು)

ಜನನವೇ ಪಾಂಚಾಲ ರಾಯನ ಮನೆ. ಮನೋವಲ್ಲಭರು ಅದು ಆರು ಎನೆ... ಮನುಜಗಿನುಜರು ಗಣ್ಯವೇ ಗೀರ್ವಾಣರಿಂ ಮಿಗಿಲು. ಎನಗೆ ಬಂದ ಎಡರು ಈ ವಿರಾಟನ ವನಿತೆಯರುಗಳ ಮುಡಿಯ ಕಟ್ಟುವ, ತನುವ ತಿಗುರುವ, ಕಾಲನು ಒತ್ತುವ ಕೆಲಸದ ಉತ್ಸಾಹ. ಹಗೆಗಳಿಗೆ ತಂಪಾಗಿ ಬದುಕುವ ಮುಗುದರು ಇನ್ನು ಆರುಂಟು. ಭಂಗಕೆ ಹೆಗಲ ಕೊಟ್ಟು ಆನುವ ವಿರೋಧಿಗಳು ಲೋಕದಲಿ ಉಂಟೆ. ವಿಗಡ ಬಿರುದನು ಬಿಸುಟು ಬಡಿಹೋರಿಗಳು ಪಾಂಡವರಂತೆ ಮೂಗುರ್ಚಿಗಳು ಅದು ಇನ್ನು ಆರುಂಟು.

ಕಾಲನನು ಕೆರಳಿದೊಡೆ ಮುರಿವ ಎಚ್ಚಾಳುತನದವರು ಎನ್ನನೊಬ್ಬಳನು ಆಳಲಾರಿರಿ. ಪಾಪಿಗಳಿರ...ಅಪಕೀರ್ತಿಗೆ ಅಳುಕಿರಲ... ತೋಳ ಹೊರೆ ನಿಮಗೇಕೆ... ಭೂಮೀಪಾಲ ವಂಶದೊಳು ಉದಿಸಲೇತಕೆ... ಕೂಳುಗೇಡಿಂಗೆ ಒಡಲ ಹೊರೆವಿರಿ.

(ಎಂದಳು ಇಂದುಮುಖಿ.)

ಕುರುಕುಲಾಗ್ರಣಿ ನಿಮ್ಮ ಹೊರವಡಿಸಿ ಧರೆಯ ಭಂಡಾರವನು ಪುರವನು ಕರಿ ತುರಗ ರಥ ಪಾಯದಳವನು ಸೆಳೆದುಕೊಂಡನು. ದುರುಳ ಕೀಚಕಗೆ ಎನ್ನ ಕೊಟ್ಟಿರಿ. ನಿಮ್ಮೈವರಿಗೆ ಪರಿಮಿತದಲಿ ಇರವಾಯ್ತು. ಅಕಟ... ಲೇಸಾಯ್ತು.

(ಎಂದು ಅಂಬುಜಾಕ್ಷಿ ಹಲುಬಿದಳು.)

ಭಾವ ಕೌರವದೇವನು ಭಾಗ್ಯಾಧಿಕನು. ಕೃಷ್ಣನ ಕೂರ್ಮೆ ಧರ್ಮದಿ ಅರಸುಗಳ ಒಡೆತನವನು ನೀವು ಪಾಲಿಸಿದಿರಿ. ಈಗ ನೀವು ತಟಮಟವಾಗಿ ಲೋಗರ ಸೇವೆಯಲಿ ಬೆಂದೊಡಲ ಹೊರೆವಿರಿ. ಸಾವವಳು ನಿಮಗೆ ಅಂಜಲೇಕೆ.

(ಎಂದು ಅಬಲೆ ಒರಲಿದಳು.)

ಭೀಮ ತನಗೆ ಸಾವಿನ ನೇಮವನು ಕೊಟ್ಟೈ. ನಿಮ್ಮಣ್ಣನಾಜ್ಞೆ ವಿರಾಮವಾಗದೆ ಧರ್ಮದ ಮೈಸಿರಿಯನು ಅರಿದು ಬದುಕಿ. ಕಾಮಿನಿಯ ಕೇಳಿಯಲಿ ನೆನೆವುದು. ತಾಮಸದಿ ತಾ ಮೀರಿ ನುಡಿದ ಉದ್ದಾಮತೆಯ ಸೈರಿಸುವುದು.

(ಎಂದು ಚರಣದಲಿ ಎರಗಿದಳು. ಕಲಿಭೀಮ ಕಂಬನಿ ತುಂಬಿದನು. ಅಂತಃಕರಣ ಕಡು ನೆನೆದುದು. ರೋಷದ ಘನತೆ ಹೆಚ್ಚಿತು. ಹಗೆಗಳನು ಮನದೊಳಗೆ ಹಿಂಡಿದನು. ತನುಪುಳಕ ಉಬ್ಬರಿಸಿ ಮೆಲ್ಲನೆ ವನಿತೆಯನು ತೆಗೆದು ಅಪ್ಪಿದನು. ಸೆರಗಿನಲಿ ಕಂಬನಿಯ ತೊಡೆದನು. ಮಾನಿನಿಯ ಕುರುಳ ನೇವರಿಸಿದನು. ಗಲ್ಲವನು ಒರೆಸಿ ಮುಂಡಾಡಿದನು. ಮಂಚದ ಹೊರೆಯ ಗಿಂಡಿಯ ನೀರಿನಲಿ ಮುಖಾಂಬುಜವ ತೊಳೆದನು.)

**ಭೀಮ** : ಅರಸಿ, ವಿಸ್ತರಿಸಲೇಕೆ ಹೋಗು... ಖಾತಿಯನು ಬಿಡು ಬಿಡು. ಎಮ್ಮಣ್ಣನ ಆಜ್ಞೆಯ ಗೆರೆಯ ದಾಂಟಿದೆ ದಾಂಟಿದೆನು. ನಸು ಮಿಸುಕಿದೊಡೆ ಕೀಚಕನ ಬಸುರ ಬಗಿವೆನು. ವೈರಾಟ ವಂಶದ ಹೆಸರ ತೊಡೆವೆನು. ನಮ್ಮನು ಅರಿದೊಡೆ ಕೌರವವ್ರಜವ ಕುಸುರಿ ತರಿವೆನು. **"ಭೀಮ ಕಷ್ಟವನು ಎಸಗಿದನು ಹಾಯ್"** ಎಂದರಾದೊಡೆ ಅಮರಾದ್ರಿಯಲಿ ದೇವ ಸಂತತಿಯ ಮುಸುಡನು ತೇವೆನು. ಮುನಿದನಾದೊಡೆ ಅಣ್ಣತನ ಇಂದಿನಲಿ ಹರಿಯಲಿ. ಪಾರ್ಥ ಸಹದೇವ ನಕುಲರು ಕನಲಿದೊಡೆ ಕೈದೋರುವೆನು. ಇವರುಗಳ ಅನುಜರು ಎಂಬೆನೆ. ಕೃಷ್ಣ ಹಾಯ್ದರೆ ಘನ ಮುರಾರಿಯ ಮೀರುವೆನು. ಬಳಿಕ ಎನಗೆ ಸಮಬಲರು ಆರು.

ಕೀಚಕ ಅನ್ವಯವ ತರಿವೆನು. ಈಸು ದಿನ ಎಮ್ಮಣ್ಣನ ಆಜ್ಞೆಯ ಪಾಶದಲಿ ಸಿಕ್ಕಿರ್ದೆ. ಸಿಂಹದ ಕೂಸ ನರಿ ಕೆಣಕುವವೊಲು ಈ ಕುರು ಕೀಚಕಾದಿಗಳು ಕೆಣಕಿ ಗಾಸಿಯಾದರು. ವೀಸ ಬಡ್ಡಿಯಲಿ ನಾಯ್ಗಳ ಅಸುವ ಕೊಂಬೆನು. ವಾಸಿ ಧರ್ಮದ ಮೇರೆ ತಪ್ಪಿತು. ಕಾಂತೆ ಕೇಳು, ಕೀಚಕ ಕೌರವೇಂದ್ರರ ಹರಣಕೆ ಇದಕೋ ಸಂಚಕಾರವ. ಕೆರಳಿದೊಡೆ ನೀತಿಗೀತಿಗಳ ಈ ಭೀಮ ಬಗೆವನೆ. ಕೆರಳಿಚಿದೆ... ಇನ್ನೇನು ನಿನ್ನಯ ಹರಿಬವು ಎನ್ನದು.

ನಾಯಿ ಜಾರನ ಕರೆದು ನಾಟ್ಯ ಮಂದಿರವ ಸಂಕೇತದಲಿ ಸೂಚಿಸು. ಅಲ್ಲಿಗೆ ಇರುಳು ಐತಂದು ಮರೆಯಲಿ ಖುಲ್ಲನ ಉದರವ ಬಗಿದು ರಕುತವ ಶಾಕಿನಿಯರಿಗೆ ಚೆಲ್ಲುವೆನು. ಇದಕೆ ಸಂದೇಹ ಬೇಡ. ಅಲ್ಲಿ ಕೆಲಬಲನು ಅರಿದುದುದಾದೊಡೆ ಅದಕೆ ಔಷಧಿಯ ಬಲ್ಲೆನು. ಕರೆ ಮರೆಯಿಲ್ಲ. ಮಾನಿನಿ ಹೋಗು.

(ಎನುತ ಅಂಗನೆಯ ಬೀಳ್ಕೊಟ್ಟನು. ಹರುಷದಲಿ ಹೆಚ್ಚಿದಳು.)

**ದ್ರೌಪದಿ** : ಪುರುಷರ ಪುರುಷನಲ್ಲಾ ಭೀಮ. ತನ್ನಯ ಪರಮ ಸುಕೃತ ಉದಯವಲಾ ನೀನೊಬ್ಬನು...

(ಎಂದು ಎನುತ ಅರಸಿ ಕಾಂತನ ಬೀಳುಕೊಂಡಳು. ನಿಜಭವನಕೆ ತಿರುಗಿದಳು.)



## ನೋಟ–೧೦

ಇತ್ತಲು ತರಣಿ ತಾವರೆಯ ಬಾಗಿಲಿನ ಬೀಯಗವ ತೆಗೆದನು. ಆ ದಿವಸ ಕೀಚಕ ಅರಮನೆಗೆ ಬರುತ ವೃಕೋದರನ ವಲ್ಲಭೆಯ ಕಂಡನು. ಕೈದುಡಕಲು ಅಂಜಿದನು. ಅಂಗನೆಯ ಮಾತಾಡಿಸಿದನು.

**ಕೀಚಕ** : ಹೋದ ಇರುಳು ಯುಗವಾಗಿ ಸವೆದುದು. ಕುಸುಮಶರ ಯಮನಾದನು. ಅದ ನೀ ಬಲ್ಲೆ... ನೀ ದಯಾಂಬುಧಿ.

(ಎಂದನು ಕೀಚಕನು ನಗುತ.)

**ಸೈರಂಧ್ರಿ** : ಎಲೆ ಪಾಪಿ ಕೀಚಕ, ಕುಸುಮಶರ ಯಮನಹನು. ಅಮೃತವು ವಿಷವಹುದು. ಬಳಿಕ ಆಲಿಕಲುಗಳು ಬಿಸಿಯಹವು. ಬಾಂಧವರು ವೈರಿಗಳಹರು. ನಿಮಿಷದಲಿ ಒಸೆದರು ಒಲ್ಲದರಹರು. ಲೋಗರ ಶಶಿವದನೆಗೆ ಅಳುಪಿದ ದುರಾತ್ಮನ ವಸುಧೆ ಹೊರದು.

**ಕೀಚಕ** : ನಿನ್ನ ಪುರಾಣ ಧರ್ಮವ ಬಳಿಕ ತಿಳಿದುಕೊಂಬೆನು. ಇದು ಒಮ್ಮೆ ನಿನ್ನಯ ಲಲಿತ ಕರುಣ ಕಟಾಕ್ಷಕವಚವ ತೊಡಿಸಿ, ತನ್ನ ಒಡಲ ಅಳುಕದೆ ಎಸುವ ಮನೋಜನ ಅಂಬಿನ ಹಿಳುಕ ಮುರಿ. ಡಿಂಗರಿಗನು ಅಹೆನು.

(ಎಂದು ಅಳಿಮನದಲಿ ಆ ಖೂಳನು ಅಬುಜಾನನೆಗೆ ಕೈಮುಗಿದ.)

**ಸೈರಂಧ್ರಿ** : ಎಲವೊ, ಎನ್ನವರು ಅರಿದರಾದಡೆ ನಿನ್ನ ವಂಶವ ತರಿವರು. ಎನ್ನನು ಮರೆದು ನೀ ಬಿಡೆ. ನಿನಗೆ ಆಯುಷ್ಯ ನೆರೆದುದು .ಕೆಲಬಲನು ಅರಿಯದ ಅಂದದಿ ಬಂದು, ನಾಟ್ಯದ ಗರುಡಿಯೊಳಗೆ ಕತ್ತಲೆ ಮನೆಯೊಳು ಇಹುದು, ಆನು ಐತಹೆನು, ಆದುದಾಗಲಿ.

(ಎಂದಳು ಇಂದುಮುಖಿ. ಖಳ ಹಸಾದವ ಹಾಯ್ಕಿ ತನ್ನಯ ನಿಳಯಕೆ ಐದಿದನು.) ❖

## ನೋಟ–೧೧

ಅಬುಜ ಬಾಂಧವನು ಅಸ್ತಾಚಲದ ತಪ್ಪಲ ತಾವರೆಯ ಬನಕೆ ಇಳಿದನು. ಕಗ್ಗತ್ತಲೆಯ ಹಬ್ಬುಗೆಯೊಳಗೆ ಕಂಗಳ ಬೆಳಗು ಬಟ್ಟೆಯ ತೋರೆ ನಳಿನಮುಖಿ ನಲವೇರಿ, ಬಾಣಸಿನ ಮನೆಗೆ ಬಂದಳು.

**ದ್ರೌಪದಿ** : ಭೀಮ ನಾಟ್ಯನಿಲಯವನು ನಿಂದಿರು. ಆ ಮದಾಂಧಗೆ ನುಡಿದು ಬಂದೆನು. ತಾಮಸವ ಮಾಡದಿರು. ಅಲ್ಪ ಬುದ್ಧಿಗಳ ಹೂಡದಿರು. ಕಾಮುಕನನು ಅಡಗೆಡಹಿ ನಿಜ ಸುಪ್ರೇಮನು ತೋರು.

(ಎನಲು, ಉದ್ದಾಮನು ನಗುತ ಎದ್ದನು. ಮಲ್ಲಗಂಟಿನಲಿ ಪಳಿಯನು ಉಟ್ಟನು. ಖಳನ ಮುರಿಯೆಂದು ಅಬಲೆ ನೊಸಲಲಿ ತಿಲಕವನು ರಚಿಸಿದಳು, ಸೇಸೆಯ ತಳಿದಳು, ತಿಗುರ ಏರಿಸಿ ಗೆಲಿದಳು. ಹಿಣಿಲ ಹೊಸ ಪರಿಯ ಬಲುಭುಜನ ಹರಸಿದಳು. ಕಗ್ಗತ್ತಲೆಯ ಹಬ್ಬುಗೆಯೊಳಗೆ ನಾಟ್ಯದ ನಿಲಯ ಮಧ್ಯದ ಮಣಿಯ ಮಂಚದ ಮೇಲೆ ಪವಡಿಸಿದ.

ಉರಿವ ಮಾರಿಯ ಬೇಟದಾತನು ತುರುಗಿದನು. ಮಲ್ಲಿಗೆಯ ಮೊಗ್ಗೆಯ ನಿರಿಕಿ, ಸಾದು ಜವಾಜಿ ಕತ್ತುರಿಯ ತಾ ಪೂಸಿದನು. ಮೆರೆವ ಗಂಡುಡಿಗೆಯನು ರಚಿಸಿದ ಸೆರಗಿನ ಒಯ್ಯಾರದಲಿ ಸುರಗಿಯ ತಿರುಹುತ, ಇರುಳು ಒಬ್ಬನೆ ನಿಜಾಲಯದಿಂದ ಹೊರವಂಟ. ಕಾಲಪಾಶದಲಿ ಎಳಸಿಕೊಂಬ ಕರಾಳಮತಿ ಸುಡುಗಾಡಲಿ ಐತಂದು ಆಲಯವ ಹೊಕ್ಕನು. ಮೇಲೆ ಮೇಲಪಶಕುನ ಶತಕವನು ಆಲಿಸದೆ ಕೃತಾಂತನ ಬಾಯ ಹೊಗುವಂತೆ ಸುಮ್ಮಾನದಲಿ ಮಂಚವಿದ್ದ ಎಡೆಗಾಗಿ ತಡವರಿಸಿ ಕೇಡಾಳಿ ಬಂದನು.)

**ಕೀಚಕ** : ವನಜಮುಖಿ, ವೀಳೆಯವನು ಅನುಲೇಪನವ ಮಲ್ಲಿಗೆಯರಳ ತೊಡಿಗೆಯನು ಅನುಪಮಾಂಬರ ಇವೆ. ಮನೋಹರವಹರೆ ಚಿತ್ತೈಸು. ನಿನಗೆ ಪಾಸಟಿ ಆನು. ಎನ್ನವೊಲು ಅನಿಮಿಷರು ಆರುಂಟು. ಚೆಲುವರು ಮನುಜರು ಎನ್ನನು ಹೋಲುವರೆ. ಸೈರಂಧ್ರಿ ಕೇಳು, ಎನ್ನವೋಲ್ ಪುರುಷರಲಿ ಚೆಲುವರ ಮುನ್ನ ನೀ ಕಂಡು ಅರಿದೆಯಾದೊಡೆ, ಎನ್ನ ಮೇಲಾಣೆ. ಎಲೆಗೆ, ಹುಸಿಯದೆ ಹೇಳು ಹೇಳು, ಮುನ್ನ ನಿನ್ನಂತಪ್ಪ ಸತಿಯರು ಎನ್ನನೇ ಬಯಸುವರು. ಎಲೆಗೆ ನಿನ್ನಾಣೆ, ಎನ್ನ ಕಂಡರೆ ನಾರಿಯರು ಸೋಲದವರು ಇಲ್ಲ..

**ಭೀಮ** : ಎಲವೋ ಕೀಚಕ, ನಿನ್ನ ಹೋಲುವ ಚೆಲುವರಿಲ್ಲ. ಅಂತಿರಲಿ ತನ್ನಯ ರೂಪು ಲೋಕದ ಲಲನೆಯರ ಪರಿಯಲ್ಲ, ಬೇರೊಂದು. ಇಳೆಯೊಳು ಎನಗೆ ಎಣೆಯಿಲ್ಲ. ನಿನಗೆ ಆನು ಒಲಿದು ಬಂದೆನು. ತನ್ನ ಪರಿಯನು ಬೇಗ ತೋರುವೆನು. ಬಳಿಕ ನೋಡಾ. ಪುರುಷರು ಎನಗೆ ಸೋಲದವರಿಲ್ಲ. ಎನಗೆ ಪಾಸಟಿ ನೀನು. ನಿನಗಾ ಮನವೊಲಿದೆ. ನೀ ನೋಡು ತನ್ನಯ ಹೆಣ್ಣುತನದ ಅನುವ.

(ಎನಲು ಹರುಷದಲಿ ಉಬ್ಬಿ ಕೀಚಕನು ಅನಿಲಜನ ಮೈದಡವಿ ವೃತ್ತಸ್ತನವ ಕಾಣದೆ ಹೆದರಿ, ಬಳಿಕ ಅವ ನಗುತ ಇಂತು ಎಂದನು.)

**ಕೀಚಕ** : ಎಲೆಗೆ ಕಲುಮೈಯಾದೆ. ಕಡು ಕೋಮಲತೆ ಎತ್ತಲು...ಕರ್ಕಶಾಂಗದ ಬಲುಹು ಇದು ಎತ್ತಲು. ಮೇಣು ಮಾಯವೇಷವ ಧರಿಸಿದೆಯೊ ತಿಳುಹು.

**ಭೀಮ** : ಕೇಳು ಎಲವೊ, ಪರ ಸತಿಗೆ ಅಳುಪಿದಾತಂಗೆ ಅಮೃತ ವಿಷ, ಕೋಮಲತೆ ಕರ್ಕಶನಹುದು.

(ಎನುತ ಮುಂದಲೆಯ ತುಡುಕಿದನು.)

**ಕೀಚಕ** : ಚಪಳೆ... ಫಡ... ಹೋಗು...

(ಎನುತ ಕೃಪಣಮತಿ ಹಾಯ್ದನು. ಅನಿಲಜನು ಅಪರಭಾಗಕೆ ಹಾಯ್ದು ಕೀಚಕನ ತುರುಬ ಮುಂಗೈಯಲಿ ಹಿಡಿದನು. ವಿಪುಳಬಲ ಕಳವಳಿಸಿದನು. ಕಡು ಕುಪಿತನಾದನು.)

ಹೆಂಗುಸಲ್ಲ ಇವನು... ಅಪಸದನು... ತೆಗೆ ಕರುಳನು...

(ಎನುತ ಒಳಹೊಕ್ಕು ಹೆಣಗಿದನು. ಅವನು ಉರವಣಿಸಿ ತಿವಿದನು.

ಮಾರುತಿ ಕವಿದು ಹೆಣಗಿದನು. ಅಡಸಿ ಬವರಿಯಲಿ ಹೊಯ್ದೊಡೆ, ಟೊಣದು ಔಕಿದಡೆ ಮಡ ಮುರಿಯದೆ ಒಳಹೊಕ್ಕು, ಸವಡಿ ಮಂದರರದಂತೆ ಕೀಚಕ ಪವನಸುತರು ಒಪ್ಪಿದರು.

ಭೀಮನ ಯುವತಿ ನಗುತ ಹೊಯ್ಲು ಹೋರಟೆಯ ಆಲಿಸುತಲಿದ್ದಳು. ಎರಗಿದೊಡೆ ಕೀಚಕನ ಗಾಯಕೆ ತರವರಿಸಿ ಕಲಿಭೀಮ ಮಂಡಿಸಿ ಮರೆವಡೆದು ಮುರಿದೆದ್ದು ರೋಷದಲಿ ಔಡನು ಒಡೆಯಗಿದು, ಬರ ಸಿಡಿಲು ಪರ್ವತದ ಶಿಖರವನು ಎರಗುವಂತಿರೆ ರಣಧೀರನು ಉನ್ನತ ಬಾಹುಸತ್ವದಲಿ ಖಳನ ನೆತ್ತಿಯನು ಎರಗಿದನು. ಅರಿಯ ಮುಷ್ಟಿಯ ಗಾಯದಲಿ ತಲೆಬಿರಿಯೆ, ತನು ಡೆಂಡಣಿಸಿ, ಕಂಗಳು ತಿರುಗಿ ಜೋಲಿದು, ಮೆಲ್ಲ ಮೆಲ್ಲನೆ ಅಸುವ ಪಸರಿಸುತ, ಕೆರಳಿ ಕರಿ ಕೇಸರಿಯ ಹೊಯ್ದು ಉರೆ ತಿರುಗುವಂತಿರೆ ಭೀಮಸೇನನ ಬರಿಯ ತಿವಿದನು.

**ಕೀಚಕ** : ಖಳರಾಯ ಬೀಳು...

(ಎನುತ ಹಲು ಮೊರೆದ. ತಿರುಗಿ ಪೈಸರಪೋಗಿ ಮರಳಿ ಕೀಚಕನ ಪೇರುರವನು ಪವನಜ ತಿರಿದನು. ಎದೆ ಜರ್ಝರಿತವಾಗಲು, ಕಾರಿದನು ಕರುಳ. ಬಿರಿದವು ಆಲಿಗಳು. ಕಣ್ಣು ಉರುಗಿ ಒಲೆದು ತೊಲೆದು ಧೊಪ್ಪನೆ ಕೆಡೆದು, ನಿಮಿಷಕೆ ಹೊರಳಿ ಕೀಚಕನ ಕಾಯ ಹರಣವ ಕಳುಹಿ ಕಳೆದುದು.

ತಲೆಯನು ಎದೆಯೊಳಗೆ ಇಕ್ಕಿ, ಕೈ ಕಾಲ್ಗಳನು ಬಸುರೊಳು ಸಿಕ್ಕಿ, ದೂರಕೆ ತೊಲಗಿದನು. ರಮಣಿಗೆ ಕೀಚಕನ ಹದನ ತೋರಿದನು. ಕಾಲನ ಕೋಣ ಖಳನ ತುಳಿದಂತೆ ಇಳೆಯೊಳು ಒರಗಿರೆ ಕಂಡು, ಭೀಮಸೇನನನು ಅಪ್ಪಿ ಮುಂಡಾಡಿ ಕಾಮಿನಿ ಕಳಕಳಿಸಿದಳು)

**ಭೀಮ** : 'ತರುಣಿ ಬಿಡು ಸಾರು'

(ಎನುತ ಪವನಜ ಅತ್ತಲು ಸರಿದನು).



## ನೋಟ–೧೨

ದ್ರುಪದನಂದನೆ ಕಾಹಿನವರಿಗೆ ಕರೆದು ಕೀಚಕನ ಹದನ ನುಡಿದಳು.

**ಸೈರಂಧ್ರಿ :** ದುರುಳ ಬಲುಹಿಂದ ಎನ್ನನು ಎಳೆದೊಡೆ, ಗಂಧರ್ವರು ನೋಡಿ ಕೆರಳಿದರು. ಈತಗೆ ಹರುವ ಕಂಡರು.

(ಎನೆ ಕಾಹಿನವದಿರು ಅವಳೊಡನೆ ಹರಿತಂದರು. ಕೈದೀವಿಗೆಯಲಿ ಅರಸಿ... ಅವನು ಇಹ ಪರಿಯ ಕಂಡರು. ಬೇಗದಲಿ ಹರಿದು ಆತನ ಅನುಜಾತರಿಗೆ ಹೇಳಿದರು. ಕೀಚಕನ ಸೋದರರು ಕರದಿ ಬಾಯ್ಗಳ ಹೊಯ್ದು, ಹೃದಯದೊಳು ಉರಿ ಚಡಾಳಿಸೆ, ಬಿಟ್ಟ ಮಂಡೆಯೊಳಿರದೆ ಇರದೆ ಬಾಯ್ಬಿಡುತ ಬಂದರು.)

**ಕೀಚಕನ ಸೋದರರು:** ಅಕಟ, ಕೀಚಕ ವೀರ... ಎಮಗೆ ಆರು ಗತಿ. ಆವು ದೇಶಿಗರಾದೆವು... ಇನ್ನಾರ ಸೇರುವೆವು...

(ಎನುತ ಅವನ ತಕ್ಕೈಸಿ ಹಲುಬಿದರು...)

ಕ್ರೂರಕರ್ಮರು ನಿನ್ನ ಕೊಂದವರು ಆರು ಹಾ ಹಾ... ದೇಶಿಗರಾದೆವು

(ಎನುತ ಹಲುಬಲು, ವಾರಿಜಾನನೆ ಮುಗುಳುನಗೆಯಲಿ ಖಳರ ನೋಡಿದಳು)

**ಕೀಚಕನ ಸೋದರರು:** ಸಹಭವನು ಇವಳಿಗೋಸುಗವೆ ಅಳಿದನೇ... ತಪ್ಪೇನು...

(ಎನುತ, ನಡು ಇರುಳು ಅವದಿರು ಐತಂದು ವೈರಾಟರಾಯಂಗೆ ಅರುಹಿದರು.)

**ಕೀಚಕನ ಸೋದರರು:** ಅವಳನು ಆತನ ಕೂಡೆ ಕಳುಹುವೊಡೆ ಎವಗೆ ನೇಮ.

(ಎಂದು ಬೀಳ್ಕೊಂಡು, ಅವರು ಮರಳಿದು ಬಂದು ಕಮಲ ಲೋಚನೆಯ ಹಿಡಿದರು. ಮಂಚದಲಿ ಅವನ ಹೆಣನನು ತೆಗೆದು ಅವಳನು ಕಾಲ ದೆಸೆಯಲಿ ಬಿಗಿದರು.)

**ಕೀಚಕನ ಸೋದರರು:** ನಗುವುದು ಇನ್ನೊಮ್ಮೆ

(ಎನುತ ಅವರು ಕಾಮಿನಿಯ ಕಟ್ಟಿದರು. ಬೆಗಡುಗೊಂಡ ಅಂಭೋಜಮುಖಿಯು ಉಬ್ಬೆಗದೊಳು ಒದರಿದಳು.)

**ಸೈರಂಧ್ರಿ :** ಅಕಟಕಟ... ಪಾಪಿಗಳಿರಾ... ಗಂಧರ್ವರಿರ... ಹಾಯ್

(ಎನುತ ಹಲುಬಿದಳು.)

ಅಕಟ... ಕೇಳು... ಜಯನೇ... ಜಯಂತನೇ ಕೇಳು... ವಿಜಯ... ಜಯೋದ್ಭವನೆ ನೀ ಕೇಳು... ಜಯಸೇನನೆ... ದುರಾತ್ಮಕರು ಎನ್ನನು ಎಳದೊಯ್ದು ಅಗ್ನಿಯಲಿ ಬೀಳಿಸುವರು... ಅಕಟ... ನೀವು ಏಳಿ ತಡವೇಕೆ.

(ಎನುತ ಮೊರೆಯಿಡೆ ಸತಿಯ ಆಕ್ರಂದನ ಧ್ವನಿಯ ಕಲಿ ಭೀಮ ಕೇಳಿದನು.)

**ಭೀಮ :** (ತನ್ನಲ್ಲಿಯೇ)

ಈ ದುರಾತ್ಮರಿಗೆ ಅಗ್ರಜನ ಸಾವು ಐದದೇ... ಕುನ್ನಿಗಳನು ಹೊಯ್ದು, ಈ ಕ್ಷಣಕೆ ತಮ್ಮ ಅಣ್ಣನಲ್ಲಿಗೆ ಕಳುಹಲುಬೇಕಲಾ. ಬೈಯ್ದು ಫಲವೇನು.

(ಎಂದು ಮಾರುತಿ ಹಾಯ್ದು ಝುಂಕಿಸಿ ರುದ್ರಭೂಮಿಯನು ಎಯ್ದಿದನು. ಫಡ... ಎನುತ ಹೆಮ್ಮರನ ಮುರಿದುಕೊಂಡನು.)

**ಕೀಚಕನ ಸೋದರರು:** ಎಲೆಲೆ... ಗಂಧರ್ವಕನ ಹೆಂಗುಸ ಕಳಚಿ ಬಿಡಿರೋ. ಪಾಪಿ ಹೋಗಲಿ. ಇವನು ಕೊಲೆಗಡಿಗನು.

(ಎನುತ ಹೆಣನನು ಬಿಸುಟು ದೆಸೆದೆಸೆಗೆ ತಲೆಗೆದರಿ ತೆಗೆದೋಡೆ, ಕಲಿಭೀಮನು ಕಳಕಳಸಿ ನಕ್ಕನು)

**ಭೀಮ :** ಎಲೆ ನಾಯ್ಗಳಿರ ಹೋದೊಡೆ ಬಿಡುವೆನೇ ಹಾಯ್ .

(ಎನುತ ಕೈಕೊಂಡ ಹೆಮ್ಮರನನು ತಿರುಹಿದನು. ಅವದಿರನು ಅರೆದು ನಿಟ್ಟೊರೆಸಿದನು. ದೆಸೆ ದೆಸೆಗೆ ಒರಲಿ ಚಿಮ್ಮುವ ಚಪಲರನು ಬೆಂಬತ್ತಿ,

ಬರಿಕೈದು ಕುರಿದರಿಯ ಮಾಡಿದನು. ನೂರೈವರನು ಕೊಂದನು. ಮರನ ಹಾಯಕಿ, ಮರಳಿ ಮಿಣ್ಣನೆ ಬಂದು ಬಾಣಸದ ಮನೆಯ ಹೊಕ್ಕನು.

ಪೌರಜನವು ಸುಳಿಯಲಮ್ಮದು. ಇವರ ಅಳಿವ ವಚನಿಸಲಮ್ಮದು ಈಕೆಯನು ಅಲುಕಲಮ್ಮದು. ಮಂದಿ ಗುಜುಗುಜಿಸಿ ನೋಡಲಮ್ಮದು.

ನಳಿನಮುಖಿ ನಸುನಗುತ ತಿಳಿಗೊಳದೊಳಗೆ ಹೊಕ್ಕಳು. ಮಿಂದು ಬೀದಿಗಳೊಳಗೆ ಬರುತಿರೆ ಕಂಡು ಅಖಿಲಜನ ಕೈಗಳ ಮುಗಿದುದು.

**ಪುರಜನರು–೧ :** ಅಕಟ, ಅವಿವೇಕಿ ಕೀಚಕನು ಈಕೆಗೋಸುಗ ಅಳಿದನು

(ಎಂದು ಕೆಲಬರು...)

**ಪುರಜನರು–೨ :** ಇದೇಕೆ ನಮಗೆ ಈ ಚಿಂತೆ ಶಿವಶಿವ...

(ಎಂದು ಕೆಲಕೆಲರು ನೂಕಿ ಕವಿದುದು. ಮಂದಿ ಮಧ್ಯದೊಳು ಈಕೆ ಮೆಲ್ಲನೆ ಬರುತಲಾ ಲೋಕೈಕ ವೀರನ ಆ ಬಾಣಸಿನ ಬಾಗಿಲಲಿ ಕಂಡಳು. ಮುಗುಳು ನಗೆಯಲಿ ಕಣ್ಣ ಕಡೆಯಲಿ ವಿಗಡ ಭೀಮನ ನೋಡಿ.)

**ಸೈರಂಧ್ರಿ :** ಗಂಧರ್ವಪತಿಗೆ ಆವ್ ಕೈಗಳ ಮುಗಿದೆವು... ನಮೋ ನಮೋ.

(ಎನುತ ಹೊಗರಿಡುವ ಹರುಷದಲಿ, ರೋಮಾಳಿಗಳ ಗುಡಿಯಲಿ ತನ್ನ ನಿಳಯಕೆ ಮುಗುದೆ ಬಂದಳು)



## ನೋಟ–೧೩

ಸೂರ್ಯನು ಉದಯ ಪರ್ವತವ ಅಡರಿದನು. ಊರೊಳಗೆ ಗುಜುಗುಜಿಸಿ ವಾರ್ತಾಭಾರ ಮಸಗಿತು. ನೆರೆದ ನೆರವಿಯೊಳು ಆರಬಾಯ್ಗಳೊಳಾದೊಡೆಯು ಜನಜನಿತ ಜಪವಾಯ್ತು. ಭೂರಿ ಚಿಂತಾತುರ ವಿರಾಟನು...

**ವಿರಾಟರಾಯ:** ಮಾರಿಯೋ... ಸೈರಂಧ್ರಿಯೋ... ಈ ನಾರಿ ಇರಬೇಡ.

(ಎಂದು ತನ್ನಯ ಸತಿಗೆ ನೇಮಿಸಿದ. ಅಳಲು ಕೈಮಿಗಲು ಆ ವಿರಾಟನ ಲಲನೆ ಸೈರಂಧ್ರಿಯನು ಕರೆಸಿದಳು.)

**ಸುದೇಷ್ಣೆ :** ಎಲೆ ಮಹಾತುಮೆ ತಾಯೆ, ನಿಮಗೆ ಅಂಜುವೆವು ಶರಣು. ನೀವು ಹೊಳಲೊಳು ಇದ್ದರೆ ಭೀತಿ ಘನ. ನೀವು ಒಲಿದ ಠಾವಿಗೆ ಬಿಜಯ ಮಾಡುವುದು. ನಮ್ಮನು ಉಳುಹಬೇಹುದು.

(ಎನಲು... ಇಂದುಮುಖಿ ಇಂತು ಎಂದಳು.)

**ಸೈರಂಧ್ರಿ :** ಎಮ್ಮದು ಏನು ಅಪರಾಧ ದೇವಿಯೆ... ನಿಮ್ಮ ತಮ್ಮನು ತಪ್ಪಿ ನಡೆದೊಡೆ, ಎಮ್ಮ ರಮಣರು ದುರ್ಜನರ ಸೈರಿಸದೆ ಸೀಳಿದರು. ನಿಮ್ಮ ನಾವು ಓಲೈಸಿ, ಮರಳಿದು ನಿಮ್ಮ ಕೆಡಿಸುವರಲ್ಲ. ಧೂರ್ತರು ನೀತಿ ಬಾಹಿರರು ತಮ್ಮ ಮತದಲಿ ತಾವೆ ಕೆಟ್ಟರು.

**ಸುದೇಷ್ಣೆ :** ತಾವು ತಮ್ಮಿಂದ ಅಳಿದರೆ ಅದು ಸಾಕು. ಆವು ನಿಮಗೆ ಅಂಜುವೆವು. ನಿಮ್ಮಲಿ ಯಾವುದೂ ತಪ್ಪಿಲ್ಲ. ನೀವು ಇಲ್ಲಿರಲು ಬೇಡ.

(ಎನಲು)

**ಸೈರಂಧ್ರಿ :** ದೇವಿ ಚಿತ್ತೈಸು, ನಾವು ಮುನ್ನ ಇಹರಲ್ಲ. ನಿಮ್ಮಯ ಸೇವೆಯಲಿ ಹದಿಮೂರು ದಿವಸವು ನೀವು ನೂಕಿದೊಡಿರದೆ ಮಾಣೆವು. ಅಳುಕದಿರಿ ಹದಿಮೂರು ದಿವಸವ ಕಳೆದ ಬಳಿಕ ಎಮಗೆಲ್ಲ ಲೇಸಹುದು. ದುಷ್ಟರಾದವರು ಅಳಿದು ಹೋದರು. ಇನ್ನು ಭಯ ಬೇಡ. ಆವು ಕಲಹದವರಲ್ಲ.

(ಎನುತ ದುರುಪದಿ ನಿಜನಿಳಯವನು ಸಾರಿದಳು. ಕೀಚಕನ ವೃತ್ತಾಂತ ಗಳಿಗೆ ಗಳಿಗೆಗೆ ಪಸರಿಸಿತು.)



# ಕೀಚಕನ ಪ್ರಸಂಗ

## ಪದ ವಿಂಗಡಣೆ ಮತ್ತು ತಿರುಳು

### ನೋಟ–೧

**ಜನಮೇಜಯ**=ಮದ್ರಾವತಿ ಮತ್ತು ಪರೀಕ್ಷಿತರಾಜ ದಂಪತಿಯ ಮಗ. ಈಗ ಹಸ್ತಿನಾವತಿಯನ್ನು ಆಳುತ್ತಿರುವ ಪಾಂಡುವಂಶದ ರಾಜ. ಜನಮೇಜಯ ರಾಜನ ತಂದೆಯಾದ ಪರೀಕ್ಷಿತನು ಅಭಿಮನ್ಯು ಮತ್ತು ಉತ್ತರೆ ದಂಪತಿಯ ಮಗ. ಪರೀಕ್ಷಿತನ ತಂದೆಯಾದ ಅಭಿಮನ್ಯುವು ಸುಭದ್ರೆ ಮತ್ತು ಅರ್ಜುನ ದಂಪತಿಯ ಮಗ;

ಧರಿತ್ರೀ=ಭೂಮಿ; ಪಾಲ=ಕಾಪಾಡುವವನು; ವೈಶಂಪಾಯನ=ಒಬ್ಬ ಮುನಿ; **ಕೇಳು ಜನಮೇಜಯ ಧರಿತ್ರೀಪಾಲ**=ವೈಶಂಪಾಯನ ಮುನಿಯು ವ್ಯಾಸರು ರಚಿಸಿದ ಮಹಾಭಾರತದ ಕತೆಯನ್ನು ಮತ್ತೊಮ್ಮೆ ಪಾಂಡುವಂಶದ ಅರಸನಾದ ಜನಮೇಜಯನಿಗೆ ಹೇಳತೊಡಗಿದ್ದಾನೆ; ನಿಮ್ಮಯ=ನಿಮ್ಮ ವಂಶಕ್ಕೆ ಸೇರಿದ; ಪೂರ್ವ=ಹಿಂದಿನ; ಪೃಥ್ವೀ=ಭೂಮಿ; ಪೃಥ್ವೀಪಾಲರು=ಭೂಮಿಯನ್ನು ಕಾಪಾಡುವವರು/ರಾಜರು ; ಗುಪುತ=ಗುಟ್ಟು/ರಹಸ್ಯ ;

**ನಿಮ್ಮಯ ಪೂರ್ವ ಪೃಥ್ವೀಪಾಲರು ವಿರಾಟನಗರಿಯಲಿ ಗುಪುತದಿಂದ ಇದ್ದರು**=ನಿಮ್ಮ ವಂಶಕ್ಕೆ ಸೇರಿದ ಹಿರಿಯರಾದ ಪಾಂಡವರು ವಿರಾಟನಗರಿಯಲ್ಲಿ ರಹಸ್ಯವಾಗಿ ನೆಲೆಸಿದ್ದಾರೆ. ದುರ್ಯೋಧನ ಮತ್ತು ಧರ್ಮರಾಯನ ನಡುವೆ ನಡೆದ ಜೂಜಿನ ಆಟದಲ್ಲಿ ಧರ್ಮರಾಯನು ಸಕಲ ಸಂಪತ್ತನ್ನು ಕಳೆದುಕೊಂಡಿದ್ದರಿಂದ, ಪಾಂಡವರು ಹನ್ನೆರಡು ವರುಶ ವನವಾಸ ಮತ್ತು ಒಂದು ವರುಶ ಅಜ್ಞಾತವಾಸಕ್ಕೆ ಗುರಿಯಾಗಿದ್ದರು. ಹನ್ನೆರಡು ವರುಶ ವನವಾಸವನ್ನು ಪೂರಯಿಸಿ, ಒಂದು ವರುಶದ ಅಜ್ಞಾತವಾಸವನ್ನು ಕಳೆಯಲೆಂದು ವಿರಾಟನಗರದ ಅರಮನೆಯಲ್ಲಿಯೇ ಎಲ್ಲರೂ ಮಾರುವೇಷದಿಂದ ನೆಲೆಸಿದ್ದಾರೆ;

ಸವೆ=ತೀರು/ಮುಗಿ; **ಹತ್ತು ತಿಂಗಳ ಮೇಲೆ ಕಾಲ ಸವೆದುದು**=ಪಾಂಡವರು ವಿರಾಟನಗರಿಗೆ ಬಂದು ಈಗಾಗಲೇ ಹತ್ತು ತಿಂಗಳ ಮೇಲಾಗಿದೆ;

ಅತಿಶಯ+ಉಕ್ತಿಯನು; ಅತಿಶಯ=ಹೆಚ್ಚಳ; ಉಕ್ತಿ=ಮಾತು/ಹೇಳಿಕೆ; ಅತಿಶಯೋಕ್ತಿ=ದೊಡ್ಡ ಸಂಗತಿ ; ವಿಸ್ತರ=ವಿವರವಾಗಿ; ಅರುಪು=ತಿಳಿಸು/ಹೇಳು; ಆಲಿಸು=ಕೇಳು; ಮುನಿಪ=ದೊಡ್ಡ ಮುನಿ ;

**ಮತ್ತೊಂದು ಅತಿಶಯೋಕ್ತಿಯನು ವಿಸ್ತರದೊಳು ಅರುಪುವೆನು ಆಲಿಸೈ ಎಂದನಾ ಮುನಿಪ**=ಮುನಿಯು ರಾಜನನ್ನು ಕುರಿತು "ವಿರಾಟನಗರಿಯಲ್ಲಿ ನಡೆದ ಮತ್ತೊಂದು ದೊಡ್ಡ ಸಂಗತಿಯನ್ನು ಈಗ ವಿವರವಾಗಿ ಹೇಳುತ್ತೇನೆ" ಮನವಿಟ್ಟು ಕೇಳು ಎಂದನು; ರಾಜಧಾನಿ=ರಾಜ್ಯದ ಆಡಳಿತ ಕೇಂದ್ರವಾಗಿರುವ ಊರು; ವಿಳಾಸ=ರೀತಿ/ಬಗೆ/ಅಂದ; ಮುಸುಕು=ಗುಟ್ಟು/ರಹಸ್ಯ;

**ಈ ವಿಳಾಸದಿ ಮುಸುಕಿ**=ಈ ರೀತಿ ಮಾರುವೇಷವನ್ನು ತೊಟ್ಟು; ಧರ್ಮರಾಯನು ಕಂಕಭಟ್ಟ ಎಂಬ ಹೆಸರಿನಿಂದ ರಾಜನಾದ ವಿರಾಟರಾಯನಿಗೆ ಆಪ್ತ ಪರಿಚಾರಕನಾದನು; ಭೀಮನು ಅರಮನೆಯಲ್ಲಿ ವಲಲ ಎಂಬ ಹೆಸರಿನಿಂದ ಬಾಣಸಿಗನಾದನು; ಅರ್ಜುನನು ಅರೆವೆಣ್ಣಿನ ಉಡುಗೆ ತೊಡುಗೆಯನ್ನು ತೊಟ್ಟು ಬೃಹನ್ನಳೆಯಾಗಿ ರಾಣಿವಾಸದಲ್ಲಿ ವಿರಾಟರಾಜನ ಮಗಳಿಗೆ ನಾಟ್ಯ ವಿದ್ಯೆಯನ್ನು ಕಲಿಸುವ ಗುರುವಾದನು; ನಕುಲನು ಅಶ್ವಪಾಲಕನಾಗಿ ಮತ್ತು ಸಹದೇವನು ಗೋಪಾಲಕನಾಗಿ ರಾಜಾಶ್ರಯವನ್ನು ಪಡೆದರು. ದ್ರೌಪದಿಯು ಮಹಾರಾಣಿ ಸುದೇಷ್ಣೆಯ ರಾಣಿವಾಸದಲ್ಲಿ ಸೈರಂಧ್ರಿಯಾಗಿ ಸೇರಿಕೊಂಡಳು; ಸೈರಂಧ್ರಿ=ದಾಸಿ; ತಾವು=ಪಾಂಡವರು; ಪರಸೇವೆ=ಇತರರ ಸೇವೆ; ಮಾಸ=ತಿಂಗಳು;

ಆ **ವಿರಾಟನ ರಾಜಧಾನಿಯೊಳು ಈ ವಿಳಾಸದಿ ಮುಸುಕಿ ತಾವ್ ಪರಸೇವೆಯಲಿ ಪಾಂಡವರು ಹತ್ತು ಮಾಸವನು ಕಳೆದರು**=ವಿರಾಟನಗರಿಯಲ್ಲಿ ಈ ರೀತಿ ಪಾಂಡವರು ಮಾರುವೇಷದಲ್ಲಿ ರಾಜವಂಶದವರ ಸೇವೆಯನ್ನು ಮಾಡುತ್ತ ಹತ್ತು ತಿಂಗಳನ್ನು ಕಳೆದರು; ರಾವಣ=ಲಂಕಾ ನಗರದ ರಾಜ; ಮುನ್ನ+ಅಂದು; ಮುನ್ನ= ಮೊದಲು; ಅಂದು=ಆಗ; ಮುನ್ನಂದು=ಈ ಮೊದಲು ತ್ರೇತಾಯುಗದಲ್ಲಿ; ಸೀತಾದೇವಿ=ರಾಮನ ಹೆಂಡತಿ; ಅಳುಪು=ಬಯಸು/ಕಾಮಿಸು; ವೋಲ್=ಅಂತೆ/ ಹಾಗೆ; ಸಂಭಾವಿಸು=ಉಂಟಾಗು; ಕೀಚಕ=ಕೇಕಯ ಮತ್ತು ಮಾಲವಿ ದಂಪತಿಯ ಮಗ. ವಿರಾಟರಾಜನ ಹೆಂಡತಿಯಾದ ಸುದೇಷ್ಣೆಯ ತಮ್ಮ. ವಿರಾಟರಾಯನ ಸೇನಾಪಡೆಯ ನೇತಾರ. ಭೀಮ, ಬಲರಾಮ, ದುರ್ಯೋಧನ ಮತ್ತು ಕೀಚಕ–ಈ ನಾಲ್ವರು ಗದಾ ವಿದ್ಯೆಯಲ್ಲಿ ಸರಿಸಮಾನವಾದ ಕುಶಲತೆ ಮತ್ತು ಶಕ್ತಿಯನ್ನು ಪಡೆದವರೆಂದು ಹೆಸರಾಗಿದ್ದರು; ವಿಡಂಬ=ತೊಂದರೆ/ಸಂಕಟ; ಕೀಚಕ

ವಿಡಂಬ=ಕೀಚಕನಿಂದ ಉಂಟಾದ ಕೇಡಿನ ಪ್ರಸಂಗ; ಭೂಪಾಲ=ರಾಜ;

**ರಾವಣನು ಮುನ್ನಂದು ಸೀತಾದೇವಿಗೆ ಅಳುಪಿದ ಕಥೆಯ ವೋಲ್ ಸಂಭಾವಿಸಿದ ಕೀಚಕ ವಿಡಂಬವ ಕೇಳು ಭೂಪಾಲ**=ತ್ರೇತಾಯುಗದಲ್ಲಿ ಲಂಕೆಯ ರಾಜನಾದ ರಾವಣನು ರಾಮನ ಮಡದಿಯಾದ ಸೀತಾದೇವಿಯನ್ನು ಕಾಮಿಸಿ ಅಪಹರಿಸಿದಾಗ ನಡೆದ ದುರಂತದ ಪ್ರಸಂಗದಂತೆಯೇ, ಈ ದ್ವಾಪರಯುಗ ದಲ್ಲಿಯೂ ಕೀಚಕನ ಕಾಮುಕತನದಿಂದ ಉಂಟಾದ ಪ್ರಸಂಗವನ್ನು ನಿನಗೆ ಹೇಳುತ್ತೇನೆ;

ವಿರಾಟನ ಅರಸಿಯ ಮಂದಿರ=ಸುದೇಷ್ಣೆಯ ರಾಣಿವಾಸ; ಅತುಳ=ಹೋಲಿಕೆ ಯಿಲ್ಲದ/ಅಸಮಾನವಾದ; ಭುಜಬಲ=ತೋಳ್ಬಲ; ಓಲೈಸು=ಕಾಣಿಕೆ ಕೊಡುವುದು; ಐತರು=ಆಗಮಿಸು/ಬರುವುದು;

**ಒಂದು ದಿವಸ ವಿರಾಟನ ಅರಸಿಯ ಮಂದಿರಕ್ಕೆ ಆಕೆಯ ತಮ್ಮ ಅತುಳ ಭುಜಬಲ ಕೀಚಕನು ಓಲೈಸಲೆಂದು ಐತಂದನು**=ಒಂದು ದಿನ ಮಹಾ ಬಲಶಾಲಿಯಾದ ಕೀಚಕನು ಅಕ್ಕನಿಗೆ ಉಡುಗೊರೆಯನ್ನು ಕೊಡಲೆಂದು ರಾಣಿವಾಸಕ್ಕೆ ಬಂದನು; **ಇಕ್ಕೆಲ**=ಎರಡು ಕಡೆಗಳಲ್ಲೂ/ಅಕ್ಕಪಕ್ಕದಲ್ಲಿ; **ಸತಿ**=ಹೆಂಗಸು; **ಸಂದಣಿ**=ಗುಂಪು; **ಮೆರೆ**=ಕಂಗೊಳಿಸು; **ಅರವಿಂದ**=ತಾವರೆಯ ಹೂವು; **ವದನ**=ಮುಖ; **ಅರವಿಂದ ವದನೆ**=ಹೆಣ್ಣಿನ ಸುಂದರವಾದ ಮುಖವನ್ನು ತಾವರೆಯ ಹೂವಿಗೆ ಸಮೀಕರಿಸಿ ಬಣ್ಣಿಸಲಾಗಿದೆ; **ಹಿಂದೆ ಮುಂದೆ ಇಕ್ಕೆಲದ ಸತಿಯರ ಸಂದಣಿಯ ಮಧ್ಯದಲಿ ಮೆರೆವ ಅರವಿಂದ ವದನೆಯ ಕಂಡು**=ಸಖಿಯರ ಗುಂಪಿನ ನಡುವೆ ಕಂಗೊಳಿಸುತ್ತಿದ್ದ ಅಕ್ಕನನ್ನು ನೋಡಿ;

ಕಾಣಿಕೆ+ಕೊಟ್ಟು; ಕಾಣಿಕೆ=ಉಡುಗೊರೆ; ಪೊಡಮಡು=ಅಡ್ಡಬೀಳು/ ನಮಸ್ಕರಿಸು; ಅನುಜ=ತಮ್ಮ; **ಕಾಣಿಕೆಗೊಟ್ಟು ಪೊಡಮಟ್ಟ ಅನುಜನನು**= ಉಡುಗೊರೆಯನ್ನು ನೀಡಿ ನಮಸ್ಕರಿಸಿದ ತಮ್ಮನನ್ನು; ಅಂಗನೆ=ಹೆಂಗಸು; ತೆಗೆದು+ಅಪ್ಪಿ; ಅಪ್ಪಿ=ಆಲಿಂಗಿಸಿಕೊಂಡು; ಮನ+ತಣಿ; ಮನ=ಮನಸ್ಸು; ತಣಿ=ಆನಂದ; **ಅಂಗನೆ ತೆಗೆದಪ್ಪಿ ಮನದಣಿಯಲು**=ಅಕ್ಕನು ತಮ್ಮನನ್ನು ಆಲಂಗಿಸಿಕೊಂಡು ಆನಂದವನ್ನು ಹೊಂದಿ; ಕೆಲ=ಮಗ್ಗುಲು/ಪಕ್ಕ; ತತ್=ಆ; ಮನ್ನಿಸು=ಆದರದಿಂದ ಕಾಣು/ಪ್ರೀತಿಯಿಂದ ಸತ್ಕರಿಸು; **ಸಿಂಹಾಸನದ ಕೆಲದಲಿ ತತ್ ಸಹೋದರನ ಕುಳ್ಳಿರಿಸಿ ಮನ್ನಿಸಿದಳೈ**= ಸಿಂಹಾಸನದ ಪಕ್ಕದಲ್ಲಿ ಅವನನ್ನು ಕುಳ್ಳಿರಿಸಿ ಪ್ರೀತಿಯಿಂದ ಸತ್ಕರಿಸಿದಳು;

ತನು=ದೇಹ/ಮಯ್; ಪುಳಕ=ರೋಮಾಂಚನ/ಮಯ್ ನವಿರೇಳುವಿಕೆ;

ತಲೆದೋರು=ಕಂಡುಬರುವುದು/ಉಂಟಾಗುವುದು; ಉಬ್ಬು=ಹಿಗ್ಗು/ಹೆಮ್ಮೆ; ಸತ್ಕೃತ=ಸತ್ಕಾರ; **ತನುಪುಳಕ ತಲೆದೋರಲು ಅವನು ಉಬ್ಬಿನಲಿ ಸತ್ಕೃತನಾಗಿ=** ಅಕ್ಕನು ನೀಡಿದ ಸತ್ಕಾರದಿಂದ ಪುಳಕಗೊಂಡ ಕೀಚಕನು ಹೆಮ್ಮೆಯಿಂದ ಹಿಗ್ಗಿದನು; ಮೇಳ=ಗುಂಪು; ಅಬಲೆ=ಹೆಂಗಸು; ಕಮಳ+ಆನನೆ; ಆನನ=ಮುಖ; ಕಮಳಾನನೆ= ಕಮಲದ ಹೂವಿನಂತಹ ಮುಖವುಳ್ಳವಳು/ಸುಂದರಿ; **ಸುದೇಷ್ಣೆಯ ಮೇಳದ ಅಬಲೆಯರ ಕಮಳಾನನೆಯರನು ಕಂಡನು**=ರಾಣಿವಾಸದಲ್ಲಿ ಅಕ್ಕನನ್ನು ಸುತ್ತುವರಿದಿದ್ದ ಗುಂಪಿನಲ್ಲಿ ಸುಂದರಿಯರಾದ ಸಖಿಯರನ್ನು ಕಂಡನು; ಅವಯವ= ದೇಹ/ಮಯ್; ಪರಿಮಳ=ಕಂಪು/ಸುವಾಸನೆ; ಪಸರ= ಹಬ್ಬುವಿಕೆ/ಹರಡುವಿಕೆ; ಕವಿ=ಮುತ್ತು/ಎರಗು; ಸಾರ=ಉತ್ತಮವಾದ/ಸೊಗಸಾದ; ಸಂಗೀತ=ಹಾಡು;

**ಅವಯವದ ಪರಿಮಳದ ಪಸರಕೆ ಕವಿವ ತುಂಬಿಯ ಸಾರ ಸಂಗೀತವನು ಕೇಳುತ**=ರಾಣಿವಾಸದಲ್ಲಿದ್ದ ಹೆಂಗಸರು ಮುಡಿದಿದ್ದ ಹೂವುಗಳ ಕಂಪನ್ನು ಸವಿಯುತ್ತ ಮುತ್ತಿಕೊಂಡಿದ್ದ ತುಂಬಿಗಳ ಜೇಂಕಾರವನ್ನು ಕೇಳುತ್ತ; **ಅವರ ಮಧ್ಯದಲಿ**=ಸುತ್ತುವರಿದಿದ್ದ ಸಖಿಯರ ಗುಂಪಿನಲ್ಲಿ; **ಜಾಹ್ನವಿ**=ಗಂಗಾ ನದಿ; **ನದಿಗಳೊಳ್ ಜಾಹ್ನವಿಯ**=ನದಿಗಳಲ್ಲಿ ಗಂಗಾನದಿಯಂತೆ;

**ಅಮಲ**=ಮಲಿನತೆಯಿಲ್ಲದ/ಶುಚಿಯಾದ; **ತಾರಾ**=ನಕ್ಷತ್ರ/ಚುಕ್ಕಿ; **ನಿವಹ**= ಗುಂಪು; ವೋಲ್=ಅಂತೆ/ಹಾಗೆ; **ಅಮಲ ತಾರಾ ನಿವಹದಲಿ ರೋಹಿಣಿಯವೋಲ್** =ಗಗನದಲ್ಲಿ ಮಿನುಗುತ್ತಿರುವ ಚುಕ್ಕಿಗಳ ಗುಂಪಿನಲ್ಲಿ ರೋಹಿಣಿ ನಕ್ಷತ್ರದಂತೆ; **ಸುರ**=ದೇವತೆ; **ಸುರ ಯುವತಿಯರಲಿ ಊರ್ವಶಿಯವೋಲ್**=ದೇವಲೋಕದ ತರುಣಿಯರಲ್ಲಿ ಊರ್ವಶಿಯಂತೆ; ಪಾಂಚಾಲ **ನಂದನೆ**=ಪಾಂಚಾಲ ದೇಶದ ರಾಜನಾದ ದ್ರುಪದನ ಮಗಳು ದ್ರೌಪದಿ;

**ಪಾಂಚಾಲ ನಂದನೆಯ ಅವ ಕಂಡನು**=ಆ ಗುಂಪಿನಲ್ಲಿ ಎದ್ದುಕಾಣುವಂತೆ ಕಂಗೊಳಿಸುತ್ತಿದ್ದ ಸುಂದರ ರೂಪಿನ ದ್ರೌಪದಿಯನ್ನು ಕೀಚಕನು ನೋಡಿದನು; ಅಂಗವಟ್ಟ=ಮಯ್ ಕಟ್ಟು; ಒದವು=ನೆಟ್ಟನೆಯ ನೋಟ/ನಾಟು; **ಅವನು ಮೊದಲೊಳು ಅವಳ ಅಂಗವಟ್ಟವನು ಒದವಿ ನೋಡಿದೊಡೆ**=ಕೀಚಕನು ಮೊದಲು ಸೈರಂಧ್ರಿಯ ಮಯ್ ಕಟ್ಟಿನ ಚೆಲುವನ್ನು ನೆಟ್ಟನೆಯ ನೋಟದಿಂದ ನೋಡತೊಡಗಿದಾಗ; ಗಾಢ=ಅತಿಶಯ/ಹೆಚ್ಚಳ; **ಅಲ್ಲಿಯೇ ಗಾಢದಲಿ ನೆಟ್ಟವು=** ಅವಳ ಮಯ್ ಕಟ್ಟಿನ ಅಂದಚೆಂದವನ್ನೇ ಸವಿಯುತ್ತ ಕೀಚಕನ ಕಣ್ಣುಗಳು ಅಲ್ಲಿಯೇ ನೆಟ್ಟವು. ಈಗ ಕೀಚಕ ಅತ್ತಿತ್ತ ಯಾರನ್ನೂ ನೋಡುತ್ತಿಲ್ಲ. ಯಾವುದನ್ನೂ ಗಮನಿಸುತ್ತಿಲ್ಲ; ಆಲಿ=ಕಣ್ಣು/ಕಣ್ಣು ಗುಡ್ಡೆ; ಅಲುಗು=ಅತ್ತಿತ್ತ ಆಡಿಸು; ಅರಿದು=ಅಸಾಧ್ಯ/ಆಗದು;

**ಆಲಿಗಳನು ಅಲುಗಿ ಕೀಳಲು ಅರಿದಾಯ್ತು**=ಸೈರಂಧ್ರಿಯನ್ನಲ್ಲದೇ ಮತ್ತೊಬ್ಬರ ಕಡೆಗೆ ಕಣ್ಣುಗಳನ್ನು ತಿರುಗಿಸಲು ಆಗುತ್ತಿಲ್ಲ. ಅವಳಲ್ಲಿಯೇ ಕೀಚಕನ ದಿಟ್ಟಿ ನಾಟಿಕೊಂಡಿದೆ; ಮದನ=ಕಾಮದೇವ. ಗಂಡು ಹೆಣ್ಣುಗಳ ಮಯ್ ಮನದಲ್ಲಿ ಕಾಮದ ಒಳಮಿಡಿತಗಳನ್ನು ಮೂಡಿಸಿ, ಅವರನ್ನು ಜತೆಗೂಡಿಸುವ ಕಾಮದೇವ. ವಿದ್ಯೆಗೆ ಶಾರದೆ, ಹಣಕ್ಕೆ ಲಕ್ಷ್ಮಿ ಎಂಬ ಹೆಸರಿನ ದೇವತೆಗಳು ಇರುವಂತೆಯೇ ಕಾಮಕ್ಕೆ ಮನ್ಮಥ/ಮದನ ಎಂಬ ಹೆಸರಿನ ದೇವತೆಯನ್ನು ಜನಮನದಲ್ಲಿ ಕಲ್ಪಿಸಿ ಕೊಳ್ಳಲಾಗಿದೆ; ಮಸೆ+ತೋರಿದನು; ಮಸೆ=ಉದ್ರೇಕ/ಆವೇಶ; ಮಸೆದೋರಿದನು= ಉದ್ರೇಕಗೊಳಿಸಿದನು; **ಮದನ ಮಸೆದೋರಿದನು**=ಕೀಚಕನ ಮಯ್ ಮನದಲ್ಲಿ ಕಾಮದ ಒಳಮಿಡಿತಗಳು ಕೆರಳಿದವು; ಹೂ+ಕಣೆ; ಕಣೆ= ಬಾಣ; ಹೂಗಣೆ= ಮದನನು ಹೆಣ್ಣುಗಂಡುಗಳ ಮಯ್ ಮನದಲ್ಲಿ ಕಾಮವನ್ನು ಮೂಡಿಸಿ, ಅವರನ್ನು ಉದ್ರೇಕಗೊಳಿಸಲೆಂದು ಹೂವಿನ ಬಾಣವನ್ನು ವ್ಯಕ್ತಿಗಳ ಎದೆಗೆ ಬಿಡುತ್ತಾನೆ ಎಂಬ ಒಂದು ಕಲ್ಪನೆಯಿದೆ; ತಾಗು=ಚುಚ್ಚು/ತಗಲು/ಮುಟ್ಟು;

**ಹೂಗಣೆ ಹೃದಯವನು ತಾಗಿದುದು**=ಹೂಬಾಣವು ಕೀಚಕನ ಎದೆಗೆ ನಾಟಿಕೊಂಡಿತು. ಅಂದರೆ ಈಗ ಕೀಚಕನು ಮಯ್ ಮನದಲ್ಲಿ ಕಾಮದ ಒಳಮಿಡಿತಗಳು ಮೂಡತೊಡಗಿದವು; **ಹರ ಹರ**=ಶಿವ ಶಿವ. ಇದೊಂದು ನುಡಿಗಟ್ಟು. ಅಚ್ಚರಿಯನ್ನು ಇಲ್ಲವೇ ಗಾಸಿಯನ್ನು ಉಂಟುಮಾಡುವ ಸಂಗತಿ ಯೊಂದನ್ನು ಹೇಳುವಾಗ, ಶಿವನ ಹೆಸರನ್ನು ಎರಡು ಬಾರಿ ಹೇಳುವ ನುಡಿಗಟ್ಟನ್ನು ಬಳಸಲಾಗುತ್ತದೆ; ಖಳ=ನೀಚ/ಕೇಡಿ; ಹಮ್ಮೈಸು=ಎಚ್ಚರತಪ್ಪು/ಮಯ್ ಮರೆ; **ಹರ ಹರ...ಖಳನು ಒಂದು ನಿಮಿಷದಲಿ ಹೆದರಿದನು ಹಮ್ಮೈಸಿದನು**= ಸೈರಂಧ್ರಿಯನ್ನು ಕಂಡಕೂಡಲೇ ಈ ಬಗೆಯ ಕಾಮದ ಪರಿತಾಪಕ್ಕೆ ತನ್ನ ಮಯ್ ಮನ ಒಳಗಾದುದನ್ನು ಕಂಡು ಕೀಚಕನು ಒಂದು ಅರೆಗಳಿಗೆ ಹೆದರಿದನು ಎಚ್ಚರತಪ್ಪಿದಂತಾದನು; **ಎನೆ**=ಎನ್ನಲು; **ಕೈಗೂಡು**=ಜತೆಗೂಡು; ಎಚ್ಚು=ಬಾಣ ಪ್ರಯೋಗ ಮಾಡು;

**ನಿಂದು ನೋಡಿದ ಕಾಮ 'ದ್ರೌಪದಿಯ ಮೊಗದ ಅಂದವನು ಕಂಡಾಗ ಕೀಚಕ ನೊಂದನು' ಎನೆ ಮೊಗ ತೆಗೆಯಲು ಕೈಗೂಡಿ ಎಚ್ಚನು**=ಇದೊಂದು ಕಲ್ಪನೆ. ಕೀಚಕನ ಕಾಮದ ನೋಟವನ್ನು ಗಮನಿಸಿದ ಕಾಮದೇವನು "ದ್ರೌಪದಿಯ ಅಂದವನ್ನು ಕಂಡು ಕೀಚಕನು ಕಾಮಕ್ಕೆ ವಶನಾಗಿ ನೊಂದಿದ್ದಾನೆ" ಎನ್ನುತ್ತ, ಕೀಚಕನ ಕಾಮವನ್ನು ಇಮ್ಮಡಿಗೊಳಿಸುವಂತೆ ಮತ್ತೊಂದು ಹೂಬಾಣವನ್ನು ಕೀಚಕನ ಮೇಲೆ ಪ್ರಯೋಗಿಸಿದನು; **ಅಂದು ಕೀಚಕ ಬೆರಗಾದನು**=ಸೈರಂಧ್ರಿಯ ರೂಪದ ಚೆಲುವನ್ನು ಕಂಡು ಕೀಚಕನು ಅಚ್ಚರಿಗೊಂಡನು; ವಿಳಾಸಿನಿ=ದಾಸಿ;

ತಳೆ=ಹಿಡಿದುಕೊಳ್ಳು/ವಶಪಡಿಸಿಕೊಳ್ಳು; ಕದಪು=ಗಲ್ಲ; ಕರತಳ=ಅಂಗಯ್; ಚಾಚು=ಒಡ್ಡು; **ಇಂದು ವಿಳಾಸಿನಿ ಮನವನು ತಳೆದಳು ಎಂದು ಭಾವಿಸಿ ಕದಪಿನಲಿ ಕರತಳವ ಚಾಚಿದನು**=ಇಂದು ಈ ದಾಸಿಯು ನನ್ನ ಮನಸ್ಸನ್ನು ವಶಪಡಿಸಿ ಕೊಂಡಳು ಎಂದುಕೊಂಡು, ತನ್ನ ಗಲ್ಲಕ್ಕೆ ಅಂಗಯ್ ಅನ್ನು ಆಸರೆಯಾಗಿ ಒಡ್ಡಿಕೊಂಡು, ಅವಳ ಬಗ್ಗೆ ಕುತೂಹಲಗೊಂಡನು;

**ತಿಳಿ, ಇವಳಾರು**=ಇವಳು ಯಾರು ಎಂಬುದನ್ನು ತಿಳಿದುಕೊಳ್ಳಬೇಕು; ಮೂಜಗ=ಮೂರು+ಜಗ; ಮೂಜಗ=ಜನಮನದ ಕಲ್ಪನೆಯಲ್ಲಿರುವ ದೇವಲೋಕ, ಭೂಲೋಕ, ಪಾತಾಳಲೋಕ ಎಂಬ ಮೂರು ಜಗತ್ತುಗಳು; ಮೋಹ=ಮರುಳುಗೊಳಿಸುವಿಕೆ/ಸೆಳೆತ/ಆಕರ್ಷಣೆ; ತಿಲಕ=ಉತ್ತಮನಾದ ವ್ಯಕ್ತಿ; **ಇವಳು ಮೂಜಗವ ಮೋಹಿಪ ತಿಲಕವೋ**=ಮೂಲೋಕವನ್ನೇ ತನ್ನೆಡೆಗೆ ಸೆಳೆದು ಕೊಳ್ಳುವಂತಹ ಮಹಾ ಸುಂದರಿಯೋ; ಕಳ=ರಣರಂಗ; ಕಳನ ಭಾಷೆ= ರಣರಂಗದ ನುಡಿ; ಮಾಸಾಳು=ದೊಡ್ಡ ಈಟಿ; **ಕಾಮಂಗೆ ಕಟ್ಟಿದ ಕಳನ ಭಾಷೆಗೆ ನಿಂದ ಮಾಸಾಳೋ**=ಕಾಮದೇವನನ್ನು ರಣರಂಗದಲ್ಲಿ ಎದುರಿಸಲು ಕಟ್ಟಿರುವ ದೊಡ್ಡ ಈಟಿಯೋ; ಅಂದರೆ ಸೈರಂಧ್ರಿಯ ಚೆಲುವು ಕೀಚಕನ ಮನಸ್ಸನ್ನು ಈಟಿಯಂತೆ ಇರಿಯಲಿದೆ; ಮಹಾದೇವ=ಶಿವ/ಈಶ್ವರ; ಅಚ್ಚರಿ ಇಲ್ಲವೇ ಸಂಕಟದ ಸನ್ನಿವೇಶದಲ್ಲಿ 'ಹರ ಹರ' ಶಿವ ಶಿವ.... ಎಂದು ತೆಗೆಯುವ ಉದ್ಗಾರ;

ಕೊಲೆಗಡಿಗ=ಕೊಲೆ ಮಾಡುವವನು; ಕಂದರ್ಪಕ=ಮದನ/ಮನ್ಮಥ/ ಕಾಮದೇವ; **ಕೊಲೆಗಡಿಗ ಕಂದರ್ಪಕ**=ವ್ಯಕ್ತಿಗಳ ಮಯ್ ಮನದಲ್ಲಿ ಕಾಮವನ್ನು ಕೆರಳಿಸುವ ಕಾಮದೇವ; ಕೂರ್+ಅಲಗು; ಕೂರ್=ಹರಿತವಾದ; ಅಲಗು=ಬಾಣ; ಕೂರಲಗು=ಹರಿತವಾದ ಬಾಣ; **ಕಂದರ್ಪಕನ ಕೂರಲಗೊ**=ಮನ್ಮಥನ ಹರಿತವಾದ ಬಾಣವೋ; **ಮದನನ ಸೊಕ್ಕಿದಾನೆಯೊ**=ಮದನನ ಸೊಕ್ಕಿದ ಆನೆಯೋ; **ನಳಿನ**= ತಾವರೆಯ ಹೂವು; ನಳಿನಮುಖಿ=ಸುಂದರಿ; **ನಳಿನಮುಖಿ ಇವಳಾರ ಸತಿ**=ಈ ಸುಂದರಿಯು ಯಾರ ಸತಿಯಾಗಿರಬಹುದು; ಅಳುಪು=ಬಯಸಿ/ಇಚ್ಚಿಸಿ; **ಎಂದು ಅಳುಪಿ ನೋಡಿದನು**=ಅವಳನ್ನು ಪಡೆಯಬೇಕೆಂಬ ಬಯಕೆಯಿಂದ ಮತ್ತೆ ಮತ್ತೆ ಸೈರಂಧ್ರಿಯತ್ತ ನೋಡಿದನು;

ಕೆಡಹು=ನಾಶಮಾಡು; ಜಲಜ=ತಾವರೆ; ವಿಶಿಖ=ಬಾಣ; ಜಲಜವಿಶಿಖ=ತಾವರೆಯ ಹೂವಿನ ಬಾಣವುಳ್ಳ ಮನ್ಮಥ; ಬಿಗಿ=ರಚಿಸು/ಬಿಗಿ; ಬಲೆ+ಇವಳು+ಅಲ್ಲಲೇ; ಅಲ್ಲಲೇ=ಅಲ್ಲವೇ; **ಜಗವ ಕೆಡಹಲು ಜಲಜವಿಶಿಖನು ಬಿಗಿದ ಬಲೆಯಿವಳಲ್ಲಲೇ**=ಜಗತ್ತಿನ ಗಂಡಸರನ್ನು ಕಾಮದ ಒಳಮಿಡಿತಗಳಲ್ಲಿ ಸಿಲುಕುವಂತೆ ಮಾಡಲು ಮದನನು ನೆಯ್ದಿರುವ ಬಲೆಯು ಇವಳೇ ಅಲ್ಲವೇ;

ಯೋಗಿ/ಯತಿ=ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಂಡಿರುವ ತಪಸ್ವಿ; ಎಸು=ಬಾಣ ಪ್ರಯೋಗ ಮಾಡು;

**ಮಸೆ**=ಉಜ್ಜು/ಹರಿತಗೊಳಿಸು/ಚೂಪುಮಾಡು; **ಯೋಗಿಗಳ ಯತಿಗಳನು ಎಸಲು ಕಾಮನು ಮಸೆದ ಕೂರಲಗು**=ಇಂದ್ರಿಯನಿಗ್ರಹವನ್ನು ಮಾಡಿಕೊಂಡಿರುವ ತಪಸ್ವಿಗಳ ಮನದಲ್ಲಿ ಕಾಮದ ಒಳಮಿಡಿತಗಳನ್ನು ಕೆರಳಿಸುವುದಕ್ಕಾಗಿ ಮನ್ಮಥನು ಹರಿತಗೊಳಿಸಿ ಬಿಟ್ಟಿರುವ ಬಾಣವು ಇವಳೇ ಆಗಿದ್ದಾಳೆ; ಮುಗುದ=ತಿಳಿಗೇಡಿ; **ಕೀಚಕ ಮುಗುದನಾದನು**=ಕೀಚಕನು ಅರಿವನ್ನು ಕಳೆದುಕೊಂಡನು; ಅಂಬು= ಬಾಣ; ಉಗಿ=ಚುಚ್ಚು; **ಕಾಮನ ಅಂಬುಗಳು ಎದೆಯಲಿ ಉಗಿದವು**=ಮದನನ ಬಾಣಗಳು ಎದೆಯಲ್ಲಿ ನಾಟಿಕೊಂಡವು. ಇದೊಂದು ರೂಪಕ. ಕೀಚಕನ ಮಯ್ ಮನದಲ್ಲಿ ಕಾಮದ ಬೇಗೆ ಹೆಚ್ಚಾಗತೊಡಗಿತು; ಪಾತಕ=ಕೆಟ್ಟ ಕೆಲಸ;

**ನಟ್ಟ ದೃಷ್ಟಿಯ ತೆಗೆಯಲಾಗದೆ ಸೋತು ಪಾತಕವ ನೆನೆದ**=ಸೈರಂಧ್ರಿಯ ರೂಪ ಸಂಪತ್ತಿನಲ್ಲಿ ನಟ್ಟ ನೋಟವನ್ನು ತೆಗೆಯಲಾಗದೆ, ಕಾಮಕ್ಕೆ ವಶನಾಗಿ ಕೆಟ್ಟದ್ದನ್ನು ಮಾಡಲು ಆಲೋಚಿಸಿದ; **ಸೂರೆ**=ಕೊಳ್ಳೆ/ಲೂಟಿ; **ಚಿತ್ತ**=ಮನಸ್ಸು; **ಸೂರೆ ಹೋಯಿತು ಚಿತ್ತ**=ಮನಸ್ಸೆಲ್ಲವೂ ಸೈರಂಧ್ರಿಯಲ್ಲಿಯೇ ಮಗ್ನವಾಯಿತು; **ಕಂಗಳು ಮಾರುಹೋದವು**=ಕಣ್ಣುಗಳು ಅವಳತ್ತಲೇ ವಶವಾದುವು; ಖಳ=ಕೇಡಿ/**ನೀಚ; ಖಳನ ಧೈರ್ಯವು ತೂರಿ ಪೋದುದು**=ನೀಚನಾದ ಕೀಚಕನ ಕೆಚ್ಚು ಹಾರಿ ಹೋಯಿತು; ಕರಣ=ದೇಹ/ಮಯ್; ಬೀಡು=ನೆಲೆ; **ಕರಣದಲಿ ಕಳವಳದ ಬೀಡಾಯ್ತು**=ದೇಹದಲ್ಲಿ ಕಳವಳವು ನೆಲೆಗೊಂಡಿತು; ಮೀರಿ=ಅತಿಕ್ರಮಿಸಿ; ಪೊಗು=ಒಳಸೇರು; ಅಂಗಜ=ಮದನ; ಶರ=ಬಾಣ; ಡೋರು=ಡೊಗರು/ಪೊಟರೆ.

**ಮೀರಿ ಪೊಗುವ ಅಂಗಜನ ಶರದಲಿ ಹೃದಯ ಡೋರುವೋಯಿತು**= ಅತಿಕ್ರಮಿಸಿ ಒಳನುಗ್ಗುತ್ತಿರುವ ಮದನನ ಬಾಣದಿಂದ ಕೀಚಕನ ಎದೆಯಲ್ಲಿ ಪೊಟರೆಯುಂಟಾಯಿತು. ಅಂದರೆ ಕೀಚಕನ ಮಯ್ ಮನದ ಮೇಲೆ ಹೆಚ್ಚಿನ ಗಾಸಿಯುಂಟಾಯಿತು: ಇರಿ+ಕಾರೆ; **ಇರಿ**=ತಿವಿ/ಚುಚ್ಚು; **ಇರಿಗಾರೆ**=ಚುಚ್ಚುವವಳು/ ಇರಿದು ಕೊಲ್ಲುವವಳು; **ಕಣ್ ಇರಿಗಾರೆ ಇವಳಾರು**=ನನ್ನ ಕಣ್ಣುಗಳನ್ನೇ ಚುಚ್ಚಿ ಗಾಸಿಗೊಳಿಸುವಂತಿರುವ ಇವಳು ಯಾರು?; ಗಜಬಜಿಸು=ಆತಂಕಪಡು/ ಗೊಂದಲಕ್ಕೆ ಒಳಗಾಗಿ ಚಡಪಡಿಸು; **ಎನುತ ನಿಮಿಷದಲಿ ಗಜಬಜಿಸಿದನು**=ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ ಕೆಲವೇ ಗಳಿಗೆಯಲ್ಲಿ ಆತಂಕಕ್ಕೆ ಗುರಿಯಾದನು; ತನ್ನ ಮಯ್ ಮನದಲ್ಲಿ ತುಡಿಯುತ್ತಿರುವ ಕಾಮದ ಒಳಮಿಡಿತಗಳಿಂದ ಕೀಚಕನು ಕಂಗಾಲಾದನು; ರತಿ=ಮನ್ಮಥನ ಮಡದಿ; ಅಂತು+ಇರಲಿ; ಅಂತು=ಹಾಗೆ; ಅಂತಿರಲಿ=ಹಾಗಿರಲಿ. ಅವು ಲೆಕ್ಕಕ್ಕೆ ಬರುವುದಿಲ್ಲ;

ಸಿರಿ=ಸಂಪತ್ತು; ಬೊಮ್ಮ=ಬ್ರಹ್ಮ; ಬೊಮ್ಮನ ಸತಿ=ಬ್ರಹ್ಮನ ಹೆಂಡತಿ ಸರಸ್ವತಿ; ಸೊಬಗು=ಚೆಲುವು; ಆ ಬಾಲಕಿ=ಸೈರಂಧ್ರಿ; ಪ್ರತಿ=ಸಮಾನ/ಸಾಟಿ/ಬದಲು; **ರತಿಯ ಚೆಲುವು ಅಂತಿರಲಿ...ಸಿರಿ ಪಾರ್ವತಿಯ ರೂಪು ಅಂತಿರಲಿ...ಬೊಮ್ಮನ ಸತಿಯ ಸೊಬಗು ಅಂತಿರಲಿ...ಈ ಬಾಲಕಿಯ ರೂಪಿಂಗೆ ಪ್ರತಿಯ ಕಾಣೆನು**= ಸೈರಂಧ್ರಿಯ ರೂಪದ ಮುಂದೆ ದೇವಲೋಕದ ಸುರಸುಂದರಿಯರಾದ ರತಿದೇವಿಯ ಪಾರ್ವತಿಯ ಸರಸ್ವತಿಯ ಚೆಲುವು ಲೆಕ್ಕಕ್ಕೆ ಬಾರದು; ಅಂದರೆ ಸೈರಂಧ್ರಿಯ ರೂಪಕ್ಕೆ ಸಮಾನರಾದವರನ್ನು ನಾನು ಕಾಣೆನು; ಮಡಿ=ಪಟ್ಟು/ಸಲ; ವಿಭ್ರಮ= ಅಂದ/ಬೆಡಗು/ಒಯ್ಯಾರ; ಎನ್ನಯ=ನನ್ನ; ಐದಿತು=ಹೊಕ್ಕಿತು; **ಪಾಂಡವರ ದುರುಪತಿಯ ರೂಪಿಂಗೆ ಐದು ಮಡಿ. ಆ ಸತಿಯ ವಿಭ್ರಮವು ಎನ್ನಯ ಮನವನು ಐದಿತು ಎನುತ ಇರ್ದ**=ಪಾಂಡವರ ಮಡದಿ ದುರುಪತಿಗಿಂತಲೂ ಅಯ್ದು ಪಟ್ಟು ರೂಪವಂತೆಯಾದ ಈ ಸೈರಂಧ್ರಿಯ ಅಂದಚೆಂದವು ನನ್ನ ಮನಸ್ಸನ್ನು ಆವರಿಸಿ ಕೊಂಡಿದೆ ಎಂದು ಕೀಚಕನು ತನ್ನ ಮನದಲ್ಲಿಯೇ ಅಂದುಕೊಳ್ಳತೊಡಗಿದ;

**ಅರಿವು ತಲೆಕೆಳಗಾಯ್ತು**=ಯಾವುದನ್ನು ಮಾಡಬೇಕು–ಯಾವುದನ್ನು ಮಾಡಬಾರದು ಎಂಬ ವಿವೇಕವು ಸಂಪೂರ್ಣವಾಗಿ ನಾಶವಾಯಿತು; ನಿರಿಗೆ=ನಡವಳಿಕೆ/ಇರುವಿಕೆ; ಎಡೆ=ಅವಕಾಶ; **ಧೈರ್ಯದ ನಿರಿಗೆ ನಗೆಗೆ ಎಡೆಯಾಯ್ತು**=ಕೀಚಕನ ಕೆಚ್ಚಿನ ನಡವಳಿಕೆಯು ಮರೆಯಾಗಿ, ಕಾಮುಕನಾದ ಕೀಚಕನ ನಡವಳಿಕೆಯು ಪರಿಹಾಸ್ಯಕ್ಕೆ ಗುರಿಯಾಯಿತು; ಲಜ್ಜೆ=ನಾಚಿಕೆ/ ಸಂಕೋಚ; ಹೊರಿಗೆ=ಹೊಣೆಗಾರಿಕೆ/ಜವಾಬ್ದಾರಿ; ಬರಿ+ತೊರೆ; ಬರಿದೊರೆ= ನೀರಿಲ್ಲದೆ ಬರಿದಾಗಿರುವ ಹೊಳೆ/ನಾಶ/ಅಳಿವು; **ಲಜ್ಜೆಯ ಹೊರಿಗೆ ಬರಿದೊರೆಯಾಯ್ತು**=ಕಾಮುಕನಾದ ಕೀಚಕನು ಲಜ್ಜಾಹೀನನಾದನು. ಕೀಚಕನ ವೀರತನದ ವ್ಯಕ್ತಿತ್ವವು ನಾಶಗೊಂಡಿತು; ಕರಿಮೊಳೆ=ಸುಟ್ಟುಹೋದ ಮೊಳಕೆ; ಕರಿಮೊಳೆವೋಯ್ತು=ಮೊಳಕೆಯಲ್ಲಿಯೇ ಸೀದುಹೋಗುವುದು; **ಭಯ ಬೀಜ ಕರಿಮೊಳೆವೋಯ್ತು**=ಕೆಟ್ಟದ್ದನ್ನು ಮಾಡಬಾರದು ಎಂಬ ಹೆದರಿಕೆಯು ನಾಶವಾಯಿತು;

ಮರವು=ವಿವೇಕಶೂನ್ಯತೆ; ಗರಿಗಟ್ಟು=ಬಲವಾಗು/ಶಕ್ತಿಯುತವಾಗು; **ಮರವೆ ಗರಿಗಟ್ಟಿತು**=ವಿವೇಕವನ್ನು ಸಂಪೂರ್ಣವಾಗಿ ಕಳೆದುಕೊಂಡನು; ಕಾಮಕ್ಕೆ ವಶನಾದ ವ್ಯಕ್ತಿಯು ಸಮಾಜದ ನೀತಿನಿಯಮಗಳನ್ನು ಲೆಕ್ಕಿಸದೆ ವರ್ತಿಸ ತೊಡಗಿದಾಗ, ಅವನ ವ್ಯಕ್ತಿತ್ವ ಕುಗ್ಗುತ್ತದೆ. ಜನರಿಂದ ಟೀಕೆ ಮತ್ತು ಅಪಹಾಸ್ಯಕ್ಕೆ ಗುರಿಯಾಗುತ್ತಾನೆ ಎಂಬುದನ್ನು ಈ ರೂಪಕಗಳು ಸೂಚಿಸುತ್ತಿವೆ; ಮನೋಭವ= ಮನ್ಮಥ; ಇರಿ+ಕೆಲಸ; ಇರಿಗೆಲಸ=ಕೊಲ್ಲುವ ಕೆಲಸ; ಬಲುಹು+ ಆಯ್ತು; ಬಲುಹು=ಶಕ್ತಿ;

**ಮನೋಭವನ ಇರಿಗೆಲಸ ಬಲುಹಾಯ್ತು**=ಕಾಮುಕತನಕ್ಕೆ ಪ್ರಚೋದನೆಯನ್ನು ನೀಡುವ ಮದನನ ಶಕ್ತಿಯು ಹೆಚ್ಚಾಯಿತು; ಅಂದರೆ ಕೀಚಕನ ಮಯ್ ಮನದಲ್ಲಿ ಕಾಮ ಉದ್ರಿಕ್ತಗೊಂಡು, ಅವನ ಮಯ್ ಮನ ನಿಯಂತ್ರಣವನ್ನು ಕಳೆದು ಕೊಳ್ಳುತ್ತಿವೆ; ಆತನ=ಕೀಚಕನ; ತನು=ದೇಹ/ಮಯ್; ಅಂತಸ್ತಾಪ=ಒಳಗಿನ ಸಂಕಟ/ವೇದನೆ; ಏಳ್ಗೆ=ಹೆಚ್ಚಳ; ಹೊಗಳು=ಬಣ್ಣಿಸು/ವಿವರಿಸು; ಅರಿಯೆನು=ತಿಳಿಯೆನು; **ಆತನ ತನುವಿನ ಅಂತಸ್ತಾಪದ ಏಳ್ಗೆಯನು ಹೊಗಳುವಡೆ ಅರಿಯೆನು**=ಕೀಚಕನ ಮಯ್ಯಲ್ಲಿ ಈಗ ಉಂಟಾಗುತ್ತಿರುವ ಕಾಮದ ತುಡಿತದ ಉದ್ವೇಗವನ್ನು ವಿವರಿಸಲು ನನ್ನಿಂದ ಆಗುತ್ತಿಲ್ಲ ಎಂದು ಮಹಾಭಾರತದ ಕತೆಯನ್ನು ಜನಮೇಜಯ ರಾಜನಿಗೆ ಹೇಳುತ್ತಿರುವ ವೈಶಂಪಾಯನ ಮುನಿಯು ಉದ್ಗಾರವನ್ನು ಎಳೆದಿದ್ದಾರೆ;

**ಲಜ್ಜೆ ಬೀಳುಗೊಂಡುದು**=ನಾಚಿಕೆ ಇಲ್ಲವಾಯಿತು; **ಮಹಿಮೆಯ ಕೀಳು ಕಳಚಿತು**=ಕೀಚಕನು ಮಹಾಬಲಶಾಲಿ ಎಂಬ ಉನ್ನತವಾದ ಹೆಸರು ಕಳಚಿ ಬಿದ್ದಿತು; **ದ್ರುಪದ ತನುಜೆ**=ದ್ರುಪದನ ಮಗಳಾದ ದ್ರೌಪದಿಯನ್ನು; **ಆಲಿ**=ಕಣ್ಣು; **ದ್ರುಪದ ತನುಜೆಯನು ಆಲಿಯಲಿ ನುಂಗಿದನು**=ಸೈರಂಧ್ರಿಯನ್ನು ಕಣ್ಣುಗಳಲ್ಲಿಯೇ ನುಂಗಿದನು. ಅಂದರೆ ಅತಿ ಕಾಮುಕತನದ ನೋಟದಿಂದ ಅವಳತ್ತಲೇ ನೋಡತೊಡಗಿದನು; ತನ್ನ ಅಕ್ಕ ಸುದೇಷ್ಣೆಯಾಗಲಿ ಇಲ್ಲವೇ ಅಲ್ಲಿರುವ ದಾಸಿಯರಾಗಲಿ ತನ್ನ ಬಗ್ಗೆ ಏನೆಂದುಕೊಳ್ಳುತ್ತಾರೆ ಎಂಬ ಯಾವ ಆತಂಕವಾಗಲಿ ಇಲ್ಲವೇ ನಾಚಿಕೆಯಾಗಲಿ ಈಗ ಕೀಚಕನಲ್ಲಿ ಇಲ್ಲವಾಗಿದೆ. ಏಕೆಂದರೆ ಕಾಮದ ಒಳಮಿಡಿತಗಳು ಅವನನ್ನು ಕುರುಡನನ್ನಾಗಿ ಮಾಡಿವೆ;

**ಮನದಲಿ ಸತಿಯ ಸೆರೆವಿಡಿದು**=ಮನದಲ್ಲಿ ಆ ಸೈರಂಧ್ರಿಯನ್ನೇ ತುಂಬಿಕೊಂಡು; ಬಿನ್ನಹ=ಮನವಿ/ಅರಿಕೆ; **ಅಕ್ಕ, ಬಿನ್ನಹವು ಕೇಳು**=ಅಕ್ಕ, ನಿನ್ನಲ್ಲಿ ಒಂದು ಅರಿಕೆ; ನಿಮ್ಮ+ಅಡಿ; ಅಡಿ=ಆಶ್ರಯ; ನಿಮ್ಮಡಿ=ನಿಮ್ಮ ಆಶ್ರಯದಲ್ಲಿರುವ/ನಿಮ್ಮ ರಾಣಿವಾಸದಲ್ಲಿರುವ; ಓಲೆಕಾತಿ=ಸೇವಕಿ/ದಾಸಿ/ಊಳಿಗದವಳು; ಮೀಟು=ಅಂದ/ಸೊಗಸು/ಸೊಬಗು;

**ಮೇಲುಗೈ**=ಹೆಚ್ಚುಗಾರಿಕೆ/ಹಿರಿಮೆ/ಮಿಗಿಲು/ಮಿಗಿಲಾದ ವ್ಯಕ್ತಿ; **ನಿಮ್ಮಡಿ ಓಲೆಕಾತಿಯರೊಳಗೆ ಮೀಟಿನ ಮೇಲುಗೈ ಇವಳು ಆವಳು**=ನಿಮ್ಮ ಬಳಿಯಿರುವ ದಾಸಿಯರಲ್ಲಿ ಎಲ್ಲರಿಗಿಂತಲೂ ಸುಂದರಿಯಾದ ಈಕೆ ಯಾರು ;

ಗಂಧರ್ವ=ದೇವತೆ; ರಮಣಿ=ಹೆಂಡತಿ; **ಈಕೆ ಗಂಧರ್ವರ ರಮಣಿ**=ಈಕೆಯು ಗಂಧರ್ವರ ಹೆಂಡತಿ; ನಮ್ಮಾಕೆ+ಆಗಿರೆ; ನಮ್ಮಾಕೆ=ನಮ್ಮ ರಾಣಿವಾಸದ ದಾಸಿಯರಲ್ಲಿ ಒಬ್ಬಳು; ಮಾನ್ಯ=ಮನ್ನಣೆಗೆ ಯೋಗ್ಯವಾದುದು; ವೃತ್ತಿ=ಕೆಲಸ;

ಸಲಹು=ಕಾಪಾಡು; **ನಮ್ಮಾಕೆಯಾಗಿರೆ ಮಾನ್ಯ ವೃತ್ತಿಯೊಳು ಈಕೆಯನು ಸಲಹುವೆವು**=ಈಕೆಯು ನಮ್ಮ ರಾಣಿವಾಸದಲ್ಲಿರುವುದರಿಂದ, ಈಕೆಗೆ ಯೋಗ್ಯವಾದ ಕೆಲಸವನ್ನು ನೀಡಿ, ಇವಳನ್ನು ಸಲಹುವ ಜವಾಬ್ದಾರಿಯನ್ನು ನಾನು ಹೊತ್ತಿದ್ದೇನೆ; ವಲ್ಲಭರು=ಗಂಡಂದಿರು; ಬಲ್ಲಿದರು=ಬಲಶಾಲಿಗಳು; **ಇವಳ ವಲ್ಲಭರು ಬಲ್ಲಿದರು**=ಇವಳ ಗಂಡಂದಿರು ಬಲಶಾಲಿಗಳು; **ನಿಂದಿರು**=ಈಕೆಯ ಬಗ್ಗೆ ಆಸಕ್ತಿಯನ್ನು ತಳೆಯಬೇಡ. ಈಕೆಯ ಬಗ್ಗೆ ಇನ್ನೇನನ್ನು ಆಲೋಚಿಸಬೇಡ; ಕಾಕುನು+ಆಡದಿರು; ಕಾಕು=ಕೊಂಕು/ಕೇಡು;

**ಕಾಕನಾಡದಿರು**=ಈಕೆಯನ್ನು ಕುರಿತು ಕೊಂಕಿನ ಮಾತುಗಳನ್ನಾಡಬೇಡ; ಅಹಳು+ಅಲ್ಲ; ಅಹಳು= ದೊರೆಯು ವವಳು; **ಈಕೆ ನಿನಗೆ ಅಹಳಲ್ಲ**=ಈಕೆ ನಿನಗೆ ದೊರೆಯುವವಳಲ್ಲ; ಬಿಡಾರ=ವಾಸದ ನೆಲೆ/ಮನೆ; ನಿಜ=ತನ್ನ; ಅನುಜ=ತಮ್ಮ; **ಸಾಕು ಬಿಡಾರಕ್ಕೆ ನೀ ಹೋಗು** ನಿಜ=ತನ್ನ; **ಅನುಜ=ತಮ್ಮ ಎನುತ ನಿಜ ಅನುಜನ ಬೀಳ್ಕೊಟ್ಟಳು**=ಇನ್ನು ಇವಳ ಬಗ್ಗೆ ತಳೆದಿರುವ ಕುತೂಹಲವನ್ನು ಇಲ್ಲಿಗೆ ಬಿಡು. ಈಗ ನೀನು ನಿನ್ನ ಬಿಡಾರಕ್ಕೆ ಹೋಗು ಎಂದು ತನ್ನ ತಮ್ಮನಿಗೆ ತಿಳುವಳಿಕೆಯನ್ನು ಹೇಳಿ ಅಲ್ಲಿಂದ ಕಳುಹಿಸಿದಳು.



# ನೋಟ–ಎರಡು

ಅಂತಃಕರಣ=ಮನಸ್ಸು; ತಾರು=ಕುಗ್ಗು/ಸೊರಗು; **ಕೀಚಕನ ಅಂತಃಕರಣ ತಾರಿತು**=ಅಕ್ಕನಾದ ಸುದೇಷ್ಣೆಯು ಆಡಿದ ಮಾತು ಮತ್ತು ನೀಡಿದ ಎಚ್ಚರಿಕೆಯ ನುಡಿಗಳನ್ನು ಕೇಳಿ ಕೀಚಕನ ಮನಸ್ಸು ಕುಗ್ಗಿತು/ಕೀಚಕನು ನಿರಾಶೆಗೊಂಡನು; ಕೂರು+ಕಣೆ; ಕೂರು=ಹರಿತವಾದ; ಕಣೆ=ಬಾಣ; ಕಾಲ್+ಇಕ್ಕಿದವು; ಕಾಲಿಕ್ಕಿದವು=ಇದೊಂದು ನುಡಿಗಟ್ಟು. ನಾಟಿಕೊಂಡವು/ಒಳಹೊಕ್ಕವು; **ಕಾಮನ ಕೂರುಗಣೆ ಕಾಲಿಕ್ಕಿದವು**=ಕಾಮದೇವನು ಬಿಟ್ಟ ಹೂಬಾಣಗಳು ಕೀಚಕನ ಮಯ್ ಮನದಲ್ಲಿ ನಾಟಿಕೊಂಡವು/ಕೀಚಕನ ಮಯ್ ಮನದ ತುಂಬಾ ಕಾಮುಕತನದ ಒಳಮಿಡಿತಗಳು ತುಡಿಯತೊಡಗಿದವು; ಏರು=ಹೋರಾಟ/ತುಮುಲ; ಮುಚ್ಚು=ಮರೆಮಾಡು/ಅಡಗಿಸು; **ಮನದ ಏರು ಮುಚ್ಚದು**=ಮನದಲ್ಲಿ ಉಕ್ಕೇಳುತ್ತಿರುವ ಕಾಮುಕತನದ ಒಳಮಿಡಿತಗಳನ್ನು ನಿಯಂತ್ರಿಸಿಕೊಳ್ಳಲು ಆಗುತ್ತಿಲ್ಲ ; ದುಗುಡ=ಉಮ್ಮಳ/ಚಿಂತೆ; ಬಲಿ=ಹೆಚ್ಚಾಗು;

**ದುಗುಡ ಬಲಿದುದು**=ಮನದ ಉಮ್ಮಳ ಹೆಚ್ಚಾಯಿತು; ಝಗೆ=ಕಳವಳ/ತಳಮಳ/ಕಾವು; ಮೀರಿ=ಹೆಚ್ಚಾಗಿ; ಮೈದೋರು=ಕಂಡುಬರುವುದು; **ಮೀರಿ ಝಗೆ ಮೈದೋರೆ**=ಕಾಮದ ತಾಪವು ಹೆಚ್ಚಾಗಿ ಕಂಡುಬರಲು; ಮುಸುಕು=ಮಂಕು; ಮೋರೆ=ಮೊಗ; ನಿಜ=ತನ್ನ; ಮಂದಿರ=ಮನೆ; **ಮುಸುಕು ಮೋರೆಯಲಿ ನಿಜ ಮಂದಿರಕೆ ಬಂದನು**=ಕಾಮದ ಬೇಗೆಯಲ್ಲಿ ಬೇಯುತ್ತಿರುವ ಕೀಚಕನು ಕಳಾಹೀನನಾಗಿ ಸಪ್ಪನೆಯ ಮೊಗದಿಂದ ತನ್ನ ಮನೆಗೆ ಹಿಂತಿರುಗಿದನು; ತಲೆಮಾರಿ=ಇದೊಂದು ನುಡಿಗಟ್ಟು. ಕೆಟ್ಟ ನಡೆನುಡಿಗೆ ಬಲಿಯಾಗಿ ಅರಿವನ್ನು ಕಳೆದುಕೊಂಡವನು/ಅವಿವೇಕಿ;

**ಮರುದಿವಸ ಅರಮನೆಯ ಬಾಗಿಲಲಿ ದ್ರೌಪದಿಯನು ತಲೆಮಾರಿ ಕಂಡನು**=ಮಾರನೆಯ ದಿನ ಅರಮನೆಯ ಬಾಗಿಲ ಬಳಿ ಸೈರಂಧ್ರಿಯು ಹೋಗುತ್ತಿರು

ವುದನ್ನು ಕಾಮುಕತನದಿಂದ ತಿಳಿಗೇಡಿಯಾಗಿರುವ ಕೀಚಕನು ಕಂಡನು; ಗಾವಳಿ=ಗುಂಪು; ಪರಿವಾರ=ಸೇನಾನಿಯಾಗಿದ್ದ ಕೀಚಕನ ಸುತ್ತಲೂ ಇದ್ದ ಕಾವಲು ಪಡೆ; **ತನ್ನೊಡನೆ ಬಹ ಗಾವಳಿಯ ಪರಿವಾರವನು ಕಳುಹಿದನು**=ತನ್ನ ಮಯ್ಗಾವಲಾಗಿ ಇದ್ದ ಪಡೆಯನ್ನು ದೂರಹೋಗುವಂತೆ ಕಳುಹಿಸಿದನು; ಹಡಪ=ಎಲೆ ಅಡಕೆಯ ಸುಣ್ಣ ಮುಂತಾದ ತಾಂಬೂಲದ ವಸ್ತುಗಳನ್ನು ಇಟ್ಟುಕೊಳ್ಳುವ ಚೀಲ; **ತನ್ನಯ ಬಳಿಯ ಹಡಪದ ಬಾಲಕನ ಹಿಂದಿಕ್ಕಿ ನಡೆತಂದು**= ತನ್ನ ಹತ್ತಿರದಲ್ಲಿಯೇ ಇದ್ದ ಹಡಪದ ಬಾಲಕನನ್ನು ಹಿಂದಕ್ಕೆ ಬಿಟ್ಟು, ಸೈರಂಧ್ರಿಯು ಹೋಗುತ್ತಿದ್ದ ಕಡೆಗೆ ವೇಗವಾಗಿ ಮುನ್ನಡೆದು; ಒಲಿ=ಮೋಹಗೊಳ್ಳು/ಮರುಳಾಗು/ಮೆಚ್ಚು; **ಒಲಿದು**=ಸೈರಂಧ್ರಿಗಾಗಿ ಮೋಹಗೊಂಡು;

ಸಿಂಹದ ಸತಿ=ಹೆಣ್ಣು ಸಿಂಹ; ಅಳುಪು+ಅಂತೆ+ಇರೆ; ಅಳುಪು=ಬಯಸು/ಇಚ್ಚೈಸು; ಅಂತೆ=ಹಾಗೆ; ಇರೆ=ಇರಲು; **ಸಿಂಹದ ಸತಿಗೆ ನರಿ ಮನವು ಅಳುಪುವಂತಿರೆ**=ಹೆಣ್ಣು ಸಿಂಹದ ಜತೆಗೂಡಿ ರಮಿಸಲು ನರಿಯು ಆಸೆಪಟ್ಟಂತೆ; ಗರುಡನ ಅರಸಿ=ಹೆಣ್ಣು ಗರುಡ ಪಕ್ಷಿ; ನಲಿ=ಮೆಚ್ಚು/ಇಚ್ಚೈಸು; ಫಣಿ=ಹಾವು; **ಗರುಡನ ಅರಸಿಗೆ ನಲಿದು ಫಣಿ ಬಯಸುವವೋಲು**=ಹೆಣ್ಣು ಗರುಡನೊಂದಿಗೆ ಕೂಡಿ ರಮಿಸಲು ಹಾವು ಆಸೆಪಟ್ಟಂತೆ; ಐದು=ಸಮೀಪಿಸು/ಬಳಿಗೆ ಬರುವುದು; **ಬಾಲಕಿಯ ಬಳಿಗೆ ಐದಿದ**=ಸೈರಂಧ್ರಿಯ ಬಳಿಗೆ ಕೀಚಕನು ಬಂದನು; ಹೆಣ್ಣು ಸಿಂಹವನ್ನು ಕೂಡಲೆಂದು ಬರುವ ನರಿ ಮತ್ತು ಹೆಣ್ಣು ಗರುಡನೊಂದಿಗೆ ರಮಿಸಲು ಬರುವ ಹಾವು, ಮುಂದಿನ ಗಳಿಗೆಯಲ್ಲಿ ಹೇಗೆ ದುರಂತಕ್ಕೆ ಬಲಿಯಾಗುತ್ತವೆಯೋ, ಅಂತೆಯೇ ಸೈರಂಧ್ರಿಯ ಜತೆಗೂಡಿ ರಮಿಸಬೇಕೆಂಬ ಕಾಮದ ಬಯಕೆಯಿಂದ ಬರುತ್ತಿರುವ ಕೀಚಕನು ದುರಂತದ ಕಡೆಗೆ ಅಡಿಯಿಡುತ್ತಿದ್ದಾನೆ ಎಂಬುದನ್ನು ಈ ರೂಪಕಗಳು ಸೂಚಿಸುತ್ತಿವೆ;

ಆಗಳೆ=ಆ ಗಳಿಗೆಯಲ್ಲಿಯೇ; ಖಳ=ನೀಚ/ಕೇಡಿ; ಇಂಗಿತ=ಮನಸ್ಸಿನ ಬಯಕೆ/ಉದ್ದೇಶ; ಕಾಮಿನಿ=ಹೆಂಗಸು; **ಆಗಳೆ ಖಳನ ಮನದ ಇಂಗಿತವನು ತಿಳಿದು ಕಾಮಿನಿ ಬೆದರಿದಳು**=ಕೀಚಕನು ತನ್ನ ಬಳಿ ಬರುತ್ತಿರುವುದನ್ನು ನೋಡಿದ ಕೂಡಲೇ, ದ್ರೌಪದಿಯು ಆ ಕಾಮುಕನ ಉದ್ದೇಶವನ್ನು ಗ್ರಹಿಸಿಕೊಂಡು ಹೆದರಿಕೆಯಿಂದ ತತ್ತರಿಸಿದಳು; **ತನ್ನ ಮನದೊಳಗೆ**=ದ್ರೌಪದಿಯು ತನ್ನ ಮನಸ್ಸಿನಲ್ಲಿಯೇ; ಕಳವಳಿಗ=ಕಾತರಪಡುವವನು/ತಳಮಳಿಸುವವನು; ಸೋಲು=ಅಪಜಯ; **ಕಳವಳಿಗ ಸೋತನು**=ಕೀಚಕನು ನನ್ನ ರೂಪವನ್ನು ನೋಡಿ ತಳಮಳಗೊಂಡು ಕಾಮಕ್ಕೆ ವಶನಾಗಿದ್ದಾನೆ;

**ಕೆಟ್ಟೆನು ಎಂದಳು**=ಕೀಚಕನ ಕಾಮದ ನೋಟಕ್ಕೆ ಸಿಲುಕಿರುವ ನನಗೆ ಇನ್ನು ಮುಂದೆ ಕೇಡಾಗುತ್ತದೆ ಎಂದುಕೊಂಡಳು. ತೊಲಗು=ಹಿಂತಿರುಗು; ಹಿಂದೆ+ಅಡಿ +ಇಡಲು; ಅಡಿ=ಹೆಜ್ಜೆ; **ತೊಲಗಿ ಹಿಂದಡಿಯಿಡಲು**=ಕೀಚಕನಿಂದ ದೂರಸರಿದು ಹೋಗೋಣವೆಂದು ಹಿಂದಕ್ಕೆ ಹೆಜ್ಜೆಯನ್ನಿಡುತ್ತಿರಲು; ಅಳುಕು=ಹೆದರಿಕೆ/ ಹಿಂಜರಿಕೆ; ಐತರು=ಬಳಿಗೆ ಬರುವುದು/ಸಮೀಪಿಸುವುದು; **ಕೀಚಕನು ಅಳುಕದೆ ಐತಂದು**=ಕೀಚಕನು ಯಾವ ಹಿಂಜರಿಕೆಯೂ ಇಲ್ಲದೆ ಸಮೀಪಿಸಿ; ಅಬುಜ=ತಾವರೆಯ ಹೂವು; ವದನ=ಮೊಗ; ಅಬುಜವದನೆ=ಸುಂದರಿ; **ಅಬುಜವದನೆಯ ಬಳಿಗೆ ಬಂದನು**=ಸೈರಂಧ್ರಿಯ ಬಳಿಗೆ ಬಂದನು; ತರಳೆ= ತರುಣಿ/ಯುವತಿ; **ನುಡಿಸಲಾಗದೆ ತರಳೆ ನೀನು**=ತರುಣಿ, ನನ್ನನ್ನು ಕಂಡು ಹಿಂದಕ್ಕೆ ಹೆಜ್ಜೆಯನ್ನು ಇಡುತ್ತಿರುವೆಯಲ್ಲಾ?... ಏಕೆ?... ನೀನು ನನ್ನೊಡನೆ ಮಾತನಾಡಲಾರೆಯಾ; ಮರುಳ=ಹುಚ್ಚ/ತಿಳಿಗೇಡಿ; ಅಳುಪು= ಬಯಸು; **ಎಲೆ ಮರುಳೆ, ಬೇಡ ಅಳುಪದಿರು**=ತಿಳಿಗೇಡಿಯೇ 'ಬೇಡ' ಈ ರೀತಿ ನನ್ನನ್ನು ಬಯಸಬೇಡ; ಕೂರ್+ಅಲಗು; ಕೂರ್=ಹರಿತವಾದ; ಅಲಗು=ಬಾಣ/ಕತ್ತಿ;

**ಕೂರಲಗ ಕೊರಳಿಗೆ ಬಯಸದಿರು**=ಹರಿತವಾದ ಕತ್ತಿಯಿಂದ ತಲೆಯನ್ನು ಕತ್ತರಿಸಿಕೊಳ್ಳುವಂತಹ ಬಯಕೆಗೆ ಬಲಿಯಾಗದಿರು; **ಕಳವಳಿಸದಿರು**= ಕಾಮಾತುರನಾಗಿ ತಳಮಳಕ್ಕೆ ಒಳಗಾಗಬೇಡ; **ಕೈಯೊಡನೆ**=ಕೂಡಲೇ/ಈ ಗಳಿಗೆಯಲ್ಲಿಯೇ; **ನಿನ್ನ ಅರಮನೆಗೆ ಕೈಯೊಡನೆ ತೆರಳುವುದು**=ನಿನ್ನ ಅರಮನೆಗೆ ಈ ಕೂಡಲೇ ಹೋಗುವುದು; ಅಕಟ=ಅಯ್ಯೋ. ಸಂಕಟ ಇಲ್ಲವೇ ಆಪತ್ತಿನ ಸನ್ನಿವೇಶದಲ್ಲಿ ವ್ಯಕ್ತಿಯ ಬಾಯಿಂದ ಹೊರಡು ಉದ್ಗಾರದ ಪದ; **ಅಕಟ, ಬೇಡ**=ಅಯ್ಯೋ... ನಿನ್ನ ಈ ಕಾಮ ನಿನ್ನನ್ನೇ ಬಲಿತೆಗೆದುಕೊಳ್ಳುತ್ತದೆ. ಆದ್ದರಿಂದ ಇಂತಹ ಕೆಟ್ಟ ಆಲೋಚನೆ ಬೇಡ; **ಸುಲಭ**=ಸರಾಗ/ಸಲೀಸು/ಯಾವ ಅಡೆತಡೆಯು ಇಲ್ಲದಿರುವುದು; **ಸುಲಭೆ ನಾ ನಿನಗಲ್ಲ**=ನಾನು ನಿನಗೆ ದಕ್ಕುವವಳಲ್ಲ;

**ನಿನ್ನನು ಕೆಲರು ನಗುವರು**=ಈ ರೀತಿ ಕಂಡಕಂಡ ಹೆಣ್ಣುಮಕ್ಕಳ ಮೇಲೆ ಕಾಮದ ಕೆಟ್ಟ ನೋಟವನ್ನು ಬೀರುವ ನಿನ್ನ ನಡೆನುಡಿಯನ್ನು ಕಂಡು ಇತರರು ನಗುತ್ತಾರೆ. ಇದು ನಿನ್ನ ವ್ಯಕ್ತಿತ್ವಕ್ಕೆ ತಕ್ಕುದಲ್ಲ; ಅಂದರೆ ವಿರಾಟರಾಜನ ವೀರ ಸೇನಾನಿ ಯಾಗಿರುವ ನಿನ್ನ ಇಂತಹ ವರ್ತನೆಯ ನಗೆಪಾಟಲಿಗೆ ಈಡಾಗುತ್ತದೆ. **ಪರ**= ದೇವಲೋಕ/ಸ್ವರ್ಗಲೋಕ; **ಸದ್ಗತಿ**=ಮೋಕ್ಷ; **ಪರದ ಸದ್ಗತಿ ತೊಲಗುವುದು**=ಸತ್ತ ನಂತರ ನಿನಗೆ ಪರಲೋಕದಲ್ಲಿ ಮೋಕ್ಷ ದೊರಕುವುದಿಲ್ಲ; **ಎಲೆಗೆ**=ಹೆಂಗಸನ್ನು ಕುರಿತು ಮಾತನಾಡಿಸುವಾಗ ಬಳಸುವ ಪದ; **ಎಲೆಗೆ ಸೈರಂಧ್ರಿ, ನಿಲ್ಲು**=ಸೈರಂಧ್ರಿ 'ನನ್ನನ್ನು ಕಂಡಕೂಡಲೇ ದೂರಸರಿಯಬೇಡ' ನಿಲ್ಲು; **ಬಲ್ಲೆಹ**=ಈಟಿ;

**ತಾಗು**=ಹೊಡೆ/ಅಪ್ಪಳಿಸು/ನೋಯಿಸು; **ಕಾಮನ ಬಲ್ಲೆಹದ ಬಲು ಗಾಯ ತಾಗಿತು**=ಕಾಮನು ಇರಿದ ಈಟಿಯಿಂದಾದ ಗಾಯವು ನನ್ನನ್ನು ಬಹಳವಾಗಿ ನೋಯಿಸುತ್ತಿದೆ; **ನೀನು ಔಷಧಿಯ ಬಲ್ಲೆ**=ಇಂತಹ ನೋವಿಗೆ ಪರಿಹಾರ ಏನೆಂಬುದನ್ನು ನೀನು ಚೆನ್ನಾಗಿ ತಿಳಿದಿರುವೆ; ಎನ್ನ+ಒಡಲ; **ಎನ್ನ**=ನನ್ನ; ಒಡಲು=ದೇಹ/ಶರೀರ/ಮಯ್; **ಎನ್ನೊಡಲ ರಕ್ಷಿಸಿಕೊಂಬುದು**=ನನ್ನ ದೇಹವನ್ನು ಕಾಪಾಡಿಕೊಳ್ಳುವ ಹೊಣೆ ನಿನ್ನದು; ಅಡಿ+ಇಡು; ಅಡಿ=ಹೆಜ್ಜೆ; **ಮೆಲ್ಲನೆ ಅಡಿಯಿಡು**=ದೊಡ್ಡ ಹೆಜ್ಜೆಗಳನ್ನಿಡಬೇಡ; **ಮನ್ನಿಸು**=ಒಪ್ಪು; **ಮಾತ ಮನ್ನಿಸು**=ನನ್ನ ಮಾತುಗಳಿಗೆ ನೀನು ಒಪ್ಪಿಕೊಳ್ಳುವುದು/ನನ್ನ ಮನದ ಆಸೆಯನ್ನು ಪೂರಯಿಸು;

ಚೆಲ್ಲೆ+ಕಣ್=ಚೆಲ್ಲೆಗಣ್; ಚೆಲ್=ಸುಂದರವಾದ/ಅಂದವಾದ; ಚೆಲ್ಲೆಗಣ್=ಅಂದವಾದ ಕಣ್ಣು; ಚೆಲ್ಲೆಗಂಗಳು=ಅಂದವಾದ ಕಣ್ಣುಗಳು; ಚೆಲ್ಲು=ಹರಡು/ಚಾಚು; **ಚೆಲ್ಲೆಗಂಗಳನು ಎನ್ನ ಮುಖದಲಿ ಚೆಲ್ಲಿ**=ನಿನ್ನ ಅಂದಚೆಂದದ ಕಣ್ಣುಗಳಿಂದ ನನ್ನ ಮೊಗವನ್ನು ನೋಡುತ್ತ ಅಂದರೆ ನನ್ನತ್ತ ಒಲವಿನ ನೋಟವನ್ನು ಬೀರಿ; ವಿಗತ=ಹೊರಟುಹೋದ/ಅಗಲಿದ; ವಿಗತಜೀವನ=ಜೀವವಿಲ್ಲದ ಬದುಕು; ಸಪ್ರಾಣಿಸು=ಬದುಕಿಸು; ಬೇಹುದು=ವ್ಯವಹರಿಸುವುದು; **ವಿಗತಜೀವನನ ಸಪ್ರಾಣಿಸಲು ಬೇಹುದು**=ಸತ್ತಂತಿರುವ ನನ್ನನ್ನು ಬದುಕಿಸಿ ಕೊಳ್ಳುವುದು; ಪಾತಕಿ=ಕೆಟ್ಟದ್ದನ್ನು ಮಾಡಿರುವವಳು; **ಎಲೆಗೆ ಪಾತಕಿ**=ಕಾಮುಕನಾಗಿರುವ ಕೀಚಕನಿಗೆ ಸೈರಂಧ್ರಿಯೇ ಕೆಟ್ಟದ್ದನ್ನು ಮಾಡಿರುವ ವ್ಯಕ್ತಿಯಾಗಿ ಕಾಣುತ್ತಿದ್ದಾಳೆ. ಕಾಮುಕನಾದ ವ್ಯಕ್ತಿ ಅರಿವನ್ನು ಕಳೆದುಕೊಂಡು, ತನ್ನ ತಪ್ಪನ್ನು ಮರೆತು, ಇತರರನ್ನು ನಿಂದಿಸುತ್ತಾನೆ;

ಅಲಗು=ಬಾಣ/ಕತ್ತಿ/ಹರಿತವಾದ ಹತಾರ; ತನ್ನ+ಎದೆಯ; ಎದೆ=ಮನಸ್ಸು; **ನಿನ್ನ ಕಣ್ಣೆಂಬ ಅಲಗಿನಲಿ ತನ್ನೆದೆಯ ನೋಯಿಸಿ ತೊಲಗಬಹುದೇ**=ನಿನ್ನ ಸುಂದರವಾದ ಕಣ್ಣುಗಳ ನೋಟದಿಂದ ನನ್ನ ಮಯ್ ಮನದ ಕಾಮವನ್ನು ಕೆರಳಿಸಿ, ನನ್ನ ಮನಸ್ಸನ್ನು ಗಾಸಿಗೊಳಿಸಿ, ಈ ರೀತಿ ನೀನು ನನ್ನಿಂದ ದೂರಸರಿಯ ಬಹುದೇ; **ನಿನ್ನ ಮನದೊಳಗೆ ಕರುಣವಿಲ್ಲವೆ**=ನಿನ್ನ ಮನದಲ್ಲಿ ನನ್ನ ಬಗ್ಗೆ ಕರುಣೆಯಿಲ್ಲವೆ; **ಒಲಿದು ಬಂದೆನು**=ನಿನ್ನನ್ನು ಮೋಹಿಸಿ ಬಂದಿದ್ದೇನೆ; ಊಳಿಗ=ಕೆಲಸ; ಬಲುಹು=ಬಹು ಕಸುವುಳ್ಳದ್ದು; **ಕಾಮನ ಊಳಿಗ ಬಲುಹು**=ಕಾಮ ಕೆರಳಿದಾಗ ಉಂಟಾಗುವ ಪರಿಣಾಮಗಳು ಬಲು ತೀವ್ರವಾ**ಗಿರುತ್ತವೆ; ಎನ್ನಯ ಭಯವ ತಗ್ಗಿಸಿ ತಲೆಯ ಕಾಯಲು ಬೇಕು**=ನನ್ನೊಳಗಿನ ಕಾಮದ ತೀವ್ರತೆಯನ್ನು ತಡೆಯಲಾರದೆ ಏನಾಗುವುದೋ ಎಂಬ ನನ್ನ ಅಂಜಿಕೆಯನ್ನು ಹೋಗಲಾಡಿಸಿ, ನನ್ನ ಪ್ರಾಣಮಾನವನ್ನು ನೀನು ಕಾಪಾಡಬೇಕು ಎಂದು ಕೀಚಕನು ಕಯ್

ಮುಗಿದನು; ಕಾಮುಕನಾದ ವ್ಯಕ್ತಿಯು ಅರಿವನ್ನು ಮಾತ್ರವಲ್ಲ, ಸಮಾಜ ಒಪ್ಪಿತವಾದ ಮಾನ ಮರ್ಯಾದೆಯ ನಡೆನುಡಿಗಳನ್ನು ಕಡೆಗಣಿಸುವುದರ ಜತೆಗೆ, ಅತ್ಯಂತ ದುರ್ಬಲ ವ್ಯಕ್ತಿಯಾಗಿ ಯಾವ ನೆಲೆಗೆ ಬೇಕಾದರೂ ಇಳಿಯುತ್ತಾನೆ ಎಂಬುದನ್ನು ಕೀಚಕನ ನಡೆನುಡಿಯು ಸೂಚಿಸುತ್ತಿದೆ;

ಪರರ ಸತಿ=ಮತ್ತೊಬ್ಬರ ಹೆಂಡತಿ; ಅಳುಪು=ಬಯಸು; **ಪರರ ಸತಿಗೆ ಅಳುಪಿದೊಡೆ ಪಾತಕ ದೊರಕುವುದು**=ಮತ್ತೊಬ್ಬರ ಹೆಂಡತಿಯನ್ನು ಕಾಮುಕತನದಿಂದ ಬಯಸಿದರೆ ಕೆಟ್ಟ ಕೆಲಸವನ್ನು ಮಾಡಿದ ಪಾಪ ಉಂಟಾಗುವುದು; ನಿಜ=ತನ್ನ/ನಿನ್ನ; ಲಕ್ಷ್ಮಿ=ಸಂಪತ್ತು/ಸಿರಿ; **ನಿಜಲಕ್ಷ್ಮಿ ತೊಲಗುಗು**=ನಿನ್ನಲ್ಲಿರುವ ಸಂಪತ್ತೆಲ್ಲವೂ ನಾಶವಾಗುತ್ತದೆ; ಧರೆ+ಒಳು; **ಧರೆ**=ಭೂಮಿ/ಜಗತ್ತು/ಪ್ರಪಂಚ; ಅಗ್ಗ=ಅತಿಶಯ/ಉತ್ತಮ; ಕೀರ್ತಿ=ಒಳ್ಳೆಯ ಹೆಸರು/ಯಶಸ್ಸು; ಮಾಸು=ಕುಗ್ಗು/ಕಾಂತಿಗುಂದು/ಕಡಿಮೆಯಾಗು; **ಧರೆಯೊಳು ಅಗ್ಗದ ಕೀರ್ತಿ ಮಾಸುಗು**=ಜಗತ್ತಿನಲ್ಲಿ ವ್ಯಕ್ತಿಯು ಹೊಂದಿರುವ ಒಳ್ಳೆಯ ಹೆಸರಿಗೆ ಕಳಂಕ ತಟ್ಟುವುದು; ಗತಿ=ಈಗ ವ್ಯಕ್ತಿಯು ಸಮಾಜದಲ್ಲಿ ಹೊಂದಿರುವ ಅಂತಸ್ತು; ಕೇಡು+ಅಹುದು; ಕೇಡು=ಹಾನಿ/ಅಳಿವು/ನಾಶ; **ಗತಿಗೆ ಕೇಡಹುದು**=ವ್ಯಕ್ತಿಯ ಸಾಮಾಜಿಕ ಅಂತಸ್ತಿಗೆ ಹಾನಿಯುಂಟಾಗುವುದು; ಅಸುರ=ರಕ್ಕಸ;

**ಕೊರಳು ಹಲವಾದ ಅಸುರ**=ಹತ್ತು ತಲೆಗಳನ್ನು ಹೊಂದಿದ್ದ ರಕ್ಕಸನಾದ ರಾವಣ; ಅಂತಕ=ಯಮ; **ಪುರ**=ಪಟ್ಟಣ; **ಐದು**=ಬರು/ಸಮೀಪಿಸು; ಐದಿದ=ಸೇರಿದ; **ಅಂತಕಪುರವನು ಐದು**=ಇದೊಂದು ನುಡಿಗಟ್ಟು. ಸಾಯುವುದು; **ಕೊರಳು ಹಲವಾದ ಅಸುರನು ಅಂತಕಪುರವನು ಐದಿದ ಕಥೆಯ ನೀ ಕೇಳ್ದು ಅರಿಯಲಾ**=ಹತ್ತು ತಲೆಗಳನ್ನು ಹೊಂದಿದ್ದ ರಾವಣನು ರಾಮನ ಮಡದಿಯಾದ ಸೀತೆಯನ್ನು ಕಾಮುಕತನದಿಂದ ಅಪಹರಿಸಿ ರಾಮನಿಂದ ರಣರಂಗದಲ್ಲಿ ಸಾವನ್ನಪ್ಪಿದ ಕತೆಯನ್ನು ನೀನು ಕೇಳಿ ತಿಳಿದಿಲ್ಲವೇ; ಕಡು=ಹೆಚ್ಚಾಗಿ/ಬಹಳವಾಗಿ; ಕಡುಪಾಪಿ=ಅತಿ ಹೆಚ್ಚಿನ ಪಾಪವನ್ನುಮಾಡಿರುವ ವ್ಯಕ್ತಿ; **ಕಡುಪಾಪಿ ಹೋಗು**=ಅತಿ ಹೆಚ್ಚಿನ ಪಾಪಕ್ಕೆ ತೊಡಗಿರುವ ನೀಚನೇ ಇಲ್ಲಿಂದ ತೊಲಗು ಎಂದು ಸೈರಂಧ್ರಿಯು ಕೀಚಕನಿಗೆ ಎಚ್ಚರಿಕೆಯನ್ನು ನೀಡುತ್ತಾಳೆ; ಆದರೆ ಕಾಮುಕತನದಿಂದ ಮಯ್ ಮನದ ಮೇಲಣ ಅರಿವನ್ನು ಕಳೆದುಕೊಂಡಿರುವ ಕೀಚಕನು ಯಾವ ಹಂತಕ್ಕೆ ಬೇಕಾದರೂ ಇಳಿಯಲು ತಯಾರಾಗಿದ್ದಾನೆ;

ಮೇಲೆ=ಪರಲೋಕದಲ್ಲಿ; ಸದ್ಗತಿ=ಮೋಕ್ಷ/ಸ್ವರ್ಗದ ನೆಲೆ; ಈ ಜಗತ್ತಿನಲ್ಲಿ ಒಳ್ಳೆಯ ನಡೆನುಡಿಯಿಂದ ಬಾಳಿದವರು ಸತ್ತ ನಂತರ ಪರಲೋಕದಲ್ಲಿ ನೆಮ್ಮದಿಯ ನೆಲೆಯಾದ ಸ್ವರ್ಗಕ್ಕೆ ಮತ್ತು ಕೆಟ್ಟ ನಡೆನುಡಿಯಿಂದ ಬಾಳಿದವರು ಸಂಕಟದ

ನೆಲೆಯಾದ ನರಕಕ್ಕೆ ಹೋಗುತ್ತಾರೆ ಎಂಬ ನಂಬಿಕೆಯು ಜನಮನದಲ್ಲಿ ಪರಂಪರಾಗತವಾಗಿ ಬಂದಿದೆ; **ಮೇಲೆ ಸದ್ಗತಿ ಬೆಂದು ಹೋಗಲಿ**=ನಾನು ಸತ್ತ ನಂತರ ನನಗೆ ಯಾವ ಸದ್ಗತಿಯು ಬೇಕಾಗಿಲ್ಲ. ಅಂತಹ ಸದ್ಗತಿಯು ಹಾಳಾಗಿ ಹೋಗಲಿ. ಈಗ ನೀನು ನನ್ನವಳಾದರೆ ಅದೇ ನನಗೆ ಸಾಕು; ಕಾಲ=ಯಮ; ಕಾಲನವರು=ಯಮದೂತರು; **ಕಾಲನವರು ಐತರಲಿ**=ಯಮದೂತರು ಬಂದು ನನ್ನ ಪ್ರಾಣವನ್ನು ಒಯ್ಯಲಿ; ಏಳಿಸು=ಅವಹೇಳನ ಮಾಡು/ನಿಂದಿಸು/ತೆಗಳು;

**ಬಂಧುಗಳು ಏಳಿಸಲಿ**=ನನ್ನ ನೆಂಟರು ನನ್ನ ಬಗ್ಗೆ ಅಪಮಾನದ ನುಡಿಗಳನ್ನಾಡಲಿ/ನನ್ನ ನಡೆನುಡಿಯನ್ನು ಕುರಿತು ಅವಹೇಳನ ಮಾಡಲಿ; **ತನ್ನವರು ತೊಲಗಲಿ**=ನನ್ನವರು ಎನಿಸಿಕೊಂಡ ತಂದೆತಾಯಿ, ಸೋದರ ಸೋದರಿಯರು, ಮಕ್ಕಳು ಮತ್ತು ನೆಂಟರಿಷ್ಟರು ಎಲ್ಲರೂ ನನ್ನನ್ನು ಬಿಟ್ಟುಬಿಡಲಿ ಇಲ್ಲವೇ ನನ್ನಿಂದ ದೂರಸರಿಯಲಿ; **ರಾಣಿಯರು ಬಿಡಲಿ**=ನನ್ನ ಹೆಂಡತಿಯರು ಬಿಡಲಿ; ಬಾಲೆ=ತರುಣಿ/ಯುವತಿ; **ಬಾಲೆ, ನಿನಗೆ ಆನು ಒಲಿದೆ**=ಸೈರಂಧ್ರಿಯೇ, ನಾನು ನಿನ್ನನ್ನು ಮೋಹಿಸಿದ್ದೇನೆ; ಕೋಲು=ಬಾಣ; **ಕಾಮನ ಕೋಲು**=ಮದನನ ಹೂಬಾಣ. ಇದೊಂದು ರೂಪಕವಾಗಿದೆ. ವ್ಯಕ್ತಿಯ ಮಯ್ ಮನದಲ್ಲಿ ಕೆರಳುವ ಕಾಮದ ಒಳಮಿಡಿತಗಳು ಎನ್ನುವ ತಿರುಳಿನಲ್ಲಿ ಬಳಕೆಗೊಂಡಿದೆ; ಎನ್ನನು= ನನ್ನನ್ನು; ಮರಳಲು=ಹಿಂತಿರುಗಲು/ಮೊದಲಿನಂತಾಗಲು; ಈ=ಕೊಡು; ಈಯದು=ಅವಕಾಶ ಕೊಡುತ್ತಿಲ್ಲ;

**ಕಾಮನ ಕೋಲು ಎನ್ನನು ಮರಳಲು ಈಯದು**=ನಿನ್ನನ್ನು ಕಂಡ ಗಳಿಗೆಯಿಂದಲೂ ನನ್ನ ಮಯ್ ಮನದಲ್ಲಿ ಕೆರಳಿದ ಕಾಮದ ಒಳಮಿಡಿತಗಳಿಂದ ಪಾರಾಗಿ ಮೊದಲಿನಂತಾಗಲು ಆಗುತ್ತಿಲ್ಲ. ಅಂದರೆ ನಾನು ಕಾಮಪರವಶ ನಾಗಿದ್ದೇನೆ; ಲೋಲ=ಅಲುಗಾಟ/ಅಲ್ಲಾಡುವುದು; ಲೋಚನ=ಕಣ್ಣು; ಲೋಲಲೋಚನೆ=ಚಂಚಲವಾದ ಕಣ್ಣುಗಳನ್ನುಳ್ಳ ಸುಂದರಿ; ಬಿರುಬು=ಬಿರುಸು/ ಉಗ್ರತೆ; **ಲೋಲಲೋಚನೆ ಬಿರುಬ ನುಡಿಯದೆ ತನ್ನನು ಉಳುಹು**= ಸುಂದರಿಯೇ, ನನ್ನ ಮನನೋಯಿಸುವಂತಹ ಬಿರುನುಡಿಗಳನ್ನಾಡದೆ, ನನ್ನನ್ನು ಉಳಿಸಿಕೊ. ಇಲ್ಲದಿದ್ದರೆ ಈ ಕಾಮದ ಬೇಗೆಯಲ್ಲಿ ನಾನು ನಾಶವಾಗಲಿದ್ದೇನೆ;

ಎಳನಗೆ=ಒಲವು ನಲಿವು ಚೆಲುವಿನಿಂದ ಕೂಡಿದ ಕೋಮಲವಾದ ನಗೆ; **ಎಳನಗೆಯ ಬೆಳುದಿಂಗಳು**= ಇದೊಂದು ರೂಪಕ. ಪ್ರಶಾಂತವಾದ ಮತ್ತು ಪ್ರೀತಿಯಿಂದ ಕೂಡಿದ ಮುಖ ಭಾವಕ್ಕೆ ಸಂಕೇತ; ತಳಿ=ಹರಡು/ಸಿಂಪಡಿಸು/ ಚೆಲ್ಲು/ಬೀರು; ತಾಪ=ಕಾಮದ ಬೇಗೆ; ಕೆಡಿಸು=ಇಲ್ಲದಂತೆ ಮಾಡು; **ಎಳನಗೆಯ ಬೆಳುದಿಂಗಳನು ನೀ ತಳಿತು ತಾಪವ ಕೆಡಿಸು**=ನಿನ್ನ ಒಲವು ನಲಿವು ಚೆಲುವಿನಿಂದ

ಕೂಡಿದ ನಗೆಯ ಬೆಳುದಿಂಗಳನು ನನ್ನ ಮೇಲೆ ಬೀರುತ್ತ, ನನ್ನ ಕಾಮದ ಉರಿಯನ್ನು ನಂದಿಸು;

ಅಕಟ=ಅಯ್ಯೋ; ಕೀಚಕನು ತನ್ನ ಮಯ್ ಮನದಲ್ಲಿ ಕೆರಳಿರುವ ಕಾಮಕ್ಕೆ ವಶನಾಗಿ, ದೀನನಂತೆ 'ಅಕಟ' ಎಂಬ ಉದ್ಗಾರವನ್ನು ಎಳೆಯುತ್ತಿದ್ದಾನೆ; ಮಧುರ=ಇಂಪಾದ/ಸಿಹಿಯಾದ/ಸವಿಯಾದ; ಮೆಲುನುಡಿ=ಮನಸ್ಸಿಗೆ ಮುದ ನೀಡುವಂತಹ ಮಾತು; ಸುಧೆ+ಇಂದ; ಸುಧೆ=ಅಮೃತ; ತೃಷ್ಣೆ=ತೀವ್ರತರವಾದ ಆಸೆ/ಹತ್ತಿಕ್ಕಲಾರದ ಬಯಕೆ; ಪರಿಹರಿಸು=ನಿವಾರಿಸು/ಹೋಗಲಾಡಿಸು; **ಮಧುರದ ಮೆಲುನುಡಿಯ ಸುಧೆಯಿಂದ ತೃಷ್ಣೆಯನು ಪರಿಹರಿಸು**=ಮನಕ್ಕೆ ಮುದ ನೀಡುವಂತಹ ಸವಿಯಾದ ಮಾತಿನ ಅಮೃತಸಿಂಚನದಿಂದ ನನ್ನ ಮಯ್ ಮನದ ಕಾಮದ ಪರಿತಾಪವನ್ನು ಹೋಗಲಾಡಿಸು; ಅಳಿಮನ=ದುರ್ಬಲವಾದ ಮನಸ್ಸು/ಕೆಟ್ಟ ಮನಸ್ಸು; ಬಡತನ=ಏನೂ ಇಲ್ಲದಿರುವಿಕೆ; **ಅಳಿಮನದ ಬಡತನ**= ಇದೊಂದು ರೂಪಕ. ಕಾಮಕ್ಕೆ ವಶನಾಗಿ ದುರ್ಬಲ ಮನದವನಾಗಿರುವ ನಾನು ಎಲ್ಲ ಬಗೆಯ ಆನಂದ ಮತ್ತು ನೆಮ್ಮದಿಯನ್ನು ಕಳೆದುಕೊಂಡಿದ್ದೇನೆ; ಕಳಶ= ಚೆಂಬು; ಕುಚ=ಮೊಲೆ/ಸ್ತನ; ಲಕ್ಷ್ಮಿ=ಚೆಲುವು; ಕಳೆ=ನಿವಾರಿಸು/ಹೋಗಲಾಡಿಸು;

**ಅಳಿಮನದ ಬಡತನವ ನಿನ್ನಯ ಕಳಶ ಕುಚ ಲಕ್ಷ್ಮಿಯಲಿ ಕಳೆ**= ದುರ್ಬಲವಾದ ಮನಸ್ಸಿನಿಂದ ಕೂಡಿ ಆನಂದ ಮತ್ತು ನೆಮ್ಮದಿಯಿಂದ ವಂಚಿತನಾಗಿರುವ ನನ್ನನ್ನು ಆಲಂಗಿಸಿಕೊಂಡು, ನಿನ್ನ ಮೊಲೆಗಳನ್ನು ತಾಗಿಸುವುದರಿಂದ ನನಗೆ ಮುದವನ್ನು ನೀಡು; ಕಾಂತೆ=ಪ್ರಿಯೆ; ಇತ್ತಲು=ಈ ಕಡೆ; ತಿದ್ದಬೇಹುದು=ಅಣಿಗೊಳಿಸುವುದು/ ಪಳಗಿಸುವುದು; **ಕಾಂತೆ, ಮನದ ಒಲವನು ಇತ್ತಲು ತಿದ್ದಬೇಹುದು**=ಪ್ರಿಯೆ, ನಿನ್ನ ಮನದ ಒಲವನ್ನು ನನ್ನತ್ತ ತಿರುಗಿಸು; **ಕೇಳಿ ಕಿವಿ ಮುಚ್ಚಿದಳು**=ತನ್ನ ಮುಂದೆ ಯಾವ ಹಿಂಜರಿಕೆಯಾಗಲಿ ಇಲ್ಲವೇ ಲಜ್ಜೆಯಾಗಲಿ ಇಲ್ಲದೆ ಕಾಮಕೇಳಿಗೆ ಕರೆ ನೀಡುವಂತೆ ಕೀಚಕನಾಡಿದ 'ಅಳಿಮನದ ಬಡತನವ ನಿನ್ನಯ ಕಳಶ ಕುಚ ಲಕ್ಷ್ಮಿಯಲಿ ಕಳೆ' ಎಂಬ ನುಡಿಗಳನ್ನು ಕೇಳಲಾಗದೆ ಸೈರಂಧ್ರಿಯು ಕಿವಿಗಳನ್ನು ಮುಚ್ಚಿಕೊಂಡಳು; ಮೇಳ=ನಂಟು; **ತನ್ನಯ ಮೇಳದ ಐವರ ನೆನೆದು**=ತನ್ನ ಗಂಡಂದಿರಾದ ಅಯ್ದು ಮಂದಿ ಪಾಂಡವರನ್ನು ನೆನೆಯುತ್ತ;

ಹರ ಹರ=ಶಿವ 'ಶಿವ' ಎಂಬ ಉದ್ಗಾರ ಸೂಚಕ ಪದಗಳು; ಶೂಲಪಾಣಿ=ಶಿವ/ಶೂಲವೆಂಬ ಹತಾರವನ್ನು ಹಿಡಿದವನು; ಮುಕುಂದ=ಕೃಷ್ಣ; ಎನುತವೆ=ಸ್ಮರಣೆ ಮಾಡುತ್ತ; **'ಹರ ಹರ ಶೂಲಪಾಣಿ ಮುಕುಂದ' ಎನುತವೆ**=ಹರ ಹರ 'ಶಿವ' ಕೃಷ್ಣ ಎಂದು ದೇವರ ನಾಮಸ್ಮರಣೆಯನ್ನು ಮಾಡುತ್ತ; **ರವಿಯನು ಈಕ್ಷಿಸುತ**=ತಲೆಯೆತ್ತಿ ಸೂರ್ಯನನ್ನು ನೋಡುತ್ತ; ಕಾಳು=ಕೆಟ್ಟದ್ದು/ಕೀಳಾದುದ್ದು;

ಮೂಳ=ತಿಳಿಗೇಡಿ; ಖಳ+ಅಗ್ರಣಿ: ಖಳ=ನೀಚ/ಕೇಡಿ; ಅಗ್ರಣಿ= ಮುಂದಾಳು; ಖಳಾಗ್ರಣಿ=ಮಹಾಕೇಡಿ/ಮಹಾನೀಚ; ಮೇಲು+ಕಾಣನಲಾ; ಮೇಲ್ಗಾಣು=ಇದೊಂದು ನುಡಿಗಟ್ಟು. ಯೋಗ್ಯವಾದುದನ್ನು/ಸರಿಯಾದುದನ್ನು/ ಉಚಿತವಾದುದನ್ನು ಅರಿತುಕೊಳ್ಳುವುದು; **ಕಾಳು ಮೂಳನಲಾ...ಖಳಾಗ್ರಣಿ ಮೇಲುಗಾಣನಲಾ**=ಕೆಟ್ಟವನು... ತಿಳಿಗೇಡಿಯೂ... ಮಹಾನೀಚನೂ ಆದ ಕೀಚಕನು ಯೋಗ್ಯವಾದ ನಡೆನುಡಿ ಯಾವುದೆಂಬುದನ್ನು ಕಾಣಲಾರ; ಏಕೆಂದರೆ ಕಾಮದಿಂದ ಕುರುಡನಾಗಿದ್ದಾನೆ;

ಮದ+ಅಂಧನ; ಮದ=ಸೊಕ್ಕು; ಅಂಧ=ಕುರುಡ; ಮದಾಂಧ=ಸೊಕ್ಕಿನಿಂದ ಕುರುಡನಾಗಿದ್ದಾನೆ; ಆರು+ಉಂಟು; ಆರು=ಯಾರು; ತರಳೆ=ಯುವತಿ/ತರುಣಿ; **ಮದಾಂಧನ ಸೋಲಿಸುವರು ಆರುಂಟು ಎನುತ ತರಳೆ ತಲೆಬಾಗಿದಳು**= ತೋಳ್ಬಲ, ರಾಜಬಲ ಮತ್ತು ಸೇನಾಬಲದಿಂದ ಸೊಕ್ಕಿರುವ ಕೀಚಕನನ್ನು ಸೋಲಿಸುವವರು ಯಾರಿದ್ದಾರೆ ಎಂದು ಸೈರಂಧ್ರಿಯು ಕಳವಳಪಡುತ್ತ, ಆ ಕಾಮಿಯ ಮೊಗವನ್ನು ನೋಡಲಾಗದೆ ತಲೆಯನ್ನು ಬಗ್ಗಿಸಿದಳು; ಆದರೆ ಸುಮ್ಮನಾಗದೆ ದಿಟ್ಟತನದಿಂದ ಕೀಚಕನನ್ನು ಎದುರಿಸುತ್ತ, ಅವನಿಗೆ ತಿಳಿಯ ಹೇಳುವುದರ ಜತೆಜತೆಗೆ ಎಚ್ಚರಿಕೆಯನ್ನು ನೀಡತೊಡಗಿದಳು; ದುರಾತ್ಮ=ನೀಚ ವ್ಯಕ್ತಿ; ಮಹಾ+ಅಪರಾಧ; ಅಪರಾಧ=ತಪ್ಪು;

**ಎಲೆ ದುರಾತ್ಮ ಮಹಾಪರಾಧವ ಬಳಸುವರೆ**=ಎಲೆ ನೀಚನೇ, ದೊಡ್ಡ ತಪ್ಪನ್ನು ಮಾಡುತ್ತಾರೆಯೇ; ಕುಲ=ವಂಶ/ಮನೆತನ; **ಬೇರನು ಬಯಲಿಂಗೆ ಕೊಯ್**= ಇದೊಂದು ರೂಪಕ. ಗಿಡ/ಬಳ್ಳಿ/ಮರದ ಬೇರನ್ನು ಬುಡಸಮೇತ ಕಿತ್ತು ಹೊರಕ್ಕೆಳೆದು ಭೂಮಿಯ ಮೇಲೆ ಹಾಕುವುದು ಅಂದರೆ ಇಡೀ ಆ ಸಸ್ಯವನ್ನು ನಾಶಮಾಡುವುದು; **ನಿನ್ನಯ ಕುಲದ ಬೇರನು ಬಯಲಿಂಗೆ ಕೊಯ್ವರೇ**=ನಿನ್ನ ಈ ಕಾಮದ ಸೊಕ್ಕಿನ ನಡೆನುಡಿಯು ನಿನ್ನ ವಂಶವನ್ನೇ ಬುಡಸಮೇತ ನಾಶಪಡಿಸುತ್ತದೆ; ಮಾಣ್=ನಿಲ್ಲಿಸು; **ಹೆತ್ತವರು ಮಕ್ಕಳುಗಳು ಎಂಬ ಈ ಬದುಕು ಮಾಣದೆ ಎಳಸಿಕೊಂಬಂತೆ ಆಯಿತು**=ನಿನ್ನ ಈ ನೀಚತನದ ಕೆಲಸದಿಂದ ಹೆತ್ತವರು ಮಕ್ಕಳಿಂದ ಕೂಡಿದ ನಿನ್ನ ಬದುಕು ಉಳಿಯದೆ ಸಾವಿನ ಪಾಶದಿಂದ ಎಳೆಸಿಕೊಳ್ಳುವಂತೆ ಆಯಿತು;

**ಇದರಿಂದ ಆವುದು ಬಹುದು**=ಇಂತಹ ಕುರುಡು ಕಾಮದಿಂದ ಯಾವುದನ್ನು ತಾನೆ ನೀನು ಪಡೆಯಬಹುದು; ಹಳಿವು=ಕೇಡು/ನಿಂದೆ; ಹೊದ್ದು=ಅಂಟು/ಹತ್ತು/ ತಟ್ಟು; **ಹಳಿವು ಹೊದ್ದದೆ**=ನಿನ್ನ ಕೇಡು ತಟ್ಟುವುದಿಲ್ಲವೇ; **ಕಾತರಿಸದಿರು**=ಕಾಮದ ಪರಿತಾಪದಿಂದ ಕಳವಳಕ್ಕೆ ಒಳಗಾಗದಿರು; ಮಂದಿವಾಳ=ಸಲುಗೆ/ಸದರ;

**ಮಂದಿವಾಳದ ಮಾತುಗಳು ಸಾಕು**=ನಾನು ರಾಣಿವಾಸದ ದಾಸಿಯೆಂದು ತಿಳಿದುಕೊಂಡು ನೀನು ಆಡುತ್ತಿರುವ ಸದರದ ನುಡಿಗಳು ಸಾಕು; **ಅಕಟ, ತೊಲಗೈ**=ಅಯ್ಯೋ... ಈ ಗಳಿಗೆಯಲ್ಲೇ ಇಲ್ಲಿಂದ ದೂರಸರಿ; ಸೋತಡೆ+ಏನು; ಮನುಜ=ಮಾನವ; ಚಿತ್ತ=ಮನಸ್ಸು; ಚಪಲ=ಚಂಚಲತೆ;

**ಸೋತಡೇನು ಅದು ಮನುಜ ಧರ್ಮದ ಚಿತ್ತಚಪಲವಲ**=ನನ್ನ ರೂಪವನ್ನು ಕಂಡು ನೀನು ಕಾಮಪರವಶನಾಗಿದ್ದರೇನು... ಅದು ಅಂತಹ ದೊಡ್ಡ ತಪ್ಪಲ್ಲ. ಏಕೆಂದರೆ ಸುಂದರಿಯಾದ ಹೆಣ್ಣನ್ನು ಕಂಡಾಗ ಗಂಡಿನ ಮನಸ್ಸು ಈ ರೀತಿ ಚಂಚಲಗೊಳ್ಳುವುದು ಮಾನವರಿಗೆ ಸಹಜವಾದುದು; **ಈ ತತು ಕ್ಷಣ ಜಾರು**=ಈ ಗಳಿಗೆಯಲ್ಲೇ ಇಲ್ಲಿಂದ ದೂರಸರಿ; ವ್ರಾತ=ಗುಂಪು/ಸಮೂಹ; ದೇವವ್ರಾತ= ದೇವತೆಗಳ ಗುಂಪು; **ತನ್ನವರು ದೇವವ್ರಾತದಲಿ ಬಲ್ಲಿದರು**=ನನ್ನ ಗಂಡಂದಿರುವ ದೇವತೆಗಳ ಸಮೂಹದಲ್ಲಿಯೇ ಮಹಾಬಲಶಾಲಿಗಳು; ಆತಗಳು=ಅವರುಗಳು; ಸೈರಿಸು=ತಾಳು/ಸಹಿಸು;

**ಆತಗಳು ಕೇಳಿದಡೆ ಸೈರಿಸರು**=ನೀನು ನನಗೆ ಕೊಡುತ್ತಿರುವ ಕಾಮದ ಕಿರುಕುಳವನ್ನು ಕೇಳಿದರೆ ಅವರು ಸಹಿಸಿಕೊಂಡು ಸುಮ್ಮನಿರುವುದಿಲ್ಲ; ಸೈರಂಧ್ರಿಯು ಆಡಿದ ಒಳಿತಿನ ಮಾತುಗಳಾಗಲಿ ಇಲ್ಲವೇ ನೀಡಿದ ಎಚ್ಚರಿಕೆಯಾಗಲಿ ಕಾಮಿಯಾದ ಕೀಚಕನ ಮನದ ಮೇಲೆ ತುಸುವಾದರೂ ಪರಿಣಾಮವನ್ನು ಬೀರಲಿಲ್ಲ. ಕಾಮಜ್ವರದಿಂದ ಪೀಡಿತನಾಗಿರುವ ಕೀಚಕನು ಸೈರಂಧ್ರಿಯನ್ನು ಕೂಡುವುದಕ್ಕಾಗಿ ಸಾವಿಗೂ ಸಿದ್ಧನಾಗಿದ್ದಾನೆ;

ಡಾವರ=ಕೋಟಲೆ/ಹಿಂಸೆ/ಪ್ರತಾಪ; ಘನ=ದೊಡ್ಡದು; **ಕಾಮನ ಡಾವರವು ಘನ**=ಮದನನ ಕೋಟಲೆ ಬಹು ಶಕ್ತಿಯುತವಾಗಿದೆ/ನನ್ನ ಮಯ್ ಮನದಲ್ಲಿ ತುಡಿಯುತ್ತಿರುವ ಕಾಮದ ಒಳಮಿಡಿತಗಳು ತೀವ್ರತರವಾಗಿವೆ; ನೆರೆ=ಕೂಡು/ ದೇಹದೊಡನೆ ಕಾಮದ ನಂಟನ್ನು ಪಡೆದು; ಸಾವೆನ್+ಅಲ್ಲದೆ; ಅಂಬು=ಬಾಣ; **ತನಗೆ ಸಾವು ತಪ್ಪದು. ನಿನ್ನ ನೆರೆದೇ ಸಾವೆನಲ್ಲದೆ, ಕಾಮನ ಅಂಬಿಂಗೆ ಒಡಲನು ಒಪ್ಪಿಸೆನು**=ಹೇಗಿದ್ದರೂ ನನಗೆ ಸಾವು ತಪ್ಪದು. ಆದ್ದರಿಂದ ನಿನ್ನೊಡನೆ ಕಾಮದ ನಂಟನ್ನು ಹೊಂದಿಯೇ ಸಾಯುತ್ತೇನಲ್ಲದೆ, ಕಾಮನ ಬಾಣಕ್ಕೆ ನನ್ನ ಒಡಲನ್ನು ನೀಡುವುದಿಲ್ಲ. ಅಂದರೆ ನಿನ್ನನ್ನು ಕೂಡಬೇಕೆಂಬ ಬಯಕೆಯನ್ನು ಈಡೇರಿಸಿಕೊಳ್ಳದೇ ಸಾಯುವುದಿಲ್ಲ;

ಭಾವೆ=ಸುಂದರಿ; **ಭಾವೆ, ಎನ್ನ ನೂಕದಿರು**=ಸುಂದರಿಯೇ, ನನ್ನನ್ನು ನಿರಾಕರಿಸಿದಿರು; ವರ=ಉತ್ತಮವಾದ; ರಾಜೀವ=ತಾವರೆ; ರಾಜೀವಮುಖಿ=

ತಾವರೆಯ ಮೊಗದವಳು/ಸುಂದರಿ; ಕೃಪೆ=ದಯೆ/ಕರುಣೆ; **ವರ ರಾಜೀವಮುಖಿ, ಕೃಪೆ ಮಾಡು**=ಸುಂದರಿ... ನನ್ನ ಮೇಲೆ ದಯೆ ತೋರು; **ತನ್ನಯ ಜೀವನವನು ಉಳುಹು ಎನುತ ಕಮಲಾನನೆಗೆ ಕೈಮುಗಿದ**=ನನ್ನ ಜೀವನವನ್ನು ಉಳಿಸು ಎನುತ ಸೈರಂಧ್ರಿಗೆ ಕಯ್ ಮುಗಿದ; ಕೀಚಕನ ಯಾವುದೇ ಬಗೆಯ ನಯವಂಚನೆಯ ಇಲ್ಲವೇ ಕಾಮುಕತನದ ಮಾತುಗಳಿಗೆ ಬೆಲೆಕೊಡದೆ, ಸೈರಂಧ್ರಿಯು ಕೀಚಕನಿಗೆ ಮತ್ತೆ ಎಚ್ಚರಿಕೆಯನ್ನು ನೀಡುತ್ತಾಳೆ; ಮರುಳುತನ=ಹುಚ್ಚುತನ/ತಲೆಕೆಟ್ಟ ನಡವಳಿಕೆ; **ಮರುಳತನ ಬೇಡ**=ತಲೆಕೆಟ್ಟವನಂತೆ ನಡೆದುಕೊಳ್ಳಬೇಡ;

**ಎಲವೊ, ತಾನು ಗಂಧರ್ವರಿಗೆ ಹೆಂಡತಿ; ತನ್ನವರು ಬಲ್ಲಿದರು**=ನನ್ನ ಗಂಡಂದಿರು ಬಲಶಾಲಿಗಳು; **ನಿನ್ನಯ ದುರುಳತನವನು ಸೈರಿಸರು**=ನಿನ್ನ ಕೆಟ್ಟತನವನ್ನು ಸಹಿಸಿಕೊಳ್ಳುವುದಿಲ್ಲ; ಸೊರಹು=ಅತಿಯಾಗಿ ಮಾತನಾಡು; **ಸೊರಹದಿರು**= ಬಾಯಿಗೆ ಬಂದಂತೆ ಏನೇನೊ ಮಾತನಾಡಬೇಡ; ಅಪಕೀರ್ತಿ=ಕೆಟ್ಟ ಹೆಸರು; ನಾರಿ=ಹೆಣ್ಣು; ನೆರೆ=ಕೂಡು; **ಅಪಕೀರ್ತಿ ನಾರಿಯ ನೆರೆಯದಿರು**=ಇದೊಂದು ರೂಪಕ. ಕೆಟ್ಟಹೆಸರನ್ನು ಹೊಂದಬೇಡ; ನಿಳಯ=ಮನೆ; ತೃಣ=ಹುಲ್ಲುಕಡ್ಡಿ; ಸಾರು=ಒತ್ತಿಹೇಳು;

**ನೀ ನಿನ್ನ ನಿಳಯಕೆ ಮರಳುವುದು ಲೇಸು ಎಂದು ತೃಣವನು ಹಿಡಿದು ಸಾರಿದಳು**=ನೀನು ನಿನ್ನ ಮನೆಗೆ ಹಿಂತಿರುಗುವುದು ಒಳ್ಳೆಯದು ಎಂದು ನುಡಿದಳು. ಕೀಚಕನನ್ನು ಉದ್ದೇಶಿಸಿ ಮಾತನಾಡುವಾಗ ಅವನ ಮೊಗವನ್ನು ನೋಡಲು ಹೇಸಿ, ಒಂದು ಹುಲ್ಲುಕಡ್ಡಿಯನ್ನು ಆಸರೆಯಾಗಿ ಹಿಡಿದುಕೊಂಡು, ಅದನ್ನು ನೋಡುತ್ತ ಸೈರಂಧ್ರಿಯು ತಾನು ನೀಡಬೇಕಾದ ಎಚ್ಚರಿಕೆಯ ನುಡಿಗಳನ್ನಾಡಿದಳು; ಆದರೆ ಕಾಮಿಯಾದ ಕೀಚಕನು ಸೈರಂಧ್ರಿಯ ಮಾತುಗಳನ್ನು ಲೆಕ್ಕಿಸದೆ, ತನ್ನ ಪ್ರತಾಪವನ್ನೇ ಮೆರೆಯುತ್ತಾನೆ; ಎನ್ನ=ನನ್ನ; ಆಟೋಪ=ಆಡಂಬರ/ಅಬ್ಬರ; ಅರಿಯೆ=ತಿಳಿಯೆ; **ಎನ್ನ ಆಟೋಪವನು ನೀನು ಅರಿಯೆ**=ನನ್ನ ಸಿರಿಸಂಪತ್ತು ಮತ್ತು ನನ್ನ ಪರಾಕ್ರಮದ ಬಗೆಯು ಏನೆಂಬುದು ನಿನಗೆ ಗೊತ್ತಿಲ್ಲ; ಔಡು=ದವಡೆ; ಮೃತ್ಯು=ಸಾವು;

**ಬಡವರ ಕೋಪವು ಔಡಿಗೆ ಮೃತ್ಯು**=ಬಡವನ ಕೋಪ ದವಡೆಗೆ ಮೂಲ ಎಂಬ ಗಾದೆ ಮಾತು ಜನಬಳಕೆಯಲ್ಲಿದೆ. ಸಿರಿವಂತರ ಎದುರು ಬಡವರು ತಿರುಗಿಬಿದ್ದರೆ, ಬಡವರು ನಾಶಗೊಳ್ಳುತ್ತಾರೆ ಎಂಬ ತಿರುಳಿನಲ್ಲಿ ಈ ಗಾದೆಯು ಬಳಕೆಗೊಂಡಿದೆ. ಅಂತೆಯೇ ರಾಜವಂಶದವನು, ಸೇನಾನಿಯು ಮತ್ತು ಬಲಶಾಲಿಯು ಆದ ತನ್ನ ಎದುರು ಯಾರೇ ಬಂದರು ನಾಶವಾಗುತ್ತಾರೆ ಎಂಬ ಅಹಂಕಾರದಿಂದ ಕೀಚಕನು ಈ ನಾಣ್ಣುಡಿಯನ್ನು ಬಳಸಿದ್ದಾನೆ;

ಏಗು=ಏನನ್ನು ಮಾಡು; **ನಿನ್ನವರು ಎನ್ನನು ಏಗುವರು**=ನಿನ್ನವರು ನನ್ನನ್ನು ಏನು ತಾನೆ ಮಾಡಬಲ್ಲರು; ಆಪು=ಪರಾಕ್ರಮ/ಸಾಹಸ; **ಅವರ ಆಪೆನು**=ಅವರನ್ನು ಪರಾಕ್ರಮದಿಂದ ಸದೆಬಡಿಯಬಲ್ಲೆನು; ಅಂತು+ಇರಲಿ; ಅಂತು=ಹಾಗೆ; **ಅಂತಿರಲಿ**=ನಿನ್ನ ಗಂಡಂದಿರುವ ಮಹಾಪರಾಕ್ರಮಿಗಳು ಎಂಬ ಸಂಗತಿ ಹಾಗಿರಲಿ. ಅದು ನನಗೆ ದೊಡ್ಡ ಸಂಗತಿಯಲ್ಲ. ಏಕೆಂದರೆ ನಾನು ಮಹಾಪರಾಕ್ರಮಿ; ಎನಗೆ=ನನಗೆ; ಓಪಳು+ಆದರೆ; ಓಪಳು=ನಲ್ಲೆ;

**ನೀನು ಎನಗೆ ಓಪಳಾದರೆ ಸಾಕು**=ನೀನು ನನಗೆ ನಲ್ಲೆಯಾದರೆ ಸಾಕು; ಮಲೆ=ಎದುರಿಸು/ಇದುರುಬೀಳು; ಪಿನಾಕಿ=ಪಿನಾಕವೆಂಬ ಹತಾರವನ್ನು ಹಿಡಿದುಕೊಂಡಿರುವ ವ್ಯಕ್ತಿ/ಶಿವ; ತೆರಳು=ಹೆದರು/ಹಿಂಜರಿ; **ಮಲೆತಡೆ ಆ ಪಿನಾಕಿಗೆ ತೆರಳುವೆನೆ**=ಆ ಶಿವನೊಡನೆ ಕಾಳಗ ಎದುರಾದರೂ ನಾನು ಹಿಂಜರಿಯುವುದಿಲ್ಲ/ ಶಿವನನ್ನೇ ಸದೆಬಡಿಯಬಲ್ಲೆ; **ಬಳಿಕ ಅಲ್ಲಿ ನೋಡು**=ಈಗ ಕೀಚಕನು ಬಹಳ ಹಗುರವಾದ ದಾಟಿಯಲ್ಲಿ ವ್ಯಂಗ್ಯದ ಮಾತುಗಳನ್ನಾಡತೊಡಗುತ್ತಾನೆ; ಮಾನವ ಜೀವಿಗಳ ಮಯ್ ಮನದಲ್ಲಿ ಕಾಮದ ಒಳಮಿಡಿತಗಳು ಮೂಡುವುದಕ್ಕೆ ಕಾರಣವಾದ ನಿಸರ್ಗದ ಸಂಗತಿಗಳನ್ನು ಕುರಿತು ವಿಡಂಬನೆ ಮಾಡತೊಡಗುತ್ತಾನೆ; ಹುಳುಕು=ಕೀಳಾದುದು/ಹೀನವಾದುದು/ಅತಿ ಸಾಮಾನ್ಯವಾದುದು;

**ಹುಳುಕನಲ್ಲಾ ತುಂಬಿ**=ಜೇಂಕಾರ ನಾದವನ್ನು ಮಾಡುವ ತುಂಬಿ ಒಂದು ಸಾಮಾನ್ಯ ಹುಳುವಲ್ಲವೇ; ಗಳಹು=ಹರಟು/ಅತಿಯಾಗಿ ಮಾತನಾಡು; **ಕೋಗಿಲೆ ಗಳಹನಲ್ಲಾ**=ತನ್ನ ಕೊರಳ ಗಾನದ ಇಂಪಿನಿಂದ ಹಾಡುವ ಕೋಗಿಲೆಯು ಹರಟೆಯ ಮಲ್ಲನಲ್ಲವೇ; ಶಶಿ=ಚಂದ್ರ; ವಸಂತ=ಮರಗಿಡಗಳೆಲ್ಲವೂ ಚಿಗುರಿ ಕಂಗೊಳಿಸುವ ಕಾಲ; ಬಲುಹು=ಶಕ್ತಿ/ಕಸುವು; ಮಾನ್ಯರು=ಮನ್ನಣೆಯನ್ನು ಪಡೆದವರು/ಸಮಾಜದಲ್ಲಿ ಒಳ್ಳೆಯ ಸ್ಥಾನಮಾನವನ್ನು ಪಡೆದವರು; ಇರಿ=ಚುಚ್ಚು/ತಿವಿ; **ಶಶಿ ವಸಂತನ ಬಲುಹು ಮಾನ್ಯರನು ಇರಿಯದೇ**= ಬೆಳುದಿಂಗಳನ್ನು ಚೆಲ್ಲುವ ಚಂದ್ರ ಮತ್ತು ಚಿಗುರಿದ ಮರಗಿಡಬಳ್ಳಿಗಳ ಸೊಬಗಿನಿಂದ ಕಂಗೊಳಿಸುವ ವಸಂತನು ಲೋಕದಲ್ಲಿ ಒಳ್ಳೆಯ ವ್ಯಕ್ತಿಗಳೆಂದು ಹೆಸರಾದವರ ಮಯ್ ಮನದಲ್ಲಿ ಕಾಮದ ಒಳಮಿಡಿತಗಳನ್ನು ಕೆರಳಿಸಿ ಕಾಡುವುದಿಲ್ಲವೇ;

**ತಂಗಾಳಿ ಧಾರ್ಮಿಕನೆ**=ಬೀಸಿ ಸುಳಿಯುವ ತಂಗಾಳಿಯು ಬಹಳ ಒಳ್ಳೆಯವನೇ; ಮಾಕಂದ=ಮಾವಿನ ಮರ; **ಮಾಕಂದ ಖಳನಲಾ**=ಚಿಗುರನ್ನು ತಳೆದು ಕೋಗಿಲೆಯನ್ನು ಸೆಳೆದು ಮಾವಿನ ಚಿಗುರನ್ನು ತಿಂದು ಕೋಗಿಲೆಯು ಇಂಪಾದ ಗಾನವನ್ನು ಹಾಡುವುದಕ್ಕೆ ಕಾರಣವಾಗುವ ಮಾವಿನ ಮರ ಅತಿ ಕೇಡಿಯಲ್ಲವೇ;

ಮನೋಭವ=ಮದನ/ಕಾಮದೇವ/ಮನ್ಮಥ; ಕೊಲೆಗಡಿಗ=ಕೊಲ್ಲುವವನು; **ಮನೋಭವನು ಲೋಕದ ಕೊಲೆಗಡಿಗನಲ್ಲಾ**=ಮಾನವರ ಮಯ್ ಮನದಲ್ಲಿ ಕಾಮವನ್ನು ಕೆರಳಿಸಿ ಕಾಡುವ ಮನ್ಮಥನು ಲೋಕದ ಕೊಲೆಗಡುಕನಲ್ಲವೇ;

ಕೀಚಕನು ತನ್ನ ಕಾಮವಿಕಾರದ ನಡೆನುಡಿಗೆ ನಿಸರ್ಗದಲ್ಲಿನ ದುಂಬಿಯ ಜೇಂಕಾರ; ಕೋಗಿಲೆಯ ಇಂಪಾದ ಹಾಡು; ಚಂದ್ರನ ಕಿರಣಗಳು; ವಸಂತಕಾಲದ ನಿಸರ್ಗದ ಚೆಲುವು; ತಂಗಾಳಿಯ ಸ್ಪರ್ಶ; ಮಾವಿನ ಮರದ ಚಿಗುರು; ಮನ್ಮಥನ ಹೂಬಾಣದ ಪೆಟ್ಟುಗಳು ಕಾರಣವೆಂದು ಆರೋಪಿಸುತ್ತಿದ್ದಾನೆ; ಸಮಾಜದಲ್ಲಿ ಎಲ್ಲ ಕಾಲದಲ್ಲಿಯೂ ಮತ್ತು ಎಲ್ಲ ಸನ್ನಿವೇಶಗಳಲ್ಲಿಯೂ ಪ್ರತಿಯೊಬ್ಬ ಕಾಮಿಯು ತನ್ನ ತಪ್ಪನ್ನು ಮುಚ್ಚಿಕೊಂಡು ಬೇರೆಯವರ ಮೇಲೆ ಆರೋಪವನ್ನು ಮಾಡುವುದನ್ನು ಕೀಚಕನ ನುಡಿಗಳು ಸೂಚಿಸುತ್ತಿವೆ;

ಪಾಪಿ=ಕಾಮದ ತೀವ್ರತೆಯಿಂದ ತಿಳಿಗೇಡಿಯಾಗಿರುವ ಕೀಚಕನಿಗೆ ತನ್ನನ್ನು ನಿರಾಕರಿಸುತ್ತಿರುವ ಸೈರಂಧ್ರಿಯೇ ಕೆಟ್ಟವಳಾಗಿ ಕಾಣುತ್ತಿದ್ದಾಳೆ; ಇಳಿಕೆ=ತಿರಸ್ಕಾರ/ತಾತ್ಸಾರ/ಕಡೆಗಣನೆ; **ಇಳಿಕೆಗೊಂಬರೆ**=ನನ್ನನ್ನು ಕಡೆಗಣಿಸುವುದು ಸರಿಯೇ; **ಒಲಿಯದೆ ಕೊಲುವರೇ**=ನನಗೆ ವಶಳಾಗದೆ ಈ ರೀತಿ ದೂರಸರಿದು, ನನ್ನನ್ನು ಕೊಲ್ಲುತ್ತಿರುವುದು ಸರಿಯಲ್ಲವೆಂದು ಕೀಚಕನು ದೂರುತ್ತಿದ್ದಾನೆ; **ನಿನ್ನನು ಒಲಿದು ನಾವು ಕೊಲ್ಲೆವು**=ನಿನ್ನನ್ನು ಕೊಲ್ಲಬೇಕೆಂಬ ಇಚ್ಚೆ ನನಗಿಲ್ಲ; ಸುಭಟ=ಪರಾಕ್ರಮಿ/ಶೂರ; **ಕೊಲುವ ಸುಭಟರು ಬೇರೆ**=ನಿನ್ನನ್ನು ಕೊಲ್ಲುವ ಪರಾಕ್ರಮಿ ಬೇರೆ ಇದ್ದಾರೆ; ಬಯಲು=ಬಹಿರಂಗವಾಗಿ/ಪ್ರಯೋಜನವಿಲ್ಲದ; ಗಳಹು=ಹರಟು/ಬಾಯಿಗೆ ಬಂದಂತೆ ಮಾತನಾಡು; ಫಲ=ಪ್ರಯೋಜನ;

**ಬಯಲಿಗೆ ಹಲವ ಗಳಹಿದರೇನು ಫಲವಿಲ್ಲ**=ಸುಮ್ಮನೆ ಬಾಯಿಗೆ ಬಂದಂತೆ ಪ್ರಯೋಜನವಿಲ್ಲದ ಮಾತನಾಡುವುದರಿಂದ ಏನು ದೊರಕುವುದಿಲ್ಲ; **ಅಕಟ, ಸಾರಿದೆನು**=ಅಯ್ಯೋ… ಮತ್ತೆ ಮತ್ತೆ ನಿನಗೆ ತಿಳಿಯಹೇಳುತ್ತಿದ್ದೇನೆ; ತಿಳುಪಿದೊಡೆ=ತಿಳಿಸಿದರೆ; ಎನ್ನವರು=ನನ್ನ ಗಂಡಂದಿರು; ಅರಿದು=ಕತ್ತರಿಸಿ; ತುಷ್ಟ=ತಣಿವು/ತೃಪ್ತಿ/ಸಮಾಧಾನ; **ತಿಳುಪಿದೊಡೆ ಎನ್ನವರು ನಿನ್ನಯ ತಲೆಯನು ಅರಿದೂ ತುಷ್ಟರಾಗರು**=ನೀನು ನನಗೆ ಕೊಡುತ್ತಿರುವ ಕಿರುಕುಳವನ್ನು ನನ್ನ ಗಂಡಂದಿರಿಗೆ ತಿಳಿಸಿದರೆ, ಅವರು ನಿನ್ನ ತಲೆಯನ್ನು ಕತ್ತರಿಸಿದರೂ ಸಮಾಧಾನಗೊಳ್ಳುವುದಿಲ್ಲ;

ಅನ್ವಯ=ವಂಶ/ಮನೆತನ; ಅಬ್ಧಿ=ಕಡಲು/ಸಮುದ್ರ; ಕಲಕು=ಕದಡು/ಕೆಡಿಸು/ಕಡೆ; **ನಿನ್ನ ಅನ್ವಯ ಅಬ್ಧಿಯನು ಕಲಕುವರು**=ನಿನ್ನ ವಂಶದ ಕಡಲನ್ನೇ ಕಡೆಯುತ್ತಾರೆ/ಇಡೀ ನಿನ್ನ ವಂಶವನ್ನೇ ನಾಶಪಡಿಸುತ್ತಾರೆ; ಅಳಿ=ನಾಶ;

**ಕುಲದೊಳು ಒಬ್ಬನು ಜನಿಸಿ ವಂಶವನು ಅಳಿದನು**=ಕುಲದಲ್ಲಿ ಒಬ್ಬನು ಹುಟ್ಟಿ, ಅವನು ವಂಶವನ್ನೇ ಕೊನೆಗೊಳಿಸಿದನು; ದುರ್ಯಶ=ಕೆಟ್ಟ ಹೆಸರು; ಲೇಸು+ಕಾಣೆನು; ಲೇಸು=ಒಳ್ಳೆಯದು; **ಅಕಟಕಟ ಎಂಬ ದುರ್ಯಶವು ಉಳಿವುದಲ್ಲದೆ ಲೇಸಗಾಣೆನು**=ಅಯ್ಯಯ್ಯೋ ಎಂಬ ನಿನ್ನವರ ಸಂಕಟದ ದನಿಯೊಡನೆ ನಿನಗೆ ಕೆಟ್ಟಹೆಸರು ಬರುವುದಲ್ಲದೆ, ಮತ್ತಾವ ರೀತಿಯಲ್ಲಿಯೂ ನಿನಗೆ ಒಳ್ಳೆಯದಾಗು ವುದನ್ನು ನಾನು ಕಾಣೆನು; **ಬರಿದೆ ಗಳಹದಿರು**=ಸುಮ್ಮನೆ ಹರಟಬೇಡ/ಸೊಕ್ಕಿನ ನುಡಿಗಳನ್ನಾಡಬೇಡ; ಅಖಿಳ=ಸಮಸ್ತ/ಎಲ್ಲ; ಕೊಲೆಗಡಿಕೆ=ಕೊಲೆಗಾತಿ/ ಕೊಲ್ಲುವವಳು; ಹಲಬರನು=ಅನೇಕ ಜನರನ್ನು; ಸುಡಲಿ+ಎಂದು; ಅಳಲು=ಸಂಕಟಪಡು/ಶೋಕಿಸು;

**ನಿನ್ನ ಅಖಿಳ ರಾಣಿಯರು "ಕೊಲೆಗಡಿಕೆಯೋ ಪಾಪಿ ಹೆಂಗಸು ಹಲಬರನು ಕೊಲಿಸಿದಳು ಸುಡಲೆಂದು" ಅಳಲುವರು**=ನೀನು ಮತ್ತು ನಿನ್ನ ವಂಶದವರ ಸಾವನ್ನು ಕಂಡು ನಿನ್ನ ರಾಣಿವಾಸದ ಹೆಂಗಸರೆಲ್ಲರೂ "ಕೊಲೆಗಡುಕಿಯಾದ ಈ ಪಾಪಿ ಹೆಂಗಸು ಅನೇಕರನ್ನು ಕೊಲ್ಲಿಸಿದಳು. ಇವಳನ್ನು ಸುಡಲಿ" ಎಂದು ನನಗೆ ಶಾಪವನ್ನು ಹಾಕುತ್ತ ಕಣ್ಣೀರನ್ನು ಇಡುತ್ತಾರೆ;

ಸೈರಂಧ್ರಿಯ ಯಾವ ಬಗೆಯ ಹಿತನುಡಿಗಳಾಗಲಿ ಇಲ್ಲವೇ ಎಚ್ಚರಿಕೆಯ ನುಡಿಗಳಾಗಲಿ ಏನೊಂದು ಪರಿಣಾಮವನ್ನು ಕೀಚಕನ ಮನದ ಮೇಲೆ ಬೀರುತ್ತಿಲ್ಲ; ಕೀಚಕ ಮತ್ತೆ ಮತ್ತೆ ತನ್ನ ಪರಾಕ್ರಮದ ಮಾತುಗಳನ್ನೇ ಆಡುತ್ತ, ಸೈರಂಧ್ರಿಯನ್ನು ಮತ್ತೆ ಮತ್ತೆ ಪೀಡಿಸುತ್ತಿದ್ದಾನೆ; ಮರುಳು=ತಿಳಿಗೇಡಿ; ಹರಿ=ವಿಷ್ಣು; ವಿರಂಚಿ=ಬ್ರಹ್ಮ; ಸಂಗರ= ಕಾಳೆಗ/ಯುದ್ದ; **ಮರುಳೇ, ಹರಿ ವಿರಂಚಿಗಳು ಆದೊಡೆಯು ಸಂಗರದೊಳು ಎನಗೆ ಇದಿರಿಲ್ಲ**=ನನ್ನ ಪರಾಕ್ರಮದ ಬಗ್ಗೆ ಅರಿವಿಲ್ಲದವಳೇ, ಕೇಳು ರಣರಂಗದಲ್ಲಿ ಆ ಹರಿ ಬ್ರಹ್ಮ ಬಂದರೂ ನನಗೆ ಸಮನರಲ್ಲ; **ನಿನ್ನೊಡನೆ ಏನು**=ನಿನ್ನೊಡನೆ ಸುಮ್ಮನೆ ಏನು ಮಾತು; **ನಿನ್ನ ವಲ್ಲಭರ ತೋರಾ**=ನಿನ್ನ ಗಂಡಂದಿರನ್ನು ತೋರು;

ಪರಸತಿ=ಅನ್ಯರ ಹೆಂಡತಿ; ಸೆರೆ=ಬಂಧಿಸು; ಕೋಡಗ+ಪಿಂಡು; ಕೋಡಗ= ವಾನರ/ಕಪಿ; ಪಿಂಡು=ಗುಂಪು/ಸಮೂಹ; ನೆರೆ=ಜತೆಗೂಡು; ಮುತ್ತು=ಆಕ್ರಮಣ ಮಾಡು; **ಪರಸತಿಯ ಸೆರೆಗೈಯೆ ಕೋಡಗವಿಂಡು ನೆರೆದು ಮುತ್ತಿತು**=ರಾಮನ ಹೆಂಡತಿಯಾದ ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೋಗಲು, ವಾನರ ಸೇನೆಯು ಜತೆಗೂಡಿ ಲಂಕೆಯ ಮೇಲೆ ಆಕ್ರಮಣವನ್ನು ಮಾಡಿತು; ಅರಿ+ಆಯ್ತು; ಅರಿ=ಹಗೆ/ಶತ್ರು; **ಅರಿಯಾಯ್ತು**=ರಾಮನೊಡನೆ ರಾವಣನಿಗೆ ಹಗೆತನ ಉಂಟಾಯಿತು; **ಸುಭಟನು ಅಂತಕನ ನಗರಿಗೆ ಸರಿದನು**= ಪರಾಕ್ರಮಿ

ಯಾಗಿದ್ದ ರಾವಣನು ಯಮನ ಪಟ್ಟಣಕ್ಕೆ ಹೋದನು. ಮಹಾವೀರನಾಗಿದ್ದ ರಾವಣನು ಸೀತಾ ಅಪಹರಣದ ಕಾಮುಕತನದ ಕೆಟ್ಟಕೆಲಸದಿಂದ ಸಾವನ್ನಪ್ಪಿದನು;

ನೀರೆ=ಸುಂದರಿ; **ನೀರೆ ನೂಕದಿರು**=ಸುಂದರಿ, ನನ್ನನ್ನು ನಿರಾಕರಿಸಬೇಡ; ಮುಮ್ಮಾರು+ಪೋದುದು; ಮುಮ್ಮಾರು= ಮುನ್+ಮಾರು; ಮುನ್=ಈ ಮೊದಲೇ; ಮಾರು=ಮೋಹ/ಪರವಶ; ಮುಮ್ಮಾರು=ಮೊದಲೇ ಮೋಹಗೊಂಡಿರುವುದು; **ಎನ್ನ ಮನ ಮುಮ್ಮಾರುಪೋದುದು**=ನನ್ನ ಮನಸ್ಸು ನಿನ್ನನ್ನು ಕಂಡಕೂಡಲೇ ಮೋಹಗೊಂಡಿದೆ; ಚಿತ್ತ=ಮನಸ್ಸು; ಸೂರೆ=ಕೊಳ್ಳೆ/ಲೂಟಿ; ಒಡಲು=ದೇಹ; ಹೂಣಿಸು=ನೀಡು/ಗುರಿಯಿಡು;

**ನೀನು ಚಿತ್ತವ ಸೂರೆಗೊಂಡು ಈ ಮದನನ ಅಂಬಿಂಗೆ ಒಡಲ ಹೂಣಿಸುವೆ**=ನೀನು ನನ್ನ ಮನಸ್ಸನ್ನು ಸೆಳೆದುಕೊಂಡು, ಈ ಮದನನ ಬಾಣಕ್ಕೆ ನನ್ನ ದೇಹವನ್ನು ಬಲಿಕೊಡುತ್ತಿರುವೆ; **ಜಾರದಿರು**=ನನಗೆ ಒಲಿಯದೆ ನುಣಿಚಿಕೊಳ್ಳಬೇಡ; ಎನ್ನ+ಎದೆಗೆ; ಎದೆ=ಮನಸ್ಸು; ತಾಪ=ಬಿಸಿ/ಸಂಕಟ; ಬೀರು=ಉಂಟುಮಾಡು; **ಎನ್ನೆದೆಗೆ ತಾಪವ ಬೀರದಿರು**=ನನ್ನ ಮನಕ್ಕೆ ಸಂಕಟವನ್ನು ಉಂಟುಮಾಡಬೇಡ; ಕಾರುಣ್ಯ=ಕರುಣೆ/ದಯೆ/ಮರುಕ; **ಎನಗೆ ಕಾರುಣ್ಯವನು ಕೈದೋರು**=ನನಗೆ ನಿನ್ನ ಕರುಣೆಯನ್ನು ನೀಡು; ಕಮಲ+ಅಕ್ಷಿ; ಅಕ್ಷ=ಕಣ್ಣು; ಕಮಲಾಕ್ಷಿ=ಕಮಲ ಹೂವಿನಂತಹ ಕಣ್ಣುಳ್ಳವಳು/ಸುಂದರಿ; ಮಾಣ್=ನಿಲ್ಲಿಸು; **ಕಮಲಾಕ್ಷಿ, ಅಕಟ ಮರಣವ ಮಾಣಿಸು**=ಸುಂದರಿಯೇ, ಅಯ್ಯೋ, ನಿನ್ನನ್ನು ಪಡೆಯಲಾಗದೆ ಸಾಯುವಂತಾಗಿರುವ ನನ್ನನ್ನು ಕಾಪಾಡು/ನನ್ನ ಸಾವನ್ನು ತಪ್ಪಿಸು; ವಿಕಾರ=ರೂಪ ಕೆಡುವುದು; ಮಾರಿ=ಸಾವಿನ ದೇವತೆ/ಕೇಡು/ಹಾನಿ; **ಮನದ ವಿಕಾರ ಮಾರಿ**=ಇದೊಂದು ರೂಪಕ. ಸಾವು ನೋವು ಕಾರಣವಾಗುವಂತಹ ರೀತಿಯಲ್ಲಿ ವ್ಯಕ್ತಿಯ ಮನದಲ್ಲಿ ಕೆಟ್ಟ ಕೆಟ್ಟ ಒಳಮಿಡಿತಗಳು ಮೂಡುವುದು; ಸರಸ=ವಿನೋದ/ಚೆಲ್ಲಾಟ;

**ಮರುಳೆ, ಮನದ ವಿಕಾರ ಮಾರಿಯ ಸರಸವಾಡುವರು ಉಂಟೆ**=ತಿಳಿಗೇಡಿಯೇ, ಮನದಲ್ಲಿ ಮೂಡುವಂತಹ ಕೆಟ್ಟ ಒಳಮಿಡಿತಗಳನ್ನು ಹತ್ತಿಕ್ಕಿಕೊಳ್ಳಲಾಗದೆ, ಅವನ್ನು ಆಚರಣೆಗೆ ತರಲು ಹೋಗಿ ಸಾವಿನ ಜತೆ ಚೆಲ್ಲಾಟ ವಾಡುವರು ಇದ್ದಾರೆಯೆ; **ಮೃತ್ಯುವ ನೆರೆವರೇ**=ಸಾವನ್ನು ಕೂಡುವರೇ... ತಾವಾಗಿಯೇ ಸಾವನ್ನು ತಂದುಕೊಳ್ಳುತ್ತಾರೆಯೇ; ದಳ್ಳುರಿ=ದಗದಗನೇ ಉರಿಯುತ್ತಿರುವ; ಪ್ರತಿಮೆ=ಲೋಹದಿಂದ ಮಾಡಿರುವ ವಿಗ್ರಹ; **ದಳ್ಳುರಿಯ ಪ್ರತಿಮೆಯನು ಅಪ್ಪುವರೆ**=ದಗದಗನೇ ಉರಿಯುತ್ತಿರುವ ಬೆಂಕಿಯಿಂದ ಕಾದು ಕೆಂಡದಂತಾಗಿರುವ ಲೋಹದ ವಿಗ್ರಹವನ್ನು ಅಪ್ಪಿಕೊಳ್ಳುತ್ತಾರೆಯೆ;

ಅಪ್ಪಿಕೊಂಡವರು ಸಾವಿಗೀಡಾಗುತ್ತಾರಲ್ಲವೇ;

ಸರಳು=ಬಾಣ/ಸಲಾಕೆ; ಅಂಗೈಸು=ಕೂಡು/ಮೇಲೆ ಬೀಳು; **ಬಯಸಿ ಸರಳಿಗೆ ಅಂಗೈಸುವರೆ**=ತಾವಾಗಿಯೇ ಬಯಸಿ ಕಬ್ಬಿಣದ ಸಲಾಕೆಯ ಮೇಲೆ ಬೀಳುತ್ತಾರೆಯೇ; **ಪಾಪಿಯೆ, ನಿನ್ನ ಅರಮನೆಗೆ ಮರಳು**=ಪಾಪಿಯೇ, ಹೆಚ್ಚು ಮಾತನಾಡದೆ ನಿನ್ನ ಅರಮನೆಗೆ ಹಿಂತಿರುಗು; ಗರ್ವ=ಹೆಮ್ಮೆ; ಹರಹು=ತೂರು/ಎಸೆ/ಹರಡು; **ಎನ್ನಯ ಗರುವ ಗಂಡರು ಕಡಿದು ಹರಹುವರು**=ನನ್ನ ಹೆಮ್ಮೆಯ ಗಂಡಂದಿರು ನಿನ್ನನ್ನು ಕಡಿದು ಕತ್ತರಿಸಿ, ನಿನ್ನ ದೇಹದ ತುಂಡುಗಳನ್ನು ಸುತ್ತಲೂ ಎಸೆಯುವರು; ಕಾಮದಿಂದ ಕುರುಡನಾಗಿರುವ ಮತ್ತು ವ್ಯಕ್ತಿತ್ವವನ್ನೇ ಕಳೆದುಕೊಂಡಿರುವ ಕೀಚಕನ ಮನಕ್ಕೆ ಸೈರಂಧ್ರಿಯ ನುಡಿಗಳು ತಾಕುತ್ತಿಲ್ಲ; ತೆಕ್ಕೆ=ಅಪ್ಪುಗೆ/ಆಲಿಂಗನ; ಕೋಲು=ಬಾಣ; ಕಾಮನ ಕೋಲು=ಕಾಮನ ಹೂಬಾಣ/ಮಯ್ ಮನದೊಳಗೆ ಉರಿಯುತ್ತಿರುವ ಕಾಮದ ಒಳಮಿಡಿತಗಳು;

**ತೋಳ ತೆಕ್ಕೆಯ ತೊಡಿಸಿ ಕಾಮನ ಕೋಲ ತಪ್ಪಿಸು**=ನಿನ್ನ ತೋಳುಗಳಿಂದ ನನ್ನನ್ನು ತಬ್ಬಿಕೊಂಡು, ನನ್ನೊಳಗೆ ಉರಿಯುತ್ತಿರುವ ಕಾಮದ ಬೇಗೆಯನ್ನು ತಗ್ಗಿಸಿ, ಕಾಮದ ಉಮ್ಮಳದಿಂದ ನನ್ನನ್ನು ಪಾರುಮಾಡು; ಖಳ=ನೀಚ/ಕೇಡಿ; ಕಗ್ಗೊಲೆ=ಕ್ರೂರವಾದ ಕೊಲೆ; ಊಳಿಗ=ಕೆಲಸ/ಕಾರ್ಯ; ಖಳ=ಕೀಚಕನ ಪಾಲಿಗೆ ಮದನನೇ ಕೇಡಿಯಾಗಿದ್ದಾನೆ; **ಖಳನ ಕಗ್ಗೊಲೆ ಊಳಿಗವ ಕೇಳು**=ಕೇಡಿಯಾಗಿರುವ ಮದನನು ಮಾಡುತ್ತಿರುವ ಕ್ರೂರವಾದ ಹಿಂಸೆಯಿಂದ ಉಂಟಾಗುತ್ತಿರುವ ನನ್ನ ಸಂಕಟವನ್ನು ಕೇಳು; ಉಸುರು=ಹೇಳು; ಸಮರ್ಥರು=ತಿಳಿದವರು; **ಉಸುರದಿಹರೆ ಸಮರ್ಥರಾದವರು**=ಕಾಮನಿಂದ ಉಂಟಾಗುವ ಸಂಕಟವನ್ನು ತಿಳಿದವರು ಹೇಳದಿರುತ್ತಾರೆಯೇ; ಮಾತಾಳಿ=ಮಾತುಗಾರ/ಹರಟೆಮಲ್ಲ; **ಸೋಲಿಸಿದ ಗೆಲವಿಂದ ಬಲು ಮಾತಾಳಿ ಇವನು ಎನ್ನದಿರು**=ನಿನ್ನ ಮಾತುಗಳೆಲ್ಲಕ್ಕೂ ಪ್ರತಿಯಾಗಿ ಮಾತನಾಡುತ್ತಿರುವ ನನ್ನನ್ನು ಹರಟೆಮಲ್ಲ ಎಂದು ತಿಳಿಯಬೇಡ; ಹರಣ=ಜೀವ/ಪ್ರಾಣ; ಸರಸ=ವಿನೋದ/ಚೆಲ್ಲಾಟ;

**ಹರಣದ ಮೇಲೆ ಸರಸವೆ**=ಪ್ರಾಣದ ಜತೆ ಚಲ್ಲಾಟವಾಡಲು ಆಗುತ್ತದೆಯೇ; **ಕಾಯಬೇಹುದು**=ಕಾಮದ ಬೇಗೆಗೆ ಸಿಲುಕಿ ಸಾಯುತ್ತಿರುವ ನನ್ನನ್ನು ನೀನು ಉಳಿಸಿಕೊಳ್ಳಬೇಕು; **ಕಾಂತೆ ಕೇಳು**=ನಲ್ಲೆ, ಮತ್ತೊಂದು ಸಂಗತಿಯನ್ನು ಹೇಳುತ್ತೇನೆ ಕೇಳು; ತೊತ್ತು=ದಾಸಿ/ಸೇವಕಿ; ತೊತ್ತಿರು=ದಾಸಿಯರು; **ಉಳಿದ ತನ್ನ ಅರಸಿಯರ ನಿನ್ನಯ ಬಳಿಯ ತೊತ್ತಿರ ಮಾಡುವೆನು**=ಉಳಿದ ನನ್ನೆಲ್ಲಾ ಹೆಂಡತಿಯರನ್ನು ನಿನ್ನ ದಾಸಿಯರನ್ನಾಗಿ ಮಾಡುತ್ತೇನೆ; **ಕೇಳು ಎಲಗೆ, ತನ್ನ ಒಡಲಿಂಗೆ ಒಡೆತನ ನಿನ್ನದಾಗಿರಲಿ**=ಕೇಳು ಸುಂದರಿ, ನನ್ನ ದೇಹಕ್ಕೆ ನೀನೆ ಒಡತಿಯಾಗಿರು;

ಲಲನೆ=ಹೆಂಗಸು; ಲೋಚನ=ಕಣ್ಣು; **ಲಲನೆ, ನಿನ್ನೊಳು ನಟ್ಟ ಲೋಚನ ತೊಲಗಲಾರದು**=ಸುಂದರಿ, ನಿನ್ನ ಮೇಲಿಟ್ಟ ಈ ದಿಟ್ಟಿಯನ್ನು ಅಗಲಿಸಲಾರೆನು/ ನಿನ್ನ ಮೇಲಣ ಬಯಕೆಯು ತಗ್ಗುತ್ತಿಲ್ಲ;

ಕಾಯ=ದೇಹ; **ತನ್ನ ಕಾಯವ ಬಳಲಿಸದೆ ಕೃಪೆ ಮಾಡಬೇಹುದು ಎನುತ್ತ ಕೈಮುಗಿದ**=ಕಾಮದ ಪರಿತಾಪದಿಂದ ಕೂಡಿರುವ ಈ ನನ್ನ ದೇಹವನ್ನು ಹೆಚ್ಚು ಆಯಾಸಪಡಿಸದೆ ನನ್ನ ಮೇಲೆ ಕರುಣೆಯನ್ನು ತೋರಬೇಕು ಎಂದು ಕಯ್ ಮುಗಿದು ಬೇಡಿಕೊಂಡ; ತುಸುವಾದರೂ ಬದಲಾಗದ ಕೀಚಕನ ಕಾಮುಕತನದ ನಡೆನುಡಿಯನ್ನು ಕಂಡು ಆತಂಕಗೊಂಡ ಸೈರಂಧ್ರಿಯು ಕೀಚಕನಿಗೆ ಮತ್ತೊಮ್ಮೆ ಎಚ್ಚರಿಕೆಯನ್ನು ನೀಡಿ ಅರಮನೆಯ ಬಾಗಿಲನಿಂದ ದೂರಸರಿಯುತ್ತಾಳೆ;

ಅಧಮ=ನೀಚ/ಕೇಡಿ; ಮಿಗೆ=ಹೆಚ್ಚಾಗಿ/ಬಹಳವಾಗಿ; **ಈ ಅಧಮನ ಅನ್ಯಾಯವು ಧರ್ಮ ಮಾರ್ಗ ನ್ಯಾಯವನು ಮಿಗೆ ಗೆಲುವುದು**=ಈ ನೀಚನು ತನ್ನ ಕೆಟ್ಟ ನಡೆನುಡಿಗಳನ್ನೇ ನ್ಯಾಯವಾದವು ಎಂದು ವಾದಿಸುತ್ತಿದ್ದಾನೆ; ಸ್ಥಾಯಿ= ನೆಲೆಸಿರುವ; ತಿಮಿರ=ಕತ್ತಲೆ; ಭಾಸ್ಕರ=ಸೂರ್ಯ; ಆವುದು=ಯಾವುದು; ಅಂತರ=ಹೋಲಿಕೆ; **ಸ್ಥಾಯಿಗಳ ತಿಮಿರಕ್ಕೆ ಭಾಸ್ಕರಗೆ ಆವುದು ಅಂತರವು**= ನೆಲೆಸಿರುವ ಕತ್ತಲೆಗೂ ಬೆಳಕಿನ ಕಿರಣಗಳನ್ನು ಬೀರುವ ಸೂರ್ಯನಿಗೆ ಎಲ್ಲಿಯ ಹೋಲಿಕೆ/ಕೀಚಕನ ಕಾಮದ ನಡೆನುಡಿಯು ಕತ್ತಲೆಯಂತೆ ವ್ಯಾಪಿಸಿವೆ. ನಾನು ಹೇಳುತ್ತಿರುವ ಯಾವುದೇ ಮಾತುಗಳು ಅವನ ಮನದ ಕತ್ತಲೆಯನ್ನು ಹೋಗಲಾಡಿಸುವ ಬೆಳಕಿನ ಕಿರಣಗಳಾಗಲಿಲ್ಲ; ಕಾಯ್=ಕಾಪಾಡು/ಉಳಿಸು; **ಎನ್ನವರು ಕಾಯರು**=ನನ್ನ ಗಂಡಂದಿರು ನಿನ್ನನ್ನು ಉಳಿಸುವುದಿಲ್ಲ; ಕೈಗುಣ=ಹೆಚ್ಚಿನ ಕಸುವು/ಕುಶಲತೆ; ಆಯತ=ಹೆಚ್ಚಳ/ಅತಿಶಯ; **ಅವರ ಕೈಗುಣದ ಆಯತವ ಬಲ್ಲವರೆ ಬಲ್ಲರು**=ನನ್ನ ಗಂಡಂದಿರು ಎಂತಹ ಪರಾಕ್ರಮಿಗಳು ಎಂಬುದು ಅವರ ಸಾಹಸ ಕಾರ್ಯಗಳನ್ನು ಕಂಡವರಿಗೆ ಚೆನ್ನಾಗಿ ಗೊತ್ತು; ಫಡ=ತಿರಸ್ಕಾರ ಹಾಗೂ ಕೋಪದಿಂದ ನುಡಿಯುವಾಗ ಬಳಸುವ ಪದ/ ಚೀ..ತೂ... ಎಂಬ ದನಿಯನ್ನು ಹೊಂದಿರುವ ಪದ;

**ನಾಯಿ ಸಿಂಹಕ್ಕೆ ಇದಿರೆ, ಫಡ ಹೋಗು ಎಂದು ತಿರುಗಿದಳು**=ನಾಯಿ ಸಿಂಹವನ್ನು ಎದುರಿಸಲು ಆಗುತ್ತದೆಯೇ...ಚೀ...ತೂ..ತೊಗು ಎಂದು ಕೀಚಕನನ್ನು ನಿಂದಿಸುತ್ತ ಸೈರಂಧ್ರಿಯು ಅರಮನೆಯ ಬಾಗಿಲಿನಿಂದ ಹೊರನಡೆದಳು.



## ನೋಟ–೩

ಹೂಣು=ಪಡೆ/ಹೊಂದು; ಹೊಗು=ಒಳ ಸೇರು; **ಹೂಣೆ ಹೊಕ್ಕುದು**=ಸೈರಂಧ್ರಿಯೊಡನೆ ಕಾಮದ ನಂಟನ್ನು ಪಡೆಯಲೇಬೇಕೆಂಬ ಬಯಕೆಯು ಕೀಚಕನ ಮನದಲ್ಲಿ ನಾಟಿಕೊಂಡಿತು; ವಿರಹ=ಅಗಲಿಕೆ; ಆಸೆ=ನಂಬಿಕೆ; ವಿರಹದ ಆಸೆ=ಅಗಲಿಕೆಯನ್ನು ನಿವಾರಿಸಿ ಜತೆಗೂಡುವ ನಂಬಿಕೆ; **ಆಕೆಯ ಮಾತಿನಲಿ ವಿರಹದ ಆಸೆಯ ಕಾಣೆನು**=ಸೈರಂಧ್ರಿಯಾಡಿದ ಮಾತಿನಲ್ಲಿ ಅವಳು ನನ್ನ ಜತೆಗೂಡುವ ಯಾವ ಆಸೆಯೂ ಕಂಡುಬರುತ್ತಿಲ್ಲ; ಸರ್ವಸ್ವ=ಎಲ್ಲವೂ; ಮುಂಗಾಣಿಕೆ=ಮೊದಲ ನೋಟ; ಸೂರೆ=ಲೂಟಿ/ಕೊಳ್ಳೆ;

**ಮುಂಗಾಣಿಕೆಯಲೇ ಮನದ ಸರ್ವಸ್ವ ಸೂರೆ ಹೋದುದು**=ಮೊದಲ ನೋಟದಲ್ಲಿಯೇ ಅವಳ ಮಯ್ ಮಾಟಕ್ಕೆ ನನ್ನ ಮನಸ್ಸೆಲ್ಲವೂ ಸೂರೆಗೊಂಡಿದೆ; ತ್ರಾಣ=ಕಸುವು/ಶಕ್ತಿ; **ತ್ರಾಣ ಸಡಿಲಿತು**=ಕಸುವು ಕುಗ್ಗಿತು/ಕಾಮದ ಒಳಮಿಡಿತಗಳಿಂದ ಕೀಚಕನು ತನ್ನ ಮಯ್ ಮನದ ಮೇಲಣ ಹತೋಟಿಯನ್ನು ಕಳೆದುಕೊಂಡನು; ಕದಡು=ಕಳವಳ/ಗೊಂದಲ; ಬುದ್ಧಿ=ಅರಿವು/ಮನಸ್ಸು; **ಬುದ್ಧಿ ಕದಡಿ**=ಏನನ್ನು ಮಾಡಬೇಕೆಂದು ತಿಳಿಯದೆ ಮನಸ್ಸು ಗೊಂದಲಕ್ಕೆ ಒಳಗಾಗಿ; ಕೃಪಾಣ=ಕತ್ತಿ; ಪಾಣಿ=ಹಸ್ತ/ಕಯ್; ಕೃಪಾಣಪಾಣಿ=ಕಯ್ಯಲ್ಲಿ ಕತ್ತಿಯನ್ನು ಹಿಡಿದವನು; ವಿರಾಟರಾಯನ ರಾಣಿ=ವಿರಾಟರಾಯನ ಹೆಂಡತಿ ಸುದೇಷ್ಣೆ; ಐದು=ಆಗಮಿಸು/ಬರು;

**ಕೃಪಾಣಪಾಣಿ ವಿರಾಟರಾಯನ ರಾಣಿಯ ಅರಮನೆಗೆ ಐದಿದನು**=ಕಯ್ಯಲ್ಲಿ ಕತ್ತಿಯನ್ನು ಹಿಡಿದುಕೊಂಡೇ ಕೀಚಕನು ಸುದೇಷ್ಣೆಯ ರಾಣಿವಾಸಕ್ಕೆ ಬಂದನು;

ನಿಜ+ಅಗ್ರಜೆ; ನಿಜ=ತನ್ನ; ಅಗ್ರಜೆ=ಅಕ್ಕ; **ನಿಜಾಗ್ರಜೆಯ ಕಂಡನು**=ತನ್ನ ಅಕ್ಕನಾದ ಸುದೇಷ್ಣೆಯನ್ನು ಕಂಡನು; ಅಂಘ್ರಿ=ಪಾದ; ಚಾಚು=ಒಡ್ಡು/ಇಡು; **ಹಣೆಯನು ಅಂಘ್ರಿಗೆ ಚಾಚಲು**=ಹಣೆಯನ್ನು ಅಕ್ಕನ ಪಾದಗಳ ಮೇಲಿಟ್ಟು ನಮಸ್ಕರಿಸಲು; ಅಣಕಿಗ=ಪರಾಕ್ರಮಿ; **ಎತ್ತಿದಳು ಅಣಕಿಗನ ತೆಗೆದು ಅಪ್ಪಿ**=ತನ್ನ ಪಾದಗಳಿಗೆ ನಮಸ್ಕರಿಸಿದ ಪರಾಕ್ರಮಿಯಾದ ತಮ್ಮನನ್ನು ಮೇಲಕ್ಕೆತ್ತಿ, ಪ್ರೀತಿಯಿಂದ ತಬ್ಬಿಕೊಂಡು; ಮದ=ಸೊಕ್ಕು ; ವಾರಣ=ಆನೆ; ಮದವಾರಣ=ಮಹಾಬಲಶಾಲಿ/ ಮಹಾಪರಾಕ್ರಮಿ ಎಂಬ ರೂಪಕದ ತಿರುಳಿನಲ್ಲಿ ಬಳಕೆಗೊಂಡಿದೆ; **ಮದವಾರಣನೆ ಕುಳ್ಳಿರು ಎನುತ್ತ ಆ ಸಹೋದರನ ನೋಡಿದಳು**=ಮಹಾಬಲಶಾಲಿಯೇ, ಕುಳಿತುಕೊ ಎಂದು ಸ್ವಾಗತಿಸುತ್ತ, ತನ್ನ ತಮ್ಮನ ಮೊಗವನ್ನು ನೋಡಿದಳು; ಮುಸುಡು=ಮೋರೆ/ಮೊಗ/ಮುಖ; **ಹೆಣ ಮುಸುಡು ಬೀಳು**=ಇದೊಂದು ನುಡಿಗಟ್ಟು. ಹೆಣದ ಮೊಗ ಹೇಗೆ ಜೀವಭಾವವಿಲ್ಲದೆ ಕಳಾಹೀನವಾಗಿರುತ್ತದೆಯೋ ಅಂತೆಯೇ ವ್ಯಕ್ತಿಯು ತೀವ್ರವಾದ ಹೆದರಿಕೆ/ತಲ್ಲಣ/ಆತಂಕಕ್ಕೆ ಗುರಿಯಾದಾಗ ಮೊಗವು ಕಳಾಹೀನವಾಗುತ್ತದೆ;

**ಹೆಣ ಮುಸುಡು ಬಿದ್ದಿದೆ**=ಕೀಚಕನ ಮೊಗದಲ್ಲಿ ತುಸುವಾದರೂ ಜೀವಕಳೆಯಿಲ್ಲವಾಗಿದೆ; ತನ್ನಲ್ಲಿಯೇ=ಕೀಚಕನ ಕಳೆಗುಂದಿದ ಮೊಗವನ್ನು ನೋಡನೋಡುತ್ತಿದ್ದಂತೆಯೇ, ಅದಕ್ಕೆ ಕಾರಣವೇನೆಂಬುದನ್ನು ಅಕ್ಕ ಸುದೇಷ್ಣೆಯು ತನ್ನ ಮನದಲ್ಲಿಯೇ ಊಹಿಸಿಕೊಳ್ಳತೊಡಗುತ್ತಾಳೆ; ಕಡು=ಬಹಳ/ಹೆಚ್ಚಿನ; ಪಾಪಿ=ಕೆಟ್ಟ ಕೆಲಸವನ್ನು ಮಾಡಿದವನು; ಲತಾಂಗಿ=ಬಳುಕುವ ಬಳ್ಳಿಯಂತಹ ದೇಹವನ್ನು ಉಳ್ಳವಳು/ಸುಂದರಿ; ಕೆಣಕು=ರೇಗಿಸು/ಕಾಮಕ್ಕಾಗಿ ಪೀಡಿಸು/ಕೆಟ್ಟ ರೀತಿಯಲ್ಲಿ ನಡೆದುಕೊಂಡು ಮತ್ತೊಬ್ಬರ ಮಯ್ ಮನವನ್ನು ಗಾಸಿಗೊಳಿಸುವುದು;

**ಕಡುಪಾಪಿ, ಲತಾಂಗಿಯ ಕೆಣಕಿದನೊ**=ತುಂಬಾ ಕೆಟ್ಟ ವ್ಯಕ್ತಿಯಾದ ಇವನು, ಆ ಸೈರಂಧ್ರಿಗೆ ಕಾಮದ ಕಿರುಕುಳವನ್ನು ಕೊಟ್ಟು, ಆಕೆಯನ್ನು ಗಾಸಿಗೊಳಿಸಿ ದ್ದಾನೆಯೋ; ಹಣಿದ+ಆಡದೆ; ಹಣಿದ=ಸಂಹರಿಸುವಿಕೆ/ಕತ್ತರಿಸುವಿಕೆ; ಹಣಿದವಾಡು=ಸಂಹರಿಸು/ಕತ್ತರಿಸು; ಮಾಡು=ಬಿಡು; **ವಂಶವ ಹಣಿದವಾಡದೆ ಮಾಣನು**=ವಿರಾಟರಾಯನ ರಾಜವಂಶವನ್ನು ಸಂಹರಿಸಿದೇ ಬಿಡನು. ಅಂದರೆ ನಮ್ಮ ರಾಜವಂಶದ ನಾಶಕ್ಕೆ ಕೀಚಕನೇ ಮೂಲಕಾರಣನಾಗುತ್ತಾನೆ;

ಏಗು=ಏನನ್ನು ಮಾಡು; **ಏಗುವೆನು ಎನುತ ಮರುಗಿದಳು**=ಈಗ ನಾನೇನು ಮಾಡಲಿ/ಈಗ ಬಂದಿರುವ ಆಪತ್ತಿನಿಂದ ಇವನನ್ನು ಹೇಗೆ ಪಾರುಮಾಡಲಿ ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ ಸಂಕಟಪಟ್ಟಳು; ನಿಜ+ಆಕಾರ;

ನಿಜ=ಸಹಜವಾದ; ಆಕಾರ=ರೂಪ; ನಿಜಾಕಾರ=ಸಹಜವಾಗಿಯೇ ಮನೋಹರವಾದ ರೂಪುಳ್ಳವನು; ಶಿರೋಮಣಿ=ಹೆಂಗಸರು ತಮ್ಮ ಮುಡಿಯಲ್ಲಿ ತೊಡುವ ಒಂದು ಬಗೆಯ ರತ್ನದ ಒಡವೆ/ಅತ್ಯುತ್ತಮ ವ್ಯಕ್ತಿ; **ನಿಜಕಾರ ಕುಲಶಿರೋಮಣಿ**=ಮನೋಹರವಾದ ರೂಪವನ್ನು ಹೊಂದಿ ಕುಲಕ್ಕೆ ಅಲಂಕಾರಪ್ರಾಯನಾಗಿರುವ ತಮ್ಮನೇ; ಅಗ್ಗ=ಒಳ್ಳೆಯ/ಉತ್ತಮವಾದ; ಮಹಿಮೆ=ದೊಡ್ಡಸ್ತಿಕೆ/ಉನ್ನತಿಕೆ; ಅಳುಕು=ನಡುಗು/ಕಡೆಗಣಿಸು;

**ಅಗ್ಗದ ಮಹಿಮೆ ಅಳುಕಿತು**=ಮಹಾಶೂರನೆಂಬ ಒಳ್ಳೆಯ ಹೆಸರಿಗೆ ಈಗ ಹಾನಿ ತಟ್ಟಿತು; ಕಂದು=ಕಳೆಗುಂದು/ಬಣ್ಣಗೆಡು/ಕಪ್ಪಾಗು; **ಮುಸುಡಿನ ಬೆಳಕು ಕಂದಿತು**= ನಿನ್ನ ಮೊಗ ಕಪ್ಪಿಟ್ಟಿದೆ; ಚಿಂತಾ+ಜಲಧಿ+ಒಳಗೆ; ಜಲಧಿ=ಕಡಲು/ಸಮುದ್ರ; ಚಿಂತಾಜಲಧಿ=ಚಿಂತೆಯ ಕಡಲು; ಅಳ್ದು>ಅದ್ದು; ಅದ್ದು=ಮುಳುಗು; ಸೊಂಪು=ಕಾಂತಿ/ಹೊಳಪು/ಸೊಗಸು; ಅಡಗು=ಮರೆಯಾಗು;

**ಬಹಳ ಚಿಂತಾಜಲಧಿಯೊಳಗೆ ಅದ್ದಂತೆ ಸೊಂಪು ಅಡಗಿತು**=ಚಿಂತೆಯ ಕಡಲಿನಲ್ಲಿ ಮುಳುಗಿದವನಂತೆ ನಿನ್ನ ತೇಜಸ್ಸು ಕುಗ್ಗಿದೆ; **ಹೇಳು ಚಿತ್ತದ ನೆಲೆಯನು**= ನಿನ್ನ ಮನದಲ್ಲಿ ಏನಿದೆಯೆಂಬುದನ್ನು ನನ್ನೊಡನೆ ಹೇಳು; **ನಸುನಾಚಿ**=ಅಕ್ಕನ ಮಾತುಗಳನ್ನು ಕೇಳಿ ಕೀಚಕನು ತುಸು ನಾಚಿಕೆಯಿಂದ; ಮದನ=ಕಾಮದೇವ; ಹಿಳುಕು=ಬಾಣ; ಸುಮತಿ=ವಿವೇಕದಿಂದ ಕೂಡಿದ ಅರಿವು/ಒಳ್ಳೆಯ ಮನಸ್ಸು; ಸೀಳು=ತುಂಡುಮಾಡು/ಕತ್ತರಿಸು; ಬಳಿಕ=ಅನಂತರ; ಇಂತು=ಈ ರೀತಿ;

**ಮದನನ ಹಿಳುಕು ಸುಮತಿಯ ಸೀಳೆ, ಬಳಿಕ ಇಂತು ಎಂದನು ಅವ ನಗುತ**= ಮದನನ ಹೂಬಾಣವು ನನ್ನ ಒಳ್ಳೆಯ ಮನಸ್ಸನ್ನು ಕತ್ತರಿಸಿದ್ದರಿಂದ ಈ ರೀತಿ ನಾನು ಕಾಮಿಯಾಗಿದ್ದೇನೆ/ಈಗ ನನ್ನ ಮಯ್ ಮನದಲ್ಲಿ ಕಾಮದ ಒಳಮಿಡಿತಗಳು ತುಡಿಯುತ್ತಿರುವುದರಿಂದ ಯಾವುದು ಸರಿ, ಯಾವುದು ತಪ್ಪು ಎಂಬ ಅರಿವನ್ನು ಕಳೆದುಕೊಂಡು ಈ ರೀತಿಯಾಗಿದ್ದೇನೆ ಎಂದು ನಗುತ್ತ ನುಡಿದನು; ಕಾಮಿಯಾದವನಿಗೆ ತನ್ನಿಂದ ಆಗುತ್ತಿರುವ ತಪ್ಪು ಎಷ್ಟು ತೀವ್ರತರವಾದುದು ಎಂಬ ಅರಿವು ಇರುವುದಿಲ್ಲ ಹಾಗೂ ನಾಲ್ಕು ಜನ ನನ್ನ ಬಗ್ಗೆ ಏನಂದಾರು ಎಂಬ ಲಜ್ಜೆಯಾಗಲಿ/ಹೆದರಿಕೆಯಾಗಲಿ ಇರುವುದಿಲ್ಲ; ಆದ್ದರಿಂದಲೇ ನಗುತ್ತ ಮಾತನಾಡುತ್ತಿದ್ದಾನೆ;

ಬಿನ್ನಹ=ವಿನಂತಿ/ಅರಿಕೆ; **ಬೇರೆ ಬಿನ್ನಹವೇನು**=ನಿನ್ನಲ್ಲಿ ನಾನು ಮತ್ತೇನನ್ನು ಕೇಳುತ್ತಿಲ್ಲ; ಓಲಗ=ಊಳಿಗ/ಕೆಲಸ/ಸೇವೆ; **ಓಲಗದ ಸತಿಯರು**= ರಾಣಿವಾಸದಲ್ಲಿರುವ ದಾಸಿಯರು; **ನಿನ್ನ ಓಲಗದ ಸತಿಯರಲಿ**=ನಿನ್ನ ಬಳಿಯಿರುವ ದಾಸಿಯರಲ್ಲಿ; ಅವಳು=ಆ ಸೈರಂಧ್ರಿ; ಮಡಿ=ಪಟ್ಟು; ಚಿತ್ತ=ಮನಸ್ಸು; **ಅವಳು**

**ಸತಿಯರ ನೂರು ಮಡಿ ಚೆಲುವಿನಲಿ ಚಿತ್ತವ ಸೂರೆಗೊಂಡಿಹಳು**=ದಾಸಿಯರ ಗುಂಪಿನಲ್ಲಿ ಎಲ್ಲರಿಗಿಂತ ನೂರುಪಟ್ಟು ಹೆಚ್ಚಿನ ಚೆಲುವೆಯಾಗಿರುವ ಆ ಸೈರಂಧ್ರಿಯು ನನ್ನ ಮನಸ್ಸನ್ನು ಸೆಳೆದುಕೊಂಡಿದ್ದಾಳೆ; **ಮದನಂಗೆ ಮಾರಿದಳು**= ಮದನನಿಗೆ ನನ್ನನ್ನು ಮಾರಿದ್ದಾಳೆ/ಕಾಮಕ್ಕೆ ನಾನು ವಶನಾಗಿದ್ದೇನೆ; **ಜೀವಸಲಾರೆನು**= ಅವಳನ್ನು ಕೂಡಿದಲ್ಲದೆ ನಾನು ಬದುಕಲಾರೆನು; ಒಳಗುಮಾಡು=ವಶಕ್ಕೆ ಒಪ್ಪಿಸು;

**ಆಕೆಯನು ಒಳಗುಮಾಡಿಸಿ ತೋರಿದಡೆ**=ಆಕೆಯನ್ನು ನನ್ನ ವಶಕ್ಕೆ ಒಪ್ಪಿಸಿಕೊಡುವ ಅನುಗ್ರಹವನ್ನು ನೀನು ತೋರಿದರೆ; ಒಡಲು=ದೇಹ/ಶರೀರ; ಅಸು=ಜೀವ/ಪ್ರಾಣ; ನಿರ್ವಾಹ=ಇರಲು ಅವಕಾಶ; ಅಹುದು=ಆಗುವುದು; **ತನ್ನ ಒಡಲೊಳು ಅಸುವಿಂಗೆ ನಿರ್ವಾಹ ಅಹುದು**=ನನ್ನ ದೇಹದಲ್ಲಿ ಜೀವವು ಉಳಿಯಲು ಅವಕಾಶವಾಗುತ್ತದೆ;

ಕೀಚಕನ ನುಡಿಗಳನ್ನು ಕೇಳಿ ಆತಂಕಗೊಂಡ ಸುದೇಷ್ಣೆಯು ಅವನ ಕಾಮುಕತನದಿಂದ ಉಂಟಾಗಲಿರುವ ದುರಂತವನ್ನು ಕುರಿತು ಅಂಜಿಕೆಯಿಂದ ತತ್ತರಿಸುತ್ತ ನುಡಿಯತೊಡಗುತ್ತಾಳೆ; ಕೀರ್ತಿ=ಹೆಸರುವಾಸಿ/ಯಶಸ್ಸು; ಲತೆ=ಬಳ್ಳಿ; ಕುಡಿ+ಒಣಗಿತ್ತೈ; ಕುಡಿ=ಚಿಗುರು;

**ಕೀರ್ತಿಲತೆ ಕುಡಿಯೊಣಗಿತ್ತೈ**=ಕೀರ್ತಿ ಎಂಬ ಬಳ್ಳಿಯ ಚಿಗುರು ಒಣಗಿಹೋಯಿತು/ವಿರಾಟರಾಜ ಮನೆತನಕ್ಕೆ ಮತ್ತು ನಿನಗೆ ಇದ್ದ ದೊಡ್ಡ ಹೆಸರು ಇಂದಿಗೆ ನಾಶವಾಯಿತು; ಮದನ+ಆರ್ತನ್+ಆದೈ; ಆರ್ತನ್= ಬಯಕೆಯುಳ್ಳವನು; **ಮದನಾರ್ತನಾದೈ**=ಕಾಮಪರವಶನಾಗಿ ಮಯ್ ಮನದ ಮೇಲಣ ಅರಿವು ಮತ್ತು ಎಚ್ಚರವನ್ನು ಕಳೆದುಕೊಂಡೆ; ಕುಲ=ವಂಶ/ಮನೆತನ/ ಕಾಲ=ಯಮ; ಕಾಲನ ಮೂರ್ತಿ=ಯಮದೂತ; ಅವತರಿಸು=ಹುಟ್ಟಿಬರುವುದು; **ಕುಲಕೆ ಕಾಲನ ಮೂರ್ತಿ ನೀನು ಅವತರಿಸಿದೈ**=ನಮ್ಮ ರಾಜವಂಶಕ್ಕೆ ನೀನು ಯಮದೂತನಾಗಿ ಹುಟ್ಟಿಬಂದೆ; **ಕುಲವ ಸಂಹರಿಸಿದೈ**=ಕುಲವನ್ನು ನಾಶಪಡಿಸಿದೆ; ಸ್ಫೂರ್ತಿಗೆಡು=ಇದೊಂದು ನುಡಿಗಟ್ಟು. ಅರಿವನ್ನು ಕಳೆದುಕೊಳ್ಳುವುದು/ಒಳಿತು ಕೆಡುಕಿನ ಎಚ್ಚರವನ್ನು ಕಳೆದುಕೊಳ್ಳುವುದು; ಅರ್ತಿ+ಅಪ್ಪುದನು; ಅರ್ತಿ=ನೋವು/ ಸಂಕಟ/ದುರಂತ; ಅಪ್ಪುದನು=ಆಗುವುದನ್ನು;

**ಸ್ಫೂರ್ತಿಗೆಡೆ ಮನುಜರಿಗೆ ರಾವಣನ ಅರ್ತಿಯಪ್ಪುದನು ಅರಿಯಲಾ**=ಗಂಡಸರು ಅನ್ಯ ಹೆಂಗಸರ ವಿಚಾರದಲ್ಲಿ ಅರಿವು ಮತ್ತು ಎಚ್ಚರವನ್ನು ಕಳೆದುಕೊಂಡರೆ, ಕಾಮಿಯಾದ ರಾವಣನಂತೆ ದುರಂತ ಮರಣವನ್ನು ಹೊಂದುತ್ತಾರೆ ಎಂಬುದನ್ನು ನೀನು ತಿಳಿದಿಲ್ಲವೇನು; ಕಡು=ಹೆಚ್ಚಾಗಿ/ಬಹಳವಾಗಿ; ಧೂರ್ತತನ=ದುರುಳತನ/ ಕೆಟ್ಟತನ/ಕಾಮುಕತನ; ಅಂಜು=ಹೆದರು; ನಳಿನ+ಅಕ್ಷಿ; ನಳಿನ=ತಾವರೆ;

ಅಕ್ಷಿ=ಕಣ್ಣು; ನಳಿನಾಕ್ಷಿ=ತಾವರೆ ಹೂವಿನಂತಹ ಕಣ್ಣುಳ್ಳವಳು/ಸುಂದರಿ;

**ಕಡುಧೂರ್ತತನಕೆ ಅಂಜುವೆನು ಎನುತ ನಳಿನಾಕ್ಷಿ ನಡುಗಿದಳು**=ನಿನ್ನ ಅತಿಯಾದ ಕಾಮುಕತನದ ನಡೆನುಡಿಯನ್ನು ಕಂಡು ನನಗೆ ಹೆದರಿಕೆಯಾಗುತ್ತಿದೆ ಎಂದು ಹೇಳುತ್ತ ಸುದೇಷ್ಣೆಯು ನಡುಗತೊಡಗಿದಳು; ಕಾಮಿಯಾದ ಕೀಚಕನಿಗೆ ಎಚ್ಚರಿಕೆಯನ್ನು ಮತ್ತೆ ಮತ್ತೆ ನೀಡುತ್ತ, ಅವನನ್ನು ಸರಿದಾರಿಗೆ ತರಲು ಅಕ್ಕನಾದ ಸುದೇಷ್ಣೆ ತನ್ನ ಪ್ರಯತ್ನವನ್ನು ಮುಂದುವರಿಸುತ್ತಿದ್ದಾಳೆ; ಪರ=ಬೇರೆಯ/ಇತರ; ವಧು=ಹೆಂಗಸು; ಬೇಟ=ಬಯಕೆ/ಆಸೆ/ಕಾಮ; **ಪರವಧುವಿನಲಿ ಬೇಟವೇ**= ಅನ್ಯ ಹೆಂಗಸಿನಲ್ಲಿ ಕಾಮದ ಬಯಕೆಯೇ. ಇಂತಹ ಬಯಕೆಯಿಂದ ಕೇಡು ತಪ್ಪದು; ವಿತ್ತ=ಹಣ/ಚಿನ್ನ; ಕೈಮಾಟ=ಅಪಹರಣ/ಬಲಾತ್ಕಾರದಿಂದ ಕಿತ್ತುಕೊಳ್ಳುವುದು; **ಪರವಿತ್ತದಲಿ ಕೈಮಾಟವೇ**=ಬೇರೆಯವರ ಸಂಪತ್ತನ್ನು ಅಪಹರಿಸುವುದೇ. ಇಂತಹ ಕೆಲಸದಿಂದ ಮಾನ ಪ್ರಾಣಗಳಿಗೆ ಆಪತ್ತು ಬರುತ್ತದೆ; ಕದನ=ರಣರಂಗ; ತೆಗೆದೋಟ=ಪಲಾಯನ;

**ರಾಜಪುತ್ರರಿಗೆ ಕದನದಲಿ ತೆಗೆದೋಟವೇ**=ರಾಜಪುತ್ರರು ರಣರಂಗದಲ್ಲಿ ಹೇಡಿಗಳಂತೆ ಪಲಾಯನ ಮಾಡುವುದು ಸರಿಯೇ. ಇಂತಹ ಹೀನಕಾರ್ಯವನ್ನು ಮಾಡುವವನು ವೀರನಲ್ಲ; ಆಟವಿಕ=ನೀಚ/ಕೇಡಿ/ದುರುಳ; ಎಣಿಸು=ಬಯಸು/ ಯೋಚಿಸು; **ಆಟವಿಕರ ಒಡನಾಡಿ ಕಲಿತು ವಿರಾಟನನು ಕೊಲಲು ಎಣಿಸಿದೈ**= ನೀಚರ ಜತೆಯಲ್ಲಿ ವ್ಯವಹರಿಸಿ ಕೆಟ್ಟದ್ದನ್ನು ಕಲಿತು ವಿರಾಟರಾಜನನ್ನು ಕೊಲ್ಲಲು ಬಯಸಿರುವೆ; ಗುಣವೇ=ಇಂತಹ ನಡವಳಿಕೆಯು ನಿನಗೆ ಸರಿಯೇ; ತರಳ+ಅಕ್ಷಿ; ಅಕ್ಷಿ=ಕಣ್ಣು; ತರಳ=ಹೊಳೆಯುವ/ಪ್ರಕಾಶಮಾನವಾಗಿ ಮಿನುಗುವ; ತರಳಾಕ್ಷಿ= ಸುಂದರವಾದ ಕಣ್ಣುಳ್ಳವಳು; ಮುಖ+ತಿರುಹು; ಮುಖ ತಿರುಹು=ಇದೊಂದು ನುಡಿಗಟ್ಟು. ವ್ಯಕ್ತಿಯ ನಡೆನುಡಿಯನ್ನು ಕಂಡು ಅಸಹ್ಯಪಟ್ಟುಕೊಂಡು, ಮತ್ತೊಂದು ಕಡೆ ಮೊಗ ಮಾಡುವುದು;

**ನಿನ್ನ ಆಟಕೆ ಅಂಜುವೆನು ಎನುತ ತರಳಾಕ್ಷಿ ಮುಖದಿರುಹಿದಳು**=ನಿನ್ನ ಕೆಟ್ಟ ನಡೆನುಡಿಯನ್ನು ಕಂಡು ನನಗೆ ಹೆದರಿಕೆಯಾಗುತ್ತಿದೆ ಎಂದು ಹೇಳುತ್ತ, ತಮ್ಮನ ಬಗ್ಗೆ ಉಂಟಾದ ಬೇಸರ, ಅಸಹ್ಯ ಹಾಗೂ ಸಂಕಟದಿಂದ ಬೇರೊಂದು ಕಡೆಗೆ ಮೊಗವನ್ನು ತಿರುಗಿಸಿದಳು; ಆದರೆ ತಮ್ಮನ ಮೇಲಣ ಮಮತೆಯಿಂದ ಮತ್ತೆ ಅವನಿಗೆ ಹಿತನುಡಿಗಳನ್ನಾಡುತ್ತ, ಅವನನ್ನು ದುರಂತದಿಂದ ಪಾರು ಮಾಡಲು ತನ್ನ ಪ್ರಯತ್ನವನ್ನು ಮುಂದುವರಿಸುತ್ತಾಳೆ; ಸುರ=ದೇವತೆ; **ಅವಳ ಗಂಡರು ಸುರರು**=ಅವಳ ಗಂಡಂದಿರು ದೇವತೆಗಳು; ನವಗೆ=ನಮಗೆ; ಆವ=ಯಾವ; ಅಂತರ=ಹೋಲಿಕೆ;

**ಸುರರಿಗೆ ನವಗೆ ಅದು ಆವ ಅಂತರವು**=ದೇವತೆಗಳಿಗೂ ಮಾನವರಾದ ನಮಗೂ ಎಲ್ಲಿಯ ಹೋಲಿಕೆ. ದೇವತೆಗಳು ಸಾವಿಲ್ಲದವರು–ನಾವು ಸಾಯುವವರು; ದೇವತೆಗಳು ಅಪಾರವಾದ ಶಕ್ತಿಸಂಪನ್ನರು–ನಮ್ಮ ಶಕ್ತಿಸಂಪತ್ತಿಗೆ ಮಿತಿಯಿದೆ; ಮುಳಿ=ಕೆರಳು/ಕೋಪ; ದಿವಿಜ=ದೇವತೆ; ದಳ=ಸೇನೆ/ಪಡೆ; ಇದಿರು+ಆರು; ಇದಿರು=ಎದುರಾಗಿ ನಿಲ್ಲುವವರು; ಆರು=ಯಾರು; **ಮುಳಿದೊಡೆ ದಿವಿಜ ದಳಕೆ ಇದಿರಾರು**=ದೇವತೆಗಳು ಕೆರಳಿ ಕೋಪಗೊಂಡು ಆಕ್ರಮಣ ಮಾಡಿದರೆ, ಅವರ ಸೇನೆಯನ್ನು ಎದುರಿಸುವಂತಹವರು ನಮ್ಮಲ್ಲಿ ಯಾರಿದ್ದಾರೆ; ಅದು+ಆರು; **ನಮ್ಮನು ಅದಾರು ಕಾವವರು**=ನಮ್ಮನ್ನು ಕಾಪಾಡುವವರು ಯಾರು;

ತೊಡಕು=ತಂಟೆ/ಗೊಡವೆ; **ಅವಳ ತೊಡಕೇ ಬೇಡ**=ಅವಳ ತಂಟೆಯೇ ನಮಗೆ ಬೇಡ; ನಿವಹ=ಗುಂಪು/ಸಮೂಹ; **ಸತಿಯರ ನಿವಹದಲಿ**=ನನ್ನ ರಾಣಿವಾಸದ ದಾಸಿಯರ ಗುಂಪಿನಲ್ಲಿ; ಆರ=ಯಾರನ್ನು/ಯಾವುದೇ ದಾಸಿಯನ್ನು; **ನೀನು ಆರ ಬಯಸಿದಡೆ**=ನೀನು ಯಾವುದೇ ತರುಣಿಯನ್ನು ಬಯಸಿದರೆ; **ಅವಳ ನಾ ಮುಂದಿಟ್ಟು ಮದುವೆಯನು ಒಲಿದು ಮಾಡುವೆನು**= ಅವಳನ್ನು ನಾನೇ ಮುಂದೆ ನಿಂತು ಪ್ರೀತಿಯಿಂದ ನಿನಗೆ ಮದುವೆ ಮಾಡುವೆನು; ಅಕ್ಕ ಸುದೇಷ್ಣೆಯ ಯಾವುದೇ ಹಿತನುಡಿಗೆ ಇಲ್ಲವೇ ಸಮಸ್ಯೆಯ ಪರಿಹಾರದ ಆಯ್ಕೆಗೆ ಕಾಮಿಯಾದ ಕೀಚಕನು ಮನಗೊಡದೆ, ತನ್ನ ಕಾಮುಕತನದ ಮಾತುಗಳನ್ನೇ ಮುಂದೊಡ್ಡುತ್ತಾನೆ;

ಮರುಳು=ತಿಳಿಗೇಡಿತನ/ಹುಚ್ಚು; **ಮರುಳೌ ಅಕ್ಕ**=ಅಕ್ಕ, ನಿನಗೆಲ್ಲೊ ಹುಚ್ಚು. ನನ್ನ ಮಯ್ ಮನವನ್ನು ಆವರಿಸಿಕೊಂಡು ಉರಿಯುತ್ತಿರುವ ಕಾಮದ ಬೇಗೆಯು ಎಂತಹುದೆಂಬುದನ್ನು ನೀನು ಅರಿಯೆ; ಚಿತ್ತ=ಮನಸ್ಸು; ಬೇರ್+ಪರಿಯಿತ್ತು; ಪರಿ=ಹಬ್ಬು/ಹರಡು; ಬೇರ್ವರಿಯಿತ್ತು=ಆಳವಾಗಿ ಬೇರುಬಿಟ್ಟಿದೆ; **ಚಿತ್ತವು ಅವಳಲಿ ಸಿಕ್ಕಿ ಬೇರ್ವರಿಯಿತ್ತು**=ನನ್ನ ಮನಸ್ಸು ಅವಳ ಅಂದಚೆಂದ ಮಯ್ ಮಾಟಕ್ಕೆ ಸಂಪೂರ್ಣವಾಗಿ ಪರವಶವಾಗಿದೆ; ಆಕೆಯನ್ನು ಪಡೆಯಲೇಬೇಕೆಂಬ ಆಸೆಯು ನನ್ನ ಮನದಲ್ಲಿ ಆಳವಾಗಿ ನೆಲೆಗೊಂಡಿದೆ; ಬರಿದೇ=ಕೇವಲ; ಮಿಕ್ಕ=ಉಳಿದ; ಡಿಂಬ=ದೇಹ/ಶರೀರ;

**ಮನವ ಬೇರೆ ಇರಿಸಿ ಬರಿದೇ ಮಿಕ್ಕ ಡಿಂಬಕೆ ಮದುವೆಯುಂಟೇ**=ಮನದಲ್ಲಿ ಒಬ್ಬಳನ್ನು ಒಲಿದು ಮೆಚ್ಚಿಕೊಂಡು, ಮತ್ತೊಬ್ಬಳೊಡನೆ ಕೇವಲ ದೇಹಕ್ಕೆ ಮದುವೆ ಮಾಡುವುದುಂಟೇ/ಮನಸ್ಸನ್ನು ಒಬ್ಬಳಿಗೆ ಕೊಟ್ಟು, ದೇಹವನ್ನು ಮದುವೆಯ ಹೆಸರಿನಲ್ಲಿ ಮತ್ತೊಬ್ಬಳಿಗೆ ಕೊಡುವುದು ಸರಿಯೇ; ಮಕ್ಕಳು+ಆಟಿಕೆ+ಆದಡೆ; ಆಟಿಕೆ=ಆಟ; ಮಕ್ಕಳಾಟ=ಇದೊಂದು ನುಡಿಗಟ್ಟು. ವಿವೇಚನೆಯಿಲ್ಲದ ಕಾರ್ಯ

ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ;

**ಮಕ್ಕಳಾಟಿಕೆಯಾದಡೆ ಆಗಲಿ**=ನಾನು ಸೈರಂಧ್ರಿಯನ್ನು ಬಯಸಿ ಕೂಡುವುದನ್ನು ವಿವೇಚನೆಯಿಲ್ಲದ/ಅರಿವಿಲ್ಲದ ಕಾರ್ಯವೆಂದು ಜನ ಆಡಿಕೊಳ್ಳಲಿ; ತಕ್ಕರು=ಗುರುಹಿರಿಯರು/ಸಮಾಜದಲ್ಲಿ ಉನ್ನತವಾದ ನೆಲೆಯಲ್ಲಿರುವ ಒಳ್ಳೆಯ ವ್ಯಕ್ತಿಗಳು; **ತಕ್ಕರು ಅಲ್ಲ ಎಂದು ಎನಲಿ**= ಗುರುಹಿರಿಯರು ಈ ರೀತಿ ವೀರಸೇನಾನಿಯಾದ ಕೀಚಕನು ದಾಸಿಯೊಬ್ಬಳನ್ನು ಕಾಮಿಸಿ ಕೂಡುತ್ತಿರುವುದು ಸರಿಯಲ್ಲವೆಂದು ಹೇಳಲಿ; ಸಲಹು=ಕಾಪಾಡು; ಸಲಹುವಡೆ=ಕಾಪಾಡಬೇಕಾದರೆ;

**ಸಲಹುವಡೆ ಅಕ್ಕ, ತನಗೆ ಸೈರಂಧ್ರಿಯನು ಸೇರಿಸಬೇಕು**=ಅಕ್ಕ, ನಿನಗೆ ನನ್ನನ್ನು ಜೀವಂತವಾಗಿ ಉಳಿಸಿಕೊಳ್ಳಬೇಕು ಎಂಬ ಮನಸ್ಸಿದ್ದರೆ, ಸೈರಂಧ್ರಿಯನ್ನು ನನ್ನ ಜತೆಗೂಡಿಸಬೇಕು; ಸೊಗಸು=ಚೆನ್ನಾಗಿ ಕಾಣು/ಸರಿ ಕಾಣು; **ಇತರರ ಮಾತು ಸೊಗಸದು**=ಬೇರೆಯವರ ಮಾತು ನನಗೆ ಸರಿಕಾಣುವುದಿಲ್ಲ; ಸೈರಂಧ್ರಿಯನ್ನು ಕೂಡುವ ಮಾತಲ್ಲದೆ ಇನ್ನಾವ ಮಾತು ನನಗೆ ಮೆಚ್ಚುಗೆಯಾಗುವುದಿಲ್ಲ; ರೂಹು=ರೂಪ/ಆಕಾರ; ಒಗಡು=ಜುಗುಪ್ಸೆಯಾಗು/ಹೇಸಿಕೆಯಾಗು;

**ಮಿಕ್ಕವರ ರೂಹನು ಕಣ್ಣುಗಳು ಒಗಡುವವು**=ರಾಣಿವಾಸದಲ್ಲಿ ಇನ್ನುಳಿದ ದಾಸಿಯರ ರೂಪನ್ನು ನೋಡಲು ನನ್ನ ಕಣ್ಣುಗಳು ಹೇಸುತ್ತವೆ; ಅಂದರೆ ನನ್ನ ಕಣ್ಣುಗಳು ಸೈರಂಧ್ರಿಯನ್ನು ಹೊರತುಪಡಿಸಿ ಉಳಿದವರನ್ನು ನೋಡಲು ಇಚ್ಚೈಸುವುದಿಲ್ಲ; ನಾಮ=ಹೆಸರು; **ಉಳಿದವರ ನಾಮಗಳು ನಾಲಿಗೆಗೆ ಹಗೆಗಳು ಆಗಿಹವು**=ಸೈರಂಧ್ರಿಯಲ್ಲದೆ ಇನ್ನುಳಿದವರ ಹೆಸರುಗಳು ನಾಲಿಗೆಗೆ ಹಗೆಯಾಗಿವೆ. ಅಂದರೆ ಅವರ ಹೆಸರನ್ನು ಉಚ್ಚರಿಸಲಾರೆ; ಸೆಗಳಿಕೆ=ಬೇಸಗೆ; ಸಸಿ=ಎಳೆಯ ಗಿಡ;

**ಸೆಗಳಿಕೆಯ ಸಸಿಯಾದೆನು**=ಇದೊಂದು ರೂಪಕ. ಬುಡದಲ್ಲಿರುವ ಬೇರುಗಳಿಗೆ ನೀರಿಲ್ಲದೆ, ಬಿಸಿಲಿನ ತಾಪದಿಂದ ಬಾಡಿ ನಿಂತಿರುವ ಗಿಡವಾಗಿದ್ದೇನೆ. ಇತ್ತ ನಾನು ಬಯಸಿದ ಸೈರಂಧ್ರಿಯು ದೊರಕದೆ, ಅವಳನ್ನು ಪಡೆಯಲು ಅತ್ತ ನಿನ್ನ ಅನುಗ್ರಹ ದೊರೆಯದೆ ಕಾಮದ ತಾಪದಲ್ಲಿ ಬೆಂದು ಬಸವಳಿದಿದ್ದೇನೆ; ಬಗೆ=ಆಸೆ/ಬಯಕೆ; ಸಲಿಸು=ಈಡೇರಿಸು/ನೆರವೇರಿಸು; **ಎನ್ನಯ ಬಗೆಯ ಸಲಿಸೌ**=ನನ್ನ ಆಸೆಯನ್ನು ಈಡೇರಿಸಿಕೊಡು; ಹರಿ=ಕಡಿ/ಕತ್ತರಿಸು/ತುಂಡಾಗು; ಮೃಗ=ಜಿಂಕೆ; ಪದ=ಪಾದ; ಎರಗು=ನಮಸ್ಕರಿಸು/ಅಡ್ಡಬೀಳು;

**ಹರಿದ ಕರುಳಿನ ಮೃಗದ ಮರಿಯನು ಸಲಹಬೇಕು ಎಂದು ಪದಕೆ ಎರಗಿದನು**= ಇದೊಂದು ರೂಪಕ. ಬೇಡನ ಬಾಣದ ಪೆಟ್ಟಿಗೆ ಸಿಲುಕಿ ಕರುಳು ತುಂಡಾಗಿ

ಸಾಯುತ್ತಿರುವ ಜಿಂಕೆಯ ಮರಿಯ ಜೀವವನ್ನು ಉಳಿಸಿ ಕಾಪಾಡಬೇಕು ಎಂದು ಹೇಳುತ್ತ ಅಕ್ಕನ ಪಾದಗಳ ಮುಂದೆ ಅಡ್ಡಬಿದ್ದನು; ಮದನನ ಹೂಬಾಣದ ಪೆಟ್ಟಿಗೆ ಸಿಲುಕಿ ಮಯ್ ಮನದಲ್ಲಿ ಕಾಮದ ಪರಿತಾಪಕ್ಕೆ ಗುರಿಯಾಗಿ ಸಾಯುವಂತಾಗಿರುವ ತನ್ನನ್ನು ಸೈರಂಧ್ರಿಯ ಜತೆಗೂಡಿಸಿ ಉಳಿಸಿಕೊಳ್ಳಬೇಕು ಎಂದು ಕೇಳಿಕೊಳ್ಳುತ್ತಿದ್ದಾನೆ;

ಕಾಮದ ಪರಿತಾಪದಲ್ಲಿ ತಿಳಿಗೇಡಿಯಾಗಿ ಮತ್ತು ಅತಿ ದುರ್ಬಲ ವ್ಯಕ್ತಿಯಾಗಿ ಪರಿತಪಿಸುತ್ತಿರುವ ತಮ್ಮನನ್ನು ನೋಡಿ ಅಕ್ಕನು ಸಂಕಟದ ಜತೆಜತೆಗೆ ತಮ್ಮನ ಬಗ್ಗೆ ಅನುಕಂಪಗೊಳ್ಳುತ್ತಾಳೆ. ತಮ್ಮನ ಮೇಲಣ ವ್ಯಾಮೋಹ ಈಗ ಸುದೇಷ್ಣೆಯ ವಿವೇಕವನ್ನು ಮಸುಳಿಸುತ್ತದೆ; ಆಲಿ=ಕಣ್ಣು; ನೀರ್+ಏರಿದವು; **ಆಲಿ ನೀರೇರಿದವು**=ಕಣ್ಣುಗಳು ತುಂಬಿಬಂದವು. ಸಂಕಟ ಮತ್ತು ವ್ಯಾಮೋಹದ ಒತ್ತಡದಿಂದ ಹಾಗೂ ಮುಂದೆ ತಮ್ಮನಿಗೆ ಉಂಟಾಗಲಿರುವ ದುರಂತವನ್ನು ನೆನೆಸಿಕೊಂಡು ಸುದೇಷ್ಣೆಯ ಕಣ್ಣುಗಳಲ್ಲಿ ನೀರು ತುಂಬಿ ಬಂದವು; ಮೋಹ=ಅಕ್ಕರೆ/ಪ್ರೀತಿ; ತಳಿ=ಊರು/ಒಡಗೂಡು/ನಾಟು;

**ತಮ್ಮನ ಮೇಲೆ ಮೋಹ ತಳಿತುದು**=ತಮ್ಮನ ಮೇಲೆ ಅಕ್ಕರೆ ಒಡಗೂಡಿತು; ಅಂಗನೆ=ಹೆಂಗಸು; ಕಾಲ=ಯಮ; ಪಾಳಯ=ಪಡೆ/ಸೇನೆ; ಕೈಗೊಟ್ಟಳು= ನೆರವಾದಳು/ಕಯ್ ಜೋಡಿಸಿದಳು; **ಅಂಗನೆ ಕಾಲನ ಪಾಳಯಕೆ ಕೈಗೊಟ್ಟಳು**= ಸುದೇಷ್ಣೆಯು ಯಮದೂತರಿಗೆ ನೆರವಾದಳು/ಕೀಚಕನ ಸಾವಿಗೆ ನೆರವಾದಳು/ ಆಕೆಯ ತಮ್ಮನ ಬಗ್ಗೆ ತೆಗೆದುಕೊಂಡ ತೀರ್ಮಾನ ಅವನನ್ನು ಬದುಕಿಸಲು ನೆರವಾಗದೆ, ಸಾವಿನತ್ತ ತಳ್ಳಿತು; ನೆಗಹು=ಮೇಲಕ್ಕೆ ಎತ್ತು;

**ಖಳನ ನೆಗಹಿದಳು**=ತನ್ನ ಪಾದಗಳ ಮೇಲೆ ದಿಂಡುರುಳಿದ್ದ ಕೀಚಕನನ್ನು ಹಿಡಿದು ಮೇಲಕ್ಕೆತ್ತಿದಳು: **ಏಳು ಭವನಕೆ ಹೋಗು**=ಮೇಲೇಳು ನಿನ್ನ ಮನೆಗೆ ಹೋಗು; **ತರುಣಿಯ ನಾಳೆ ನಾ ಕಳುಹುವೆನು**=ಸೈರಂಧ್ರಿಯನ್ನು ನಾಳೆ ನಾನು ನಿನ್ನ ಮನೆಗೆ ಕಳುಹಿಸುತ್ತೇನೆ; ಮೇಳ=ನಂಟು/ಸಂಬಂಧ; ಲೇಸು+ಅಲ್ಲ; ಲೇಸು=ಒಳ್ಳೆಯದು; ನಿಜ+ಅನುಜ; ನಿಜ=ತನ್ನ; ಅನುಜ=ತಮ್ಮ; **ಪರಸತಿ ಮೇಳ ಲೇಸಲ್ಲ ಎನುತ ನಿಜಾನುಜನ ಬೀಳ್ಕೊಟ್ಟಳು**=ಅನ್ಯಹೆಂಗಸಿನ ಜತೆ ಪಡೆಯುವ ಕಾಮದ ನಂಟು ಎಂದಿಗೂ ಒಳ್ಳೆಯದಲ್ಲ ಎಂಬ ಎಚ್ಚರಿಕೆಯ ನುಡಿಯೊಡನೆ ತನ್ನ ತಮ್ಮನನ್ನು ಕಳುಹಿಸಿದಳು;



## ನೋಟ ೪

ಗುಡಿಗಟ್ಟು=ರೋಮಾಂಚನವಾಗು/ಉತ್ಸಾಹಗೊಳ್ಳು; **ಮನದೊಳಗೆ ಗುಡಿಗಟ್ಟಿದನು**=ಮನಸ್ಸಿನಲ್ಲಿ ರೋಮಾಂಚನಗೊಂಡನು; ಅಕ್ಕ ಸುದೇಷ್ಣೆಯು **'ಸೈರಂಧ್ರಿಯನ್ನು ನಾಳೆ ನಿನ್ನ ಮನೆಗೆ ಕಳುಹಿಸುತ್ತೇನೆ'** ಎಂದು ಆಡಿದ ನುಡಿಗಳನ್ನು ಕೇಳಿ ಕೀಚಕನು ರೋಮಾಂಚಿತನಾಗಿ ಮನದಲ್ಲಿಯೇ ಕಲ್ಪನೆಯನ್ನು ಮಾಡಿಕೊಳ್ಳತೊಡಗಿದನು;

ಮಾನಿನಿ=ಹೆಂಗಸು; ಕರುಣ+ಅಪಾಂಗ; ಕರುಣ=ದಯೆ/ಅನುಗ್ರಹ; ಅಪಾಂಗ=ಕಡೆಗಣ್ಣು; ಕರುಣಾಪಾಂಗ=ಅನುಗ್ರಹದಿಂದ ಬೀರುವ ಕಡೆಗಣ್ಣಿನ ನೋಟ; ರಸ=ಆನಂದ; ಭಾಜನ=ಪಾತ್ರನಾದವನು; ರಸಭಾಜನ=ಆನಂದವನ್ನು ಹೊಂದುವುದಕ್ಕೆ ಪಾತ್ರನಾದವನು; **ಮಾನಿನಿಯ ಕರುಣಾಪಾಂಗ ರಸಭಾಜನವು ಪುಣ್ಯವಲಾ ಎನುತ**=ಸೈರಂಧ್ರಿಯ ಅನುಗ್ರಹದ ಕಡೆಗಣ್ಣಿನ ನೋಟಕ್ಕೆ ನಾನು ಪಾತ್ರನಾಗುತ್ತಿರುವುದು ನನ್ನ ಪಾಲಿನ ಪುಣ್ಯವಲ್ಲವೇ. ಅಂದರೆ ಇಂತಹ ಪುಣ್ಯ ಯಾರಿಗೆ ತಾನೆ ದೊರಕುತ್ತದೆ ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ; ಅಗ್ರಜೆ=ಅಕ್ಕ;

**ಅಗ್ರಜೆಯ ಬೀಳ್ಕೊಂಡನು**=ಅಕ್ಕನ ರಾಣಿವಾಸದ ಅರಮನೆಯಿಂದ ಹೊರಬಂದನು; ಒದವು=ಉಂಟಾಗು; ಮರುಳು=ಪ್ರೀತಿ/ಮೋಹ/ಹುಚ್ಚು/ಭ್ರಮೆ; ಮರುಳುತನ=ಕಾಮದ ಹುಚ್ಚು; ಉಬ್ಬು=ಹಿಗ್ಗು; **ಮನದೊಳು ಒದವಿದ ಮರುಳುತನದ ಉಬ್ಬಿನಲಿ ಮನೆಯನು ಹೊಕ್ಕನು**=ಸೈರಂಧ್ರಿಯ ಮಯ್ ಮಾಟದ ಬಗ್ಗೆ ಮನದಲ್ಲಿ ಉಂಟಾದ ಕಲ್ಪನೆಗಳಿಂದ ಕೀಚಕನ ಮಯ್ ಮನದಲ್ಲಿ ಕಾಮದ ಹುಚ್ಚು ಹೆಚ್ಚಾಗಿದೆ;

ಇತ್ತಲು=ಈ ಕಡೆ; ದಿನಕರ=ಸೂರ್ಯ; ಅಸ್ತ+ಅಚಲ+ಅದ್ರಿಯಲಿ; ಅಸ್ತ=ಮರೆ/ಮುಳುಗುವಿಕೆ; ಅಚಲ=ಸ್ತಿರವಾದ; ಅದ್ರಿ=ಬೆಟ್ಟ; ಅಸ್ತಾಚಲಾದ್ರಿ= ಸೂರ್ಯನು ಮರೆಯಾಗುವ ಪಶ್ಚಿಮ ದಿಕ್ಕಿನಲ್ಲಿರುವ ಬೆಟ್ಟ; ಬೀಡು=ನೆಲೆ; **ಇತ್ತಲು ದಿನಕರಂಗೆ ಅಸ್ತಾಚಲಾದ್ರಿಯಲಿ ಬೀಡು ಆಯಿತ್ತು**=ಇತ್ತ ಸೂರ್ಯನು ಪಶ್ಚಿಮದಿಕ್ಕಿನ ಬೆಟ್ಟದ ನೆಲೆಯಲ್ಲಿ ಮರೆಯಾದ;

ಇತ್ತ ಸೂರ್ಯನು ಮರೆಯಾಗಿ ಇರುಳು ಕವಿಯುತ್ತಿದ್ದಂತೆಯೇ ಬೆಳುದಿಂಗಳನ್ನು ಚೆಲ್ಲುತ್ತ ಚಂದ್ರನು ಮೂಡಿದನು. ಬೆಳುದಿಂಗಳನ್ನು ಚೆಲ್ಲುತ್ತಾ ಆಕಾಶದಲ್ಲಿ ಮೂಡಿಬಂದ ಚಂದಿರನ ಚೆಲುವಿನ ಬಣ್ಣನೆಗಳೆಲ್ಲವೂ ಕೀಚಕನ ಕಾಮದ ಸನ್ನಿವೇಶಕ್ಕೆ ಪೂರಕವಾಗಿ ಹೆಣ್ಣುಗಂಡಿನ ಕಾಮದ ನಂಟಿನ ಬಗೆಯನ್ನು ಸೂಚಿಸುತ್ತಿವೆ;

ವರ=ಉತ್ತಮವಾದ; ದಿಕ್+ಅಂಗನೆ; ದಿಕ್=ದಿಕ್ಕು; ಅಂಗನೆ=ಹೆಣ್ಣು; ಎಂಟು ದಿಕ್ಕುಗಳನ್ನು ಎಂಟು ಮಂದಿ ಹೆಣ್ಣುಗಳು ಕಾಯುತ್ತಿದ್ದಾರೆಂಬ ಕಲ್ಪನೆಯು ಜನಮನ ದಲ್ಲಿದೆ; ಚಂದನ=ಶ್ರೀಗಂಧ; ಎರಕ=ಅಚ್ಚು; ಚಂದನದ ಎರಕ=ಶ್ರೀಗಂಧದ ಕೊರಡನ್ನು ನೀರಿನಲ್ಲಿ ತೇಯ್ದಾಗ ಬರುವ ಹಸಿಯಿಂದ ಮಾಡಿದ ಅಚ್ಚು;

**ವರ ದಿಗಂಗನೆಯು ಇಟ್ಟ ಚಂದನದ ಎರಕವೋ**=ಗಗನದಲ್ಲಿ ಬೆಳಗುತ್ತಿರುವ ಈ ಚಂದಿರನು ದಿಗಂಗನೆಯು ಗಗನದಲ್ಲಿ ಇಟ್ಟಿರುವ ಚಂದನದ ಅಚ್ಚೋ; ಮನುಮಥ=ಕಾಮದೇವ; ಮನುಮಥನ ರಾಣಿ=ರತಿದೇವಿ; ಕರದಲಿ+ಇಹ; ಕರದಲಿ=ಹಸ್ತದಲ್ಲಿ; ಇಹ=ಇರುವ; **ಮನುಮಥನ ರಾಣಿಯ ಕರದಲಿಹ ಕನ್ನಡಿಯೊ**=ರತಿದೇವಿಯ ಕಯ್ಯಲ್ಲಿ ಕಂಗೊಳಿಸುತ್ತಿರುವ ಕನ್ನಡಿಯೊ; ಮದನ=ಕಾಮದೇವ; ಬಿರುದು=ಹೆಸರಾದ/ಕೀರ್ತಿಯನ್ನು ಪಡೆದ; ಒಡ್ಡಣ=ಡಾಬು/ಒಡ್ಯಾಣ/ನಡುವಿನಲ್ಲಿ ಹಾಕಿಕೊಳ್ಳುವ ಒಡವೆ; **ಮದನನ ಬಿರುದಿನ ಒಡ್ಡಣವೊ**=ಕಾಮದೇವನು ತೊಡುವ ಹೆಸರಾಂತ ಒಡ್ಯಾಣವೊ; ಸುರತ=ಗಂಡು ಹೆಣ್ಣಿನ ಕಾಮದ ನಂಟು/ಕೂಟ; ವಿರಹಿ=ಒಬ್ಬರನ್ನೊಬ್ಬರು ಅಗಲಿದವನು/ಳು; ಸುರತ ವಿರಹಿ=ಕಾಮದ ನಂಟನ್ನು ಪಡೆಯಲಾಗದೆ ಪರಿತಪಿಸುತ್ತಿರುವ ಗಂಡು/ಹೆಣ್ಣು;

ಹೊರಳಿ=ರಾಶಿ; **ಸುರತ ವಿರಹಿಯ ಸುಡುವ ಕೆಂಡದ ಹೊರಳಿಯೊ**=ಕಾಮದ ನಂಟನ್ನು ಪಡೆಯಲಾಗದೆ ಅಗಲಿರುವ ಹೆಣ್ಣು ಗಂಡನ್ನು ಸುಡುತ್ತಿರುವ ಕೆಂಡದ ರಾಶಿಯೊ; **ಹೇಳು ಎನಲು**=ಇದರಲ್ಲಿ ಯಾವುದಾಗಿರಬಹುದು ಎಂಬುದನ್ನು ಹೇಳು ಎನ್ನುವಂತೆ; ಹಿಮಕರ=ಚಂದ್ರ; ರಜನಿ=ರಾತ್ರಿ; **ಹಿಮಕರನು ರಜನಿ ಮಧ್ಯದೊಳು ಜನಿಸಿದ**=ರಾತ್ರಿಯ ಕಗ್ಗತ್ತಲ ನಡುವೆ ಚಂದ್ರನು ಮೂಡಿಬಂದನು; ಅವನಿ=ಭೂಮಂಡಲ; ಮಿಗೆ=ಹೆಚ್ಚಾಗಿ;

ತಳತಳಿಸು=ಪ್ರಕಾಶಿಸುವುದು/ಬೆಳಗುವುದು/ಹೊಳೆಯುವುದು; **ಅವನಿ ಮಿಗೆ ತಳತಳಿಸೆ**=ಭೂಮಿಯೆಲ್ಲವೂ ಚಂದಿರನ ಬೆಳುದಿಂಗಳಲ್ಲಿ ಕಂಗೊಳಿಸುತ್ತಿರಲು; ಯುಗ=ಜೋಡಿ; ಚಕ್ರಾಂಕಯುಗ=ಹಗಲಿನ ವೇಳೆ ಜತೆಯಲ್ಲಿದ್ದು, ರಾತ್ರಿಯಾಗುತ್ತಿದ್ದಂತೆ ಪರಸ್ಪರ ಅಗಲುವ ಜೋಡಿ ಹಕ್ಕಿಗಳು; **ಚಕ್ರಾಂಕ ಯುಗ ಬೆಚ್ಚಿದವು**=ಚಕ್ರಾಂಕ ಜೋಡಿಯು ಅಗಲಿಕೆಯ ಸಂಕಟದಿಂದ ಹೆದರಿ ಕಂಗಾಲಾದವು; ಕುಮುದ=ತಾವರೆ; ಕರ್ಚು=ಚುಂಬಿಸು/ಮುದ್ದಿಡು; **ಮರಿದುಂಬಿ ಕುಮುದವ ತಾವು ಕಚ್ಚಿದವು**=ಮರಿದುಂಬಿಗಳು ಮುದುಡಿದ್ದ ತಾವರೆಯ ಹೂವನ್ನು ಕಚ್ಚಿ ಮಕರಂದವನ್ನು ಹೀರಲಾಗದೆ ಗಾಸಿಗೊಂಡವು; ಅಂಬುಜ=ತಾವರೆ; ರಾಜಿ=ಗುಂಪು/ಸಾಲು; ಮುಸುಡು=ಮೊಗ;

**ಅಂಬುಜರಾಜಿ ಮುಸುಡುಗಳನು ಮುಚ್ಚಿದವು**=ಇರುಳಿನಲ್ಲಿ ತಾವರೆ ಹೂಗಳ ದಳಗಳು ಮುದುಡಿಕೊಂಡವು; ತೆರೆ=ಅಲೆ/ತರಂಗ; **ಸಾಗರದ ತೆರೆಗಳು ತವತವಗೆ ಹೆಚ್ಚಿದವು**=ಚಂದ್ರನ ಬೆಳುದಿಂಗಳ ಕಿರಣಗಳ ಕಾಂತಿಯಿಂದ ಕಡಲಿನ ತೆರೆಗಳು ತಮಗೆ ತಾವೆ ಉಕ್ಕೆದ್ದು ಹರಿದವು; ಜಾರೆ=ಸೂಳೆ; **ಜಾರೆಯರು ಬೆಚ್ಚಿದರು**= ಸೂಳೆಯರು ವಿರಹದ ತಾಪದಿಂದ ನೊಂದರು; ಅಕಟ=ಅಯ್ಯೋ ಎಂಬ ಉದ್ಗಾರದ ದನಿ; ಸಕಲ=ಎಲ್ಲ/ಸಮಸ್ತ; ವಿಯೋಗಜನ=ಪರಸ್ಪರ ಒಬ್ಬರನ್ನೊಬ್ಬರು ಅಗಲಿ ಕಾಮದ ನಂಟಿಗಾಗಿ ಹಾತೊರೆಯುತ್ತಿರುವ ಜನರು; ಕಿಚ್ಚನು+ಇಕ್ಕಿದನು; ಕಿಚ್ಚು=ಬೆಂಕಿ;

**ಅಕಟ, ಚಂದ್ರಮ ಸಕಲ ವಿಯೋಗಜನ ಮನಕೆ ಕಿಚ್ಚನಿಕ್ಕಿದನು**=ಅಯ್ಯೋ… ಗಗನದಲ್ಲಿ ಮೂಡಿಬಂದು ಬೆಳುದಿಂಗಳನ್ನು ಚೆಲ್ಲುತ್ತಿರುವ ಚಂದ್ರಮನು ಕಾಮದ ನಂಟನ್ನು ಪಡೆಯಲಾಗದೆ ಅಗಲಿಕೆಯ ತಾಪದಿಂದ ಬೇಯುತ್ತಿರುವ ಗಂಡು ಹೆಣ್ಣುಗಳ ಮನದಲ್ಲಿ ಕಾಮದ ಕಿಚ್ಚನ್ನು ಇಟ್ಟನು; ಖಳ=ನೀಚ/ಕೇಡಿ; ವಿರಹ= ಅಗಲಿಕೆ; ತಾಪ=ಸಂಕಟ/ಬಿಸಿ; ಉರಿ=ಬೆಂಕಿಯ ನಾಲಿಗೆ/ಜ್ವಾಲೆ; ವೆಗ್ಗಳಿಸು=ಹೆಚ್ಚಾಗು;

**ಖಳನ ವಿರಹದ ತಾಪದ ಉರಿ ವೆಗ್ಗಳಿಸೆ ತನ್ನ ಅರಮನೆಗೆ ಬಂದನು**=ಕೀಚಕನ ಮಯ್ ಮನದಲ್ಲಿ ಕಾಮದ ಉರಿಯು ನಿಸರ್ಗದ ಇಂತಹ ಸನ್ನಿವೇಶದಲ್ಲಿ ಇನ್ನೂ ಹೆಚ್ಚಾಗಿ ಸುಡುತ್ತಿರಲು , ಕೀಚಕನು ಕಾಮಾಗ್ನಿಯಲ್ಲಿ ಬೇಯುತ್ತ ತನ್ನ ಅರಮನೆಗೆ ಹಿಂತಿರುಗಿದನು; ಕಳವಳಿಗ=ಕಾಮೋದ್ರೇಕದಿಂದ ತತ್ತರಿಸಿದವನು; ತಳಿರು= ಚಿಗುರು; ಹಾಸು=ಹಾಸಿಗೆ/ಶಯ್ಯೆ; ಹಾಯ್=ಕಾಮದ ತೃಷ್ಣೆಯನ್ನು ತಡೆಯಲಾಗದೆ ಬಾಯಿಂದ ಹೊರಟ ಉದ್ಗಾರದ ದನಿ; ಕೆಡೆ=ಒರಗು/ಬೀಳು/ಮಲಗು;

**ಕಳವಳಿಗ 'ಹಾಯ್' ಎನುತ ತಳಿರ ಹಾಸಿನಲಿ ಕೆಡೆದನು**=ಕಾಮತಾಪದಿಂದ

ಕಂಗೆಟ್ಟಿರುವ ಕೀಚಕನು ‘ಹಾಯ್’ ಎಂದು ನಿಟ್ಟುಸಿರನ್ನು ಬಿಡುತ್ತ ಚಿಗುರೆಲೆಗಳನ್ನು ಹರಡಿರುವ ಹಾಸುಗೆಯಲ್ಲಿ ಮಲಗಿದನು; ನಳಿನವೈರಿ=ಚಂದ್ರ. ನಳಿನ=ತಾವರೆ; ವೈರಿ=ಶತ್ರು/ಹಗೆ; ಸೂರ್ಯಕಿರಣಗಳು ತಾಕಿದಾಗ ತಾವರೆ ಹೂವಿನ ದಳಗಳು ಅರಳುತ್ತವೆ; ರಾತ್ರಿಯ ವೇಳೆ ದಳಗಳು ಮುದುಡಿಕೊಳ್ಳುತ್ತವೆ. ಇದರಿಂದಾಗಿ ಚಂದ್ರನನ್ನು ‘ನಳಿನವೈರಿ’ ಎಂದು ಕರೆಯಲಾಗಿದೆ; ಸುಳಿವು=ಆಗಮನ/ಮೂಡುವಿಕೆ;

**ನಳಿನವೈರಿಯ ಸುಳಿವು ತನ್ನಯ ಕೊಲೆಗೆ ಬಂದುದು**=ಚಂದ್ರೋದಯವು ತನ್ನನ್ನು ಕೊಲ್ಲಲೆಂದೇ ಬಂದಿದೆ. ಏಕೆಂದರೆ ನನ್ನ ಮಯ್ ಮನವನ್ನು ಕಾಡುತ್ತಿರುವ ಕಾಮದ ತಲ್ಲಣ ಚಂದ್ರೋದಯದಿಂದ ಇನ್ನೂ ಹೆಚ್ಚಾಗಿದೆ ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ ಕೀಚಕನು ನಾನಾ ಬಗೆಗಳಲ್ಲಿ ಪರಿತಪಿಸತೊಡಗಿದ್ದಾನೆ; ಪಾಪಿ=ನೀಚ/ಕೇಡಿ; ಕಮಲ=ತಾವರೆಯ ಹೂವು; ಜ=ಜನಿಸಿದವನು; ಕಮಲಜ=ಬ್ರಹ್ಮ; ಬ್ರಹ್ಮನು ಕಮಲದ ಹೂವಿನಲ್ಲಿ ಹುಟ್ಟಿಬಂದಿದ್ದಾನೆ. ದೇವಲೋಕದಲ್ಲಿರುವ ಬ್ರಹ್ಮನು ಲೋಕದಲ್ಲಿನ ಸಕಲ ಜೀವರಾಶಿಗಳನ್ನು ನಿರ್ಮಿಸುತ್ತಾನೆ ಎಂಬ ಕಲ್ಪನೆಯು ಜನಮನದಲ್ಲಿದೆ; ಚಲಿತ=ಹೊಯ್ದಾಡುವ/ಅತ್ತಿತ್ತ ಅಲುಗುವ; ಲೋಚನ=ಕಣ್ಣು; ಚಲಿತಲೋಚನೆ=ಚಂಚಲವಾದ ಕಣ್ಣುಗಳನ್ನುಳ್ಳವಳು/ಸುಂದರಿ; ಇನಿತು=ಇಷ್ಟೊಂದು; ಚೆಲುವಿಕೆ=ಅಂದಚೆಂದ/ಸೊಗಸು;

**ಪಾಪಿ ಕಮಲಜ ಚಲಿತಲೋಚನೆಗೆ ಇನಿತು ಚೆಲುವಿಕೆಯ ಏಕೆ ಮಾಡಿದನು**=ನೀಚನಾದ ಆ ಬ್ರಹ್ಮನು ಈ ಸೈರಂಧ್ರಿಯನ್ನೇಕೆ ಇಷ್ಟೊಂದು ಚೆಲುವುಳ್ಳ ಹೆಣ್ಣನ್ನಾಗಿ ರೂಪಿಸಿದನು; ಕಾಮುಕತನದಿಂದ ಹುಚ್ಚನಾಗಿರುವ ಕೀಚಕನು ತನ್ನ ಕಾಮವಿಕಾರಕ್ಕೆ ಬ್ರಹ್ಮನೇ ಕಾರಣವೆಂದು ನಿಂದಿಸುತ್ತಿದ್ದಾನೆ; **ಹಾಸಿದ ಎಳೆ ತಳಿರು ಒಣಗಿದವು**=ದೇಹಕ್ಕೆ ತಂಪನ್ನುಂಟುಮಾಡಲೆಂದು ಹಾಸಿಗೆಯಲ್ಲಿ ಹರಡಿದ್ದ ಎಳೆಯ ಚಿಗುರುಗಳೆಲ್ಲವೂ ಕೀಚಕನ ಕಾಮದ ಮಯ್ ಬಿಸಿಯಿಂದಾಗಿ ಒಣಗಿದವು; ಸೂಸು=ಚಿಮ್ಮು/ಸಿಡಿ; ಹೊಗೆ ಸೂಸು=ಬಿಸಿ ಹರಡು/ಉರಿ ತಗಲು; ಸುಯಿಲು=ಉಸಿರು; ಸುಳಿ+ಬಾಳೆ; ಸುಳವಾಳೆ=ಸುಳಿಯೊಡೆದ ಬಾಳೆ/ಎಳೆಯ ಬಾಳೆಯ ಗಿಡ; ಝಳ=ಬಿಸಿ; ಹೊಯ್ದು=ತಾಗಿ/ತಟ್ಟಿ; ಬಾಡು=ಮುರುಟು/ಸೊರಗು;

**ಹೊಗೆ ಸೂಸಿದಾ ಸುಯಿಲು ಮೆಲ್ಲನೆ ಬೀಸುತಿಹ ಸುಳಿವಾಳೆ ಎಲೆ ಝಳ ಹೊಯ್ದು ಬಾಡಿದವು**=ಕೀಚಕನ ಕಾಮ ಪರಿತಾಪದ ನಿಟ್ಟುಸಿರಿನ ಬಿಸಿಯು ಮೆಲ್ಲನೆ ಬೀಸುತ್ತಿದ್ದ ಎಳೆಯ ಬಾಳೆಯ ಗಿಡದ ಎಲೆಗಳಿಗೆ ತಾಕಿ ಎಲೆಗಳು ಮುರುಟಿಕೊಂಡವು; ಕಗ್ಗೊಲೆ=ಕ್ರೂರವಾದ ಕೊಲೆ; ಕುಸುಮ+ಅಸ್ತ್ರ; ಕುಸುಮ=ಹೂವು;

ಅಸ್ತ್ರ=ಬಾಣ; ಕುಸುಮಾಸ್ತ್ರ=ಮನ್ಮಥ. ಗಂಡುಹೆಣ್ಣಿನ ಮಯ್ ಮನದಲ್ಲಿ ಕಾಮದ ಒಳಮಿಡಿತಗಳನ್ನು ಕೆರಳಿಸಲೆಂದು ಮನ್ಮಥನು ಹೂಬಾಣವನ್ನು ಎದೆಗೆ ಬಿಡುತ್ತಾನೆ ಎಂಬ ಕಲ್ಪನೆಯು ಜನಮನದಲ್ಲಿದೆ; ಸಸಿ=ಶಶಿ/ಚಂದ್ರ; ಸರೋಜ=ತಾವರೆ; ಕೈವೀಸು=ಕಾಳೆಗವನ್ನು ಮಾಡುವುದಕ್ಕೆ ಸೂಚನೆಯನ್ನು ನೀಡುವುದು;

**ಈ ಕೀಚಕನ ಕಗ್ಗೊಲೆಗೆ ಕುಸುಮಾಸ್ತ್ರನು ಆ ಸಸಿಯ... ಕೋಗಿಲೆಯ... ತುಂಬಿಯನು...ಆ ಸರೋಜವ...ಮಲ್ಲಿಗೆಯ ಕೈವೀಸಿದನು**=ಕೀಚಕನನ್ನು ಕಾಮೋದ್ರೇಕಕ್ಕೆ ಗುರಿಮಾಡಿ ಅವನನ್ನು ಕೊಲ್ಲುವ ಉದ್ದೇಶದಿಂದಲೇ ಮನ್ಮಥನು ಆ ಚಂದ್ರನಿಗೆ, ಕೋಗಿಲೆಗೆ, ತುಂಬಿಗೆ, ತಾವರೆಗೆ ಮತ್ತು ಮಲ್ಲಿಗೆಗೆ ಕಯ್ ಬೀಸಿ ಸೂಚನೆಯನ್ನು ಕೊಟ್ಟನು; ಬೆಳಗುವ ಚಂದಿರ, ಹಾಡುವ ಕೋಗಿಲೆ, ಜೇಂಕರಿಸುವ ತುಂಬಿ, ಅರಳಿದ ತಾವರೆ ಮತ್ತು ಕಂಪನ್ನು ಬೀರುವ ಮಲ್ಲಿಗೆಯ ಹೂವು ನಿಸರ್ಗದಲ್ಲಿನ ಇವೆಲ್ಲವೂ ಗಂಡು ಹೆಣ್ಣಿನ ಮಯ್ ಮನದಲ್ಲಿ ಕಾಮದ ಒಳಮಿಡಿತಗಳನ್ನು ಉದ್ದೀಪಿಸುತ್ತವೆ ಎಂದು ತಿಳಿಯಲಾಗಿದೆ; ಒಡಲು=ಹೊಟ್ಟೆ; ವೀಳೆಯ=ಎಲೆ ಅಡಿಕೆ ಸುಣ್ಣಗಳೊಡನೆ ಸೇವಿಸುವುದಕ್ಕೆ ಸಿದ್ಧಪಡಿಸಿದ ತಾಂಬೂಲ; ಕರ್ಪುರ=ಒಂದು ಬಗೆಯ ಸುವಾಸನೆಯ ವಸ್ತು ; ಹಳಕು=ಚೂರು/ ತುಣುಕು/ಹರಳು ; ಉರಿ=ಜ್ವಲಿಸು/ಸುಡು ;

**ಒಡಲೊಳು ವೀಳೆಯದ ಕರ್ಪುರದ ಹಳಕುಗಳು ಉರಿದುದು**=ಎಲೆ ಅಡಕೆ ಸುಣ್ಣ ಕರ್ಪುರದ ತುಣುಕುಗಳೊಡನೆ ಸೇವಿಸಿದ್ದ ತಾಂಬೂಲವು ಕೀಚಕನ ಹೊಟ್ಟೆಯಲ್ಲಿ ಉರಿಯನ್ನು ಉಂಟುಮಾಡಿದವು; ಅಮಳ=ಶುಚಿಯಾದ; ಗಂಧ=ಪರಿಮಳ; ಸರಸ=ಸೊಗಸಾದ; ಕರ್ದಮ=ಶ್ರೀಗಂಧ ಮರದ ಕೊರಡನ್ನು ನೀರಿನಲ್ಲಿ ತೇದು ಸಿದ್ಧಪಡಿಸಿದ ಹಸಿಯಾದ ವಸ್ತು. ಇದನ್ನು ಹಣೆಗೆ, ತೋಳುಗಳಿಗೆ ಮತ್ತು ಎದೆಗೆ ಲೇಪಿಸಿಕೊಳ್ಳುತ್ತಾರೆ; ಕರಿಕುವರಿ=ಸುಟ್ಟು ಕಪ್ಪಾಗು/ಕರಿಕಾಗು;

**ಅಮಳ ಗಂಧದ ಸರಸ ಕರ್ದಮ ಕರಿಕುವರಿದುದು**=ಕೀಚಕನ ದೇಹದ ತಾಪ ಕಡಿಮೆಯಾಗಲೆಂದು ಲೇಪಿಸಿಕೊಂಡಿದ್ದ ಸುವಾಸನೆಯಿಂದ ಕೂಡಿದ ಹಸಿಹಸಿಯಾದ ಸಿರಿಗಂಧವು ಕೀಚಕನ ಕಾಮದ ಪರಿತಾಪ ಹೆಚ್ಚಾದುದರಿಂದ ಸುಟ್ಟು ಕರಿಕಲಾಯಿತು; ಪೂಸು=ಬಳಿ/ಸವರು/ಲೇಪಿಸು; ಅಂಗ=ದೇಹ; ಹೊರಳು=ಉರುಳು/ಉರುಳಾಡು; ದಳ್ಳುರಿಯೊಲ್+ಆದುದು; ದಳ್ಳುರಿ=ದಗದಗನೆ ಉರಿಯುತ್ತಿರುವ ಬೆಂಕಿ;

**ಪೂಸಿದ ಅಂಗದಲಿ ಹೊರಳೆ ನೀರಿನ ಪೊಟ್ಟಣವು ದಳ್ಳುರಿಯೊಲಾದುದು**= ಸುಗಂಧ ದ್ರವ್ಯಗಳನ್ನು ಬಳಿದುಕೊಂಡಿದ್ದರೂ ಕಾಮದ ತಾಪದಿಂದ ಉರಿಯುತ್ತಿದ್ದ ಕೀಚಕನ ದೇಹವನ್ನು ತಂಪಾಗಿಸಲೆಂದು ನೀರಿನ ಪೊಟ್ಟಣವನ್ನು

ಆತ ತನ್ನ ದೇಹದ ಮೇಲೆ ಇಟ್ಟುಕೊಂಡಾಗ, ಅದು ಕೂಡ ದಗದಗನೇ ಉರಿಯುವ ಬೆಂಕಿಯಂತಾಯಿತು; ತಣ್ಣನೆಯ ನೀರಿನ ಪೊಟ್ಟಣವೂ ಬಿಸಿಯಾಯಿತು; ಕೀಚಕನ ಕಾಮದ ಪರಿತಾಪ ಗಳಿಗೆ ಗಳಿಗೆಗೂ ಏರುತ್ತಿದೆ; ದೆಸೆಗೆ=ಪಾಲಿಗೆ; ಬಲಿದ=ಹೆಚ್ಚಾದ; ಚಂದ್ರಿಕೆ=ಬೆಳುದಿಂಗಳು; ಕಡುಗು=ಚಿಕ್ಕದಾಗಿ ಹರಿಯುವ ಕಾಲುವೆ; ತವರ=ಹಿತ್ತಾಳೆ, ತಾಮ್ರ ಮುಂತಾದ ಲೋಹಗಳಂತೆ ಒಂದು ಬಗೆಯ ಲೋಹ; ಕರಗಿ ಕಡುಗಿದ ತವರ=ಗಟ್ಟಿಯಾಗಿದ್ದ ತವರವನ್ನು ಚೆನ್ನಾಗಿ ಕಾಯಿಸಿದಾಗ ಅದು ದ್ರವರೂಪವನ್ನು ತಳೆದು ಅತ್ತಿತ್ತ ಹರಿಯಬಲ್ಲುದು;

**ಕೀಚಕನ ದೆಸೆಗೆ ಬಲಿದ ಚಂದ್ರಿಕೆ ಕರಗಿ ಕಡುಗಿದ ತವರವಾದುದು**= ಕೀಚಕನ ಪಾಲಿಗೆ ಬೆಳಗುತ್ತಿರುವ ಚಂದ್ರನು ಸುಡುವ ತವರವಾದ; ಅಂದರೆ ಹೆಚ್ಚು ಹೆಚ್ಚು ಪ್ರಕಾಶಮಾನವಾಗಿ ಬೆಳುದಿಂಗಳು ಕಂಗೊಳಿಸಿದಂತೆಲ್ಲಾ ಕೀಚಕನ ಕಾಮದ ತಾಪ ಹೆಚ್ಚಾಯಿತು; ಅರರೆ=ಅಬ್ಬಬ್ಬಾ. ಅಚ್ಚರಿಯನ್ನು ಸೂಚಿಸುವಾಗ ಬಳಸುವ ಪದ; ಕಾಮ+ಅಗ್ನಿ; ಅಗ್ನಿ=ಬೆಂಕಿ; ಪರಿಮಳ=ಕಂಪು/ಸುವಾಸನೆ; ಸುಳಿ=ಕವಿ/ಆವರಿಸು; ಆಲವಟ್ಟದ+ಒಳ್+ಇರದೆ; ಆಲವಟ್ಟ=ಬೀಸಣಿಗೆ;

**ಅರರೆ, ಕೀಚಕನ ಕಾಮಾಗ್ನಿ ತಾಪದಲಿ ಪರಿಮಳದಿ ಸುಳಿವ ಆಲವಟ್ಟದೊಳಿರದೆ ಪೂಸಿದ ಗಂಧ ಕರ್ಪುರವು ಸೀದವು**= ಅಬ್ಬಬ್ಬಾ... ಬೀಸಣಿಗೆಯಲ್ಲಿ ಕಂಪನ್ನು ಬೀರಲೆಂದು ಲೇಪಿಸಿದ್ದ ಕರ್ಪೂರವೆಲ್ಲವೂ ಕೀಚಕನ ಕಾಮದ ಬೆಂಕಿಯಲ್ಲಿ ಸುಟ್ಟುಹೋದವು; ಪರಮ=ಅತ್ಯುತ್ತಮ/ಬಹು ಒಳ್ಳೆಯ; ಪಾತಿವ್ರತೆ=ಪತಿವ್ರತೆ; ಅಳುಪಿ=ಆಸೆಪಟ್ಟು; ಹರಣ=ಜೀವ/ಪ್ರಾಣ; **ಪರಮ ಪಾತಿವ್ರತೆಗೆ ಅಳುಪಿ ತಾನ್ ಹರಣದ ಆಸೆಯ ಮರೆದು**=ಪರಮ ಪತಿವ್ರತೆಯಾದ ಸೈರಂಧ್ರಿಯನ್ನು ಬಯಸಿ ಕಾಮುಕನಾಗಿರುವ ಕೀಚಕನು ತನ್ನ ಪ್ರಾಣದ ಮೇಲಣ ಆಸೆಯನ್ನೇ ಮರೆತು; ಅಂದರೆ ಮುಂದಾಗಲಿರುವ ದುರಂತದ ಬಗ್ಗೆ ಚಿಂತಿಸದೆ; ಚಂದ್ರಕಾಂತ=ಬಿಳಿಯ ಕಲ್ಲು/ಅಮೃತಶಿಲೆ; ಮಚ್ಚು=ಮೇಲಿನ ಚಾವಣಿ/ಕಟ್ಟಡದ ಮೇಲಿನ ಭಾಗ; ಪಾತಕ=ನೀಚ/ಕೇಡಿ; ಹೊರಳುತ=ಉರುಳಾಡುತ್ತ;

**ಚಂದ್ರಕಾಂತದ ಮೇಲು ಮಚ್ಚಿನಲಿ ಪಾತಕ ಹೊರಳುತ ಇರ್ದನು**= ಅಮೃತಶಿಲೆಯ ಮಾಳಿಗೆಯಿರುವ ಅರಮನೆಯ ಕೊಟಡಿಯಲ್ಲಿ ನೀಚ ಕೀಚಕನು ಕಾಮದ ಪರಿತಾಪದಿಂದ ನಿದ್ರೆಯಿಲ್ಲದೆ ಹೊರಳಾಡತೊಡಗಿದ್ದನು; ಯುಗ=ಅತಿ ಹೆಚ್ಚಿನ ಕಾಲ; ಇರುಳು=ರಾತ್ರಿ; **ಅರೆಗಳಿಗೆ ಯುಗವಾಗಿ ಇರುಳನು ನೂಕಿದನು**= ಸೈರಂಧ್ರಿಯೊಡನೆ ಕಾಮದ ನಂಟನ್ನು ಪಡೆಯಲು ಹಂಬಲಿಸುತ್ತಿರುವ ಕೀಚಕನಿಗೆ ಅರೆಗಳಿಗೆಯು ಒಂದೊಂದು ಯುಗದಂತೆ ಕಾಣುತ್ತಿದೆ. ಕಾಮದ ಪರಿತಾಪದಲ್ಲಿಯೇ ಅಂದಿನ ರಾತ್ರಿಯನ್ನು ಕಳೆದನು;



## ನೋಟ–೫

**ಕೇಳು ಜನಮೇಜಯ ಮಹೀಪತಿ**=ವೈಶಂಪಾಯನ ಮುನಿಯು ವ್ಯಾಸರು ರಚಿಸಿದ ಮಹಾಭಾರತದ ಕತೆಯನ್ನು ಮತ್ತೊಮ್ಮೆ ಪಾಂಡುವಂಶದ ಅರಸನಾದ ಜನಮೇಜಯನಿಗೆ ಹೇಳತೊಡಗಿದ್ದಾನೆ; ಮಹೀಪತಿ=ರಾಜ; ನಯ=ನೀತಿ/ನ್ಯಾಯ/ವಿವೇಕ; ವಿಹೀನೆ=ಇಲ್ಲದವಳು; ನಯವಿಹೀನೆ=ವಿವೇಕವನ್ನು ಕಳೆದುಕೊಂಡವಳು;

ಸುದೇಷ್ಣೆ=ಕೀಚಕನ ಅಕ್ಕ. ವಿರಾಟರಾಯನ ಹೆಂಡತಿ; **ನಯವಿಹೀನೆ ಸುದೇಷ್ಣೆ**= 'ಕಾಮುಕನಾದ ತನ್ನ ತಮ್ಮ ಕೀಚಕನ ಮನೆಗೆ ಸೈರಂಧ್ರಿಯನ್ನು ಕಳುಹಿಸಬಾರದು. ಕಳುಹಿಸಿದರೆ ಅವನಿಂದ ಸೈರಂಧ್ರಿಯ ಮಾನಪ್ರಾಣಕ್ಕೆ ಅಪಾಯವಾಗುತ್ತದೆ' ಎಂಬ ಆತಂಕವಿಲ್ಲದ ಮತ್ತು ಇಂತಹ ನೀಚಕಾರ್ಯಕ್ಕೆ ತಾನು ಅವಕಾಶವನ್ನು ನೀಡಬಾರದು ಎಂಬ ವಿವೇಕವಿಲ್ಲದ ಸುದೇಷ್ಣೆ;

ಪಾಂಚಾಲಿ=ಪಾಂಚಾಲ ದೇಶದ ರಾಜನಾದ ದ್ರುಪದನ ಮಗಳು ದ್ರೌಪದಿ; **ಪಾಂಚಾಲಿಯನು ಕರೆಸಿದಳು**=ಪಾಂಚಾಲಿಯನ್ನು ತನ್ನ ಬಳಿಗೆ ಕರೆಸಿಕೊಂಡಳು; ಬಂದ+ಆಕೆಯನು; ಬೆಸಸು=ಅಪ್ಪಣೆ ಮಾಡು; **ಬಂದಾಕೆಯನು ಬೆಸಸಿದಳು**=ತನ್ನ ಬಳಿಗೆ ಬಂದ ಸೈರಂಧ್ರಿಗೆ ಈ ರೀತಿ ಅಪ್ಪಣೆ ಮಾಡುತ್ತಾಳೆ; **ಎಲೆಗೆ**= ಇನ್ನೊಬ್ಬರೊಡನೆ ಮಾತನಾಡುವಾಗ ಬಳಸುವ ಪದ; ತನ್ನ ದಾಸಿಯಾಗಿರುವ ಸೈರಂಧ್ರಿಯನ್ನು ಕುರಿತು ಸುದೇಷ್ಣೆಯು ಅಧಿಕಾರದ ದನಿಯಲ್ಲಿ ಈ ಪದವನ್ನು ಬಳಸಿದ್ದಾಳೆ; ಅನುಜ+ಆಲಯದಲಿ; ಅನುಜ=ತಮ್ಮ; ಆಲಯ=ಮನೆ; ಮಧು=ಜೇನುತುಪ್ಪ; ಝಡಿತೆ=ಬೇಗ; ತಹುದು=ತರುವುದು;

**ಎಲೆಗೆ, ಅನುಜಾಲಯದಲಿ ಉತ್ತಮ ಮಧುವ ನೀ ಝಡಿತೆಯಲಿ ತಹುದು**= ಎಲೆ ಸೈರಂಧ್ರಿಯೇ... ನನ್ನ ತಮ್ಮನ ಮನೆಗೆ ಹೋಗಿ ಒಳ್ಳೆಯ ಜೇನುತುಪ್ಪವನ್ನು ತೆಗೆದುಕೊಂಡು ಬೇಗ ಬರುವುದು; ಎಂದು=ಹೇಳಿ; ಕಡುಪಾಪಿ=ಅತಿ ಹೆಚ್ಚಿನ ಪಾಪವನ್ನು ಮಾಡಿದವನು/ಮಹಾನೀಚ/ಪರಮಕೇಡಿ; ಮನೋಧರ್ಮ= ಮನಸ್ಸಿನ ಉದ್ದೇಶ; ಮೃತ್ಯು=ಸಾವು; **ಎಂದು ಕಡುಪಾಪಿಯ ಮನೋಧರ್ಮವನು ಮೃತ್ಯುವನು ಬಯಸಿದಳು**= ಪರಮಕೇಡಿಯಾದ ಕೀಚಕನ ಮನಸ್ಸಿನ ಆಸೆಯನ್ನು ಈಡೇರಿಸಲು, ಈ ರೀತಿ ಸೈರಂಧ್ರಿಗೆ ಹೇಳುವುದರ ಮೂಲಕ ಸುದೇಷ್ಣೆಯು ಕೀಚಕನ ಸಾವಿಗೆ ತಾನೂ ಕಾರಣಳಾದಳು;

ಅಣ್ಮು>ಅಮ್ಮು; ಅಣ್ಮು=ಶಕ್ತವಾಗು; ಅಮ್ಮೆನು=ಹೋಗುವಷ್ಟು ಶಕ್ತಿಯಿಲ್ಲ; ದೇವಿ. **ಅಲ್ಲಿಗೆ ಅಮ್ಮೆನು**=ದೇವಿ, ನಾನು ಅಲ್ಲಿಗೆ ಹೋಗಲಾರೆ. ದುರುಳ=ನೀಚ/ ಕೇಡಿ; **ನಿಮ್ಮಯ ತಮ್ಮ ದುರುಳನು**=ನಿಮ್ಮ ತಮ್ಮ ನೀಚನಾಗಿದ್ದಾನೆ; ಲೇಸು= ಹಿತವಾದುದು/ಒಳ್ಳೆಯದು; ಹೊಲ್ಲೆಹ=ಕೆಟ್ಟದ್ದು/ಕ್ರೂರವಾದುದ್ದು; ಎಮ್ಮ= ನಮ್ಮನ್ನು; ತಾಗುವುದು=ಮುಟ್ಟುವುದು; **ಲೇಸು ಹೊಲ್ಲೆಹವು ಎಮ್ಮ ತಾಗುವುದು**= ನೀವು ನನ್ನನ್ನು ಅಲ್ಲಿಗೆ ಕಳುಹಿಸುವುದರಿಂದ ಒಳ್ಳೆಯದಾಗಲಿ ಇಲ್ಲವೇ ಕೇಡಾಗಲಿ ಅದು ನಮ್ಮ ಮೇಲೆ ಪರಿಣಾಮವನ್ನು ಬೀರುತ್ತದೆ; ಅಳಿ=ನಾಶ/ಸಾವು; ಎಮಗೆ=ನಮಗೆ; ಹಳಿವು=ಆರೋಪ/ನಿಂದೆ/ಕೆಟ್ಟಹೆಸರು;

**ಆತನು ಅಳಿದರೆ ಬಳಿಕ ಎಮಗೆ ಹಳಿವು**=ಆತ ಸತ್ತರೆ ನಮ್ಮ ಮೇಲೆ ಆರೋಪ ಬರುತ್ತದೆ; ಓಲೈಸು=ಆಶ್ರಯವನ್ನು ಪಡೆದು ಸೇವೆಯನ್ನು ಮಾಡು; ವಿಕರ್ಮ=ನ್ಯಾಯಸಮ್ಮತವಲ್ಲದ ಕೆಲಸ/ಕೇಡು; **ನಿಮ್ಮ ನಾವು ಓಲೈಸಿ ನಿಮಗೆ ವಿಕರ್ಮವನು ಮಾಡುವುದು ನಮಗದು ಧರ್ಮವಲ್ಲ**=ನಿಮ್ಮ ಆಶ್ರಯವನ್ನು ಪಡೆದು ನಿಮ್ಮ ಸೇವೆಯನ್ನು ಮಾಡುತ್ತಿರುವ ನಾವು, ನಿಮ್ಮ ರಾಜಮನೆತನಕ್ಕೆ ಕೇಡನ್ನು ಮಾಡುವುದು ನಮಗೆ ಒಳ್ಳೆಯದಲ್ಲ; **ಉಳಿದವರ ಕಳುಹುವುದು**= ರಾಣಿವಾಸ ದಲ್ಲಿರುವ ದಾಸಿಯರ ಗುಂಪಿನಲ್ಲಿ ಬೇರೆ ಯಾರನ್ನಾದರೂ ನೀವು ಕಳುಹಿಸಿರಿ;

ಸುಡು=ಈ ಸನ್ನಿವೇಶದಲ್ಲಿ 'ಸುಡು' ಎಂಬ ಪದ ತಿರಸ್ಕಾರ ಸೂಚಕವಾಗಿ ಬಳಕೆಯಾಗಿದೆ; **ಸುಡು, ಮನದ ಗರ್ವವ ಏತಕೆ ನುಡಿವೆ**=ನಿನ್ನ ಮಾತುಗಳನ್ನು ನಾನು ಲೆಕ್ಕಿಸುವುದಿಲ್ಲ. ಸೊಕ್ಕಿನ ಮನದವಳಾದ ನೀನು ಏತಕ್ಕೆ ನನ್ನ ಅಪ್ಪಣೆಯನ್ನು ಕಡೆಗಣಿಸಿ ಮಾತನಾಡುತ್ತಿರುವೆ; ಮೇಣ್=ಮತ್ತು; ಹಾನಿ=ಕೇಡು; ಹರಿಬ= ತೊಂದರೆ; **ನಿನ್ನಿಂದ ಎನಗೆ ಮೇಣ್ ಎನ್ನವರಿಗೆ ಹಾನಿ ಹರಿಬಗಳು ಉಂಟೇ**= ನಿನ್ನಂತಹ ದಾಸಿಯೊಬ್ಬಳಿಂದ ನನಗೆ ಮತ್ತು ನನ್ನವರಿಗೆ ಸಾವು ನೋವಿನ ಕೇಡು ಉಂಟಾಗುವುದೇ;

**ಅನುಜನು ಆರೆಂದು ಅರಿಯೆ**=ನನ್ನ ತಮ್ಮನು ಯಾರೆಂದು ನಿನಗೆ ಗೊತ್ತಿಲ್ಲ. ನನ್ನ ತಮ್ಮನ ತೋಳ್ಬಲವಾಗಲಿ ಮತ್ತು ಪರಾಕ್ರಮವಾಗಲಿ ಎಂತಹುದು ಎಂಬುದನ್ನು ನೀನು ಕೇಳಿಲ್ಲ… ಕಂಡಿಲ್ಲ; ಸಾಕು, ಆತನ ಸಮೀಪಕೆ ಹೋಗಿ ಬಾ, **ನಡೆ ಎನಲು**=ಇನ್ನು ನನ್ನ ಮುಂದೆ ಯಾವ ಸಬೂಬನ್ನು ಹೇಳಬೇಡ. ಆತನ ಬಳಿಗೆ ಹೋಗಿ ಬಾ… ಈ ಕೂಡಲೇ ಹೊರಡು ಎಂದು ಒತ್ತಾಯದಿಂದ ಮತ್ತೆ ಅಪ್ಪಣೆ ಮಾಡಲು; **ಕೈಕೊಂಡು**=ರಾಣಿ ಸುದೇಷ್ಣೆಯು ಅಪ್ಪಣೆ ಮಾಡಿದಂತೆ ಕೀಚಕನ ಮನೆಯಿಂದ ಜೇನುತುಪ್ಪವನ್ನು ತರುವುದಕ್ಕೆ ಒಪ್ಪಿಕೊಂಡು; ಅಬಲೆ= ಹೆಂಗಸು; ನಿಜ+ಆಲಯ; ನಿಜ=ತನ್ನ; ಆಲಯ=ಮನೆ; ನಿಜಾಲಯ=ತಾನು ಕೆಲಸ ಮಾಡುತ್ತಿದ್ದ ರಾಣಿವಾಸದ ಮನೆಯಿಂದ; **ಅಬಲೆ ನಿಜಾಲಯವ ಹೊರವಂಟಳು**= ಸೈರಂಧ್ರಿಯು ಸುದೇಷ್ಣೆಯ ರಾಣಿವಾಸದಿಂದ ಕೀಚಕನ ಮನೆಯತ್ತ ನಡೆದಳು;

**ಅರಿಯೆನು ಎಂದೊಡೆ**=ಕೀಚಕನ ಮನೆಗೆ ಹೋಗುವುದಕ್ಕೆ ಆಗುವುದಿಲ್ಲ ಎಂದು ಹೇಳಿದರೂ; **ದೇವಿ ನೇಮಿಸಲು ಇದಾವ ಧರ್ಮವು**=ಕೀಚಕನ ಮನೆಗೆ ಹೋಗು ಎಂದು ರಾಣಿಯು ಬಲಾತ್ಕಾರದಿಂದ ಅಪ್ಪಣೆ ಮಾಡಿದ್ದು… ಇದಾವ ನೀತಿ; ಶಿವ… ಶಿವ=ವ್ಯಕ್ತಿಯು ಸಂಕಟ ಬಂದಾಗ ಆಡುವ ಉದ್ಗಾರದ ನುಡಿ; ಶಿವನೆಂಬ ದೇವರ ಹೆಸರನ್ನು ಉಚ್ಚರಿಸುತ್ತ, ಮನದ ಆತಂಕವನ್ನು ಮತ್ತು ಅಚ್ಚರಿಯನ್ನು ವ್ಯಕ್ತಪಡಿಸುವುದು; ಹದ=ರೀತಿ; **ಶಿವ ಶಿವ ಈ ಹದ, ಅವರಿಗೆ ಸಾವನು ತಹುದು**=ದೇವರೇ, ಅಕ್ಕ-ತಮ್ಮ ಸೇರಿಕೊಂಡು ಮಾಡುತ್ತಿರುವ ಈ ರೀತಿಯ ಸಂಚು ಅವರಿಗೆ ಸಾವನ್ನು ತರುವುದು; ಬದ್ಧ=ತೀವ್ರವಾದ/ಅತಿ ಹೆಚ್ಚಿನ; ವಿಘಾತಿ+ಇದು; ವಿಘಾತಿ=ಕೇಡು/ಹಾನಿ/ನಾಶ;

**ಇದು ಬದ್ಧ ವಿಘಾತಿ**=ಕೀಚಕನು ನನ್ನ ಮೇಲೆ ಕೆಟ್ಟಕಣ್ಣನ್ನು ಇಟ್ಟಿರುವುದು ಮತ್ತು ಅದಕ್ಕೆ ತಕ್ಕಂತೆ ಸುದೇಷ್ಣೆಯು ಹುನ್ನಾರವನ್ನು ಹೂಡಿರುವುದು ವಿರಾಟರಾಯನ ರಾಜವಂಶಕ್ಕೆ ಹೆಚ್ಚಿನ ಕೇಡನ್ನುಂಟುಮಾಡುತ್ತದೆ; ಬಲುಹು=ಬಲ/ಶಕ್ತಿ; ಸೇವಿಸು=ಊಳಿಗ/ಚಾಕರಿ; ಕೋವಿದ=ತಿಳಿದವನು/ವಿದ್ವಾಂಸ; ಮತ=ಅಭಿಪ್ರಾಯ/ಅನುಭವದ ಮಾತು;

**ಬಲುಹು ಸೇವಿಸುವದೇ ಕಷ್ಟ ಎಂಬುದು ಕೋವಿದರ ಮತ**= "ರಾಜಮಹಾರಾಜರ ಇಲ್ಲವೇ ಸಿರಿವಂತರ ಬಳಿ ಊಳಿಗವನ್ನು ಮಾಡುವುದೇ ಬಲು ಕಷ್ಟ" ಎನ್ನುವುದು ತಿಳಿದವರ ಅನುಭವದ ನುಡಿ; ಅಧಿಕಾರದಲ್ಲಿರುವವರು ಮತ್ತು ಸಿರಿವಂತರು ತಮ್ಮ ಸೇವೆಯನ್ನು ಮಾಡುವ ದಾಸ ದಾಸಿಯರ ಬಗ್ಗೆ ತುಸುವಾದರೂ ಕರುಣೆಯಿಲ್ಲದೆ ಅವರ ಬದುಕನ್ನು ತಮಗೆ ಇಚ್ಚೆ ಬಂದ ರೀತಿಯಲ್ಲಿ ಯಾವಾಗ ಬೇಕಾದರೂ ಬಲಿತೆಗೆದುಕೊಳ್ಳುತ್ತಾರೆ;

ರಾಜೀವ=ತಾವರೆಯ ಹೂವು; ಲೋಚನ=ಕಣ್ಣು; ರಾಜೀವಲೋಚನ=ತಾವರೆಯಂತಹ ಕಣ್ಣುಳ್ಳವನು/ಸುಂದರ; ಗಮಿಸು=ನಡೆಯುವುದು; **ಶಿವ ಶಿವಾ ರಾಜೀವಲೋಚನ ಕೃಷ್ಣ ಬಲ್ಲನು ಎನುತ್ತ ಗಮಿಸಿದಳು**=ದೇವರಾದ ಶಿವನ ಮತ್ತು ಕೃಷ್ಣನ ಹೆಸರನ್ನು ಉಚ್ಚರಿಸುತ್ತ ಕೀಚಕನ ಮನೆಯತ್ತ ನಡೆದಳು; ಹರಿ=ವಿಷ್ಣು; ಶ್ರೀಕಾಂತ=ಲಕುಮಿಯ ಗಂಡ ವಿಷ್ಣು; ದಾನವ=ರಕ್ಕಸ; ಹರ=ನಿವಾರಣೆ; ದಾನವ ಹರ=ರಕ್ಕಸರ ಪೀಡೆಯನ್ನು ನಿವಾರಿಸಿದವನು/ದೇವರು;

ಮುರಾರಿ=ಮುರನೆಂಬ ರಕ್ಕಸನನ್ನು ಕೊಂದ ಕೃಷ್ಣ; ಮುಕುಂದ=ಕೃಷ್ಣ; ಗತಿಶೂನ್ಯರು=ದಿಕ್ಕಿಲ್ಲದವರು/ಆಶ್ರಯವಿಲ್ಲದವರು; ಗತಿ=ದಿಕ್ಕು/ಆಶ್ರಯ; **ಹರಿ ಹರಿ ಶ್ರೀಕಾಂತ ದಾನವ ಹರ ಮುರಾರಿ ಮುಕುಂದ ಗತಿಶೂನ್ಯರಿಗೆ ನೀನೇ ಗತಿಯೆಲೈ**=ವಿಷ್ಣು ಮತ್ತು ಕೃಷ್ಣನ ಹೆಸರನ್ನು ಮತ್ತೆ ಮತ್ತೆ ಸ್ಮರಿಸುತ್ತ… ದಿಕ್ಕಿಲ್ಲದವರ ಪಾಲಿಗೆ ನೀವೇ ದಿಕ್ಕಲ್ಲವೇ ಎಂದು ದೇವರಲ್ಲಿ ಮೊರೆಯಿಡುತ್ತ; ಗರುವಾಯಿ=ದೊಡ್ಡತನ/ಹಿರಿಮೆ; **ಗರುವಾಯಿ ಕೆಡು**=ಹಿರಿಮೆಯು ಕುಂದುವುದು; **ಗರುವಾಯಿ ಕೆಟ್ಟೆನಲೈ**=ನನ್ನ ಹಿರಿಮೆಗೆ ಕುಂದು ಉಂಟಾಗುವ ಗತಿ ಬಂದಿದೆಯಲ್ಲವೇ; ಕುರುಕುಲ+ಅಗ್ರಣಿ; ಅಗ್ರಣಿ=ಮುಂದಾಳು; **ಕುರುಕುಲಾಗ್ರಣಿ**=ದುಶ್ಶಾಸನ; ಸೆಳೆ=ಎಳೆ/ಕೀಳು; ವಸ್ತ್ರ+ಆಕರುಷಣ; ವಸ್ತ್ರ=ಬಟ್ಟೆ; ಆಕರ್ಷಣೆ>ಆಕರುಷಣ=ಸೆಳೆಯುವುದು/ಕೀಳುವುದು;

ವಸ್ತ್ರಾಕರುಷಣ=ಸೀರೆಯನ್ನು ಕೀಳುವುದು; **ಕುರುಕುಲಾಗ್ರಣಿ ಸೆಳೆದ ವಸ್ತ್ರಾಕರುಷಣದ ಭಯ ಮತ್ತೆ ಬಂದಿದೆ**=ಅಂದು ದುರ್ಯೋಧನನ ರಾಜಸಭೆಯಲ್ಲಿ ದುಶ್ಶಾಸನನು ನನ್ನ ಸೀರೆಯ ಸೆರಗಿಗೆ ಕಯ್ಯಿಟ್ಟು ಸೆಳೆದು ಅಪಮಾನ ಪಡಿಸಿದ ರೀತಿಯಲ್ಲಿಯೇ ಇಂದು ಮತ್ತೊಮ್ಮೆ ನಾನು ಕೀಚಕನ ಕಾಮದ ಹಲ್ಲೆಗೆ ಗುರಿಯಾಗಲಿದ್ದೇನೆ ಎಂಬ ಹೆದರಿಕೆಯಾಗುತ್ತಿದೆ; ಅಬುಜ+ಅಕ್ಷಿ; ಅಬುಜಾಕ್ಷಿ=ತಾವರೆಯ ಕಣ್ಣಿನವಳು/ಸುಂದರಿ; ಅಡಿ+ಇಟ್ಟಳು; ಅಡಿ=ಹೆಜ್ಜೆ;

**ಕರುಣಿ ನೀನೇ ಬಲ್ಲೆ ಎನುತ ಅಬುಜಾಕ್ಷಿ ಅಡಿಯಿಟ್ಟಳು**=ಕರುಣೆಯಾದ ದೇವರೇ, ನೀನೆ ಎಲ್ಲವನ್ನು ತಿಳಿದಿರುವೆ. ಅಂದರೆ ಈಗ ಬಂದಿರುವ ಆಪತ್ತಿನಿಂದ ನನ್ನನ್ನು ಪಾರುಮಾಡುವ ಬಗೆಯನ್ನು ನೀನೇ ತಿಳಿದಿರುವೆ ಎನ್ನುತ್ತ ಕೀಚಕನ ಮನೆಯತ್ತ ನಡೆದಳು; ಸುರಪ=ದೇವೇಂದ್ರ; ಶಿಖಿ=ಅಗ್ನಿದೇವ; ಯಮ=ಸಾವಿನ ದೇವತೆ; ನಿರುತಿ=ನೈರುತ್ಯ ದಿಕ್ಕಿನ ದೇವತೆ; ವರುಣ=ನೀರಿನ ದೇವತೆ; ಆದ್ಯರಿಗೆ=ಮೊದಲಾದವರಿಗೆ; ವಂದಿಸಿ=ನಮಸ್ಕರಿಸಿ; **ಸುರಪ ಶಿಖಿ ಯಮ ನಿರುತಿ ವರುಣ ಆದ್ಯರಿಗೆ ವಂದಿಸಿ**=ದೇವೇಂದ್ರ, ಅಗ್ನಿದೇವ, ಯಮ, ನಿರುತಿ, ವರುಣ ಮೊದಲಾದ ದೇವತೆಗಳೆಲ್ಲರಿಗೂ ಕಯ್ ಮುಗಿದು; ಕಣ್+ಎವೆಯ; ಎವೆ=ರೆಪ್ಪೆ;

**ಕಣ್ಣೆವೆಯ ಬಿಗಿದು ಅರೆಗಳಿಗೆ ನಿಂದು**=ಕಣ್ಣಿನ ರೆಪ್ಪೆಗಳನ್ನು ಮುಚ್ಚಿ, ಅರೆಗಳಿಗೆ ನಿಂತುಕೊಂಡು; ಅಂಬುಜಮಿತ್ರ=ಸೂರ್ಯ; ಭಜಿಸಿ=ಧ್ಯಾನ ಮಾಡಿ; ಕಣ್+ತೆರೆಯೆ; **ಅಂಬುಜಮಿತ್ರನ ಭಜಿಸಿ ಕಂದೆರೆಯೆ**=ಸೂರ್ಯದೇವನ ಹೆಸರನ್ನು ಉಚ್ಚರಿಸುತ್ತ ಕಣ್ಣನ್ನು ತೆರೆಯಲು; ತರಣಿ=ಸೂರ್ಯ; ದೈತ್ಯ=ರಕ್ಕಸ, ಕಾಮಿಯಾದ ಕೀಚಕ; ಮುರಿ=ತಡೆ, ಹಿಮ್ಮೆಟ್ಟು, ನಾಶಮಾಡು; ಕಾಹು=ಪಹರೆ, ಕಾಯುವಿಕೆ. **ತರಣಿ ದೈತ್ಯನ ಮುರಿವ ಕಾಹ ತರುಣಿಗೆ ಕೊಟ್ಟನು**=ಸೂರ್ಯದೇವನು ಕಾಮಿ ಕೀಚಕನನ್ನು ಸದೆಬಡಿಯುವಂತಹ ಕಾವಲನ್ನು ಸೈರಂಧ್ರಿಗೆ ನೀಡಿದನು; ಮಂದ=ನಿದಾನವಾದ; ಮಂದ+ಉತ್ತರದ; **ಮಂದ ಮಂದೋತ್ತರ**= ಹೋಗಲೋ ಬೇಡವೋ ಎಂಬಂತೆ ಅತಿ ನಿಧಾನವಾಗಿ; ಗಮನ=ನಡೆಯುವುದು;

**ಮಂದ ಮಂದೋತ್ತರದ ಗಮನದೊಳು ಕೀಚಕನ ಮನೆಗೆ ಅಬಲೆ ಬಂದಳು**= ಮುಂದೇನಾಗುವುದೋ ಎಂಬ ಅಂಜಿಕೆ ಮತ್ತು ಆತಂಕದಿಂದ ಕೂಡಿರುವ ಸೈರಂಧ್ರಿಯು ಅತಿ ನಿಧಾನಗತಿಯಲ್ಲಿ ಹೆಜ್ಜೆಗಳನ್ನಿಡುತ್ತ ಕೀಚಕನ ಮನೆಯತ್ತ ಬಂದಳು;



## ನೋಟ-೬

ಚಾರು=ಸುಂದರವಾದ; ನೂಪುರ=ಕಾಲಿನ ಗೆಜ್ಜೆ/ಕಾಲಂದುಗೆ; ಝಣಝಣ=ನಡೆಯುವಾಗ ಕಾಲಿಗೆ ಕಟ್ಟಿರುವ ಗೆಜ್ಜೆಗಳಿಂದ ಹೊರಡುವ ದನಿ; ಝೇಂಕಾರ=ನಾದ; ರವ=ದನಿ; ಉಬ್ಬು=ಉಂಟಾಗು/ಹುಟ್ಟು; ಭವನ=ಅರಮನೆ; ಮಯೂರ=ನವಿಲು; ಕುಣಿ=ನರ್ತಿಸು;

**ಚಾರು ನೂಪುರ ಝಣಝಣದ ಝೇಂಕಾರ ರವದ ಉಬ್ಬಿನಲಿ ಭವನ ಮಯೂರ ಕುಣಿದವು**=ಕೀಚಕನ ಅರಮನೆಯತ್ತ ಸೈರಂಧ್ರಿಯು ಬರುತ್ತಿರುವಾಗ, ಅವಳ ಕಾಲಿನ ಗೆಜ್ಜೆಗಳ ನಾದವನ್ನು ಕೇಳಿ ನವಿಲುಗಳು ಉಲ್ಲಾಸಗೊಂಡು ಕುಣಿಯತೊಡಗಿದವು; ವರ=ಅನುಗ್ರಹ; ಕಟ+ಅಕ್ಷ; ಕಟ=ಕಡೆ; ಅಕ್ಷಿ=ಕಣ್ಣು; ಕಟಾಕ್ಷ=ಕುಡಿನೋಟ/ಕಡೆಗಣ್ಣಿನ ನೋಟ; ಮಿಂಚು=ಹೊಳಪು/ಕಾಂತಿ; ಥಳಥಳಿಸು=ಪ್ರಕಾಶಿಸು; **ವರಕಟಾಕ್ಷದ ಮಿಂಚು ಥಳಥಳಿಸೆ**=ಸೈರಂಧ್ರಿಯ ಕಡೆಗಣ್ಣಿನ ನೋಟವು ಪ್ರಕಾಶಿಸುತ್ತಿರಲು;

**ಆರು ಹೊಗಳುವರು**=ಸೈರಂಧ್ರಿಯ ರೂಪದ ಚೆಲುವನ್ನು ಯಾರು ತಾನು ಬಣ್ಣಿಸಲು ಆಗುತ್ತದೆ; ಅಂದರೆ ಆಕೆಯು ಸುರಸುಂದರವಾದ ರೂಪನ್ನು ಹೊಂದಿದ್ದಳು; ಅಂಗವಟ್ಟ=ಮಯ್ ಕಟ್ಟು/ದೇಹ; ಸೌರಭ=ಕಂಪು/ಪರಿಮಳ; ಭಾರಣೆ=ಹೆಚ್ಚಳ; ಸಾರ=ಮಕರಂದ/ಬಂಡು; ಸಾರ ಕಟ್ಟು=ಮುತ್ತು/ಕವಿ; **ಅಂಗವಟ್ಟದ ಸೌರಭದ ಭಾರಣೆಗೆ ತುಂಬಿಯ ಸಾರ ಕಟ್ಟಿತು**=ಸೈರಂಧ್ರಿಯ ದೇಹದಿಂದ ಹೊರಹೊಮ್ಮುತ್ತಿರುವ ಸುವಾಸನೆಯನ್ನು ಸವಿಯಲು ದುಂಬಿಗಳು ಸೈರಂಧ್ರಿಯ ಮೊಗವನ್ನು ಚುಂಬಿಸಲು ಮುತ್ತಿಕೊಂಡವು; ಆಲಯ=ಮನೆ; ಅಂಗನೆ=ಹೆಂಗಸು;

**ಕೀಚಕಾಲಯಕೆ ಅಂಗನೆ ಬಂದಳು**=ಕೀಚಕನ ಮನೆಗೆ ಸೈರಂಧ್ರಿಯು ಬಂದಳು; ಮದದ+ಆನೆ; ಮದ=ಸೊಕ್ಕು; **ಮನುಮಥನ ಮದದಾನೆ**=ಮನ್ಮಥನ ಸೊಕ್ಕಿದ ಆನೆ; ಈ ನುಡಿಗಟ್ಟು ಒಂದು ರೂಪಕವಾಗಿ ಬಂದಿದೆ. ಮದವೇರಿದ ಆನೆಯು

ಅಡಿಯಿಟ್ಟ ಕಡೆಯಲ್ಲೆಲ್ಲ ಗಿಡಬಳ್ಳಿಗಳು ಮುರಿದುಬಿದ್ದು ನೆಲಕಚ್ಚುವಂತೆ, ಸೈರಂಧ್ರಿಯ ಬರುವಿಕೆಯಿಂದ ಕೀಚಕನಿಗೆ ಹಾನಿಯುಂಟಾಗಲಿದೆ ಎಂಬುದನ್ನು ಈ ರೂಪಕ ಸೂಚಿಸುತ್ತದೆ; ಕಂದರ್ಪ=ಮನ್ಮಥ/ಮದನ; ಮಂತ್ರ+ಅಧಿ+ದೇವತೆ; ಮಂತ್ರ=ದೇವತೆಗಳನ್ನು ಒಲಿಸಿಕೊಳ್ಳುವುದಕ್ಕಾಗಿ ಹೇಳುವ ನುಡಿಗಳು; ಅಧಿ=ಉತ್ತಮ;

**ಕಂದರ್ಪನ ಮಹಾ ಮಂತ್ರಾಧಿದೇವತೆ**=ಜೀವಿಗಳ ಮಯ್ ಮನದಲ್ಲಿ ಕಾಮದ ಒಳಮಿಡಿತಗಳನ್ನು ಮೂಡಿಸುವಂತಹ ಮುಖ್ಯದೇವತೆ; ಮರುಳು+ಅಹ; ಮರುಳು=ಮೋಹ; ಅಹ=ಆಗುವ; ಮದ್ದು=ವಶೀಕರಣ ಯಂತ್ರ; **ಜನವು ಮರುಳಹ ಮದ್ದು**=ಜನರ ಮಯ್ ಮನದಲ್ಲಿ ಮೋಹವನ್ನು ಕೆರಳಿಸಿ, ತನ್ನತ್ತ ಸೆಳೆಯುವ ವಶೀಕರಣ ಯಂತ್ರ; ಸಂಸೃತಿ=ಸಂಸಾರ/ಲೋಕದ ಜೀವನ; ಸಾಕಾರೆ=ರೂಪಿಸುವವಳು;

**ಸಂಸೃತಿ ಸುಖದ ಸಾಕಾರೆ**=ಸಂಸಾರಸುಖದ ಒಲವು ನಲಿವು ನೆಮ್ಮದಿಯನ್ನು ನೀಡುವವಳು; ಮನಸಿಜ=ಮನ್ಮಥ; ಮಸೆ=ಹರಿತಗೊಳಿಸಲೆಂದು ತಿಕ್ಕು/ಉಜ್ಜು/ತೀಡು; ಅಲಗು=ಬಾಣ; **ಮನಸಿಜನ ಮಸೆದ ಅಲಗು**=ಮನ್ಮಥನು ಕಾಮಿಗಳನ್ನು ಕೊಲ್ಲಲೆಂದು ಹರಿತಗೊಳಿಸಿರುವ ಚೂಪಾದ ಬಾಣ; ತಿಲಕ=ಉತ್ತಮವಾದುದು; ಮುನಿ=ರಿಸಿ/ತಪಸ್ವಿ; **ಮುನಿ ಮೋಹನ ತಿಲಕ**=ವಿರಾಗಿಗಳಾಗಿರುವ ಮುನಿಗಳ ಮಯ್ ಮನದಲ್ಲಿ ಮೋಹದ ಒಳಮಿಡಿತಗಳನ್ನು ಕೆರಳಿಸುವಂತಹ ಸುಂದರಿ; ಲಾವಣ್ಯ=ಚೆಲುವು; ಸಾಗರ=ಕಡಲು; ಜನಿತ=ಹುಟ್ಟಿದ; ಲತಾಂಗಿ=ಬಳ್ಳಿಯಂತೆ ಬಳುಕುವ ಅಂಗವನ್ನುಳ್ಳವಳು/ಸುಂದರಿ;

**ಲಾವಣ್ಯ ಸಾಗರ ಜನಿತ ಲಕ್ಷ್ಮಿ ಲತಾಂಗಿ ಕೀಚಕನ ಮನೆಗೆ ಬಂದಳು**=ಚೆಲುವಿನ ಕಡಲಿನಲ್ಲಿ ಹುಟ್ಟಿಬಂದ ಲಕ್ಷ್ಮಿಯಂತಹ ಸುಂದರಿಯಾದ ಸೈರಂಧ್ರಿಯು ಕೀಚಕನ ಮನೆಗೆ ಬಂದಳು; ಕುಡಿತೆ+ಕಣ್ಣ್+ಗಳ; ಕುಡಿತೆ=ಬೊಗಸೆ/ವ್ಯಕ್ತಿಯು ತನ್ನೆರಡು ಹಸ್ತಗಳನ್ನು ಜೊತೆಗೂಡಿಸಿದಾಗ ತಳೆಯುವ ಆಕಾರ; ಕುಡಿತೆ+ಕಣ್ಣ್= ಕುಡಿತೆಗಣ್ಣು=ಅಗಲವಾದ ಕಣ್ಣು; ಚಪಲೆ=ತಳಮಳಗೊಂಡಿರುವ ಹೆಂಗಸು; **ಕುಡಿತೆಗಂಗಳ ಚಪಲೆ**=ಅಗಲವಾದ ಕಣ್ಣುಳ್ಳ ಸುಂದರಿ; ಉಂಗುರ+ಪಿಡಿಯ; ಪಿಡಿ=ಸಣ್ಣದು/ಚಿಕ್ಕದು; ನಡು=ಸೊಂಟ; ಉಂಗುರವಿಡಿಯ ನಡು=ಬಲು ತೆಳ್ಳಗಿರುವ ಸೊಂಟ;

ನೀರೆ=ರೂಪವತಿ/ಸುಂದರಿ; **ಉಂಗುರವಿಡಿಯ ನಡುವಿನ ನೀರೆ**=ಬಲು ತೆಳ್ಳನೆಯ ಸೊಂಟವಿರುವ ರೂಪವತಿ; ನಲವು=ಅಂದ/ಚೆಂದ; ಗಮನ=ನಡಗೆ/ನಡೆಯುವುದು; ಮೌಳಿಕಾತಿ=ನಾಯಕಿ; **ಹಂಸೆಯ ನಡೆಯ ನಲವಿನ ಗಮನದ**

**ಮೌಳಿಕಾತಿ**=ಹಂಸ ಪಕ್ಷಿಯ ನಡಗೆಯಂತೆ ಅಂದಚಂದದಿಂದ ಹೆಜ್ಜೆಗಳನ್ನಿಡುತ್ತ ಬರುತ್ತಿರುವ ಸುಂದರಿ; ಪಯೋಜ=ತಾವರೆಯ ಹೂವು; ಕಡು=ಹೆಚ್ಚಿನ; **ತಾವರೆಯ ಪರಿಮಳದ ಕಡುಚೆಲುವೆ**=ಇದೊಂದು ರೂಪಕ. ತಾವರೆ ಹೂವಿನ ಪರಿಮಳವು ಸುತ್ತಲೂ ಹರಡಿದಾಗ, ಹೇಗೆ ಆ ವಾತಾವರಣದಲ್ಲಿ ಸೊಗಸು ಕಂಡುಬರುವುದೋ ಅಂತೆಯೇ ರೂಪವತಿಯಾದ ಸೈರಂಧ್ರಿಯ ಬರುವಿಕೆಯು ಆ ಜಾಗಕ್ಕೆ ಕಾಂತಿಯನ್ನು ತಂದು ನೀಡಿತು;

**ಪಯೋಜ ಪರಿಮಳದ ಕಡುಚೆಲುವೆ ಬರಲು**=ಬಲು ಚೆಲುವೆಯಾದ ಸೈರಂಧ್ರಿಯು ಕೀಚಕನ ಮನೆಯೊಳಕ್ಕೆ ಬರಲು; ತನು=ದೇಹ/ಮಯ್; **ಅವನ ತನು ನಡನಡುಗಿ ನಿಂದುದು**=ಕೀಚಕನು ಬಲು ಚೆಲುವೆಯಾದ ಸೈರಂಧ್ರಿಯು ತನ್ನ ಮನೆಯೊಳಕ್ಕೆ ಬರುತ್ತಿರುವುದನ್ನು ನೋಡನೋಡುತ್ತಿದ್ದಂತೆಯೇ ರೋಮಾಂಚನ, ಅಚ್ಚರಿ ಮತ್ತು ತಲ್ಲಣದಿಂದ ಅವನ ಮಯ್ ಕಂಪಿಸತೊಡಗಿತು; ತನ್ನಲ್ಲಿಯೇ= ತನ್ನ ಮನದಲ್ಲಿಯೇ ಈ ರೀತಿ ಅಂದುಕೊಳ್ಳತೊಡಗುತ್ತಾನೆ; ಅದು+ಆವ; ಆವ=ಯಾವ; ಚೆಲುವಿಕೆ=ಅಂದ/ಚಂದ/ಸೊಗಸು; ಅಂಗನೆ=ಹೆಣ್ಣು; ಈಕ್ಷಿಸು=ನೋಡು; **ಅದಾವ ಹೆಂಗಸು ಪಡೆದಳು ಈ ಚೆಲುವಿಕೆಯನು ಎನುತ ಅಂಗನೆಯ ಈಕ್ಷಿಸಿದನು**=ಯಾವ ಹೆಂಗಸು ತಾನೇ ಇಂತಹ ಚೆಲುವನ್ನು ಪಡೆದಿದ್ದಾಳೆ. ಅಬ್ಬಾ... ಎಲ್ಲರಿಗಿಂತ ಈಕೆಯೇ ಪರಮ ಸುಂದರಿ ಎನ್ನುತ್ತ ಸೈರಂಧ್ರಿಯನ್ನು ನೋಡಿದನು; ಅರಿ=ಕತ್ತರಿಸು; ನೆತ್ತರು+ಕಾಣದ; ನೆತ್ತರು=ರಕ್ತ; ಅಲಗು=ಕತ್ತಿ;

**ಇದು ಅರಿದು ನೆತ್ತರುಗಾಣದ ಅಲಗು**=ದೇಹವನ್ನು ಕತ್ತರಿಸಿದರೂ ರಕ್ತವು ಕಂಡುಬರದ ಕತ್ತಿಯಿದು. ನೆರೆ=ಅತಿಶಯ; ಬಿಗಿ=ಕಟ್ಟು; ಬಾಸುಳ್+ಏಳದ; ಬಾಸುಳ್=ಬಾಸುಂಡೆ; ಏಳು=ಉಬ್ಬು; ಬಾಸುಳೇಳದ=ಬಾಸುಂಡೆ ಮೂಡದ; ಹುರಿ=ಹಗ್ಗ; ಬಲಿದ=ಗಟ್ಟಿಯಾಗಿರುವ; ನೇಣು=ಮರಣದಂಡನೆಯನ್ನು ನೀಡುವಾಗ ಕೊರಳಿಗೆ ಹಾಕುವ ಕುಣಿಕೆ; **ನೆರೆ ಬಿಗಿಯೆ ಮೈ ಬಾಸುಳೇಳದ ಹುರಿ ಬಲಿದ ನೇಣು**=ಗಟ್ಟಿಯಾದ ಹಗ್ಗದಿಂದ ಕೊರಳನ್ನು ಚೆನ್ನಾಗಿ ಬಿಗಿದು ಕಟ್ಟಿದ್ದರೂ, ಕೊರಳಿನ ಎಡೆಯಲ್ಲಿ ಯಾವುದೇ ಊತ ಕಂಡುಬರದ ನೇಣು;

ಸೋಂಕಿದೊಡೆ=ಸೋಕಿದರೂ/ಆವರಿಸಿಕೊಂಡರೂ; ಹೊಗೆ= ಉರಿಯುತ್ತಿರುವ ಬೆಂಕಿಯಿಂದ ಹೊರಹೊಮ್ಮುವ ಕಪ್ಪನೆಯ ಉರಿ; ಮಸಗು= ಹರಡು/ಹಬ್ಬು; ಎದೆ+ಕಿಚ್ಚು; ಎದೆ=ಮನಸ್ಸು; ಕಿಚ್ಚು=ಬೆಂಕಿ; **ಸೋಂಕಿದೊಡೆ ಹೊಗೆ ಮಸಗದ ಎದೆಗಿಚ್ಚು**=ಹೊಗೆ ಸುತ್ತಿಕೊಂಡಿದ್ದರೂ, ಎದೆಯೊಳಗಿನ ಸಂಕಟ ಹೊರನೋಟಕ್ಕೆ ಕಾಣುತ್ತಿರಲಿಲ್ಲ;

ಕತ್ತಿಯಲ್ಲಿ ಕತ್ತರಿಸಿದರೂ ರಕ್ತ ಕಾಣದಿರುವುದು; ನೇಣಿಗೆ ಬಿಗಿದಿದ್ದರೂ ಕೊರಳಲ್ಲಿ ಊತ ಕಾಣದಿರುವುದು; ಹೊಗೆ ಕವಿದಿದ್ದರೂ ಎದೆಯೊಳಗಿನ ಸಂಕಟ ಕಾಣದಿರುವುದು– ಈ ಮೂರು ರೂಪಕಗಳು ಸೈರಂಧ್ರಿಯ ಮಯ್ ಕಟ್ಟಿನ ಅಂದಚೆಂದವು ಕೀಚಕನ ಮಯ್ ಮನವನ್ನು ತೀವ್ರವಾಗಿ ಗಾಸಿಗೊಳಿಸಿದ್ದರೂ, ಕೀಚಕನಿಗೆ ಉಂಟಾಗಿರುವ ಕಾಮ ಪರಿತಾಪದ ತೀವ್ರತೆಯು ಅವನಿಗಲ್ಲದೆ ಬೇರೆಯವರಿಗೆ ಗೋಚರಿಸದು ಎಂಬ ತಿರುಳಿನಲ್ಲಿ ಬಳಕೆಗೊಂಡಿವೆ;

ಅರರೆ=ಅಚ್ಚರಿಯನ್ನು ಸೂಚಿಸುವಾಗ ಬಳಸುವ ಪದ; ಕಣ್ಣ್+ಗಳ; ಧಾರೆ=ಕತ್ತಿ ಮೊದಲಾದ ಹತಾರಗಳ ಹರಿತವಾದ ಅಂಚು; **ಕಂಗಳ ಧಾರೆ**=ಸೈರಂಧ್ರಿಯ ಕಣ್ಣುಗಳ ಸುಂದರವಾದ ನೋಟ; **ಅರರೆ ಕಂಗಳ ಧಾರೆ ಯಾವನ ಕೊರಳ ಕೊಯ್ಯದು=ಅಬ್ಬಬ್ಬಾ...** ಸೈರಂಧ್ರಿಯ ಕಣ್ಣುಗಳ ಸುಂದರವಾದ ನೋಟವು ಯಾವನ ಕೊರಳನ್ನು ತಾನೆ ಕೊಯ್ಯದಿರದು; ಅಂದರೆ ಎಂತಹ ಸಂಯಮಿ ಯಾಗಿದ್ದರೂ ಇವಳ ಕಣ್ಣೋಟದ ಕಾಂತಿಗೆ ಮರುಳಾಗುತ್ತಾನೆ; ಅದು+ಆವನ; ಆವನ=ಯಾವನ; ಅರಿಕೆ=ತಿಳುವಳಿಕೆ/ಅರಿವು; ಹುರುಳು+ಕೆಡಿಸದು; ಹುರುಳು=ಶಕ್ತಿ/ಬಲ; ಹುರುಳುಗೆಡಸು=ಬಲಗುಂದಿಸು/ಹಾಳುಮಾಡು;

**ಅದಾವನ ಅರಿಕೆಯ ಹುರುಳುಗೆಡಿಸದು**=ಸೈರಂಧ್ರಿಯ ರೂಪವು ಎಂತಹ ಗಂಡಸಿನ ಅರಿವಿನ ಶಕ್ತಿಯನ್ನಾದರೂ ಕುಂದಿಸದಿರದು; ಅಂದರೆ ಎಂತಹ ಮನೋಬಲವುಳ್ಳವನೂ ಕೂಡ ದುರ್ಬಲ ಮನಸ್ಕನಾಗುತ್ತಾನೆ; ಅದು+ಆವ; ಆವ=ಯಾವನು; **ಶಿವ ಶಿವ ಅದಾವ ನಿಲುವನು**=ಶಿವ... ಶಿವ... ಈಕೆಯ ರೂಪದ ಮುಂದೆ ಸಂಯಮಿಯಾಗಿ ಯಾವನು ತಾನೆ ನಿಲ್ಲಲು ಆಗುತ್ತದೆ; ಅಂದರೆ ಈಕೆಯ ಮಯ್ ಕಟ್ಟಿನ ಅಂದಚೆಂದವನ್ನು ನೋಡಿದ ಯಾವುದೇ ಗಂಡಸು ಕಾಮದ ಒಳಮಿಡಿತಗಳಿಗೆ ಬಲಿಯಾಗದೆ ಇರಲಾರ; ಸುಕೃತ=ಪುಣ್ಯ/ಭಾಗ್ಯ; ನೆರೆ=ಕೂಡಿ/ಸೇರಿ;

**ಆವ ಜನ್ಮದ ಸುಕೃತ ಫಲ ನೆರೆದು ಈ ವಧುವ ಸೇರಿದರೊ**=ಈಕೆಯ ಗಂಡಂದಿರು ಹಿಂದಿನ ಯಾವ ಜನ್ಮದಲ್ಲಿ ಗಳಿಸಿದ ಪುಣ್ಯದ ಫಲದಿಂದಾಗಿ ಇಂತಹ ಸುಂದರಿಯನ್ನು ಹೆಂಡತಿಯನ್ನಾಗಿ ಪಡೆದು ಜತೆಗೂಡಿದರೋ; ಧನ್ಯ= ಪುಣ್ಯವಂತ/ಭಾಗ್ಯಶಾಲಿ; **ಧನ್ಯರು ತಾವಲಾ**=ಅವರೆಲ್ಲರೂ ನಿಜಕ್ಕೂ ಪುಣ್ಯವಂತರು; ಬಳಿಕೇನು=ಇನ್ನೇನು; ವನಿತೆ+ಅಲ್ಲಿಂದ; ವನಿತೆ=ಹೆಂಗಸು; ವನಿತೆಯಲ್ಲಿಂದ=ಈ ಹೆಣ್ಣಿನಿಂದಾಗಿ; ಸುಕೃತ+ಆವಳಿ; ಸುಕೃತ=ಪುಣ್ಯ; ಆವಳಿ= ಸಾಲು/ರಾಶಿ; ಸುಕೃತಾವಳಿ=ಅಪಾರವಾದ ಪುಣ್ಯ; ಮೇಣ್=ಇಲ್ಲವೇ/ಮತ್ತು; ಖಳರಾಯ=ನೀಚನಾದ ವ್ಯಕ್ತಿ/ಕೀಚಕ; ಇದಿರು+ಎದ್ದ; **ಇದಿರೆದ್ದ**=ಸೈರಂಧ್ರಿಯ

ಮುಂದೆ ಬಂದು ನಿಂತುಕೊಂಡನು;

**ಈ ವನಿತೆಯಲ್ಲಿಂದ ಪೂರ್ವದ ಸುಖದ ಸರ್ವಸ್ವ ಭಾವಿಸಲು ಸುಕೃತಾವಳಿಗಳಿಂದ ಮೇಣ್ ಇನ್ನಾವುದು ಅತಿಶಯ ಉಂಟು ಎನುತ ಖಳರಾಯನು ಇದಿರೆದ್ದ**= ಇವಳನ್ನು ಪಡೆದು ಆನಂದಿಸುವಂತಹ ಅಪಾರವಾದ ಪುಣ್ಯಕ್ಕಿಂತ ಅತಿಶಯವಾದುದು ಮತ್ತೊಂದಿಲ್ಲ ಎನ್ನುತ್ತಾ ಕೀಚಕನು ಸೈರಂಧ್ರಿಯ ಮುಂದೆ ಬಂದು ನಿಂತುಕೊಂಡನು; **ತರುಣಿ, ಬಾ ಕುಳ್ಳಿರು**=ತರುಣಿಯೇ 'ಬಾ' ಇಲ್ಲಿ ಕುಳಿತುಕೊ; ಮತ್+ಅಂತಃಕರಣದ; ಮತ್=ನನ್ನ; ಅಂತಃಕರಣ=ಮನಸ್ಸು; ಎಡರು=ಅಡಚಣೆ/ಅಡ್ಡಿ; ಅಡಗು=ಕೊನೆಗೊಳ್ಳು/ಮುಗಿ; **ಮದಂತಃಕರಣದ ಎಡರು ಅಡಗಿತ್ತು**=ನಿನ್ನ ಬರುವಿಕೆಯಿಂದ ನನ್ನ ಮನದ ಆತಂಕ ಕೊನೆಗಂಡಿತು; **ಕಾಮನ ದುರುಳತನಕೆ ಇನ್ನು ಅಂಜುವೆನೆ**=ಮದನನ ನೀಚತನಕ್ಕೆ ಇನ್ನು ನಾನು ಹೆದರುವುದಿಲ್ಲ. ನಾನು ಮದನನ್ನು ಗೆಲ್ಲುತ್ತೇನೆ. ಅಂದರೆ ನೀನು ಬಂದುದರಿಂದ ನನ್ನ ಮಯ್ ಮನದಲ್ಲಿ ತುಡಿಯುತ್ತಿರುವ ಕಾಮ ತಾಪಕ್ಕೆ ನಾನು ಬಲಿಯಾಗುವುದಿಲ್ಲ;

ಎನಗೆ=ನನಗೆ; ಬಲ=ಬೆಂಬಲ/ನೆರವು/ಸಹಾಯ; ಇಂದು=ಚಂದ್ರ; ಮಧುಕರ=ತುಂಬಿ; ಬಿರುದು ಕಟ್ಟು=ಇದೊಂದು ನುಡಿಗಟ್ಟು. ಸವಾಲು ಹಾಕು/ ಸವಾಲು ಎಸೆ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; ಖಳ=ನೀಚ/ಕೇಡಿ; ಅಬ್ಬರ=ದೊಡ್ಡ ದನಿಯಲ್ಲಿ ಮಾತನಾಡು; **ನೀನು ಎನಗೆ ಬಲವಾಗೆ ಇಂದುವಿಗೆ ಮಧುಕರಗೆ ಕೋಗಿಲೆಗೆ ಬಿರುದ ಕಟ್ಟುವೆನು ಎಂದು ಖಳನು ಅಬ್ಬರಿಸಿ ನುಡಿಯಲು**= ನೀನು ನನಗೆ ಒತ್ತಾಸೆಯಾಗಿ ಬಂದರೆ ಈಗ ಯಾವ ಚಂದ್ರ, ತುಂಬಿ ಮತ್ತು ಕೋಗಿಲೆಗಳ ಮೂಲಕ ಮನ್ಮಥನು ನನ್ನ ಮಯ್ ಮನವನ್ನು ವಿರಹ ತಾಪಕ್ಕೆ ದೂಡಿದ್ದಾನೆಯೋ ಅವನನ್ನು ಎದುರಿಸಿ ಗೆಲ್ಲುತ್ತೇನೆ ಎಂದು ನೀಚನಾದ ಕೀಚಕನು ಗಟ್ಟಿಯಾದ ದನಿಯಲ್ಲಿ ನುಡಿಯಲು;

ಇಂದುಮುಖಿ=ಚಂದ್ರನ ಬೆಳುದಿಂಗಳಂತೆ ಮೊಗವನ್ನುಳ್ಳವಳು/ಸುಂದರಿ; ಖಾತಿ=ಕೋಪ/ಸಿಟ್ಟು; ಇಂತು=ಈ ರೀತಿ; **ಇಂದುಮುಖಿ ಖಾತಿಗೊಂಡು ಇಂತು ಎಂದಳು**=ಕಾಮಿ ಕೀಚಕನ ನುಡಿಗಳನ್ನು ಕೇಳಿ ಕೋಪಗೊಂಡ ಸೈರಂಧ್ರಿಯು ಈ ರೀತಿ ನುಡಿದಳು; ಬಯಲು=ಪ್ರಯೋಜನಕ್ಕೆ ಬಾರದ; ಬಯಲ ನುಡಿ=ಕೆಲಸಕ್ಕೆ ಬಾರದ ಮಾತು/ಕೆಟ್ಟ ಮಾತು;

**ಬಯಲ ನುಡಿದೊಡೆ ಬಾಯಿ ಹುಳುವುದು**=ಈ ರೀತಿ ಕೆಟ್ಟ ಮಾತುಗಳನ್ನಾಡಿದರೆ ನಿನ್ನ ಬಾಯಲ್ಲಿ ಹುಳ ಬೀಳುತ್ತದೆ; ನಾಯಿತನ=ಇದೊಂದು

ನುಡಿಗಟ್ಟು. ಕೀಳುತನದ ನಡೆನುಡಿ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; **ಎಲವೋ... ಕೆಡದಿರು... ನಾಯಿತನ ಬೇಡ**=ಎಲವೋ... ನನ್ನೊಡನೆ ಕೀಳುತನದಿಂದ ನಡೆದುಕೊಂಡು ಹಾಳಾಗಬೇಡ; ರಾಯ=ರಾಜ; ರಾಯನ ಅಂಗನೆ=ವಿರಾಟರಾಜನ ಹೆಂಡತಿಯಾದ ಸುದೇಷ್ಣೆ; ಮಧು=ಜೇನು ತುಪ್ಪ;

**ರಾಯನ ಅಂಗನೆ ಮಧುವ ತರಲೆಂದು ಕಳುಹೆ ಬಂದೆನು**=ರಾಣಿಯು ನಿನ್ನ ಮನೆಯಿಂದ ಜೇನುತುಪ್ಪವನ್ನು ತೆಗೆದುಕೊಂಡು ಬಾ ಎಂದು ಕಳುಹಿಸಿದ್ದರಿಂದ ಬಂದಿದ್ದೇನೆಯೆ ಹೊರತು ಬೇರೆ ಉದ್ದೇಶ ನನಗಿಲ್ಲ; ಹಸಿ=ಹೊಸದು; ಶೂಲ=ಚೂಪಾದ ಮೊನೆಯುಳ್ಳ ಹತಾರ/ಈಟಿ/ಮರಣದಂಡನೆಗೆ ಗುರಿಯಾದವರನ್ನು ಕೊಲ್ಲಲು ಬಳಸುವ ಮೊನಚಾದ ತುದಿಯುಳ್ಳ ಕಬ್ಬಿಣದ ಕಂಬ; ಹಸಿದ ಶೂಲ=ಕೊಲ್ಲುವುದಕ್ಕೆಂದೇ ಸಿದ್ಧಪಡಿಸಿರುವ ಶೂಲ; ಹಾಯ್=ಮೇಲೆ ಬೀಳು/ನೆಗೆ/ಹಾರು;

**ಸಾಯಬೇಕೇ ಹಸಿದ ಶೂಲವ ಹಾಯಿ ಹೋಗು**=ಸಾಯಬೇಕೆಂಬ ಬಯಕೆಯಿದ್ದರೆ ಹೋಗಿ ಶೂಲದ ಮೇಲೆ ಬಿದ್ದು ಸಾಯಿ. ಈ ರೀತಿ ನನ್ನನ್ನು ಕೆಟ್ಟಕಣ್ಣಿನಿಂದ ನೋಡಿ ಅಪಮಾನದ ಸಾವನ್ನೇಕೆ ತಂದುಕೊಳ್ಳುವೆ; ಬೈಗಳು=ನಿಂದನೆಯ ನುಡಿಗಳು/ಶಾಪದ ನುಡಿಗಳು/ತೆಗಳಿಕೆಯ ಮಾತುಗಳು; **ಎನುತವೆ**=ಎಂದು ಮಾತನಾಡುತ್ತ; ತುಡುಕು=ತಟ್ಟನೆ ಹಿಡಿ/ಮೇಲೆ ಎರಗು; **ನಿನ್ನ ಬೈಗಳು ತನ್ನನು ನೋಯಿಸುವವೇ...ಎನುತವೆ ಸತಿಯ ತುಡುಕಿದನು**=ನಿನ್ನ ಶಾಪ ನನಗೆ ತಟ್ಟುವುದಿಲ್ಲ... ನಿನ್ನ ಬಯ್ಗುಳ ನನ್ನನ್ನು ನೋಯಿಸುವುದಿಲ್ಲ ಎನ್ನುತ್ತ, ಸೈರಂಧ್ರಿಯನ್ನು ತಟ್ಟನೆ ಹಿಡಿದುಕೊಂಡನು;

ಕರ=ಕಯ್; ಒಡೆ=ಬಿಡಿಸು; ಮುರುಚು=ತಿರುಚು/ನೂಕು/ತಳ್ಳು; ಒಡೆಮುರುಚು=ಕಿತ್ತು ತಿರುಚಿ ದೂರ ತಳ್ಳುವುದು; **ಕರವನು ಒಡೆಮುರುಚಿದಳು**= ಕೀಚಕನ ಕಯ್ಗಳನ್ನು ಕಿತ್ತು ತಿರುಚಿ ದೂರ ತಳ್ಳಿದಳು; ಧರೆ=ನೆಲ; ಈಡಾಡು= ಬಿಸಾಡು; **ಬಟ್ಟಲ ಧರೆಯೊಳು ಈಡಾಡಿದಳು**=ಜೇನುತುಪ್ಪವನ್ನು ತೆಗೆದುಕೊಂಡು ಹೋಗಲು ತಂದಿದ್ದ ಬಟ್ಟಲನ್ನು ನೆಲದ ಮೇಲೆ ಬಿಸಾಡಿದಳು; ಸತಿ=ಹೆಣ್ಣು; ಮೊಗ+ತಿರುಹಿ; ಮೊಗದಿರುಹು=ಮೊಗವನ್ನು ಹಿಂದಕ್ಕೆ ತಿರುಗಿಸುವುದು/ ಕೋಪ ಮತ್ತು ಸಂಕಟದಿಂದ ಮೊಗವನ್ನು ಬೇರೆಡೆಗೆ ತಿರುಗಿಸುವುದು; ಡೆಂಡಣಿಸು= ನಡುಗು/ಕಂಪಿಸು; ತರಳೆ=ತರುಣಿ; ಹಾಯ್= ದಾಟು; **ಸತಿ ಮೊಗದಿರುಹಿ ಬಾಗಿಲ ದಾಂಟಿ ಭಯದಲಿ ನಡುಗಿ ಡೆಂಡಣಿಸಿ ತರಳೆ ಹಾಯ್ದಳು**=ಕೀಚಕನ ಕಾಮದ ಹಲ್ಲೆಗೆ ಗುರಿಯಾದ ಸೈರಂಧ್ರಿಯು ಕಂಗಾಲಾಗಿ, ಅವನ ಮುಂದೆ ನಿಂತಿದ್ದವಳು ಈಗ ಹಿಂದಕ್ಕೆ ತಿರುಗಿ ಬಾಗಿಲನ್ನು ದಾಟಿ, ಹೆದರಿಕೆಯಿಂದ ಗಡಗಡನೆ ನಡುಗುತ್ತ

ಕೀಚಕನ ಮನೆಯಿಂದ ಹೊರಬಂದಳು;

ಜಘನ=ನಿತಂಬ; ಭರ=ಹೊರೆ/ಭಾರ/ತೂಕ; ಬಡನಡು=ತೆಳ್ಳನೆಯ ಸೊಂಟ; ಮುರಿಯದಿಹುದೇ=ಮುರಿಯದಿರುವುದೇ; ವರ=ಉತ್ತಮ/ಒಳ್ಳೆಯ; ಸಭಾಗ್ಯತೆ=ಪುಣ್ಯ; **ಮೊಲೆಯ ಜಘನದ ಭರದಿ ಬಡನಡು ಮುರಿಯದಿಹುದೇ ವರ ಸಭಾಗ್ಯತೆ ಎನಲು**=ಸೈರಂಧ್ರಿಯು ಓಡಿಬರುತ್ತಿರುವಾಗ ಅವಳ ಮೊಲೆಗಳ ಭಾರಕ್ಕೆ ಅವಳ ತೆಳ್ಳನೆಯ ಸೊಂಟವು ಮುರಿದುಹೋಗಬೇಕಿತ್ತು; ಆದರೆ ಅಂತಹ ತೊಂದರೆಯಾಗದಿದ್ದುದು ಅವಳ ಪುಣ್ಯವೆಂದೇ ಹೇಳಬೇಕು; ರಭಸ=ವೇಗ; **ಸಭೆಗೆ ರಭಸದೊಳು ಓಡಿದಳು**=ಕೀಚಕನ ಮನೆಯಿಂದ ವಿರಾಟರಾಯನ ಒಡ್ಡೋಲಗ ನಡೆಯುತ್ತಿದ್ದ ಅರಮನೆಯತ್ತ ವೇಗವಾಗಿ ಓಡತೊಡಗಿದಳು;



## ನೋಟ–೭

ಒಡನೆ=ಕೂಡಲೇ; ಬೆಂಬತ್ತು=ಹಿಂಬಾಲಿಸು;

**ಒಡನೆ ಬೆಂಬತ್ತಿದನು**=ಕೀಚಕನ ಹಿಡಿತದಿಂದ ತಪ್ಪಿಸಿಕೊಂಡು ವಿರಾಟರಾಯನ ಒಡ್ಡೋಲಗ ನಡೆಯುತ್ತಿದ್ದ ಅರಮನೆಯೊಳಕ್ಕೆ ಸೈರಂಧ್ರಿಯು ಅಡಿಯಿಡುತ್ತಿದ್ದಂತೆಯೇ ಕೀಚಕನು ಅವಳನ್ನು ಹಿಂಬಾಲಿಸುತ್ತ ಅಟ್ಟಿಸಿಕೊಂಡು ಅಲ್ಲಿಗೆ ಬಂದನು; ತುರುಬು=ಮುಡಿ/ತಲೆಗೂದಲಿನ ಗಂಟು; **ತುರುಬನು ಹಿಡಿದು**=ಅವನ ಕಯ್ಗೆ ಸೈರಂಧ್ರಿಯು ಮತ್ತೆ ಸಿಕ್ಕಿಬಿದ್ದಳು. ಆಗ ಕೀಚಕನು ಅವಳ ಮುಡಿಯನ್ನು ಹಿಡಿದುಕೊಂಡು; ತೊತ್ತು=ದಾಸಿ/ಹಾದರಗಿತ್ತಿ; ತೊತ್ತಿನ ಮಗಳು=ದಾಸಿಯ ಮಗಳು/ಹಾದರಗಿತ್ತಿಯ ಮಗಳು; ಹಾಯ್=ಓಡಿಹೋಗು/ ಪಲಾಯನ ಮಾಡು; ಫಡ=ಕೋಪ ಮತ್ತು ತಿರಸ್ಕಾರವನ್ನು ಸೂಚಿಸುವಾಗ ಬಳಸುವ ಪದ;

**ತೊತ್ತಿನ ಮಗಳೆ, ಹಾಯ್ದರೆ ಬಿಡುವೆನೆ ಫಡ ಎನುತ**=ತೊತ್ತಿನ ಮಗಳೆ, ನನ್ನ ಕಯ್ಗೆ ಸಿಗದಂತೆ ಓಡಿದರೆ ಬಿಟ್ಟುಬಿಡುತ್ತೇನೆಯೇ ಎಂದು ಅಬ್ಬರಿಸಿ ತಿರಸ್ಕಾರದಿಂದ ನುಡಿಯುತ್ತ; ಒಡೆಮೆಟ್ಟು=ಕೆಳಕ್ಕೆ ಹಾಕಿಕೊಂಡು ತುಳಿದು; ಹೊಯ್=ಹೊಡೆ/ ಬಡಿ; **ಕಾಲಲಿ ಒಡೆಮೆಟ್ಟಿ ಹೊಯ್ದನು**=ಸೈರಂಧ್ರಿಯನ್ನು ಕೆಳಕ್ಕೆ ತಳ್ಳಿ, ತನ್ನ ಕಾಲಿನಿಂದ ತುಳಿದು ಹೊಡೆದನು; ಸೈಗೆಡೆ=ಅಡ್ಡಡ್ಡ ಬೀಳು/ಕೆಳಕ್ಕೆ ಉರುಳು; ಕದಳಿ=ಬಾಳೆಯ ಗಿಡ; ಕಂಬದ+ಅಂತು+ಇರೆ; ಅಂತು=ಹಾಗೆ; ಇರೆ=ಇರಲು; ಕಾಂತೆ=ಹೆಂಗಸು; ಕೆಡೆ=ಬೀಳು/ಕುಸಿ/ಉರುಳು; ಕಾರು=ಕಕ್ಕು; ಹುಡಿ=ಮಣ್ಣಿನ ಕಣಗಳು/ದೂಳು; ಮುಡಿ=ತಲೆ/ತಲೆಗೂದಲು; ಹೊರಳು=ಉರುಳು; ಒರಲು=ಅರಚು/ಕೂಗಿಕೊಳ್ಳು;

**ಬಿರುಗಾಳಿಯಲಿ ಸೈಗೆಡೆದ ಕದಳಿಯ ಕಂಬದಂತಿರೆ**= ಬಿರುಗಾಳಿಯ ಬಡಿತಕ್ಕೆ ನೆಲಕ್ಕೆ ಉರುಳುವ ಬಾಳೆಯ ಗಿಡದಂತೆ; **ಕಾಂತೆ ಕೆಡೆದು ರಕುತವ ಕಾರಿ=**

ಸೈರಂಧ್ರಿಯು ಕೀಚಕನ ಕಾಲ್ತುಳಿತ ಮತ್ತು ಹೊಡೆತಕ್ಕೆ ಸಿಲುಕಿ ನೆಲದ ಮೇಲೆ ಬಿದ್ದು, ರಕ್ತವನ್ನು ಕಾರುತ್ತ; **ಹುಡಿಯಲಿ ಮುಡಿ ಹೊರಳಿ ಒರಲಿದಳು**=ದೂಳಿನಲ್ಲಿ ಹೊರಳಾಡುತ್ತ ನೋವಿನಿಂದ ಚೀತ್ಕರಿಸತೊಡಗಿದಳು; ದಾನವ=ರಕ್ಕಸ; **ಸೂರ್ಯನು ಕೊಟ್ಟ ದಾನವನು**=ಕೀಚಕನಿಂದ ಸೈರಂಧ್ರಿಯನ್ನು ಕಾಪಾಡಲೆಂದು ಸೂರ್ಯದೇವನು ನೇಮಿಸಿದ್ದ ರಕ್ಕಸನು;

ತೆಗೆ=ಕೀಳು; ಅಡಗು=ಮಾಂಸ/ಬಾಡು; ಅಬ್ಬರಿಸಿ=ಗರ್ಜಿಸುತ್ತ; ಉರವಣಿಸು=ವೇಗ/ರಭಸ; **“ಕರುಳ ತೆಗೆ…ಅಡಗನು ತಿನ್ನು” ಎನುತ ಅಬ್ಬರಿಸಿ ಉರವಣಿಸಿ ಕೀಚಕನ ಹೊಯ್ದನು**= ‘ನಿನ್ನ ಹೊಟ್ಟೆಯ ಕರುಳನ್ನು ಬಗೆದು, ನಿನ್ನ ದೇಹದ ಮಾಂಸವನ್ನು ತಿನ್ನುತ್ತೇನೆ’ ಎಂದು ಗರ್ಜಿಸಿ ನುಡಿಯುತ್ತ, ಅತಿ ವೇಗದಿಂದ ಮುನ್ನುಗ್ಗಿ ಕೀಚಕನನ್ನು ಸದೆಬಡಿದನು; ಕುಸುಬು=ಕುಕ್ಕು/ಕುಸುಕು/ ಬಟ್ಟೆಯನ್ನು ಒಗೆಯುವಾಗ ಒದ್ದೆಬಟ್ಟೆಯನ್ನು ಮುದ್ದೆಗಟ್ಟಿಕೊಂಡು ಕುಕ್ಕಿ ಕುಕ್ಕಿ ಕೊಳೆಯನ್ನು ತೆಗೆಯುವುದು; **ಹಿಡಿದು ಕುಸುಬಿದನು**=ಕೀಚಕನ ಇಡೀ ಮಯ್ಯನ್ನು ನೆಲಕ್ಕೆ ಹಾಕಿ ಬಟ್ಟೆ ಕುಕ್ಕುವಂತೆ ಕುಕ್ಕಿದನು; ದುರುಳ=ನೀಚ/ಕೇಡಿ; ನಡೆ+ಕೆಡೆದು; ನಡೆ=ನಡಗೆ; ಕೆಡೆ=ಬೀಳು; ನಡೆಗೆಡೆದು=ನಡೆಯಲಾರದೆ ಕುಸಿದು ಬಿದ್ದು; ನಿಮಿಷ=ಕೆಲವೇ ಗಳಿಗೆಯಲ್ಲಿ; ಆಲಯ=ಮನೆ;

**ದುರುಳ ನಡೆಗೆಡೆದು ಎದ್ದು ನಿಮಿಷದೊಳು ಒರಳುತ ಆಲಯಕೆ ಓಡಿದನು**= ದುರುಳ ಕೀಚಕನು ರಕ್ಕಸನ ಹೊಡೆತಕ್ಕೆ ಕುಸಿದುಬಿದ್ದನು. ಮರುಗಳಿಗೆಯಲ್ಲಿಯೇ ಮತ್ತೆ ಎದ್ದು ಕಿರುಚುತ್ತ ತನ್ನ ಮಂದಿರದತ್ತ ಓಡಿದನು; ಬಳಿಕ=ಅನಂತರ; ಅಖಿಲ=ಸಮಸ್ತ/ಎಲ್ಲ; **ಬಳಿಕ ಅರಸ ಮೊದಲಾದ ಅಖಿಳ ಜನ ಭಯ ಹೊಯ್ದು ನಡುಗಿತ್ತು**= ತಮ್ಮ ಕಣ್ಣಮುಂದೆಯೇ ನಡೆದ ಸೈರಂಧ್ರಿಯ ಮೇಲಣ ಕೀಚಕನ ಹಲ್ಲೆ, ಬಳಿಕ ಕೀಚಕನ ಮೇಲೆ ಅಗೋಚರವಾದ ಶಕ್ತಿಯೊಂದರ ಆಕ್ರಮಣ ಮತ್ತು ಹೊಡೆತ ತಿಂದ ಕೀಚಕನು ತತ್ತರಿಸಿ ನಡುಗಿ ಕಿರುಚುತ್ತ ಓಡಿಹೋದ ಘಟನೆಗಳಿಂದ ಒಡ್ಡೋಲಗದಲ್ಲಿದ್ದ ರಾಜ ಮತ್ತು ಸಭಾಸದರೆಲ್ಲರೂ ಹೆದರಿಕೆಯಿಂದ ತತ್ತರಿಸಿ ನಡುಗತೊಡಗಿದರು; ಹೊಡೆಮರಳು=ಮಗುಚಿಕೊಳ್ಳುವುದು; ಮುರಿದು+ಎದ್ದು; ಮುರಿ=ತಿರುಗು/ಹೊರಳು; **ಹೊಡೆಮರಳಿ ಮುರಿದೆದ್ದು**=ಕೀಚಕನ ಹೊಡೆತದಿಂದ ನೆಲದ ಮೇಲೆ ಮಗುಚಿಕೊಂಡು ಬಿದ್ದಿದ್ದ ಸೈರಂಧ್ರಿಯು ತಿರುಗಿ ಮೇಲೆದ್ದು;

ಕೊಡಹು=ಒದರು/ಜಾಡಿಸು/ಅಲ್ಲಾಡಿಸು; **ತುರುಬಿನ ಹುಡಿಯ ಕೊಡಹುತ**= ತಲೆಗೂದಲಿಗೆ ಮೆತ್ತಿಕೊಂಡಿದ್ದ ದೂಳಿನ ಕಣಗಳನ್ನು ಒದರಿಕೊಂಡು ಕೆಳಕ್ಕೆ ಬೀಳಿಸಿ; ಮೇಲುದ=ಹೆಂಗಸರು ತಮ್ಮ ಎದೆಯ ಮೇಲೆ ಹಾಕಿಕೊಳ್ಳುವ ಬಟ್ಟೆ; **ಮೊಲೆಗೆ ಮೇಲುದ ತೊಡಿಸಿ**=ಸೈರಂಧ್ರಿಯು ತನ್ನ ಎದೆಯ ಮೇಲೆ ಸೀರೆಯ

ಸೆರಗನ್ನು ಹಾಕಿಕೊಂಡು; ಮಿಡಿ=ಬೆರಳಿನಿಂದ ಒರೆಸು; **ಗಲ್ಲದ ರಕುತವನು ಬೆರಳಿಂದ ಮಿಡಿ ಮಿಡಿದು**=ಕೀಚಕನ ಹೊಡೆತದಿಂದ ಗಾಯಗೊಂಡು ಗಲ್ಲದ ಮೇಲೆ ಹರಿಯುತ್ತಿದ್ದ ರಕ್ತವನ್ನು ಬೆರಳಿನಿಂದ ಮತ್ತೆ ಮತ್ತೆ ಒರೆಸಿಕೊಂಡು;

**ಖಳನು ಹೆಂಗುಸ ಬಡಿಯೆ ನೋಡುತ್ತಿಹರೆ**=ಕೇಡಿಯು ಹೆಂಗಸನ್ನು ಬಡಿಯುತ್ತಿದ್ದರೆ, ಸುಮ್ಮನೆ ನೋಡುತ್ತ ಕುಳಿತಿದ್ದೀರಲ್ಲ; ಲೇಸು=ಒಳ್ಳೆಯದು; ಹಿರಿಯರು=ಒಡ್ಡೋಲಗದಲ್ಲಿರುವ ರಾಜ ಮತ್ತು ರಾಜ ಪರಿವಾರದವರು; ಮೌನ=ಮಾತನಾಡದೆ ಸುಮ್ಮನಿರುವುದು; ಹಲುಬು=ರೋದಿಸು/ಪ್ರಲಾಪಿಸು; **ನುಡಿಯಲಾಗದೆ ಹಿರಿಯರು ಹಿಡಿದ ಮೌನದ ಹೊತ್ತು ಲೇಸು. ಎಂದು ಅಬಲೆ ಹಲುಬಿದಳು**=ಇಂತಹ ಸಮಯದಲ್ಲಿ ಹಿರಿಯರಾದ ನೀವೆಲ್ಲರೂ ಈ ಹಲ್ಲೆಯನ್ನು ತಡೆಯುವುದಿರಲಿ, 'ಈ ರೀತಿ ಮಾಡಬೇಡ' ಎಂದು ಬಾಯನ್ನು ಬಿಡಲಾರದೆ ಮೂಕರಾಗಿದ್ದೀರಲ್ಲಾ... ನಿಮ್ಮ ಈ ವರ್ತನೆ ತುಂಬಾ ಒಳ್ಳೆಯದು ಎಂದು ವ್ಯಂಗದ ನುಡಿಯಿಂದ ಒಡ್ಡೋಲಗದಲ್ಲಿದ್ದವರನ್ನು ಹಂಗಿಸುತ್ತ ಸೈರಂಧ್ರಿಯು ರೋದಿಸತೊಡಗಿದಳು;

ಶಿವ...ಶಿವಾ=ವ್ಯಕ್ತಿಯು ಅಸಹಾಯಕನಾಗಿ ಸಂಕಟಕ್ಕೆ ಒಳಗಾಗಿ ದೇವರಲ್ಲಿ ಮೊರೆಯಿಡುವಾಗ ಉಚ್ಚರಿಸುವ ಉದ್ಗಾರದ ನುಡಿಗಳು; ಪಾಪಿ=ಕೆಟ್ಟದ್ದನ್ನು ಮಾಡಿದವನು; **ಶಿವ ಶಿವಾ...ಪಾಪಿಗಳು**=ಶಿವ 'ಶಿವಾ' ನಿಮ್ಮ ಕಣ್ಣ ಮುಂದೆಯೇ ಒಂದು ಹೆಣ್ಣಿಗೆ ಇಂತಹ ಅಪಚಾರವಾಗುತ್ತಿದ್ದರು, ಏನೊಂದನ್ನು ಕಾಣದವರಂತೆ ಇಲ್ಲವೇ ತಿಳಿಯದವರಂತೆ ಸುಮ್ಮನಿರುವ ನೀವೆಲ್ಲರೂ ಪಾಪಿಗಳು; ಪತಿ+ಆದವರ; ಪತಿ=ರಾಜ/ದೊರೆ; ಸುಯ್ಲು=ಸಂಕಟ ಮತ್ತು ಅಪಮಾನದಿಂದ ನರಳುತ್ತಿರುವಾಗ ಬಿಡುವ ನಿಟ್ಟುಸಿರು; **ಪತಿಯಾದವರ ಸುಯ್ಲು ತಾಗಲಿ**=ನಾಡನ್ನು ಆಳುತ್ತಿರುವ ದೊರೆಗಳಿಗೆ ಈ ನನ್ನ ಸಂಕಟದ ನಿಟ್ಟುಸಿರು ತಟ್ಟಲಿ; ಅಕಟ=ಅಯ್ಯೋ;

**ನಾಲುವರ ನಡುವಣ ಹಾವು ಸಾಯದು**=ಇದೊಂದು ಗಾದೆ ಮಾತು. ನಾಲ್ಕು ಮಂದಿಯ ನಡುವೆ ಹಾವು ಕಂಡುಬಂದಾಗ "ಉಳಿದವರು ಹೊಡೆಯಲಿ. ಹಾವನ್ನು ಸಾಯಿಸಲು ಹೋದಾಗ ಉಂಟಾಗುವ ಅಪಾಯಕ್ಕೆ ಇಲ್ಲವೇ ಕೊಂದ ನಂತರ ಬರುವ ಪಾಪಕ್ಕೆ ನಾನೇಕೆ ಪಕ್ಕಾಗಬೇಕು" ಎಂದು ನಾಲ್ಕು ಮಂದಿಯಲ್ಲಿ ಪ್ರತಿಯೊಬ್ಬನು ಸುಮ್ಮನಾಗುತ್ತಾನೆ. ಅಂತೆಯೇ ಸಮಾಜದಲ್ಲಿ ಅತ್ಯಾಚಾರ, ಅನಾಚಾರ, ಕೊಲೆ ಸುಲಿಗೆಯಲ್ಲಿ ತೊಡಗಿರುವ ಕೇಡಿಗಳ ಎದುರಾಗಿ ಹೋರಾಡಲು ಯಾರೊಬ್ಬರೂ ಮುಂದೆ ಬರುವುದಿಲ್ಲ. "ನಮಗೇಕೆ ಅದರ ಉಸಾಬರಿ. ನಾವೇಕೆ ತಲೆಕೊಡಬೇಕು? ಎಂದು ಹಿಂಜರಿದು ಸುಮ್ಮನಾಗುತ್ತಾರೆ.

ಆದ್ದರಿಂದಲೇ ಕೆಟ್ಟದ್ದು ಸಮಾಜದಲ್ಲಿ ಯಾವಾಗಲೂ ಮೆರೆಯುತ್ತಿರುತ್ತದೆ; ಅಂತೆಯೇ ವಿರಾಟರಾಯನ ಒಡ್ಡೋಲಗದಲ್ಲಿದ್ದವರು ಒಬ್ಬರಾದರೂ ಸೈರಂಧ್ರಿಯ ಮೇಲಣ ಹಲ್ಲೆಯ ಬಗ್ಗೆ ತಲೆಹಾಕಲಿಲ್ಲ; ಅವಗಡಿಸು=ಅಪಮಾನ ಮಾಡು;

**ನಿರಪರಾಧಿಯನು ಖಳನು ಅವಗಡಿಸಿದನು**=ತಪ್ಪನ್ನೇ ಮಾಡದ ನನ್ನನ್ನು ಆ ನೀಚನಾದ ಕೀಚಕನು ಅಪಮಾನಪಡಿಸಿದನು; ಧರ್ಮ=ಜನರೆಲ್ಲರಿಗೂ ಒಳಿತನ್ನು ಉಂಟುಮಾಡುವಂತಹ ನಡೆನುಡಿ; **ವಿವರ ಸುದ್ದಿ**=ನಡೆನುಡಿಗಳು ಹೇಗೆ ಇರಬೇಕು/ಹೇಗೆ ಇರಬಾರದು ಎಂಬುದರ ಬಗ್ಗೆ ಚಿಂತನೆ; ನಿವಹ=ಗುಂಪು; ಜನನಿವಹ=ಜನರ ಗುಂಪು/ರಾಜನ ಒಡ್ಡೋಲಗದಲ್ಲಿದ್ದ ಸಭಿಕರು; ಘೋರ+ಅರಣ್ಯ+ಆಯ್ತು; ಘೋರ=ಭಯಂಕರವಾದ; ಅರಣ್ಯ=ಕಾಡು; **ಘೋರಾರಣ್ಯ**=ಇದೊಂದು ನುಡಿಗಟ್ಟಾಗಿ ಬಳಕೆಯಾಗಿದೆ. ದೊಡ್ಡ ಕಾಡಿನಲ್ಲಿ ಬಲವುಳ್ಳ ಪ್ರಾಣಿಗಳು ಬಲವಿಲ್ಲದ ಪ್ರಾಣಿಗಳನ್ನು ಯಾವುದೇ ಅಡೆತಡೆಯಿಲ್ಲದೆ ಕೊಂದು ತಿನ್ನುವಂತೆ ನಾಡಿನಲ್ಲಿ ಅಧಿಕಾರದ ಬಲ, ಹಣಬಲ ಮತ್ತು ತೋಳ್ಬಲವುಳ್ಳವರು ಬಲಹೀನರ ಮೇಲೆ ಅತ್ಯಾಚಾರ, ಅನಾಚಾರ, ಕೊಲೆ ಸುಲಿಗೆಯನ್ನು ಯಾವ ಹಿಂಜರಿಕೆಯು ಇಲ್ಲದೆ ಮಾಡಿ, ಅಬ್ಬರದಿಂದ ತಲೆಯೆತ್ತಿ ಮೆರೆಯುತ್ತಿರುತ್ತಾರೆ; ತರಳೆ=ತರುಣಿ; ಒರಳು=ನರಳು;

**ಧರ್ಮದ ವಿವರ ಸುದ್ದಿಯನು ಆಡದ ಈ ಜನನಿವಹ ಘೋರಾರಣ್ಯವಾಯ್ತು ಎಂದು ತರಳೆ ಒರಳಿದಳು**= 'ಜೀವನದಲ್ಲಿ ಯಾವುದು ಸರಿ/ಯಾವುದು ತಪ್ಪು; ಯಾವುದು ನ್ಯಾಯ/ಯಾವುದು ಅನ್ಯಾಯ' ಎಂಬುದನ್ನು ಕುರಿತು ಮಾತನಾಡದ ಮತ್ತು ತಪ್ಪನ್ನು ತಡೆಗಟ್ಟಿ ನ್ಯಾಯವನ್ನು ಕಾಪಾಡದ ಜನರಿಂದ ತುಂಬಿದ ಈ ಒಡ್ಡೋಲಗವು ಕ್ರೂರ ಪ್ರಾಣಿಗಳಿಂದ ತುಂಬಿದ ಅರಣ್ಯವಾಗಿದೆ. ಅಂದರೆ ಇಲ್ಲಿ ಸತ್ಯ,ನೀತಿ ಮತ್ತು ನ್ಯಾಯದ ನಡೆನುಡಿಗಳಿಗೆ ಅವಕಾಶವಿಲ್ಲ ಎಂದು ಸೈರಂಧ್ರಿಯು ತನ್ನ ಅಳಲನ್ನು ತೋಡಿಕೊಂಡಳು; **ಎಲವೊ**=ಗಂಡಸನ್ನು ಉದ್ದೇಶಿಸಿ ಮಾತನಾಡುವಾಗ ಬಳಸುವ ಪದ. ಕೀಚಕನ ಹಲ್ಲೆಯಿಂದ ಸೈರಂಧ್ರಿಯ ಮಯ್ ಮನ ಬಹಳ ಗಾಸಿಗೊಂಡಿರುವುದರಿಂದ ಕೋಪ ಮತ್ತು ತಿರಸ್ಕಾರ ಸೂಚಕವಾದ ದನಿಯಲ್ಲಿ 'ಎಲವೊ' ಎಂಬ ಪದವನ್ನು ಧರ್ಮರಾಯನಿಗೆ ಸೈರಂಧ್ರಿಯು ಬಳಸುತ್ತಿದ್ದಾಳೆ;

ದೇಶಿಗ=ಗುರು/ಪರದೇಶಿ/ದಿಕ್ಕಿಲ್ಲದವನು; ಕಂಕಭಟ್ಟ=ವಿರಾಟರಾಯನ ಆಸ್ಥಾನದಲ್ಲಿ ಮಾರುವೇಷದಲ್ಲಿರುವ ಧರ್ಮರಾಯ. ವಿರಾಟರಾಜನ ಆಪ್ತ ಪರಿಚಾರಕನಾಗಿದ್ದಾನೆ; ಗಡ=ಸಂಗತಿಯನ್ನು ಮನಸ್ಸಿಗೆ ನಾಟುವಂತೆ ಒತ್ತಿ ಹೇಳುವಾಗ ಬಳಸುವ ಪದ; **ಎಲವೊ ದೇಶಿಗ ಕಂಕಭಟ್ಟನೆ...ಗಡ...ಹಲವು ಧರ್ಮವ**

**ಬಲ್ಲೆ**=ಎಲವೊ ಕಂಕಭಟ್ಟ... ನೀನು ರಾಜನಿಗೆ ಆಪ್ತಪರಿಚಾರಕನಾಗಿ ಗುರುವಿನ ಸ್ಥಾನದಲ್ಲಿರುವೆ. ನನ್ನ ಮಾತನ್ನು ಮನಗೊಟ್ಟು ಕೇಳು. ನೀನು ಹಲವು ಧರ್ಮಗಳನ್ನು ಚೆನ್ನಾಗಿ ತಿಳಿದಿರುವೆ; ನೃಪ=ರಾಜ; ತಿಲಕ=ಉತ್ತಮನಾದ ವ್ಯಕ್ತಿ; ಅರುಹು=ತಿಳಿಸು/ಹೇಳು; **ನೃಪ ತಿಲಕಗೆ ಅರುಹುದೇನು**=ರಾಜರಲ್ಲಿಯೇ ಉತ್ತಮನೆಂದು ಹೆಸರಾಂತ ವಿರಾಟರಾಯನಿಗೆ ಕೀಚಕನು ಮಾಡಿದ್ದು ತಪ್ಪು ಎಂದು ಹೇಳುವುದಕ್ಕೆ ನಿನ್ನಿಂದ ಆಗಲಿಲ್ಲವೇನು; ಉಚಿತ=ಸರಿಯಾದ/ ಯೋಗ್ಯವಾದ; **ಸಂನ್ಯಾಸಿಗಳಿಗೆ ತಿಳಿಯೆ ಉಚಿತವಿದು**=ಸಂನ್ಯಾಸಿಗಳು ಸತ್ಯ ನೀತಿ ನ್ಯಾಯದ ಅರಿವನ್ನು ಸರಿಯಾದ ರೀತಿಯಲ್ಲಿ ತಿಳಿದಿರಬೇಕು;

ಒಲವು=ಪ್ರೀತಿ; ಸಮನಿಸು=ದೊರಕು/ಸಿಕ್ಕು; **ದೇಶಿಗರಿಂಗೆ ದೇಶಿಗರ ಒಲವು ಸಮನಿಸಬೇಕು**=ರಾಜನ ಬಳಿ ಆಶ್ರಯವನ್ನು ಪಡೆದಿರುವ ಪರದೇಶಿಗಳಾದ ನಮ್ಮಂತವರಿಗೆ ಪರದೇಶಿಗಳಾದ ನಿಮ್ಮಂತಹವರ ಪ್ರೀತಿ ಕರುಣೆ ಒತ್ತಾಸೆಯು ಇಂತಹ ಸಂಕಟದ ಸಮಯದಲ್ಲಿ ಸಿಗಬೇಕು; ವಿಹೀನ=ಇಲ್ಲದ; ಬಲವಿಹೀನ=ಬಲವಿಲ್ಲದ; ಆಪ್ತರು=ನೆಂಟರು/ಆತ್ಮೀಯರು/ಬೇಕಾದವರು; **ಸಭೆಯಲಿ ಬಲವಿಹೀನರಿಗೆ ಆಪ್ತರಿಲ್ಲ ಎಂದು ಅಬಲೆ ಒರಲಿದಳು**=ಈ ಒಡ್ಡೋಲಗದಲ್ಲಿ ಬಲಹೀನರಾದ ನಮ್ಮಂತವರಿಗೆ ಆತ್ಮೀಯರಾದವರೂ ಒಬ್ಬರೂ ಇಲ್ಲ. ನನ್ನಂತಹ ಅಬಲೆಯನ್ನು ಕಾಪಾಡುವವರು ಯಾರೂ ಇಲ್ಲ ಎಂದು ಸೈರಂಧ್ರಿಯು ರೋದಿಸಿದಳು;

ಧೈರ್ಯ=ನಿಶ್ಚಲತೆ/ಸಂಯಮ/ತಾಳ್ಮೆ; ನೆರೆ=ಹೆಚ್ಚಾಗಿ; ಬಲಿದು=ತುಂಬು; **ಧೈರ್ಯವನು ನೆರೆ ಬಲಿದು**=ಸಂಯಮವನ್ನು ಹೆಚ್ಚಾಗಿ ತಂದುಕೊಂಡು/ದುಡುಕಿನ ತೀರ್ಮಾನವನ್ನು ಕಯ್ಗೊಳ್ಳದೆ; ಮೇಲಣ=ಮುಂದಿನ; ಕಾರ್ಯಭಾಗ= ಮಾಡಬೇಕಾದ ಕೆಲಸ; ಅರಿದು=ಗ್ರಹಿಸಿಕೊಂಡು/ಚಿಂತಿಸಿ; **ಮೇಲಣ ಕಾರ್ಯಭಾಗವನು ಅರಿದು**=ಮುಂದೆ ಮಾಡಬೇಕಾದ ಕೆಲಸವನ್ನು ಚಿಂತಿಸುತ್ತ; ನೃಪ=ರಾಜ; ವರ್ಯ=ಉತ್ತಮನಾದ; ನೃಪಜನವರ್ಯ=ರಾಜರುಗಳಲ್ಲಿಯೇ ಉತ್ತಮನಾದವನೆಂದು ಹೆಸರನ್ನು ಪಡೆದಿದ್ದ; ಧರ್ಮನಂದನ=ಧರ್ಮರಾಯ;

**ನೃಪಜನವರ್ಯ ಧರ್ಮನಂದನನು ನೋಡದೆ ನುಡಿಸದೆ ಇದ್ದನು**= ಧರ್ಮರಾಯನು ಸೈರಂಧ್ರಿಯತ್ತ ನೋಡದೆ, ಅವಳ ಮಾತಿಗೆ ಪ್ರತಿಕ್ರಿಯೆಯನ್ನು ತೋರಿಸದೆ ಸುಮ್ಮನಿದ್ದನು; ಶೌರ್ಯ=ಸಾಹಸ/ಪರಾಕ್ರಮ; ಅವಸರ=ಸಮಯ/ಸನ್ನಿವೇಶ; **ಶೌರ್ಯಕೆ ಅವಸರವಲ್ಲ**=ನಮ್ಮ ಪರಾಕ್ರಮವನ್ನು ತೋರಿಸುವುದಕ್ಕೆ ಇದು ಸರಿಯಾದ ಸಮಯವಲ್ಲ. ಏಕೆಂದರೆ ಹಾಗೆ ಮಾಡಿದರೆ ಒಂದು ವರುಶ ತಲೆಮರೆಸಿಕೊಂಡು ನಾವು ಅಜ್ಞಾತವಾಸದಲ್ಲಿರುವ ಸಂಗತಿಯು ಬಯಲಾಗುತ್ತದೆ. ಅದು

ಬಯಲಾದರೆ ಮತ್ತೆ ನಾವು ಹನ್ನೆರಡು ವರುಶ ವನವಾಸಕ್ಕೆ ಹೋಗಬೇಕಾಗುತ್ತದೆ; ಆರ್ಯ=ಹಿರಿಯ; ಅನುಜ್ಞೆ=ಅಪ್ಪಣೆ; ಪಾರ್ಥ=ಅರ್ಜುನ; ಯಮಳರು=ಅವಳಿಜವಳಿ ಮಕ್ಕಳಾದ ನಕುಲ ಸಹದೇವರು; ಬಲಿದ=ಹೆಚ್ಚಾದ/ಅತಿಯಾದ; ದುಗುಡ=ತಳಮಳ/ಚಿಂತೆ/ಆತಂಕ;

**ನಮಗೀ ಆರ್ಯನ ಅನುಜ್ಞೆ ಎನುತ್ತ ಬಳಿಕ ಆ ತುರ್ಯರು ಪಾರ್ಥ ಯಮಳರು ಬಲಿದ ದುಗುಡದಲಿ ಇದ್ದರು**= 'ಎಂತಹ ಆಪತ್ತಿನ ಸನ್ನಿವೇಶದಲ್ಲಿಯೂ ನಮ್ಮ ಮಾರುವೇಷದ ಬದುಕು ಬಯಲಾಗಬಾರದು' ಎಂಬುದು ನಮ್ಮ ದೊಡ್ಡ ಅಣ್ಣನಾದ ಧರ್ಮರಾಯನ ಅಪ್ಪಣೆ ಎಂದು ತಮ್ಮಲ್ಲಿಯೇ ಆಲೋಚಿಸುತ್ತ ಅರ್ಜುನ, ನಕುಲ ಸಹದೇವರು ಅತಿಹೆಚ್ಚಿನ ಸಂಕಟದಿಂದ ಪರಿತಪಿಸುತ್ತಿದ್ದರು; ಅಕಟಾ=ಅಯ್ಯೋ; ಸೈವೆರಗು=ಅತಿಯಾದ ತಳಮಳ; **'ಅಕಟಾ, ನೊಂದಳು ಸತಿ' ಎನುತ ಭೀಮ ಮನನೊಂದು**=ಅಯ್ಯೋ ಕೀಚಕನ ಹಲ್ಲೆಯಿಂದ ದ್ರೌಪದಿಯು ನರಳುತ್ತಿದ್ದಾಳೆ ಎಂದು ಮನದಲ್ಲಿ ಪರಿತಪಿಸುತ್ತ; ಸೈವೆರಗು=ಅತಿಯಾದ ತಳಮಳ/ಸಂಕಟ; ಖತಿ=ಕೋಪ; ಕಂದಿ=ಕಳೆಗುಂದು; **ಸೈವೆರಗಾಗಿ ಖತಿಯಲಿ ಕಂದಿ**=ದ್ರೌಪದಿಯು ಪಡುತ್ತಿರುವ ಅಪಮಾನ ಮತ್ತು ಯಾತನೆಯನ್ನು ನೋಡುತ್ತಿದ್ದ ಭೀಮನ ಮಯ್ ಮನದಲ್ಲಿ ತೀವ್ರವಾದ ಕಳವಳವುಂಟಾಗಿ, ಸಂಕಟದಿಂದ ಭೀಮನ ಮೊಗ ಬಾಡಿತು. ನಸು=ಸ್ವಲ್ಪ/ತುಸು; ರೋಷ=ಕೋಪ/ಸಿಟ್ಟು; ಔಡು=ದವಡೆ; ಅವುಚು=ಕೂಡಿಸು/ಸೇರಿಸು/ಗಟ್ಟಿಯಾಗಿ ಒತ್ತಿಹಿಡಿ;

**ನಸು ಮೈ ಬಾಗಿ ರೋಷದೊಳು ಔಡನು ಒಡೆ ಅವುಚಿ**=ತುಸು ಬಗ್ಗಿ ಅತ್ತಿತ್ತ ನೋಡುತ್ತ ಆಕ್ರೋಶದಿಂದ ದವಡೆಯ ಹಲ್ಲುಗಳನ್ನು ಕಚ್ಚಿಹಿಡಿದು / ಕೋಪವನ್ನು ಹತ್ತಿಕ್ಕಿಕೊಳ್ಳಲಾರದೆ ಹಲ್ಲುಮುರಿಯನ್ನು ಕಚ್ಚುತ್ತ; ಮಂದಿ+ಅರಿಯದ+ಒಲು; ಮಂದಿ=ಸಭೆಯಲ್ಲಿದ್ದವರು; ಅರಿಯದ=ತಿಳಿಯದ; ಒಲು=ಅಂತೆ; ಕುಚೇಷ್ಟೆ+ಒಳ್+ಒಂದಿ; ಕುಚೇಷ್ಟೆ=ಕೆಣಕುವುದು; ಒಂದಿ=ಕೂಡಿ; **ಮಂದಿ ಅರಿಯದವೊಲು ಕುಚೇಷ್ಟೆಯೊಳೊಂದಿ**=ರಾಜನ ಒಡ್ಡೋಲಗದಲ್ಲಿದ್ದವರಿಗೆ ಗೊತ್ತಾಗದಂತೆ ಕೀಚಕನನ್ನು ಕೆಣಕಿ ಸದೆಬಡಿಯಬೇಕೆಂಬ ಉದ್ದೇಶದಿಂದ; ಅಂದು=ಆ ಸಮಯದಲ್ಲಿ; ರಾಜ+ಆಲಯ; ರಾಜಾಲಯ=ಅರಮನೆ; **ರಾಜಾಲಯದ ಮುಂದಣ ಮರನನು ಮೆಲ್ಲನೆ ಬಾಗಿ ನೋಡಿದನು**=ಆ ಸಮಯದಲ್ಲಿ ಅರಮನೆಯ ಮುಂದುಗಡೆಯಿದ್ದ ಮರವೊಂದನ್ನು ಬಗ್ಗಿ ನೋಡಿದನು; **ಅಂದು ಆ ಭೀಮ ಒಳಗೆ ನಿಶ್ಚೈಸಿದನು**=ದ್ರೌಪದಿಗೆ ಆಗಿರುವ ಅಪಮಾನಕ್ಕೆ ತಕ್ಕ ಪ್ರತೀಕಾರವನ್ನು ಮಾಡಲು ಭೀಮಸೇನನು ತನ್ನ ಮನದಲ್ಲಿಯೇ ತೀರ್ಮಾನಿಸಿಕೊಂಡನು;

ಬಡಿ=ಹೊಡೆ; ಖಳ=ಕೇಡಿ/ನೀಚ; ಹಿಳಿ=ಹಿಸುಕಿ ರಸವನ್ನು ತೆಗೆ;

ಹಿಂಡು=ಅದುಮು/ಬಿಗಿಯಾಗಿ ನುಲಿ; **ಮೊದಲಲಿ ಇವಳ ಬಡಿದ ಈ ಖಳನನು ಹಿಳಿದು ಹಿಂಡುವೆನು**=ಪ್ರತೀಕಾರದ ಮೊದಲ ಕೆಲಸವಾಗಿ ದ್ರೌಪದಿಯನ್ನು ಹೊಡೆದ ನೀಚನಾದ ಈ ಕೀಚಕನನ್ನು ಒದ್ದೆಬಟ್ಟೆಯನ್ನು ಹಿಂಡುವಂತೆ ನುಲಿನುಲಿದು ಕೊಲ್ಲುವೆನು; ಅಖಿಳ=ಸಮಸ್ತ/ಎಲ್ಲ; ಬಾಂಧವ=ನೆಂಟ/ಆಪ್ತ; ವಿಗಡ=ಶೂರ/ಬಲಶಾಲಿ;

**ಬಳಿಕ ಇವನ ಒಡಹುಟ್ಟಿದರನು ಇವನ ಅಖಿಳ ಬಾಂಧವರ, ವಿಗಡ ವಿರಾಟರಾಯನ ಕೊಲುವೆನು**=ಅನಂತರ ಕೀಚಕನ ತಮ್ಮಂದಿರನ್ನು, ಕೀಚಕನ ನೆಂಟರು ಮತ್ತು ಆಪ್ತರನ್ನು, ಬಲಶಾಲಿಯಾದ ವಿರಾಟರಾಯನ್ನು ಕೊಲ್ಲುವೆನು; ಅರಿ=ತಿಳಿ; ಮುನ್ನ=ಮೊದಲು; **ಅರಿಯುವ ಮುನ್ನ**=ನಾವು ಅಜ್ಞಾತವಾಸದಲ್ಲಿರುವ ಪಾಂಡವರು ಎಂಬುದನ್ನು ಕುರುಕುಲದವರು ಕಂಡುಹಿಡಿಯುವುದಕ್ಕೆ ಮೊದಲು; ಸವರು=ನಾಶಗೊಳಿಸು; ಕಿಡಿ=ಬೆಂಕಿಯ ಉಂಡೆ; **ಕಿಡಿಕಿಡಿಹೋಗು**=ಇದೊಂದು ನುಡಿಗಟ್ಟು. ಅತ್ಯಂತ ಹೆಚ್ಚಿನ ಕೋಪತಾಪಗಳಿಂದ ಆಕ್ರೋಶಗೊಳ್ಳುವುದು; **ಅರಿಯದ ಮುನ್ನ ಕೌರವ ಕುಲವ ಸವರುವೆನು ಎಂದು ಆ ಭೀಮ ಕಿಡಿಕಿಡಿಯೋದನು**=ನಾವು ಪಾಂಡವರು ಎಂಬುದನ್ನು ದುರ್ಯೋಧನನು ಗುರುತಿಸುವುದಕ್ಕೆ ಮುನ್ನವೇ ಇಡೀ ಕುರುಕುಲವನ್ನೇ ನಾಶಮಾಡುತ್ತೇನೆ ಎಂದು ಭೀಮನು ಕೋಪೋದ್ರೇಕದಿಂದ ಕುದಿಯತೊಡಗಿದನು;

ಆತನ=ಭೀಮಸೇನನ; ಇಂಗಿತ=ಆಶಯ/ಇಚ್ಚೆ/ಮನದ ಒಳಮಿಡಿತ; ಅನುವು=ರೀತಿ/ಬಗೆ; ಅರಿತು=ಗ್ರಹಿಸಿಕೊಂಡು; ಮಹೀತಳ+ಅಧಿಪ; ಮಹೀತಳ= ಭೂಮಂಡಲ; ಅಧಿಪ=ರಾಜ/ಒಡೆಯ; **ಆತನ ಇಂಗಿತದ ಅನುವನು ಅರಿತು ಮಹೀತಳಾಧಿಪ ಧರ್ಮಸುತನು**=ಭೀಮಸೇನನ ಮಯ್ ಮನದ ಕೋಪೋದ್ರೇಕದ ಹಾವಭಾವಗಳ ಉದ್ದೇಶವೇನೆಂಬುದನ್ನು ಗ್ರಹಿಸಿಕೊಂಡ ಧರ್ಮರಾಯನು; ವಲಲ=ಅಜ್ಞಾತವಾಸದ ಸಮಯದಲ್ಲಿ ವಿರಾಟರಾಯನ ಅರಮನೆಯಲ್ಲಿ ಬಾಣಸಿಗನಾಗಿದ್ದ ಭೀಮಸೇನನ ಹೆಸರು; ಕಾತರ=ಕಳವಳ/ಉದ್ವೇಗ/ಆವೇಶ; ಸೈರಿಸು=ತಾಳು/ಸಹಿಸು;

**ವಲಲ, ಅತಿ ಕಾತರಿಸದಿರು. ಸೈರಿಸು ಸೈರಿಸು**=ವಲಲನೇ, ಅತಿಯಾದ ಆವೇಶಕ್ಕೆ ಒಳಗಾಗಬೇಡ. ತಾಳ್ಮೆಯಿಂದಿರು. ತಾಳ್ಮೆಯ ನಡೆನುಡಿಯೇ ಒಳ್ಳೆಯದು; ತರು=ಮರ; **ಅಕಟ, ಈ ತರುವ ಮುರಿಯದಿರು=ಅಯ್ಯೋ...** ಈ ಮರವನ್ನು ಮುರಿಯಬೇಡ; ಸುಜನ=ಒಳ್ಳೆಯ ಜನರು; ವ್ರಾತ=ಗುಂಪು; ಆಶ್ರಯ=ಆಸರೆ/ ಅವಲಂಬನ; **ಸುಜನವ್ರಾತಕೆ ಆಶ್ರಯವು**=ಒಳ್ಳೆಯ ಜನರಿಗೆ ಆಸರೆಯಾಗಿದೆ. ಅಂದರೆ ಹೂ ಕಾಯಿ ಹಣ್ಣು ಮತ್ತು ನೆರಳನ್ನು ನೀಡುವ ತಾಣವಾಗಿದೆ;

ಬಾಣಸು=ಅಡುಗೆ; ಮಹಾತಿಶಯ=ದೊಡ್ಡದಾಗಿರುವ; ತರು+ಉಂಟು; **ನಿನ್ನಯ ಬಾಣಸಿನ ಮನೆಗೆ ಊರ ಹೊರಗೆ ಮಹಾತಿಶಯ ತರುವುಂಟು**=ನಿನ್ನ ಅಡುಗೆಮನೆಗೆ ಸವುದೆಯ ಅಗತ್ಯವಿದ್ದರೆ ಊರಿನ ಹೊರಗೆ ಅತಿದೊಡ್ಡದಾದ ಮರವಿದೆ;

ಧರ್ಮಮಯ=ಜನರಿಗೆ ಉಪಕಾರಿಯಾಗಿರುವ; **ಧರ‍್ಮಮಯ ತರು ಇದನು ಮುರಿಯದಿರು**=ಜನರ ಬದುಕಿಗೆ ಆಸರೆಯಾಗಿರುವ ಮತ್ತು ಉಪಕಾರಿ ಯಾಗಿರುವ ಈ ಮರವನ್ನು ಮುರಿಯಬೇಡ; **ಎಮ್ಮ ಮಾತನು ಕೇಳು ಎನಲು**=ನಮ್ಮ ಮಾತುಗಳಿಗೆ ಬೆಲೆಕೊಡು ಎಂದು ನುಡಿಯಲು; ಧರ್ಮರಾಯನು ಭೀಮನಿಂದ ಕೀಚಕ ಮತ್ತು ರಾಜವಂಶದವರ ಮೇಲೆ ಆಗಬಹುದಾಗಿದ್ದ ಹಲ್ಲೆಯನ್ನು ತಡೆಗಟ್ಟಲೆಂದು ಮತ್ತು ಅಜ್ಞಾತವಾಸದ ಸಮಯದಲ್ಲಿ ತಮಗೆ ಆಶ್ರಯವನ್ನು ನೀಡಿರುವ ವಿರಾಟರಾಯನನ್ನಾಗಲಿ ಇಲ್ಲವೇ ವಿರಾಟರಾಯನ ಕಡೆಯವರನ್ನಾಗಲಿ ಕೊಲ್ಲುವುದು ಸರಿಯಲ್ಲ ಎಂಬುದನ್ನು ಮರದ ನೆಪದಲ್ಲಿ ಸೂಚಿಸುತ್ತಾನೆ; ಮಿಗೆ=ಹೆಚ್ಚಿನದಾದ; ದುಗುಡ=ಚಿಂತೆ/ತಳಮಳ/ಕಳವಳ; ಸರಿ=ಹೋಗು;

**ಸುಮ್ಮನೆ ಭೀಮ ಓಲಗದಿಂದ ಮಿಗೆ ದುಗುಡದಲಿ ಸರಿದನು**=ಭೀಮನು ಅಣ್ಣನ ಮಾತಿಗೆ ಎದುರಾಡದೆ ಹೆಚ್ಚಿನ ತಳಮಳದಿಂದ ಕುದಿಯುತ್ತ ಒಡ್ಡೋಲಗದಿಂದ ಹೊರನಡೆದನು; **ಸೈರಂಧ್ರಿಯನ್ನು ಕುರಿತು**=ರಾಜ, ಸಭಿಕರು ಮತ್ತು ತನ್ನನ್ನು ಆಕ್ರೋಶ ಮತ್ತು ವ್ಯಂಗ್ಯದ ನುಡಿಗಳಿಂದ ಪ್ರಶ್ನಿಸಿದ ಸೈರಂಧ್ರಿಯನ್ನು ಉದ್ದೇಶಿಸಿ; ಮಾನಿನಿ=ಹೆಂಗಸು; ಕರ್ಮಫಲ+ಇದು; ಕರ್ಮಫಲ=ಇದೊಂದು ನುಡಿಗಟ್ಟು. 'ಕರ್ಮ' ಎಂದರೆ ಕೆಲಸ; ಫಲ=ಉಂಟಾಗಿರುವ ಪರಿಣಾಮ; 'ಕರ್ಮಫಲ' ಎಂದರೆ ಯಾವುದೇ ಮಾನವ ಜೀವಿಯು ತನ್ನ ಹಿಂದಿನ ಜನ್ಮಗಳಲ್ಲಿ ಒಳ್ಳೆಯ ಕೆಲಸಗಳನ್ನು ಮಾಡಿದ್ದರೆ, ಈ ಜನ್ಮದಲ್ಲಿ ಒಳ್ಳೆಯ ಫಲವನ್ನು ಪಡೆದು ಆನಂದ ಹಾಗೂ ನೆಮ್ಮದಿಯಿಂದ ಬಾಳುತ್ತಾನೆ/ಳೆ; ಹಿಂದಿನ ಜನ್ಮದಲ್ಲಿ ಕೆಟ್ಟ ಕೆಲಸಗಳನ್ನು ಮಾಡಿದ್ದರೆ, ಈ ಜನ್ಮದಲ್ಲಿ ಬಡತನ, ಸಂಕಟ ಮತ್ತು ಅಪಮಾನಕ್ಕೆ ಗುರಿಯಾಗಿ ನರಳುತ್ತಾರೆ ಎಂಬ ನಂಬಿಕೆಯು ಜನಸಮುದಾಯದ ಮನದಲ್ಲಿ ತಲೆತಲಾಂತರಗಳಿಂದಲೂ ಹಾಸುಹೊಕ್ಕಾಗಿ ಬಂದಿದೆ;

**ಮಾನಿನಿ, ನಿನಗೆ ಕರ‍್ಮಫಲವಿದು**=ಮಾನಿನಿ, ಇಂತಹ ಹಲ್ಲೆ ಮತ್ತು ಅಪಮಾನಕ್ಕೆ ನೀನು ಸಿಲುಕಿ ನರಳುತ್ತಿರುವುದು ನಿನ್ನ ಕರ್ಮಫಲ. ಇದಕ್ಕೆ ನಿನ್ನ ಹಿಂದಿನ ಜನ್ಮದ ನಡೆನುಡಿಗಳು ಕಾರಣವೇ ಹೊರತು ಬೇರೆಯವರಲ್ಲ; **ನಿಮ್ಮ ಭವನಕೆ ಹೋಗು**= ದಾಸಿಯಾಗಿರುವ ನೀನು ನಿನ್ನ ರಾಣಿವಾಸಕ್ಕೆ ಹಿಂತಿರುಗು; ಶಿಕ್ಷೆ=ದಂಡನೆ;

ಅಮ್ಮದು=ಶಕ್ತವಾಗಿಲ್ಲ; **ಈ ಸಭೆ ಶಿಕ್ಷಿಸಲು ಅಮ್ಮದು**=ನಿನ್ನ ಮೇಲೆ ಹಲ್ಲೆ ನಡೆಸಿದ ಕೀಚಕನನ್ನು ದಂಡಿಸಲು ಈ ರಾಜನಾಗಲಿ ಇಲ್ಲವೇ ಸಭಾಸದರಾಗಲಿ ಶಕ್ತರಲ್ಲ. ಏಕೆಂದರೆ ಮಹಾಬಲನಾದ ಕೀಚಕನನ್ನು ಎದುರುಹಾಕಿಕೊಂಡು ಯಾರೂ ಉಳಿಯಲಾರರು; ಮತ್ಸ್ಯ=ಒಂದು ರಾಜ್ಯದ ಹೆಸರು; ಭೂಪತಿ=ರಾಜ; ಮತ್ಸ್ಯಭೂಪತಿ=ವಿರಾಟರಾಯ; ಬಗೆ=ಗಣಿಸು/ಲೆಕ್ಕಿಸು;

**ಆತನು ಮತ್ಸ್ಯಭೂಪತಿಯ ಬಗೆಯನು**=ಕೀಚಕನು ರಾಜನಾದ ವಿರಾಟರಾಯನನ್ನು ಲೆಕ್ಕಿಸುವುದಿಲ್ಲ; **ಕೋಪಕೆ ಅವಸರವಲ್ಲ**=ಕೋಪವನ್ನು ಮಾಡಿಕೊಳ್ಳುವುದಕ್ಕೆ ಇದು ಸಮಯವಲ್ಲ. ಕೋಪಿಸಿಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ; ಕಾಪುರುಷ=ಹೇಡಿ/ಅಂಜುಬುರುಕ; **ಪತಿಗಳು ನಿನ್ನವರು ಕಾಪುರುಷರೇ**=ನಿನ್ನ ಗಂಡಂದಿರು ಹೇಡಿಗಳೇ / ನಿನ್ನ ಗಂಡಂದಿರು ಇದಕ್ಕೆ ತಕ್ಕ ಪ್ರತೀಕಾರವನ್ನು ಇಂದಲ್ಲ ನಾಳೆ ಮಾಡಿಯೇ ಮಾಡುತ್ತಾರೆ; ಪರಿತಾಪ=ಬಹಳ ಹೆಚ್ಚಿನ ಸಂಕಟ; ಪರಿತಾಪವನು ಬೀಳ್ಕೊಡು=ಅತಿಯಾದ ಸಂಕಟದಿಂದ ನರಳಬೇಡ;

**ನೀನು ಪತಿವ್ರತೆ ಪುಣ್ಯವಧು**=ನೀನು ಪತಿವ್ರತೆ ಮತ್ತು ಪುಣ್ಯವಂತೆ. ನಿನಗೆ ಒಳ್ಳೆಯದಾಗುತ್ತದೆ; ಕ್ಷಮೆ=ಬೇರೆಯವರು ಮಾಡಿದ ತಪ್ಪನ್ನು ಮನ್ನಿಸುವುದು; ಅಖಿಲ=ಸಮಸ್ತ/ಎಲ್ಲ; ದೋಷ+ಅಪಹಾರವು; ದೋಷ=ತಪ್ಪು; ಅಪಹಾರ= ಹೋಗಲಾಡಿಸು/ನಿವಾರಿಸು; **ಕ್ಷಮೆಯು ದೀಪವಲ್ಲಾ ಅಖಿಳ ದೋಷಾಪಹಾರವು**= ಬೇರೆಯವರು ಮಾಡಿದ ತಪ್ಪನ್ನು ಮನ್ನಿಸುವಿಕೆಯು ದೀಪದ ಬೆಳಕಿನ ಕಿರಣಗಳೇ ಆಗಿವೆ. ಬೆಳಕಿನ ಕಿರಣಗಳು ತನ್ನ ಸುತ್ತಣ ಕತ್ತಲೆಯನ್ನು ಹೋಗಲಾಡಿಸುವಂತೆ ಕ್ಷಮೆ ಎಂಬುದು ತಪ್ಪನ್ನು ಮಾಡಿರುವ ವ್ಯಕ್ತಿಗಳಲ್ಲಿನ ಎಲ್ಲ ಬಗೆಯ ಕೆಟ್ಟಗುಣ ಗಳನ್ನು ಹೋಗಲಾಡಿಸಿ, ಅವರಲ್ಲಿ ಒಳ್ಳೆಯ ನಡೆನುಡಿಯನ್ನು ರೂಪಿಸುವ ಕಸುವನ್ನು ಹೊಂದಿರುತ್ತವೆ; **ಆ ಕ್ಷಮೆಯು ಶೌರ್ಯ ಧರ್ಮದ ರೂಪು ನೆಲೆ ಎನಲು**= ಮನ್ನಿಸುವ ಗುಣವಿದ್ದವರಲ್ಲಿ ಶೂರತನ ಮತ್ತು ಒಳ್ಳೆಯ ನಡೆನುಡಿಗಳು ನೆಲೆಸಿರುತ್ತವೆ ಎಂದು ಕಂಕಭಟ್ಟನು ನುಡಿಯಲು; ಇಂದು=ಚಂದ್ರ; ಇಂದುಮುಖಿ=ಚಂದ್ರನಂತೆ ಮೊಗವುಳ್ಳವಳು/ಸುಂದರಿ; **ಬಳಿಕ ಇಂದುಮುಖಿ ಎಂದಳು**=ಕಂಕಭಟ್ಟನ ಸಾಂತ್ವನದ ನುಡಿಗಳನ್ನು ಕೇಳಿದ ನಂತರ ಸೈರಂಧ್ರಿಯು ಈ ರೀತಿ ನುಡಿಯತೊಡಗಿದಳು;

**ಮೂರೇ ಬಾರಿ ನೀರು ಹೊರಗಿಕ್ಕುವುದು**=ಇದೊಂದು ನುಡಿಗಟ್ಟು. ಈಜು ಬಾರದ ಜೀವಿಯು ನೀರಿನಲ್ಲಿ ಮುಳುಗಿ ಸಾಯುತ್ತಿರುವಾಗ, ಆ ಜೀವಿಯು ಬದುಕಿ ಉಳಿಯಲು ಅವಕಾಶವನ್ನು ನೀಡಲೆಂದು ನೀರು ಮೂರು ಸಾರಿ ಮತ್ತೆ

ಮತ್ತೆ ಮೇಲಕ್ಕೆ ತರುವುದು. ಈ ಅವಕಾಶವನ್ನು ಬಳಸಿಕೊಂಡು ಆ ಜೀವಿಯು ಬದುಕಿ ಉಳಿಯಬೇಕು ಎನ್ನುವುದು ಜನಮನದಲ್ಲಿರುವ ಒಂದು ತಿಳುವಳಿಕೆ; **ಜಾಡಿಸು**=**ಕೊಡಹು**/**ಒದರು**; **ಸೈರಿಸದು**=ಸುಮ್ಮನಿರುವುದಿಲ್ಲ/ತಾಳಿಕೊಳ್ಳುವುದಿಲ್ಲ; **ಬಳಿಕ ಅದು ಪಾಪಿ ಜಾಡಿಸೆ ಸೈರಿಸದು**=ಮೂರು ಅವಕಾಶಗಳನ್ನು ಬಳಸಿಕೊಳ್ಳದಿದ್ದರೆ ಅನಂತರ ನೀರು ಆ ಜೀವಿಯು ಎಷ್ಟೇ ಪ್ರಯತ್ನಿಸಿದರೂ ಬಿಡದೆ ತನ್ನಲ್ಲಿ ಮುಳುಗಿಸಿಕೊಳ್ಳುತ್ತದೆ;

**ಮೂರೇ ಬಾರಿ ನೀರು ಹೊರಗಿಕ್ಕುವುದು. ಬಳಿಕ ಅದು ಪಾಪಿ ಜಾಡಿಸೆ ಸೈರಿಸದು**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡಿವೆ. ಇದುವರೆಗೆ ಬೇರೆ ಬೇರೆ ಹೆಣ್ಣು ಮಕ್ಕಳ ಮೇಲೆ ಅನೇಕ ಬಾರಿ ಅತ್ಯಾಚಾರ ಮಾಡಿದ್ದ ಕೀಚಕನು ಕೇಡಿನಿಂದ ಪಾರಾಗಿ ಬದುಕಿ ಉಳಿದಿದ್ದಾನೆ. ಈಗ ನನ್ನ ಮೇಲೆ ಹಲ್ಲೆ ಮಾಡಿ, ಅವನ ಪಾಪದ ಕೊಡ ತುಂಬಿ ಬಂದಿದೆ. ಇನ್ನು ಮುಂದೆ ಅವನಿಗೆ ಸಾವು ಬರಲಿದೆ; ಅನ್ಯಾಯ=ನ್ಯಾಯವಲ್ಲದ್ದು; ಬಹುಳತೆ=ಹೆಚ್ಚಳ;

**ಅನ್ಯಾಯ ಬಹುಳತೆಗೆ ಏನ ಮಾಡುವೆನು**=ಕೆಟ್ಟ ನಡೆನುಡಿಯೇ ಹೆಚ್ಚಾಗಿರುವ ಎಡೆಯಲ್ಲಿ ನಾನು ಏನು ತಾನೆ ಮಾಡುವೆನು. ಅತ್ತ ಕೀಚಕನು ಕಾಮಿಯಾಗಿ ಹಲ್ಲೆ ಮಾಡಿದ್ದಾನೆ. ಇತ್ತ ರಾಜನನ್ನು ಮೊದಲುಗೊಂಡು ಸಭಾಸದರೆಲ್ಲರೂ ಮೂಕರಾಗಿದ್ದಾರೆ. ಈ ರಾಜಸಭೆಯಲ್ಲಿ ಅನ್ಯಾಯವನ್ನು ತಡೆಗಟ್ಟುವವರು ಯಾರು ಇಲ್ಲ. ಇಂತಹ ಸಮಯದಲ್ಲಿ ನಾನು ಹೇಗೆ ತಾನೆ ನನ್ನ ಮಾನಪ್ರಾಣಗಳನ್ನು ಕಾಪಾಡಿಕೊಳ್ಳಲಿ; ಸೈರಣೆ=ತಾಳ್ಮೆಯ ನಡೆನುಡಿ; ಅವಧಿ=ಸಮಯದ ಪರಿಮಿತಿ/ಕಾಲದ ಗಡುವು; **ಸೈರಣೆಗೆ ತಾನು ಅವಧಿಯಿಲ್ಲಾ**= ತಾಳ್ಮೆಯ ನಡೆನುಡಿಗೂ ಒಂದು ಮಿತಿಯಿದೆ. ಆದರೆ ಈಗ ಇಲ್ಲಿರುವವರು ತಮ್ಮ ಕಣ್ಣಮುಂದೆ ಕೆಟ್ಟದ್ದು ನಡೆಯುತ್ತಿದ್ದರೂ ಕೋಪಿಸಿಕೊಳ್ಳದೆ ಸುಮ್ಮನಾಗಿ ಏನನ್ನು ಮಾಡಲಾರದವರಾಗಿದ್ದಾರೆ; ಪೌರುಷ=ಪರಾಕ್ರಮ; ಕಡು=ಬಹಳ; ಬಂಜೆ=ಗೊಡ್ಡು; **ಪೌರುಷವು ಕಡು ಬಂಜೆಯಾಯಿತು**=ಇದೊಂದು ರೂಪಕ. ಪರಾಕ್ರಮವೆಂಬುದು ಗೊಡ್ಡಾಗಿದೆ. ಅಂದರೆ ಒಡ್ಡೋಲಗದಲ್ಲಿರುವ ಯಾವೊಬ್ಬ ವ್ಯಕ್ತಿಯಲ್ಲಿಯೂ ಕೆಟ್ಟದ್ದನ್ನು ತಡೆಗಟ್ಟಬಲ್ಲ ಕೆಚ್ಚು ಮತ್ತು ಕೇಡಿಯನ್ನು ಸದೆಬಡಿಯಬಲ್ಲ ಶಕ್ತಿಯೇ ಇಲ್ಲವಾಗಿದೆ; ಆರಯಿಕೆ=ಸೇವೆ; ಜುಣುಗು=ಕುಗ್ಗು; ಜಾರು=ನುಣುಚಿಕೊಳ್ಳು;

**ಆರಯಿಕೆಯಲಿ ಜುಣುಗಿ ಜಾರುವಿರಿ**=ರಾಜಶಕ್ತಿಗೆ ಎದುರಾಡದೆ ಕುಗ್ಗಿ ಕುಸಿದು, ಕೆಟ್ಟದ್ದನ್ನು ತಡೆಗಟ್ಟಲಾರದೆ ನಿಮ್ಮ ಜವಾಬ್ದಾರಿಯಿಂದ ತಪ್ಪಿಸಿಕೊಂಡಿರುವಿರಿ

ಎಂದು ಸೈರಂಧ್ರಿಯು ಸಬಾಸದರೆಲ್ಲರನ್ನೂ ಚುಚ್ಚಿನುಡಿಯುತ್ತಾಳೆ; ಅರರೆ= ಅಬ್ಬಬ್ಬಾ. ಅಚ್ಚರಿಯನ್ನು ಸೂಚಿಸುವಾಗ ಬಳಸುವ ಪದ; ದಿಟ್ಟೆ=ಎದೆಗಾತಿ; **ಅರರೆ... ಹೆಂಗಸು ದಿಟ್ಟೆ**=ಅಬ್ಬಬ್ಬಾ! ಈ ಹೆಂಗಸು ಎದೆಗಾತಿ. ಅಂದರೆ ಯಾರನ್ನೂ ಲೆಕ್ಕಿಸದ ಕೆಚ್ಚಿನ ನಡೆನುಡಿಯವಳು; ಮೋನ=ಮಾತನಾಡದೆ ಸುಮ್ಮನಿರುವಿಕೆ; **ಮೋನದೊಳು ಇರಲಿ**=ಹೆಣ್ಣಾದ ಈಕೆಯು ಈ ರೀತಿ ರಾಜನನ್ನು ಮತ್ತು ಸಭಾಸದರನ್ನು ಲೆಕ್ಕಿಸದೆ ಮಾತನ್ನಾಡಬಾರದು. ಈಕೆಯು ತನ್ನ ಮೇಲಾದ ಹಲ್ಲೆಯನ್ನು ಸಹಿಸಿಕೊಂಡು ಸುಮ್ಮನಿರಬೇಕು; ಇದು+ಆವ; ಆವ=ಯಾವ; ಅಂತರ=ವ್ಯತ್ಯಾಸ; **ಇದಾವ ಅಂತರವು**=ರಾಜನ ಒಡ್ಡೋಲಗದಲ್ಲಿ ಗುರುಹಿರಿಯರ ಮುಂದೆ ಹೇಗೆ ನಡೆದುಕೊಳ್ಳಬೇಕು / ನಡೆದುಕೊಳ್ಳಬಾರದು ಎಂಬ ವ್ಯತ್ಯಾಸವನ್ನೇ ತಿಳಿಯದವಳು;

ಹೊರೆ=ಸಮೀಪ/ಬಳಿ/ಮುಂದೆ; ಬಾಯ್ಬಡಿಕತನ=ಬಾಯಿಗೆ ಬಂದಂತೆ ಮಾತನಾಡುವುದು; ಗರುವಾಯಿ=ದೊಡ್ಡತನ/ಮರ್ಯಾದೆ; **ರಾಯನ ಹೊರೆಯಲಿ ಈ ಬಾಯ್ಬಡಿಕತನ ಗರುವಾಯಿಯೇ ಎನಲು**=ವಿರಾಟರಾಜನ ಒಡ್ಡೋಲಗದಲ್ಲಿ ಎಲ್ಲರ ಮುಂದೆ ಈ ರೀತಿ ಬಾಯಿಗೆ ಬಂದಂತೆ ಮಾತನಾಡುವುದು ಯಾರಿಗೂ ಮರ್ಯಾದೆಯನ್ನು ತರುವಂತಹುದಲ್ಲ ಎಂದು ಸೈರಂಧ್ರಿಯನ್ನು ಅಲ್ಲಗಳೆಯಲು; ಲಲಿತ+ಅಂಗಿ; ಲಲಿತ=ಸುಂದರವಾದ; ಅಂಗಿ=ದೇಹವನ್ನು ಉಳ್ಳವಳು; ಲಲಿತಾಂಗಿ=ಸುಂದರಿ; **ಲಲಿತಾಂಗಿ ಕೆರಳಿದಳು**= ಸೈರಂಧ್ರಿಯು ಸಭಾಸದರ ಮಾತುಗಳನ್ನು ಕೇಳಿ ಕೋಪೋದ್ರೇಕಗೊಂಡಳು; ಹುರುಳು=ಶಕ್ತಿ; ಮಾರುತಿ=ಭೀಮ; ಅರುಹು=ತಿಳಿಸು/ಹೇಳು;

**ಇಲ್ಲಿಯ ಹಿರಿಯರಲಿ ಹುರುಳಿಲ್ಲ. ಮಾರುತಿಗೆ ಅರುಹುವೆನು. ಬಳಿಕ ಆದುದಾಗಲಿ ಎನುತ ತಿರುಗಿದಳು**=ಈ ಒಡ್ಡೋಲಗದಲ್ಲಿರುವ ಗುರುಹಿರಿಯರಲ್ಲಿ ಯಾರಿಗೂ ಕೆಟ್ಟದ್ದನ್ನು ತಡೆಗಟ್ಟುವ ಶಕ್ತಿಯಿಲ್ಲ. ಭೀಮನಿಗೆ ಈ ಸುದ್ದಿಯನ್ನು ತಿಳಿಸುತ್ತೇನೆ. ಅನಂತರ ಏನಾಗುತ್ತದೆಯೋ ಆಗಲಿ ಎಂದು ನುಡಿಯುತ್ತ ಸೈರಂಧ್ರಿಯು ಒಡ್ಡೋಲಗದಿಂದ ಹೊರನಡೆದಳು.



## ನೋಟ–೮

**ಆ ಸುದೇಷ್ಣೆಯ ಮನೆಗೆ ಬರಲು, ಅವಳು ಈ ಸತಿಯ ನುಡಿಸಿದಳು**= ವಿರಾಟರಾಯನ ಒಡ್ಡೋಲಗದಲ್ಲಿ ಯಾರೊಬ್ಬರಿಂದಲೂ ನ್ಯಾಯ ದೊರಕದೆ ಕಂಗಾಲಾದ ಸೈರಂಧ್ರಿಯು ಸುದೇಷ್ಣೆಯ ರಾಣಿವಾಸಕ್ಕೆ ಬರುತ್ತಾಳೆ. ಆಗ ರಾಣಿ ಸುದೇಷ್ಣೆಯು ಸೈರಂಧ್ರಿಯ ಉಡುಗೆ ತೊಡುಗೆಯಲ್ಲಾಗಿದ್ದ ಅಸ್ತವ್ಯಸ್ತತೆಯನ್ನು ಮತ್ತು ಅವಳ ಮೊಗದಲ್ಲಿ ಕಂಡು ಬರುತ್ತಿರುವ ದುಗುಡವನ್ನು ಗಮನಿಸಿ ಸೈರಂಧ್ರಿಯನ್ನು ಪ್ರಶ್ನಿಸುತ್ತಾಳೆ;

ವಿಳಾಸ=ಅಂದ/ಸೊಬಗು; ಅಳಿ=ನಾಶವಾಗು/ಇಲ್ಲವಾಗು; **ತಂಗಿ, ವಿಳಾಸವು ಅಳಿದಿದೆ**=ತಂಗಿ, ನಿನ್ನ ಅಂದಚಂದದ ರೂಪದ ಸೊಬಗು ಇಲ್ಲವಾಗಿದೆ; ದುಗುಡ=ಚಿಂತೆ/ಆತಂಕ; **ಮುಖದ ದುಗುಡವು**=ನಿನ್ನ ಮೊಗದಲ್ಲಿ ಆತಂಕ ಎದ್ದುಕಾಣುತ್ತಿದೆ; ಹದನು=ಅವಸ್ಥೆ/ಸ್ಥಿತಿ; **ಇದೇನು ಹದನ**=ನಿನ್ನ ಈ ಅವಸ್ಥೆಗೆ ಕಾರಣವೇನು?; ಈಸು=ಇಷ್ಟು; ಮರವೆ=ನೆನಪಿಲ್ಲದಿರುವುದು; **ಈಸು ಮರವೆಯೆ**= ನಿಮಗೆ ಇಷ್ಟೊಂದು ಮರವೆಯೆ. ಈಗ ಕೆಲವು ಸಮಯದ ಹಿಂದೆ ನೀವೇ ನನ್ನನ್ನು ಆ ಕೀಚಕನ ಮನೆಗೆ ಜೇನುತುಪ್ಪವನ್ನು ತರಲೆಂದು ಕಳುಹಿಸಿದ್ದನ್ನು ಮರೆತಿರುವಿರಾ; ಅರಸುತನ=ಅಧಿಕಾರ ಮತ್ತು ಸಿರಿವಂತಿಕೆಯ ಆಡಳಿತ; ಮಹಾ= ಹೆಚ್ಚಿನ; ಸಗಾಢಿಕೆ=ದೊಡ್ಡಸ್ತಿಕೆ; **ಇದು ಅರಸುತನದ ಮಹಾ ಸಗಾಢಿಕೆ**=ಇದು ಮರೆವೆಯಲ್ಲ. ಅರಸುತನದ ದೊಡ್ಡಸ್ತಿಕೆ. ಅಧಿಕಾರ ಮತ್ತು ಸಿರಿವಂತಿಕೆಯಿಂದ ಬಂದಿರುವ ಸೊಕ್ಕಿನ ನಡೆನುಡಿ; ಎಮ್ಮ=ನಮ್ಮನ್ನು; ಅಪಹಾಸ=ಅಣಕದ ನುಡಿಯಿಂದ ಚುಚ್ಚಿ ಮನಸ್ಸನ್ನು ಗಾಸಿಗೊಳಿಸುವುದು;

**ಎಮ್ಮ ನೀವು ಅಪಹಾಸ ಮಾಡುವಿರಿ**=ನೀವು ನಮ್ಮ ಜೀವನದ ಜತೆ ಚೆಲ್ಲಾಟವಾಡುತ್ತಿರುವಿರಿ; **ನಿಮ್ಮ ಒಡಹುಟ್ಟಿದನು ದುರುಳ**=ನಿಮ್ಮ ತಮ್ಮನು ನೀಚ;

ತಿರುಕುಳಿ=ಹೀನ ವ್ಯಕ್ತಿ/ನೀಚ ವ್ಯಕ್ತಿ; **ನೀವು ಅರಸುಗಳು ತಿರುಕುಳಿಗಳು**=ರಾಜ ಮನೆತನದ ನೀವೆಲ್ಲರೂ ಹೀನ ವ್ಯಕ್ತಿಗಳಾಗಿದ್ದೀರಿ. ನಿಮ್ಮ ತಮ್ಮನಾದ ಕೀಚಕನು ನನ್ನ ಮೇಲೆ ಹಲ್ಲೆ ಮಾಡಿದ. ನಿಮ್ಮ ಗಂಡನಾದ ರಾಜ ವಿರಾಟರಾಯನು ಹಲ್ಲೆಯನ್ನು ನೋಡಿಕೊಂಡು ಸುಮ್ಮನಾದ. ಇಲ್ಲಿ ನೀವು ಏನೂ ಗೊತ್ತಿಲ್ಲದವರಂತೆ ಮಾತನಾಡುತ್ತಿರುವಿರಿ; ಆವು=ನಾವು; **ಆವು ಇನ್ನು ಇರಲು ಬಾರದು**=ಇಷ್ಟೆಲ್ಲಾ ನಡೆಯುತ್ತಿರುವಾಗ, ಇನ್ನು ಮುಂದೆ ನಾನು ಇಲ್ಲಿರಬಾರದು; ನೃಪತಿ=ರಾಜ; ತಪ್ಪು=ಕ್ರಮ ಬಿಟ್ಟು ನಡೆಯುವುದು; ಆರು=ಯಾರು; ಕಾಯ್=ಕಾಪಾಡು;

**ನೃಪತಿ ತಪ್ಪಿದೊಡೆ ಆರು ಕಾವವರು**=ಜನರ ಮಾನಪ್ರಾಣಗಳನ್ನು ಕಾಪಾಡಬೇಕಾದ ರಾಜನೇ ತನ್ನ ಕರ್ತವ್ಯವನ್ನು ಮಾಡದೆ ಸುಮ್ಮನಾದರೆ, ಕೇಡಿಗಳ ಹಲ್ಲೆಯಿಂದ ಹೆಂಗಸರನ್ನು ಮತ್ತು ಬಲಹೀನರನ್ನು ಇನ್ನಾರು ತಾನೆ ಕಾಪಾಡುತ್ತಾರೆ; **ಕರೆಸಿ ಬುದ್ಧಿಯ ಹೇಳಿ**=ನಿಮ್ಮ ತಮ್ಮನನ್ನು ಇಲ್ಲಿಗೆ ಕರೆಸಿಕೊಂಡು ಅವನಿಗೆ ಈ ರೀತಿ ಹೆಂಗಸರ ಬಗ್ಗೆ ನಡೆದುಕೊಳ್ಳುವುದು ಸರಿಯಲ್ಲವೆಂದು ಬುದ್ಧಿಯನ್ನು ಹೇಳಿ ಎಚ್ಚರಿಕೆಯನ್ನು ನೀಡಿ; ಹೊರೆ=ಕಾಪಾಡು; ಹೊರೆಯಲಾಪರೆ=ಕಾಪಾಡುವ ಶಕ್ತಿಯಿದ್ದರೆ; **ಎನ್ನನು ಹೊರೆಯಲಾಪರೆ ಹೊರೆಯಿರಿ**=ನಿಮ್ಮ ದಾಸಿಯಾದ ನನ್ನ ಮಾನಪ್ರಾಣಗಳನ್ನು ಕಾಪಾಡುವ ಶಕ್ತಿ ಮತ್ತು ಮನಸ್ಸು ನಿಮ್ಮಲ್ಲಿದ್ದರೆ, ಇನ್ನು ಮುಂದೆ ಇಂತಹ ಹಲ್ಲೆಯು ನಡೆಯದಂತೆ ತಡೆದು ನನ್ನನ್ನು ಕಾಪಾಡಿ; ಅರಸಿ=ರಾಣಿ;

**ಅಲ್ಲದಡೆ ಅರಸಿ ಎನ್ನನು ಕಳುಹುವುದು**=ನಿಮ್ಮಿಂದ ಆಗದಿದ್ದರೆ, ರಾಣಿಯೇ ನನ್ನನ್ನು ರಾಣಿವಾಸದಿಂದ ಹೊರಕ್ಕೆ ಕಳುಹಿಸುವುದು. ಅಂದರೆ ನಾನು ದಾಸಿ ಕೆಲಸವನ್ನು ಬಿಟ್ಟು ಹೊರಡುತ್ತೇನೆ; ಲಲನೆ=ಹೆಂಗಸು; **ಲಲನೆ ಕೇಳು, ಅನ್ಯಾಯದವರನು ಕೊಲಿಸುವೆನು ಭಯ ಬೇಡ**=ಸೈರಂಧ್ರಿಯೇ ಕೇಳು, ಅನ್ಯಾಯ ಮಾಡಿದವರನ್ನು ಕೊಲ್ಲಿಸುತ್ತೇನೆ. ಹೆದರದಿರು; ಅಳುಪು=ಬಯಸು/ಇಚ್ಚಿಸು; **ಪರಸತಿಗೆ ಅಳುಪಿದವನು ಒಡಹುಟ್ಟಿದನೆ**=ಬೇರೆಯವರ ಹೆಂಡತಿಯೊಡನೆ ಕಾಮದ ನಂಟನ್ನು ಪಡೆಯಲು ಹಂಬಲಿಸಿದ ಆ ಕೀಚಕನು ಇಂದಿನಿಂದ ನನ್ನ ತಮ್ಮನಲ್ಲ; **ಕಡುಪಾಪಿ ಹಗೆ**=ಅಂತಹ ಕೆಡುಕನು ದೊಡ್ಡ ಪಾಪಿ ಮತ್ತು ನನ್ನ ಪಾಲಿಗೆ ಶತ್ರುವಾಗಿದ್ದಾನೆ;

**ಕೊಲಿಸುವಡೆ ನೀವೇಕೆ**=ನನ್ನ ಮೇಲೆ ಕಾಮದ ಹಲ್ಲೆಯನ್ನು ನಡೆಸಿದ ಕೀಚಕನನ್ನು ಕೊಲ್ಲಿಸುವುದಕ್ಕೆ ನೀವೇಕೆ ಶ್ರಮ ತೆಗೆದುಕೊಳ್ಳುತ್ತೀರಿ; ಬಳಿಯಲಿ=ಅನಂತರ; **ತಪ್ಪಿನ ಬಳಿಯಲಿ**=ಇಂತಹ ತಪ್ಪನ್ನು ಮಾಡಿರುವಾಗ; ಎನ್ನಾತಗಳು=ನನ್ನ ಗಂಡಂದಿರು; ಕುಲ=ವಂಶ; ಸವರು=ನಾಶಗೊಳಿಸು; **ತಪ್ಪಿನ**

**ಬಳಿಯಲಿ ಎನ್ನಾತಗಳು ಕೀಚಕ ಕುಲವ ಸವರುವರು**=ನನ್ನ ಮೇಲೆ ಕಾಮದ ಉದ್ದೇಶದಿಂದ ಹಲ್ಲೆ ಮಾಡಿ, ದೊಡ್ಡ ತಪ್ಪನ್ನು ಎಸಗಿರುವ ಕೀಚಕನ ವಂಶವನ್ನೇ ನನ್ನ ಗಂಡಂದಿರು ನಾಶಗೊಳಿಸುತ್ತಾರೆ;

ಕಾರಣ+ಇಲ್ಲ; ಕಾರಣ=ನಿಮಿತ್ತ/ಸಲುವಾಗಿ; ಸಾರು=ಒತ್ತಿ ಹೇಳು;

**ಎನಗೆ ಕಾರಣವಿಲ್ಲ ಸಾರಿದೆನು ಎಂದು ಬೀಳ್ಕೊಂಡು**=ನಿಮ್ಮ ತಮ್ಮನ ಸಾವಿಗೆ ನಾನು ಕಾರಣಳು ಎಂಬ ಆರೋಪವನ್ನು ನನ್ನ ಮೇಲೆ ಹೊರಿಸಬೇಡಿ ಎಂದು ಸೈರಂಧ್ರಿಯು ಸುದೇಷ್ಣೆಗೆ ನೇರವಾದ ನುಡಿಗಳಿಂದ ಹೇಳಿ, ಅಲ್ಲಿಂದ ಹೊರ ನಡೆದಳು; ಅಬಲೆ=ಹೆಂಗಸು; **ಅಬಲೆ ತನ್ನಯ ಮಂದಿರಕೆ ಬಂದು**=ಸೈರಂಧ್ರಿಯು ರಾಣಿವಾಸದಲ್ಲಿದ್ದ ತನ್ನ ಕೊಟಡಿಗೆ ಬಂದು; ಸೈವೆರಗು=ಅತಿಯಾದ ತಳಮಳ/ಸಂಕಟ; **ಒಳಗೊಳಗೆ ಮನನೊಂದು ಸೈವೆರೆಗಾಗಿ ಚಿಂತಿಸಿ ಹಗಲ ನೂಕಿದಳು**=ಕೀಚಕನ ಹಲ್ಲೆಯಿಂದ ಮಯ್ ಮನ ಗಾಸಿಗೊಂಡಿರುವ ಸೈರಂಧ್ರಿಯು ತನ್ನೊಳಗೆ ನೋವನ್ನು ತಿನ್ನುತ್ತ, ಕೀಚಕನ ಕಾಮದ ಕಿರುಕುಳದಿಂದ ಪಾರಾಗುವ ಬಗೆಯನ್ನು ಚಿಂತಿಸುತ್ತ ಹೆಚ್ಚಿನ ತಳಮಳದಿಂದ ಅಂದಿನ ಹಗಲನ್ನು ಕಳೆದಳು; ಕೊಂದುಕೊಂಬೆನೆ=ಸಾಯೋಣವೆಂದರೆ; ಆತ್ಮ=ಜೀವ; ಘಾತಕ=ಕೊಲ್ಲುವ; ಮಾಣ್=ಬಿಡು; **ಕೊಂದುಕೊಂಬೆನೆ ಆತ್ಮಘಾತಕ ಹಿಂದೆ ಹತ್ತದೆ ಮಾಣದು**=ಸಾಯೋಣವೆಂದರೆ ಆತ್ಮಹತ್ಯೆಯನ್ನು ಮಾಡಿಕೊಂಡ ಕೆಟ್ಟ ಹೆಸರು ಬರದೆ ಇರದು;

ಏಗು=ನಿಬಾಯಿಸು/ಜಯಿಸು/ಏನನ್ನು ಮಾಡು; **ಏಗುವೆನು**=ಇತ್ತ ಕೀಚಕನ ಕಿರುಕುಳ... ಅತ್ತ ಯಾರೊಬ್ಬರ ನೆರವು ಇಲ್ಲದೆ ಒಬ್ಬಂಟಿಯಾಗಿರುವ ನಾನು ಈಗ ಯಾವ ಬಗೆಯಲ್ಲಿ ಹೋರಾಡಲಿ; **ಎಂದು ದ್ರೌಪದಿ ತನ್ನ ಮನದಲಿ ಹಿರಿದು ಮರುಗಿದಳು**=ಹೀಗೆ ಸೈರಂಧ್ರಿಯು ತನ್ನ ಮನದಲ್ಲಿ ಅಪಾರವಾದ ಸಂಕಟಕ್ಕೆ ಒಳಗಾದಳು; ಆರಿಗೆ=ಯಾರಿಗೆ; ಉಸುರು=ಹೇಳು;

**ಆರಿಗೆ ಉಸುರುವೆನು**=ಯಾರೊಡನೆ ನನಗೆ ಬಂದಿರುವ ಆಪತ್ತನ್ನು ಹೇಳಿಕೊಳ್ಳಲಿ; ಸಾರು=ಸಮೀಪಿಸು/ಹತ್ತಿರಕ್ಕೆ ಬರು; **ಆರ ಸಾರುವೆನು**=ನನ್ನನ್ನು ಕಾಪಾಡಿರೆಂದು ಯಾರ ಬಳಿಗೆ ಹೋಗಲಿ; ಒರಲು=ಅರಚು/ಕೂಗಿಕೊಳ್ಳು/ನರಳು; **ಆರಿಗೆ ಒರಲುವೆನು**=ಯಾರ ಮುಂದೆ ನನ್ನ ಈ ಸಂಕಟವನ್ನು ತೋಡಿಕೊಳ್ಳಲಿ; ಅರುಹು=ತಿಳಿಸು; **ಆರಿಗೆ ಅರುಹುವೆನು**=ಯಾರಿಗೆ ಈ ನನ್ನ ಸಂಕಟವನ್ನು ತಿಳಿಸಲಿ; **ಆರ ಬೇಡುವೆನು**=ನನ್ನನ್ನು ಕೀಚಕನಿಂದ ಕಾಪಾಡಿ ಎಂದು ಯಾರಲ್ಲಿ ಮೊರೆಯಿಡಲಿ; ಅಕಟ=ಅಯ್ಯೋ; ವ್ಯಕ್ತಿಯು ಆಪತ್ತಿಗೆ ಸಿಲುಕಿ, ಸಂಕಟದಲ್ಲಿ ಬೇಯುತ್ತ, ಯಾರ ನೆರವೂ ಇಲ್ಲದೆ ತೊಳಲಾಡುತ್ತಿರುವಾಗ

ಹೊರಹೊಮ್ಮುವ ಪದ; ಜನ್ಮ=ಹುಟ್ಟು; ಸುಡು=ಬೆಂಕಿಯಲ್ಲಿ ಬೇಯಿಸು;

**ಅಕಟ, ಹೆಂಗಸು ಜನ್ಮವನು ಸುಡಲಿ**=ಅಯ್ಯೋ… ಹೆಂಗಸಿನ ಜನ್ಮವನ್ನೇ ಸುಡಲಿ. ಅಂದರೆ ಹೆಂಗಸರು ಎಂಬ ಜೀವಿಗಳೇ ಈ ಜಗತ್ತಿನಲ್ಲಿ ಇಲ್ಲದಂತಾಗಲಿ. ಇದೊಂದು ನುಡಿಗಟ್ಟಾಗಿ ಬಳಕೆಗೊಂಡಿದೆ. ಸಮಾಜದಲ್ಲಿ ಗಂಡಸಿಗೆ ಇರುವ ದೊಡ್ಡ ಸ್ಥಾನಮಾನಗಳು ಹೆಂಗಸಿನ ಪಾಲಿಗೆ ಇಲ್ಲದಿರುವುದನ್ನು ಸೂಚಿಸುವುದರ ಜತೆಗೆ, ಸದಾಕಾಲ ಹೆಂಗಸರು ಗಂಡಸರ ಅತ್ಯಾಚಾರ, ಅನಾಚಾರ ಮತ್ತು ದಬ್ಬಾಳಿಕೆ ಒಳಗಾಗಿ ನರಳುತ್ತ, ತಮ್ಮ ಮಾನಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ತೊಳಲಾಡುತ್ತಿರುವುದನ್ನು ಹೇಳುತ್ತಿದೆ; ಘೋರ=ಉಗ್ರವಾದುದು/ಪ್ರಚಂಡ ವಾದುದು; ಪಾತಕಿ=ಪಾಪವನ್ನು ಮಾಡಿದ ಹೆಣ್ಣು; ಎನ್ನ+ಒಲು; ಎನ್ನ=ನನ್ನ; ಒಲು=ಅಂತೆ; ಮುನ್ನ=ಮೊದಲು; ನವೆ=ಕೊರಗು;

**ಘೋರ ಪಾತಕಿ ಎನ್ನವೊಲು ಮುನ್ನ ಆರು ನವೆದವರುಂಟು**= ಮಹಾಪಾಪಿಯಾದ ನನ್ನ ರೀತಿಯಲ್ಲಿ ಈ ಮೊದಲು ಯಾರಾದರೂ ಇಂತಹ ಸಂಕಟದಿಂದ ಕೊರಗಿದ್ದಾರೆಯೇ; ಹತಾಶಳಾಗಿರುವ ಸೈರಂಧ್ರಿಯು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಿದ್ದಾಳೆ;

ಶಶಿ=ಚಂದ್ರ; ವದನ=ಮೊಗ; ಶಶಿವದನೆ=ಚಂದ್ರನ ಕಾಂತಿಯಂತೆ ಬೆಳಗುತ್ತಿರುವ ಮೊಗವುಳ್ಳವಳು/ಸುಂದರಿ; ಬಸುರು=ಹೊಟ್ಟೆ; ಹೊಯ್= ಹೊಡೆತ/ಬಡಿತ; **ಬಸುರನು ಹೊಯ್ದು**=ಇದೊಂದು ನುಡಿಗಟ್ಟು. ಅತಿಯಾದ ಸಂಕಟದಿಂದ ಹೊಟ್ಟೆಯೊಳಗಿನ ಉರಿಯನ್ನು ತಡೆಯಲಾರದೆ ಹೊಟ್ಟೆಯ ಮೇಲೆ ಕಯ್ಯನ್ನು ಆಡಿಸುತ್ತ ನರಳುವುದು; ಒರಲು=ಅರಚು/ಕೂಗಿಕೊಳ್ಳು;

**ಮರಣವು ಬಾರದೆ ಎಂದು ಶಶಿವದನೆ ಬಸುರನು ಹೊಯ್ದು ಒರಲಿದಳು**= ನನಗೆ ಸಾವಾದರೂ ಬರಬಾರದೆ ಎಂದು ಸೈರಂಧ್ರಿಯು ಸಂಕಟವನ್ನು ತಡೆಯಲಾರದೆ ತನ್ನ ಹೊಟ್ಟೆಯ ಮೇಲೆ ಕಯ್ಯನ್ನಿಟ್ಟುಕೊಂಡು ಹೊರಳಾಡುತ್ತ ನರಳತೊಡಗಿದಳು; ಯಮಸುತ=ಧರ್ಮರಾಯ; ಅರುಹು=ಹೇಳು/ತಿಳಿಸು; ಕ್ಷಮೆ=ಇತರರ ತಪ್ಪನ್ನು ಮನ್ನಿಸುವ ಗುಣ; ಗರ=ದೆವ್ವ; **ಗರ ಹೊಡೆಯುವುದು**=ದೆವ್ವ ಹಿಡಿದುಕೊಳ್ಳುವುದು. ಇದೊಂದು ನುಡಿಗಟ್ಟು. ಯಾವುದಾದರೊಂದು ಸಂಗತಿಯಲ್ಲಿಯೇ ಸಂಪೂರ್ಣವಾಗಿ ತೊಡಗಿಕೊಳ್ಳುವುದು ಎಂಬ ತಿರುಳಿನಲ್ಲಿ ಬಳಕೆಯಾಗುತ್ತದೆ;

**ಯಮಸುತಂಗೆ ಅರುಹುವೆನೆ ಧರ್ಮಕ್ಷಮೆಯ ಗರ ಹೊಡೆದಿಹುದು**= ಧರ್ಮರಾಯನೊಡನೆ ಈ ಸಂಕಟದಿಂದ ನನ್ನನ್ನು ಪಾರುಮಾಡು ಎಂದು ಹೇಳಿಕೊಳ್ಳೋಣವೆಂದರೆ ಆತನಿಗೆ ಎಲ್ಲರ ತಪ್ಪನ್ನು ಮನ್ನಿಸುವಂತಹ ಧರ್ಮದ

ದೆವ್ವ ಹಿಡಿದಿದೆ; ಪಾರ್ಥ=ಅರ್ಜುನ; ಮಮತೆ+ಉಳ್ಳವನು; ಮಮತೆ=ಮೋಹ/ಪ್ರೀತಿ; ಎಂಬೆನೇ=ಎನ್ನೋಣವೇ; ಭ್ರಮಿತನು+ಆಗಿಹನು; ಭ್ರಮಿತ=ಹುಚ್ಚು/ಉನ್ಮಾದ; **ಪಾರ್ಥನು ಮಮತೆಯುಳ್ಳವನು ಎಂಬೆನೇ ತಮ್ಮಣ್ಣನ ಆಜ್ಞೆಯಲಿ ಭ್ರಮಿತನಾಗಿಹನು**=ಅರ್ಜುನನು ನನ್ನ ಬಗ್ಗೆ ಮೋಹವುಳ್ಳವನು, ಅವನು ನನ್ನನ್ನು ಕಾಪಾಡುತ್ತಾನೆ ಎಂದು ನಂಬೋಣವೆಂದರೆ, ಅವನಿಗೆ ಅಣ್ಣನಾದ ಧರ್ಮರಾಯನ ಅಪ್ಪಣೆಯೆಂಬ ದೆವ್ವ ಹಿಡಿದಿದೆ. ಅಂದರೆ ಅರ್ಜುನನು ಯಾವುದೇ ಸನ್ನಿವೇಶದಲ್ಲಿಯೂ ಧರ್ಮರಾಯನು ಹಾಕಿದ ಗೆರೆಯನ್ನು ದಾಟುವುದಿಲ್ಲ. ಆದ್ದರಿಂದ ಈ ಅಜ್ಞಾತವಾಸದ ಕಾಲದಲ್ಲಿ ಅರ್ಜುನನು ನನ್ನನ್ನು ಕಾಪಾಡಲು ಮುಂದೆ ಬರುವುದಿಲ್ಲ;

ಉಳಿದರು+ಇಬ್ಬರು; ರಮಣ=ಗಂಡ; ಕ್ಷಮ=ಶಕ್ತಿಯುಳ್ಳವನು; ಅಕ್ಷಮ=ಶಕ್ತಿಯಿಲ್ಲದವನು; **ಉಳಿದರಿಬ್ಬರು ರಮಣರು ಇವರು ಈ ನಾಯ ಕೊಲಲು ಅಕ್ಷಮರು**=ಇನ್ನುಳಿದ ಇಬ್ಬರು ಗಂಡಂದಿರಾದ ನಕುಲ ಸಹದೇವರಿಗೆ ಈ ನಾಯಿ ಕೀಚಕನನ್ನು ಕೊಲ್ಲುವ ಶಕ್ತಿಯಿಲ್ಲ; ಮಿಡುಕು+ಉಳ್ಳ; ಮಿಡುಕು=ಕನಿಕರ/ಅನುಕಂಪ/ತುಡಿತ; ನಿಸ್ಸಂದೇಹ=ಸಂದೇಹವೇ ಇಲ್ಲ/ಅನುಮಾನವಿಲ್ಲ;

**ಎಲ್ಲರೊಳು ಕಲಿಭೀಮನೇ ಮಿಡುಕುಳ್ಳ ಗಂಡನು, ನಿಸ್ಸಂದೇಹ**=ನನ್ನ ಗಂಡಂದಿರಾದ ಅಯ್ದು ಮಂದಿ ಪಾಂಡವರಲ್ಲಿ ಕಲಿಭೀಮನೇ ನಿಜವಾಗಿ ನನ್ನ ಬಗ್ಗೆ ಕರುಣೆಯುಳ್ಳವನು. ಇದರಲ್ಲಿ ಸಂದೇಹವೇ ಇಲ್ಲ. ನನ್ನನ್ನು ಒಳಗೊಂಡಂತೆ ತಾಯಿ ಕುಂತಿ, ಅಣ್ಣನಾದ ಧರ್ಮರಾಯ ಮತ್ತು ತಮ್ಮಂದಿರಾದ ಅರ್ಜುನ ನಕುಲ ಸಹದೇವರ ಮಾನಪ್ರಾಣಗಳನ್ನು ಕಾಪಾಡುವುದರಲ್ಲಿ ಭೀಮನು ಸದಾಕಾಲ ಎಚ್ಚರದಿಂದಿರುತ್ತಾನೆ ಮತ್ತು ಹೋರಾಡುತ್ತಾನೆ; ಹಾನಿ=ಕೇಡು; ಹರಿಬ=ತೊಂದರೆ/ಆಪತ್ತು; ನಿಲ್ಲದೆ=ಸುಮ್ಮನಾಗದೆ; ಅಂಗೈಸು=ಪ್ರಯತ್ನಿಸು/ಉದ್ಯೋಗಿಸು; **ಹಾನಿ ಹರಿಬಕೆ ನಿಲ್ಲದೆ ಅಂಗೈಸುವನು**=ಯಾವುದೇ ಬಗೆಯ ಕೇಡಾಗಲಿ ಇಲ್ಲವೇ ಆಪತ್ತಾಗಲಿ ಉಂಟಾದಾಗ ಅಂಜದೆ ಹಿಂಜರಿಯದೆ ಸುಮ್ಮನಿರದೆ ಮುನ್ನುಗ್ಗಿ ಕಾಪಾಡಬಲ್ಲವನು;

ಕಡು=ಬಹಳ/ಹೆಚ್ಚಿನ; ಹೀಹಾಳಿ=ಹುರುಡು/ಹಟ/ಚಲ; **ಕಡು ಹೀಹಾಳಿಯುಳ್ಳವನು**=ಹೆಚ್ಚಿನ ಚಲವುಳ್ಳವನು. ಕೇಡು ಬಗೆದವರನ್ನು ನಾಶ ಮಾಡುವ ಚಲವುಳ್ಳವನು; ಖುಲ್ಲನು+ಇವನ; ಖುಲ್ಲ=ನೀಚ/ಕೇಡಿ; ಇವನ=ಈ ಕೀಚಕನ; ಉಪಟಳ=ಹಿಂಸೆ/ಪೀಡೆ; ಆತಂಗೆ=ಅವನಿಗೆ/ಭೀಮನಿಗೆ; **ಖುಲ್ಲನಿವನ ಉಪಟಳವನು ಆತಂಗೆ ಎಲ್ಲವನು ಹೇಳುವೆನು**=ಕೇಡಿ ಕೀಚಕನಿಂದ ನನಗೆ ಆಗುತ್ತಿರುವ ಹಿಂಸೆಯನ್ನೆಲ್ಲಾ ಭೀಮನೊಡನೆ ಹೇಳಿಕೊಳ್ಳುತ್ತೇನೆ; ಹುರುಳು=ಕೆಚ್ಚು/ಶಕ್ತಿ;

**ಬಳಿಕ ಅವನಲ್ಲಿ ಹುರುಳು ಇಲ್ಲದೊಡೆ**=ಭೀಮನೊಡನೆ ಹೇಳಿಕೊಂಡ ನಂತರ, ಅವನು ನನ್ನನ್ನು ಕಾಪಾಡುವ ಕೆಚ್ಚನ್ನು ತೋರಿಸದಿದ್ದರೆ/ಕೀಚಕನನ್ನು ಸದೆ ಬಡೆಯಲು ಒಪ್ಪದಿದ್ದರೆ; ಘೋರತರ=ಅತಿ ಉಗ್ರವಾದ; ವಿಷ=ನಂಜು/ಸೇವಿಸಿದ ಕೂಡಲೇ ಸಾವನ್ನು ತರುವ ವಸ್ತು; **ಘೋರತರ ವಿಷವ ಕುಡಿವೆನು ಎಂದು ನಿಲಯವನು ಹೊರವಂಟು**=ಅತಿ ಉಗ್ರವಾದ ನಂಜನ್ನು ಕುಡಿದು ಸಾವನ್ನಪ್ಪುತ್ತೇನೆ ಎಂಬ ಸಂಕಲ್ಪವನ್ನು ತಳೆದು, ರಾಣಿವಾಸದ ತನ್ನ ಕೊಟಡಿಯಿಂದ ಭೀಮನು ಇರುವ ಅಡುಗೆಯ ಮನೆಯ ಕಡೆಗೆ ಸೈರಂಧ್ರಿಯು ನಡೆದಳು.



## ನೋಟ–೯

ಕಣ್+ಗಳ; ಬೆಳಗು=ಕಾಂತಿ; ತಿಮಿರ=ಕತ್ತಲೆ; ಕೆಡಿಸೆ=ಹೋಗಲಾಡಿಸಲು; **ಕಂಗಳ ಬೆಳಗು ತಿಮಿರವ ಕೆಡಿಸೆ**=ಕಣ್ಣುಗಳ ಕಾಂತಿಯು ಕತ್ತಲೆಯನ್ನು ಹೋಗಲಾಡಿಸುತ್ತಿರಲು; ದ್ರೌಪದಿಯು ಕೀಚಕನ ಕಿರುಕುಳದಿಂದ ತನ್ನನ್ನು ಕಾಪಾಡುವಂತೆ ಕೇಳಿಕೊಳ್ಳಲು ಅಡುಗೆಯ ಮನೆಯಲ್ಲಿದ್ದ ಭೀಮನ ಬಳಿಗೆ ಆ ರಾತ್ರಿಯಲ್ಲಿ ಬರುತ್ತಿದ್ದಾಳೆ. ಆ ಕತ್ತಲಲ್ಲಿ ಅವಳ ಕಣ್ಣುಗಳ ಕಾಂತಿಯೇ ಕವಿದಿರುವ ಕತ್ತಲೆಯನ್ನು ತೊಲಗಿಸಿ, ದಾರಿಯನ್ನು ತೋರುತ್ತಿದೆ; ಕಂಕಣ=ಬಳೆ; ಲಲಿತ=ಮನೋಹರವಾದ; ಝೇಂಕೃತಿ+ಇಂದ; ಝೇಂಕೃತಿ=ಇಂಪಾದ ದನಿ/ನಾದ; ತೂಗು=ಅಲ್ಲಾಡು/ತೊನೆದಾಡು; ವಾಮ=ಎಡಗಡೆ; ಭುಜ=ತೋಳು; ಲತೆ=ಬಳ್ಳಿ; ಒಲಿ=ಒಪ್ಪು; ಮೇಲುದು= ಸೀರೆಯ ಸೆರಗಿನ ಹೊದಿಕೆ; ನಡುಗು=ಅಲ್ಲಾಡು; ಭರ=ವೇಗ; ಅಡಿ=ಹೆಜ್ಜೆ;

**ಕಂಕಣ ಲಲಿತ ಝೇಂಕೃತಿಯಿಂದ ತೂಗುವ ವಾಮಭುಜಲತೆಯ ಒಲಿದು ಮೇಲುದ ನೂಕಿ ನಡುಗುವ ಮೊಲೆಯ ಭರದಲಿ ಅಡಿ ಇಡುತ**=ದ್ರೌಪದಿಯು ಸರಸರನೆ ನಡೆದುಬರುತ್ತಿರುವಾಗ ಆಕೆಯು ಕಯ್ಗಳಲ್ಲಿ ತೊಟ್ಟಿರುವ ಬಳೆಗಳ ಇಂಪಾದ ದನಿಯೊಡನೆ, ಎಡತೋಳಿನ ಮೇಲೆ ಹೊದ್ದಿರುವ ಸೀರೆಯ ಸೆರಗನ್ನು ತಳ್ಳುತ್ತ ಮೊಲೆಗಳು ಅಲುಗಾಡುತ್ತಿರಲು; ಬಾಣಸಿನ ಮನೆ=ಅಡುಗೆಯ ಮನೆ/ಪಾಕಶಾಲೆ; ಕಳವಳ=ಆತಂಕ/ಏನಾಗುವುದೋ ಎಂಬ ದಿಗಿಲು; ಕರಣ=ದೇಹ; ಮುಗುದೆ=ಸುಂದರಿ; **ಬಾಣಸಿನ ಮನೆಗೆ ಕಳವಳದ ಕರಣದ ಮುಗುದೆ ಬಂದಳು**=ಮುಂದೇನಾಗುವುದೋ ಎಂಬ ಆತಂಕದಿಂದ ದ್ರೌಪದಿಯು ಹೆದರುತ್ತ ಅಡುಗೆಯ ಮನೆಯೊಳಕ್ಕೆ ಬಂದಳು; ಕೆಲ=ಪಕ್ಕ/ಜಾಗ/ಪ್ರದೇಶ; ಒಟ್ಟು=ರಾಶಿ ಮಾಡು/ತುಂಬು/ಅಡಕು; ಪತ್ರ=ಎಲೆ/ಸೊಪ್ಪು; ಶಾಕ+ಆವಳಿ; ಶಾಕ=ತರಕಾರಿ; ಆವಳಿ=ಗುಂಪು/ರಾಶಿ; ಪತ್ರ ಶಾಕಾವಳಿ=ಅಡುಗೆಗೆ ಬಳಸುವ ಬಹುಬಗೆಯ

ಸೊಪ್ಪುಗಳ ಮತ್ತು ತರಕಾರಿಗಳ ಗುಡ್ಡೆ; ಫಲ=ಹಣ್ಣು/ಬೆಳೆ;

**ಕೆಲದಲಿ ಒಟ್ಟಿದ ಪತ್ರ ಶಾಕಾವಳಿಯ ಫಲರಾಶಿಗಳ**=ಅಡುಗೆ ಮನೆಯ ಜಾಗದಲ್ಲಿ ಗುಡ್ಡೆ ಹಾಕಿದ್ದ ಬಹುಬಗೆಯ ಎಲೆಗಳ, ಸೊಪ್ಪುಗಳ, ತರಕಾರಿಗಳ ಮತ್ತು ಹಣ್ಣುಕಾಯಿಗಳ; ಕಳವೆ=ಬತ್ತ; ಹೊಳೆವುತ+ಇಹ; ಇಹ=ಇರುವ; ರಾಜಾನ್ನದ+ಅಕ್ಕಿ; ರಾಜಾನ್ನದಕ್ಕಿ=ರುಚಿಕರವಾದ ಅನ್ನಕ್ಕಾಗಿ ಬಳಸುವ ಒಂದು ಬಗೆಯ ಅಕ್ಕಿಯ ಹೆಸರು; **ಕಳವೆಯ ಹೊಳೆವುತಿಹ ರಾಜಾನ್ನದಕ್ಕಿಯ**=ಬತ್ತದ ಸಿಪ್ಪೆಯನ್ನು ತೆಗೆದು ಹಸನುಮಾಡಿರುವ ಹೊಳೆಯುತ್ತಿರುವ ರಾಜಾನ್ನದ ಅಕ್ಕಿಯ; ಹರಿಯಣ=ತಟ್ಟೆ; **ಸಾಲ ಹರಿಯಣದ**=ಸಾಲಾಗಿ ಜೋಡಿಸಿರುವ ತಟ್ಟೆಗಳ; ಸಂಭಾರ=ರುಚಿಕರವಾದ ಅಡುಗೆಯನ್ನು ಮಾಡಲು ಬಳಸುವ ಮೆಣಸು, ಜೀರಿಗೆ, ಕೊತ್ತಂಬರಿ ಬೀಜ, ಚೆಕ್ಕೆ, ಲವಂಗ ಮುಂತಾದುವನ್ನು ಹುರಿದು ಅರೆದು ತಯಾರಿಸಿರುವ ವಸ್ತು; ಚೂರ್ಣ=ಪುಡಿ; **ಕೆಲಬಲದ ಸಂಭಾರ ಚೂರ್ಣದ**= ಅಕ್ಕಪಕ್ಕದಲ್ಲಿಟ್ಟಿರುವ ಸಂಭಾರದ ಪುಡಿಯ;

ತಳಿತ=ಸೇರು/ಕೂಡು; ಬೋನ=ಅನ್ನ/ಆಹಾರ; ಭಕ್ಷ್ಯ+ಆವಳಿ; ಭಕ್ಷ್ಯ= ಉಣಿಸು ತಿನಸು; ಆವಳಿ=ರಾಶಿ; ಬಾಣಸದ+ಒಳಗೆ; ಬಾಣಸ=ಅಡುಗೆಯ ಮನೆ; ಮತ್ತ=ಮದಿಸಿದ/ಸೊಕ್ಕಿದ; ಮದಗಜ=ಮದಿಸಿದ ಆನೆ; ಗಮನ= ಹೋಗುವುದು; ಮತ್ತಗಜಗಮನ=ಇದೊಂದು ನುಡಿಗಟ್ಟು. ಗಂಭೀರವಾದ ನಡಗೆಯ ರೀತಿಯನ್ನು ಸೂಚಿಸುವಾಗ ಈ ಪದವನ್ನು ಬಳಸಲಾಗುತ್ತದೆ; **ವಿವಿಧ ಭಕ್ಷ್ಯಾವಳಿಯ ತಳಿತ ಬೋನದ ಬಾಣಸದೊಳಗೆ ಮತ್ತಗಜಗಮನೆ ಬಂದಳು**= ಬಗೆಬಗೆಯ ಉಣಿಸು ತಿನಸುಗಳಿಂದ ಕೂಡಿದ ಆಹಾರವನ್ನು ಅಟ್ಟುವ ಅಡುಗೆಯ ಮನೆಯೊಳಕ್ಕೆ ಸೈರಂಧ್ರಿಯು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ ಮೆಲ್ಲಮೆಲ್ಲನೆ ಬಂದಳು; ತರಿ=ಕಡಿ/ಕತ್ತರಿಸು; **ತರಿದ ಕುರಿಗಳ**=ಕತ್ತರಿಸಿರುವ ಕುರಿಗಳ; ಅಡಗು=ಮಾಂಸ; ಜುರಿ=ಸೋರು/ತೊಟ್ಟಿಕ್ಕು; **ಹಂದಿಯ ಅಡಗಿನ ಜುರಿತ ರಕುತದ**=ಕುಯ್ದಿರುವ ಹಂದಿಯ ಮಾಂಸದಿಂದ ತೊಟ್ಟಿಕ್ಕುತ್ತಿರುವ ರಕ್ತದ; ಖಂಡ=ತುಂಡು; **ಮೊಲನ ಖಂಡದ**=ಮೊಲದ ಮಾಂಸದ ತುಂಡುಗಳ; ತಿರಿ=ಕೀಳು/ಕೊಯ್ಯು;

**ತಿರಿದ ಗುಬ್ಬಿಯ**=ಕೊರಳನ್ನು ಕೊಯ್ದಿರುವ ಗುಬ್ಬಿಗಳ; ಕೀಸು=ಬೋಳಿಸು; ಸೀಳು=ಹೋಳು ಮಾಡು; ಲಾವುಗೆ=ಪುರಲೆ ಎಂಬ ಹಕ್ಕಿ; **ಕೀಸಿ ಸೀಳಿದ ನವಿಲ ಲಾವುಗೆಯ**=ರೆಕ್ಕೆಪುಕ್ಕಗಳನ್ನು ಕಿತ್ತು, ಕತ್ತನ್ನು ಕೊಯ್ದು, ತಲೆ ಮತ್ತು ದೇಹವನ್ನು ಬೇರ್ಪಡಿಸಿರುವ ನವಿಲು ಮತ್ತು ಪುರಲೆ ಹಕ್ಕಿಗಳ; ತುರುಗು=ಗುಡ್ಡೆಹಾಕು; ಎಲುವು=ಮೂಳೆ; ಸಾಲು=ಪಂಕ್ತಿ; **ತುರುಗಿದ ಎಲುವಿನ ಸಾಲ**=ಬಹು ಬಗೆಯ

ಪ್ರಾಣಿಗಳನ್ನು ಕೊಂದು, ಮಾಂಸದಿಂದ ಬೇರ್ಪಡಿಸಿ ಗುಡ್ಡೆಹಾಕಿರುವ ಮೂಳೆಯ ಸಾಲುಗಳ; ಸುಂಟಿಗೆ=ಗುಂಡಿಗೆ; ಮೆರೆ=ಎದ್ದು ಕಾಣುವ; **ಸುಂಟಿಗೆ ಮೆರೆವ ಮಾಂಸದ ರಾಸಿಗಳ**=ಸುಂಟಿಗೆಯಿಂದ ಕೂಡಿದ ಮಾಂಸದ ಗುಡ್ಡೆಗಳ; ಎರಕೆ=ಹಕ್ಕಿಗಳ ರೆಕ್ಕೆ; ಅಡಬಲ=ಮಾಂಸ/ಬಾಡು; ಅಬಲೆ=ಹೆಂಗಸು; **ಹರಿದ ಎರಕೆಗಳ ಅಡಬಲದ ಮನೆಯ ಕಂಡು ಅಬಲೆ ಹೊಗಳಿದಳು**=ಕೋಳಿ, ಲಾವುಗೆ, ನವಿಲು ಮುಂತಾದ ಹಕ್ಕಿಗಳ ದೇಹದಿಂದ ಕಿತ್ತ ರೆಕ್ಕೆಗಳಿಂದ ಕಿಕ್ಕಿರಿದು ತುಂಬಿರುವ ಮಾಂಸದ ರಾಶಿಯಿಂದ ಕೂಡಿರುವ ಅಡುಗೆಮನೆಯನ್ನು ನೋಡಿ ಸೈರಂಧ್ರಿಯು ತನ್ನ ಮನದಲ್ಲಿಯೇ ಭೀಮನನ್ನು ಹೊಗಳತೊಡಗಿದಳು; ಸೂವಾರ= ಅಡುಗೆಯವನು/ಬಾಣಸಿಗ; ಸೂವಾರ ವಿದ್ಯೆ=ಅಡುಗೆಯನ್ನು ಮಾಡುವ ಕಲೆ/ ಪಾಕ ವಿದ್ಯೆ; ಆರಲಿ=ಯಾರಿಂದ;

ಅರಿದನೊ=ತಿಳಿದುಕೊಂಡನೊ/ಕಲಿತುಕೊಂಡನೊ; ಭಾಪು=ಮೆಚ್ಚುಗೆಯನ್ನು ಸೂಚಿಸುವಾಗ ಬಳಸುವ ಪದ; **ಈ ಸೂವಾರ ವಿದ್ಯೆಯ ಭೀಮನು ಆರಲಿ ಅರಿದನೊ. ಭಾಪು**=ಅಬ್ಬಬ್ಬಾ! ಕಲಿ ಭೀಮನು ಅಡುಗೆ ಮಾಡುವ ಈ ವಿದ್ಯೆಯನ್ನು ಯಾರಿಂದ ಕಲಿತನೋ ತಿಳಿಯದಲ್ಲ; ಶಿವ... ಶಿವ=ಜೀವನದಲ್ಲಿ ಸಂಕಟ ಬಂದಾಗ ವ್ಯಕ್ತಿಯು ಆತಂಕದಿಂದ ದೇವರ ನಾಮಸ್ಮರಣೆಯನ್ನು ಮಾಡುವುದು; ವಿಧಿ= ಮಾನವ ಜೀವಿಯ ಬದುಕಿನಲ್ಲಿ ಹುಟ್ಟಿನಿಂದ ಸಾವಿನ ತನಕ ನಡೆಯುವಂತಹ ಎಲ್ಲ ಬಗೆಯ ಆಗುಹೋಗುಗಳನ್ನು ಅಗೋಚರವಾದ ಶಕ್ತಿಯೊಂದು ನಿಯಂತ್ರಿಸುತ್ತದೆ ಮತ್ತು ನಿರ್ದೇಶಿಸುತ್ತದೆ ಎಂಬ ನಂಬಿಕೆಯು ಜನಮನದಲ್ಲಿದೆ. ಇದನ್ನು 'ವಿಧಿ' ಎಂದು ಕರೆಯುತ್ತಾರೆ; ಮುನಿ=ಕೋಪಗೊಳ್ಳು; ಆರನು=ಯಾವುದೇ ವ್ಯಕ್ತಿಯನ್ನು; ಆವ=ಯಾವ; ಅಂಗ=ರೀತಿ/ಬಗೆ/ಪ್ರಕಾರ; ಬರಿಸು=ಉಂಟುಮಾಡು;

**ಶಿವ ಶಿವ ವಿಧಿ ಮುನಿದು ಆರನು ಆವ ಅಂಗದಲಿ ಬರಿಸದು ಶಿವ ಶಿವ ಎನುತ**= ಶಿವ ಶಿವ...ವಿಧಿಯು ಕೋಪಿಸಿಕೊಂಡಾಗ ವ್ಯಕ್ತಿಯ ಜೀವನವನ್ನು ಯಾವ ನೆಲೆಗೆ ಬೇಕಾದರೂ ದೂಡಬಲ್ಲುದು ಎಂದು ದ್ರೌಪದಿಯು ಮನದಲ್ಲಿ ಪರಿತಪಿಸು ತ್ತಿದ್ದಾಳೆ; ನಾರಿ=ಹೆಂಗಸು; **ನಾರಿ ನಸುನಗುತ ಒಳಗೆ ಹೊಕ್ಕು**= ಸೈರಂಧ್ರಿಯು ಅಂತಹ ಸಂಕಟದ ಸನ್ನಿವೇಶದಲ್ಲಿಯೂ ಭೀಮನ ಅಡುಗೆ ಮನೆಯಲ್ಲಿದ್ದ ವಸ್ತುಗಳನ್ನು ಮತ್ತು ಮಾಂಸದ ರಾಶಿಯನ್ನು ನೋಡಿ ನಸುನಗುತ್ತ ಒಳಕ್ಕೆ ಬಂದು;

ಬಕ+ಅರಿ; ಬಕ=ಒಬ್ಬ ರಕ್ಕಸನ ಹೆಸರು/ಬಕಾಸುರ; ಅರಿ=ಹಗೆ; ಬಕಾರಿ=ಬಕಾಸುರನನ್ನು ಕೊಂದ ಭೀಮ; **ಬಕಾರಿ ಮಂಚದೊಳಿರಲು**=ಭೀಮನು ಮಂಚದಲ್ಲಿ ಮಲಗಿರಲು; ನಿದ್ರಾಭಾರ=ಗಾಢವಾದ ನಿದ್ರೆಯಲ್ಲಿರಲು; ವಿಹ್ವಲ=

ಚಿಂತಿತನಾದವನು/ಸಂಕಟಕ್ಕೆ ಒಳಗಾದವನು; ಕರಣ=ದೇಹ; ವಿಹ್ವಲಕರಣ= ಆಯಾಸಗೊಂಡವನು ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; ಲಲಿತ+ಅಂಗಿ; ಲಲಿತ=ಸುಂದರವಾದ; ಅಂಗಿ=ಅಂಗವನ್ನುಳ್ಳವಳು; ಲಲಿತಾಂಗಿ=ಸುಂದರಿ; ಹೊದ್ದು=ಸಮೀಪಿಸು/ಬಳಿಸಾರು; ಹೊದ್ದು=ಸಮೀಪಿಸು/ಬಳಿಸಾರು;

**ನಿದ್ರಾಭಾರ ವಿಹ್ವಲಕರಣನನು ಲಲಿತಾಂಗಿ ಹೊದ್ದಿದಳು**=ಅಡುಗೆ ಮನೆಯ ಕೆಲಸದಿಂದ ಆಯಾಸಗೊಂಡು ಗಾಢವಾಗಿ ನಿದ್ರಿಸುತ್ತಿದ್ದ ಭೀಮನ ಹತ್ತಿರಕ್ಕೆ ದ್ರೌಪದಿಯು ಬಂದು ನಿಂತಳು; ಭುಗಿಲ್=ಬೆಂಕಿಯು ಹತ್ತಿಕೊಂಡು ಉರಿಯುತ್ತಿರುವಾಗ ಅದರ ನಡುವೆ ಇದ್ದಕ್ಕಿದ್ದಂತೆ ದೊಡ್ಡ ಜ್ವಾಲೆಗಳು ಉರಿದೇಳುವುದನ್ನು ಸೂಚಿಸುವ ಅನುಕರಣ ಶಬ್ದ; **ಎಬ್ಬಿಸಲು ಭುಗಿಲ್ ಎಂಬನೋ**=ನಿದ್ರೆಯಲ್ಲಿ ಮಯ್ ಮರೆತಿರುವ ಭೀಮನನ್ನು ಎಬ್ಬಿಸಿದರೆ, ಬೆಂಕಿಯ ಜ್ವಾಲೆಯು ಉರಿದೆದ್ದಂತೆ ಕಡುಕೋಪವನ್ನು ನನ್ನ ಮೇಲೆ ಕಾರುತ್ತಾನೆಯೋ; ಮೇಣ್= ಇಲ್ಲವೇ; ಮೋರೆ=ಮೊಗ; ಮಬ್ಬು=ನಸುಗತ್ತಲೆ/ಮಸುಕು. ಈ ಪದ ರೂಪಕವಾಗಿ ಬಂದಿದೆ. ಕಳಾಹೀನತೆಗೆ ಸಂಕೇತವಾಗಿದೆ; ಸಂತೈಸು=ಸಾಂತ್ವನಗೊಳಿಸು/ ಸಮಾಧಾನ ಮಾಡು;

**ಮೇಣ್ ಒಬ್ಬಳೇ ಏತಕೆ ಬಂದೆ...ಮೋರೆಯ ಮಬ್ಬು ಇದೇಕೆ ಎಂದು ಎನ್ನ ಸಂತೈಸುವನೊ**=ನನ್ನ ಬಗ್ಗೆ ಕೋಪಗೊಳ್ಳುವ ಬದಲು, ಶಾಂತರೀತಿಯಿಂದ ಮಾತನಾಡಿಸುತ್ತ, ಒಬ್ಬಳೇ ಏತಕ್ಕೆ ಬಂದೆ... ಇದೇನು ಸಪ್ಪಗಿರುವೆಯಲ್ಲ... ಏಕೆ... ಏನಾಯಿತು... ಎಂದು ನನ್ನನ್ನು ಸಮಾಧಾನ ಪಡಿಸುವನೋ; ಸಾಮ= ಶಾಂತರೀತಿಯಲ್ಲಿ; ತುಬ್ಬು=ತಿಳಿಸು; **ಸಾಮದಲಿ ತುಬ್ಬುವುದೊ**=ನಾನು ಏತಕ್ಕಾಗಿ ಬಂದಿದ್ದೇನೆ ಎಂಬುದನ್ನು ಯಾವುದೇ ಉದ್ವೇಗವಿಲ್ಲದೆ ಶಾಂತಚಿತ್ತಳಾಗಿ ತಿಳಿಸುವುದೇ ಸರಿ; ನಿಬ್ಬರ=ಅತಿಶಯ; **ತಾ ಬಂದ ಬರವು ಇದು ಜನದ ಮನಕೆ ನಿಬ್ಬರವಲಾ**=ಅಡುಗೆ ಮನೆಯ ಕೆಲಸಗಾರನಾದ ಭೀಮನ ಬಳಿಗೆ ರಾಣಿವಾಸದ ದಾಸಿಯಾದ ನಾನು ಬಂದಿರುವುದನ್ನು ಇತರರು ಕಂಡರೆ ಮನದಲ್ಲಿಯೇ ಅತಿಶಯವಾಗಿ ಸಂಶಯಪಡುತ್ತಾರೆ; ವಲ್ಲಭ=ಗಂಡ; ಸಾರು=ಸಮೀಪಿಸು; **ಇನ್ನು ಎಬ್ಬಿಸಿಯೆ ನೋಡುವೆನು ಎನುತ ವಲ್ಲಭನ ಸಾರಿದಳು**=ಆದುದಾಗಲಿ... ಏಳಿಸಿ ನೋಡುತ್ತೇನೆ ಎನ್ನುತ್ತ, ಭೀಮನ ಬಳಿಸಾರಿ ಮಂಚದ ಹತ್ತಿರಕ್ಕೆ ಬಂದಳು; ಅಪ್ರತಿ=ಸರಿಸಾಟಿಯಿಲ್ಲದ; ಮಲ್ಲ=ಬಲಶಾಲಿ; ಅಪ್ರತಿಮಲ್ಲ=ಮಹಾಬಲಶಾಲಿ/ ಸರಿಸಮಾನವಾದ ಎದುರಾಳಿಗಳೇ ಇಲ್ಲದ ಜಟ್ಟಿ;

**ಮೆಲ್ಲ ಮೆಲ್ಲನೆ ಮುಸುಕ ಸಡಿಲಿಸಿ, ಗಲ್ಲವನು ಹಿಡಿದು ಅಲುಗಲು ಅಪ್ರತಿಮಲ್ಲನು ಎದ್ದನು**=ಭೀಮನ ಮೊಗದ ಮೇಲಿದ್ದ ಹೊದಿಕೆಯನ್ನು ಮೆಲ್ಲಮೆಲ್ಲನೆ ಕೆಳಕ್ಕೆ

ಜರುಗಿಸಿ, ಗಲ್ಲವನ್ನು ಹಿಡಿದು ಅತ್ತಿತ್ತ ಆಡಿಸಲು ಮಹಾಬಲಶಾಲಿಯಾದ ಭೀಮನು ಎಚ್ಚರಗೊಂಡು ಮೇಲೆದ್ದನು; ಪಾಂಚಾಲ=ಒಂದು ದೇಶದ ಹೆಸರು. ಇದರ ರಾಜ ದ್ರುಪದ. ಈತನ ಮಗಳು ದ್ರೌಪದಿ; ನಂದನೆ=ಮಗಳು; **ಪಾಂಚಾಲ ನಂದನೆಯ ನೋಡಿದನು**=ದ್ರೌಪದಿಯನ್ನು ನೋಡಿದನು; ವಲ್ಲಭೆ=ಹೆಂಡತಿ; ಬರವು+ಏನು; ಬರವು=ಆಗಮನ; **ವಲ್ಲಭೆಯೆ ಬರವೇನು**=ದ್ರೌಪದಿಯೇ ಏತಕ್ಕಾಗಿ ನನ್ನ ಬಳಿ ಬಂದೆ; ತಲ್ಲಣ=ಕಳವಳ/ಸಂಕಟ/ಉದ್ವೇಗ; ತಲೆದೋರು= ಕಾಣಿಸುವುದು/ಕಂಡುಬರುವುದು; **ಮುಖದಲಿ ತಲ್ಲಣವೆ ತಲೆದೋರುತಿದೆ**=ನಿನ್ನ ಮೊಗದಲ್ಲಿ ಸಂಕಟ, ಉದ್ವೇಗ ಮತ್ತು ತಳಮಳ ಎದ್ದುಕಾಣುತ್ತಿದೆ; ತಳುವು+ ಇಲ್ಲದೆ; ತಳುವು=ತಡಮಾಡು; ಉಸುರು=ಹೇಳು; **ತಳುವಿಲ್ಲದೆ ಉಸುರು**= ತಡಮಾಡದೆ ಬೇಗ ಹೇಳು; ಇರುಳು=ರಾತ್ರಿ; **ಇರುಳೇಕೆ ಬಂದೆ**= ರಾತ್ರಿಯ ಸಮಯದಲ್ಲಿ ಏಕೆ ಬಂದೆ;

ಲತಾ+ಅಂಗಿ; ಲತಾ=ಬಳ್ಳಿ; ಅಂಗ=ದೇಹ/ಶರೀರ; ಅಂಗಿ=ದೇಹವನ್ನು ಉಳ್ಳವಳು; ಲತಾಂಗಿ=ಬಳುಕುವ ಬಳ್ಳಿಯಂತಹ ದೇಹವನ್ನುಳ್ಳ ಸುಂದರಿ; **ಲತಾಂಗಿ ಹೇಳು**=ದ್ರೌಪದಿಯೇ ಮಾತನಾಡು; ಬಾಣಸದ ಭವನ=ಅಡುಗೆ ಮನೆ; ಸೈರಿಸು=ತಾಳು/ಸಹಿಸು; **ಬಾಣಸದ ಭವನದ ನಾರಿಯರು ಸೈರಿಸರು**=ರಾಣಿವಾಸದ ದಾಸಿಯಾದ ನೀನು ಈ ರೀತಿ ನನ್ನ ಬಳಿ ಬಂದಿರುವುದನ್ನು ಕಂಡರೆ, ಈ ಅಡುಗೆಮನೆಯಲ್ಲಿರುವ ಹೆಂಗಸರು ಸಹಿಸುವುದಿಲ್ಲ. ಅಂದರೆ ನಿನ್ನ ಮತ್ತು ನನ್ನ ಬಗ್ಗೆ ಕೆಟ್ಟನೋಟವನ್ನು ಬೀರುತ್ತಾರೆ; ದುರ್ಜನ=ಕೆಟ್ಟ ಜನ; ಖುಲ್ಲ=ನೀಚ; ಕುಠಾರ=ಕ್ರೂರಿ; **ದುರ್ಜನರು ಖುಲ್ಲ ಕುಠಾರರು**=ಇಲ್ಲಿರುವವರು ನೀಚರು, ಕ್ರೂರಿಗಳು ಮತ್ತು ಕೆಟ್ಟ ನಡೆನುಡಿಯವರು; ನಾಯಿ=ಈ ಪ್ರಾಣಿಯ ಹೆಸರು ಒಂದು ಬಯ್ಗುಳವಾಗಿ ಕನ್ನಡ ನುಡಿ ಸಮುದಾಯದಲ್ಲಿ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ವ್ಯಕ್ತಿಯ ಕೆಟ್ಟ ನಡೆನುಡಿಯನ್ನು ಸೂಚಿಸುವುದಕ್ಕೆ ನಾಯಿ ಎಂಬ ಪದವನ್ನು ಒಂದು ರೂಪಕವಾಗಿ ಬಳಸುತ್ತಾರೆ; **ಇವರು ಅರಮನೆಯ ನಾಯ್ಗಳು**= ಇವರು ರಾಜವಂಶದವರ ಗುಲಾಮರು; ದೇಶಿಗ=ದಿಕ್ಕಿಲ್ಲದವನು/ಗತಿಗೆಟ್ಟವನು/ ಪರದೇಶಿ;

**ನಾವು ದೇಶಿಗರು**=ನಾವು ಗತಿಕೆಟ್ಟವರು; ಕೆಲರು=ಅಕ್ಕಪಕ್ಕದವರು/ ನೆರೆಯವರು/ಇತರರು; ಅರಿಯದ+ಅಂತೆ+ಇರೆ; ಅರಿಯದ=ತಿಳಿಯದ; ಅಂತೆ=ಹಾಗೆ; ಇರೆ=ಇರಲು; ಭಾರ+ಇದು; ಭಾರ=ಹೊಣೆಗಾರಿಕೆ/ಜವಾಬ್ದಾರಿ; **ಕೆಲರು ಅರಿಯದಂತಿರೆ ಭಾರವಿದು**=ನಾವು ಮಾರುವೇಷದಲ್ಲಿರುವ ಪಾಂಡವರು ಎಂಬುದು ಇತರರಿಗೆ ಗೊತ್ತಾಗದಂತೆ ನಡೆದುಕೊಳ್ಳುವುದು ನಮ್ಮೆಲ್ಲರ

ಜವಾಬ್ದಾರಿಯಾಗಿದೆ; ಆರ=ಯಾರ; ದೆಸೆ+ಇಂದ; ದುಗುಡ=ವ್ಯಸನ/ಚಿಂತೆ; **ನಾರಿ ನೀ ಹೇಳು, ಇದು ಆರ ದೆಸೆಯಿಂದ ದುಗುಡವು ಆಯಿತು**=ದ್ರೌಪದಿಯೇ, ಈಗ ಹೇಳು. ನಿನಗೆ ಇಂತಹ ಅಪಮಾನವು ಯಾರ ಕಡೆಯಿಂದ ಆಯಿತು; ಎನಲು=ಎಂದು ನುಡಿಯಲು; ಇಂದುಮುಖಿ=ಚಂದ್ರನಂತಹ ಮೊಗವುಳ್ಳವಳು/ ಸುಂದರಿ; ಇಂತು=ಈ ರೀತಿ;

**ಎನಲು ಇಂದುಮುಖಿ ಇಂತು ಎಂದಳು**=ಭೀಮನು ಕೇಳಿದ ಪ್ರಶ್ನೆಗಳಿಗೆ ದ್ರೌಪದಿಯು ಈ ರೀತಿ ಹೇಳಿದಳು; ಅರೆ=ಅಪ್ಪಳಿಸು/ಹೊಡೆ; ಅಟ್ಟು=ಬೆನ್ನು ಹತ್ತಿಹೋಗು/ಹಿಂಬಾಲಿಸಿಕೊಂಡು ಬರುವುದು; ಅರೆಯಟ್ಟು=ಬೆನ್ನಟ್ಟಿಕೊಂಡು ಹೊಡೆಯುತ್ತ ಬರುವುದು; ಕುನ್ನಿ=ನಾಯಿ; **ನಿನ್ನೆ ಹಗಲು ಅರೆಯಟ್ಟಿ ಕೀಚಕ ಕುನ್ನಿ ರಾಜ ಸಭೆಯಲಿ ಒದೆದನು**=ನಿನ್ನೆಯ ದಿನ ಹಗಲು ಹೊತ್ತಿನಲ್ಲಿಯೇ ಆ ಕೀಚಕನೆಂಬ ನಾಯಿ, ಅವನ ಕಾಮದ ಕಿರುಕುಳದಿಂದ ತಪ್ಪಿಸಿಕೊಂಡು ಬರುತ್ತಿದ್ದ ನನ್ನನ್ನು ಅಟ್ಟಿಸಿಕೊಂಡು ಬಂದು ರಾಜನ ಒಡ್ಡೋಲಗದಲ್ಲಿ ಸಭಾಸದರ ಮುಂದೆಯೇ ನನ್ನನ್ನು ಒದೆದನು;

ವಂದಿಗ=ಜೊತೆಯವನು/ಸಂಗಡಿಗ; ಉಚಿತ=ಯೋಗ್ಯವಾದುದು/ ಸರಿಯಾದುದು; ಪರಿಭವ=ಅಪಮಾನ/ತಿರಸ್ಕಾರ; **ನಿನ್ನ ವಂದಿಗರು ಇರಲು ಉಚಿತವೇ ತನಗೆ ಪರಿಭವ**=ನಿನ್ನಂತಹ ಗಂಡನಿರುವಾಗ ನನಗೆ ಇಂತಹ ಅಪಮಾನ ವುಂಟಾದುದು ಸರಿಯೇ; ಬೆಂಬಳಿ=ಹಿಂಬಾಲಿಸುವುದು/ಬೆನ್ನು ಹತ್ತುವುದು; **ಎನ್ನನು ಅವ ಬೆಂಬಳಿಯ ಬಿಡ**=ನನ್ನನ್ನು ಅವನು ಹಿಂಬಾಲಿಸುವುದನ್ನು ಬಿಡುವುದಿಲ್ಲ. ಅಂದರೆ ಇನ್ನು ಮುಂದೆಯೂ ನಾನು ಆತನಿಂದ ಕಾಮದ ಹಲ್ಲೆಗೆ ಗುರಿಯಾಗಲಿದ್ದೇನೆ; **ಇನ್ನು ನಾನು ಬದುಕುವಳಲ್ಲ**=ಇಂತಹ ಹಲ್ಲೆಗೆ ಗುರಿಯಾಗಿ ನಾನು ಬದುಕುವ ಬದಲು ಸಾಯಲು ಇಚ್ಛಿಸುತ್ತೇನೆ; ಪಾತಕ=ಪಾಪ; ತಾಗು=ತಟ್ಟು/ಮುಟ್ಟು; ಮಾಣದು=ಬಿಡುವುದಿಲ್ಲ; **ಪಾತಕ ನಿನ್ನ ತಾಗದೆ ಮಾಣದು ಎನಲು**=ನನ್ನ ಸಾವಿಗೆ ಕಾರಣವಾಗುವ ಪಾಪ ನಿನ್ನನ್ನು ತಟ್ಟದೆ ಬಿಡುವುದಿಲ್ಲ ಎಂದು ದ್ರೌಪದಿಯು ಸಂಕಟದಿಂದ ನುಡಿಯಲು; ಖತಿ=ಕೋಪ/ಸಿಟ್ಟು; **ಭೀಮ ಖತಿಗೊಂಡ**=ಭೀಮನು ಕೋಪಗೊಂಡನು; ಹರಿಬ=ತೊಂದರೆ/ಕಷ್ಟ; ಉಸುರಲು+ಆಗದು; ಉಸುರು=ಮಾತು/ನುಡಿ; **ನಿನ್ನ ಹರಿಬಕೆ ಉಸುರಲಾಗದು**= ನಿನ್ನ ಕಷ್ಟ ಪರಿಹಾರಕ್ಕೆ ಈ ರೀತಿ ಮಾಡು ಇಲ್ಲವೇ ಮಾಡಬೇಡ ಎಂದು ನಾನು ಏನನ್ನೂ ಹೇಳುವುದಿಲ್ಲ; ಮಿಸುಕು=ಬಾಯಿಬಿಡು/ಉಸಿರೆತ್ತು; ಆವು+ಅಲ್ಲ; ಆವು=ನಾವು;

**ಮಿಸುಕುವವರು ಆವಲ್ಲ**=ಈ ಸನ್ನಿವೇಶದಲ್ಲಿ ನಿನ್ನ ಬಗ್ಗೆ ತಲೆಕೆಡಿಸಿ ಕೊಳ್ಳುವುದಿಲ್ಲ. ಕೀಚಕನ ಎದುರಾಗಿ ನಾನೇನು ಮಾಡಲಾಗುವುದಿಲ್ಲ; ಗಸಣಿ+ ಕೊಂಬವರು+ಅಲ್ಲ; ಗಸಣಿ=ಉಸಾಬರಿ/ತಂಟೆ; ಗಸಣಿಗೊಳ್= ಉಸಾಬರಿಯನ್ನು ತೆಗೆದುಕೊಳ್ಳುವುದು; **ಹೆಂಡಿರ ಗಸಣಿಗೊಂಬವರಲ್ಲ**= ಹೆಂಡತಿಗೆ ಬಂದಿರುವ ತೊಂದರೆಯನ್ನು ಪರಿಹರಿಸುವ ಜವಾಬ್ದಾರಿಯನ್ನು ನಾನು ವಹಿಸುಕೊಳ್ಳುವವನಲ್ಲ; ಹುದುವು=ಗುಂಪು/ಸಾಮೂಹಿಕ ಒಡೆತನಕ್ಕೆ ಸೇರಿದ್ದು; ಗಂಡತನ=ಒಂದು ಹೆಣ್ಣಿನೊಡನೆ ಮದುವೆಯಾಗಿ ಗಂಡನಾಗಿರುವುದು; **ಹುದುವಿನ ಗಂಡತನ**=ನೀನು ನನ್ನೊಬ್ಬನ ಹೆಂಡತಿಯಲ್ಲ. ನಿನಗೆ ಅಯ್ದು ಮಂದಿ ಗಂಡಂದಿರಿದ್ದಾರೆ; ಶಶಿ=ಚಂದ್ರ; ವದನ=ಮೊಗ; ಶಶಿವದನೆ=ಬೆಳಗುತ್ತಿರುವ ಚಂದ್ರನಂತಹ ಮೊಗವನ್ನುಳ್ಳ ಸುಂದರಿ; ಸುಡು=ಬೆಂಕಿಯನ್ನು ಹಾಕು. ಕೋಪ, ಹತಾಶೆ, ಆಕ್ರೋಶವನ್ನು ವ್ಯಕ್ತಪಡಿಸುವಾಗ ಬಳಸುವ ಪದ;

**ಇದನು ಶಶಿವದನೆ ಸುಡು**=ಅಯ್ದು ಮಂದಿ ಗಂಡಂದಿರನ್ನು ಪಡೆದಿರುವ ಈ ವ್ಯವಸ್ಥೆಗೆ ಬೆಂಕಿಹಾಕು; ಅಪದೆಸೆ=ಹೀನ ಸ್ಥಿತಿ; **ಈ ಕಷ್ಟ ಅಪದೆಸೆಯವರು ನಾವಲ್ಲ**= ನಿನಗೆ ಬಂದಿರುವ ಕಷ್ಟಕ್ಕಾಗಲಿ ಇಲ್ಲವೇ ಹೀನ ಸ್ಥಿತಿಗಾಗಲಿ ನಾನು ಕಾರಣನಲ್ಲ. ಈಗ ನಿನಗೆ ಬಂದಿರುವ ಆಪತ್ತನ್ನು ಹೋಗಲಾಡಿಸಲು ನಾನು ಮುಂದಾಗುವುದಿಲ್ಲ; ಅಸಮ=ಸರಿಸಾಟಿಯಿಲ್ಲದ; **ನಿನ್ನವರು ಅಸಮ ಸಾಹಸರು**= ನಿನ್ನ ಗಂಡಂದಿರು ಮಹಾ ಪರಾಕ್ರಮಿಗಳು; ಅರುಹು=ತಿಳಿಸು; **ಉಳಿದ ನಾಲ್ವರಿಗೆ ಅರುಹು ಹೋಗು**=ಉಳಿದ ನಾಲ್ಕು ಮಂದಿ ಗಂಡಂದಿರ ಮುಂದೆ ಹೋಗಿ ನಿನಗೆ ಬಂದಿರುವ ಆಪತ್ತನ್ನು ತಿಳಿಸು; ರಮಣ=ಗಂಡ; ರಮಿಸು=ದೇಹದೊಡನೆ ಕಾಮದ ನಂಟನ್ನು ಪಡೆದು ಆನಂದಿಸುವುದು; ಮಾನ+ಅರ್ಥ+ಎನೆ; ಮಾನ= ಮರ್ಯಾದೆ/ಶೀಲ/ಚಾರಿತ್ರ್ಯ; ಅರ್ಥ=ವಿಚಾರ/ಸಂಗತಿ; ಮಾನಾರ್ಥ= ಮರ್ಯಾದೆಯನ್ನು ಕಾಪಾಡುವ ವಿಚಾರ;

ನಿರ್ಗಮಿಸು=ಹೊರಡುವುದು; **ರಮಣ ಕೇಳು, ಉಳಿದವರು ತನ್ನನು ರಮಿಸುವರು. ಮಾನಾರ್ಥವೆನೆ ನಿರ್ಗಮಿಸುವರು**=ರಮಣನೇ ಕೇಳು, ಉಳಿದ ನಾಲ್ವರು ನನ್ನ ದೇಹದೊಡನೆ ಕಾಮದ ನಂಟನ್ನು ಪಡೆದು ಆನಂದಿಸುತ್ತಾರೆಯೇ ಹೊರತು, ನನ್ನ ಮಾನಪ್ರಾಣಕ್ಕೆ ಆಪತ್ತು ಬಂದಾಗ ದೂರಸರಿಯುತ್ತಾರೆ; ಉಚಿತ=ಯೋಗ್ಯವಾದುದು; ಬಾಹಿರ=ಹೊರತಾದುದು/ಸಂಬಂಧವಿಲ್ಲದುದು; ಉಚಿತ ಬಾಹಿರರು=ಜವಾಬ್ದಾರಿಯಿಂದ ದೂರಸರಿಯುವವರು; **ನೀನಲ್ಲದೆ ಉಳಿದವರು ಉಚಿತ ಬಾಹಿರರು**=ನೀನಲ್ಲದೆ ಉಳಿದವರು ನನ್ನ ಮಾನಪ್ರಾಣವನ್ನು ಕಾಪಾಡಲು ಮುಂದೆ ಬರುವುದಿಲ್ಲ;

**ಮಮತೆಯಲಿ ನೀ ನೋಡು**=ಪ್ರೀತಿ ಮತ್ತು ಕರುಣೆಯಿಂದ ನನ್ನನ್ನು ಕಂಡು ಕಾಪಾಡು; ಚಿತ್ತ=ಮನಸ್ಸು; ಸಮತೆ=ನೆಮ್ಮದಿ; ಚಿತ್ತದ ಸಮತೆ= ಕೋಪೋದ್ರೇಕಗೊಳ್ಳದೆ ಶಾಂತರೀತಿಯಲ್ಲಿರುವುದು; **ಚಿತ್ತದ ಸಮತೆಯನು ಬೀಳ್ಕೊಡು**=ಇಂತಹ ಸನ್ನಿವೇಶದಲ್ಲಿ ಪ್ರಶಾಂತನಾಗಿರಬೇಡ. ನನಗೆ ಬಂದಿರುವ ಆಪತ್ತನ್ನು ಪರಿಹರಿಸಲು ಶೂರತನದಿಂದ ಮುಂದೆ ಬಾ; ಕುಠಾರ=ಕ್ರೂರಿ; ಯಮನ ಕಾಣಿಸು=ಇದೊಂದು ನುಡಿಗಟ್ಟು. ಕೊಲ್ಲು ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ;

**ಕುಠಾರನ ಯಮನ ಕಾಣಿಸಿ ಕರುಣಿಸು ಎಂದಳು ಕಾಂತೆ ಕೈಮುಗಿದು**= ಕ್ರೂರಿಯಾದ ಕೀಚಕನನ್ನು ಕೊಂದು, ನನ್ನ ಮೇಲೆ ಕರುಣೆಯನ್ನು ತೋರಿಸು ಎಂದು ದ್ರೌಪದಿಯು ಭೀಮನಿಗೆ ಕಯ್ ಮುಗಿದು ಬೇಡಿಕೊಂಡಳು; ಕಲಹಕೆ+ಆದೊಡೆ; ಕಲಹ=ಜಗಳ/ಹೊಡೆದಾಟ/ಕಾಳೆಗ; ಆದೊಡೆ=ಆದರೆ; ರಮಿಸು=ದೇಹದೊಡನೆ ಕಾಮದ ನಂಟನ್ನು ಪಡೆದು ಆನಂದಿಸುವುದು; **ಕಲಹಕಾದೊಡೆ ನಾವು, ರಮಿಸುವರು ಉಳಿದವರು**=ಯಾರಿಂದಲಾದರೂ ಆಪತ್ತು ಬಂದಾಗ ನಿಮ್ಮೆಲ್ಲರನ್ನು ಕಾಪಾಡುವುದಕ್ಕಾಗಿ ನಾನೊಬ್ಬನೇ ಹಗೆಯ ಎದುರು ಹೋರಾಡುತ್ತೇನೆ. ಉಳಿದ ನಾಲ್ವರು ನಿನ್ನೊಡನೆ ರಮಿಸುತ್ತಾರೆ; **ಬಳಿಕೇನು ಗಾದೆಯ ಬಳಕೆ**=ಇನ್ನೇನು ಹೇಳುವುದು. ಒಂದು ಗಾದೆಯ ಮಾತು ಜನರ ಬಾಯಲ್ಲಿ ಇದೆಯಲ್ಲವೇ;ಕೆಲಬರು=ಹಲವರು; ಗಳಿಸು=ಶ್ರಮಪಟ್ಟು ದುಡಿದು ಸಂಪಾದಿಸು; ಗಳಿಸಿದೊಡೆ=ಗಳಿಸಿದರೆ; ಉಂಡು=ತಿಂದು; ಜಾರು= ನುಣುಚಿಕೊಳ್ಳು;

**ಕೆಲಬರು ಗಳಿಸಿದೊಡೆ ಕೆಲರು ಉಂಡು ಜಾರುವರು**=ಹಲವರು ಶ್ರಮಪಟ್ಟು ದುಡಿದು ಸಂಪತ್ತನ್ನು ಗಳಿಸಿದರೆ, ಆ ಸಂಪತ್ತಿನಿಂದ ಇನ್ನಿತರರು ಆನಂದವನ್ನು ಹೊಂದುತ್ತ, ಶ್ರಮಪಟ್ಟು ದುಡಿದವರಿಗೆ ಆಪತ್ತು ಬಂದಾಗ ಯಾವ ಜವಾಬ್ದಾರಿಯನ್ನು ಹೊರದೆ ನುಣುಚಿಕೊಳ್ಳುತ್ತಾರೆ. ಪಾಂಡವರ ಕುಟುಂಬಕ್ಕೆ ಆಪತ್ತು ಬಂದಾಗ ನಾನೊಬ್ಬನೇ ಹೋರಾಡಿ ಕಾಪಾಡುತ್ತೇನೆ. ಉಳಿದವರೆಲ್ಲರೂ ಯಾವುದೇ ತೊಂದರೆಯನ್ನು ತೆಗೆದುಕೊಳ್ಳದೆ ಆರಾಮವಾಗಿರುತ್ತಾರೆ ಎಂಬ ತಿರುಳನ್ನು ಈ ಗಾದೆ ಮಾತು ಸೂಚಿಸುತ್ತಿದೆ;

ಹಳಿವು=ತೊಂದರೆ; ಹರಿಬ=ಸಂಕಟ; ಚಿತ್ತ=ಮನಸ್ಸು; ತಿಳುಹು=ಸಮಾಧಾನ; **ನಿನ್ನಯ ಹಳಿವು ಹರಿಬವ ಹೇಳಿ ಚಿತ್ತವ ತಿಳುಹಿಕೊಂಬುದು**=ನಿನ್ನ ನೋವು ಸಂಕಟ ಅಪಮಾನವನ್ನೆಲ್ಲಾ ನನ್ನ ಮುಂದೆ ತೋಡಿಕೊಂಡು, ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳುವುದು; ಧರ್ಮಜ=ಧರ್ಮರಾಯ; ಹೊರೆ=ಜವಾಬ್ದಾರಿ;

ಭೀತ=ಹೆದರುವವನು; **ಧರ್ಮಜನ ಹೊರೆ=** ಅಜ್ಞಾತವಾಸದಲ್ಲಿರುವ ಪಾಂಡವರ ಗುಟ್ಟು ಯಾವುದೇ ಸನ್ನಿವೇಶದಲ್ಲಿಯೂ ಬಯಲಾಗಬಾರದು ಎಂಬ ಧರ್ಮರಾಯನ ಆದೇಶವನ್ನು ಪಾಲಿಸುವ ಜವಾಬ್ದಾರಿ;

**ಧರ್ಮಜನ ಹೊರೆಗೆ ನಾವು ಭೀತರು**=ಧರ್ಮರಾಯನ ಆದೇಶಕ್ಕೆ ನಾವು ಅಂಜುತ್ತೇವೆ; ಅಳುಕು=ಹೆದರು/ನಡುಗು; **ಅಳುಕಿ ನಡೆವವರಲ್ಲ**=ಅಣ್ಣನಿಗೆ ಅಂಜಿಕೊಂಡು ಅವನಿಗೆ ಒಪ್ಪಿಗೆಯಾಗದ ಯಾವುದೇ ಕೆಲಸವನ್ನು ಮಾಡುವವರಲ್ಲ; ಹರಿಬ=ಸಂಕಟ; ಗಂಡು+ಕೂಸು; ಗಂಡುಗೂಸು=ಒಬ್ಬನೇ ವ್ಯಕ್ತಿ; ವೈರಿ=ಶತ್ರು/ಹಗೆ; ಕಡಿ=ಕತ್ತರಿಸು/ಸೀಳು; ಖಂಡ=ತುಂಡು/ಚೂರು; ಮೇಣ್=ಇಲ್ಲವೇ; ಒಡಲು=ದೇಹ; ಇಕ್ಕು=ಕೊಡು/ನೀಡು; **ಹೆಂಡತಿಯ ಹರಿಬದಲಿ ಒಬ್ಬನೆ ಗಂಡುಗೂಸೇ ವೈರಿಯನು ಕಡಿ ಖಂಡವನು ಮಾಡುವನು ಮೇಣ್ ತನ್ನ ಒಡಲನು ಇಕ್ಕುವನು**=ತನ್ನ ಹೆಂಡತಿಯ ಮಾನಪ್ರಾಣಗಳಿಗೆ ಆಪತ್ತು ಬಂದಾಗ ಅವಳ ಗಂಡನೊಬ್ಬನೇ ಶತ್ರುವನ್ನು ಕಡಿದು ತುಂಡುತುಂಡು ಮಾಡುತ್ತಾನೆ ಇಲ್ಲವೇ ಶತ್ರುವಿನ ಎದುರಾಗಿ ಹೋರಾಡುತ್ತ ತನ್ನ ಪ್ರಾಣವನ್ನು ಒಪ್ಪಿಸುತ್ತಾನೆ; ಗಂಡರ=ಶೂರರು/ಪರಾಕ್ರಮಿಗಳು; ಮೂರು ಲೋಕ= ದೇವಲೋಕ–ಭೂಲೋಕ–ಪಾತಾಳಲೋಕ ಎಂಬ ಮೂರು ಲೋಕಗಳಿವೆ ಎಂಬ ಕಲ್ಪನೆ ಜನಸಮುದಾಯದ ಮನದಲ್ಲಿದೆ; ಆಳು=ಕಾಪಾಡು; **ಗಂಡರು ಐವರು ಮೂರು ಲೋಕದ ಗಂಡರು ಒಬ್ಬಳನು ಆಳಲಾರಿರಿ**=ನನ್ನ ಗಂಡಂದಿರಾದ ನೀವು ಅಯ್ವರು ಮೂರು ಲೋಕಗಳಲ್ಲಿಯೇ ಪರಾಕ್ರಮಿಗಳೆಂಬ ಹೆಸರನ್ನು ಪಡೆದಿದ್ದೀರಿ. ಆದರೆ ನಿಮ್ಮೆಲ್ಲರ ಒಬ್ಬಳೇ ಹೆಂಡತಿಯಾದ ನನ್ನನ್ನು ಆಪತ್ತಿನಿಂದ ಕಾಪಾಡಲಾರಿರಿ;

ಭಂಡ=ಮಾನ ಮರ್ಯಾದೆಯಿಲ್ಲದವನು/ಲಜ್ಜೆಗೇಡಿ/ಎಂತಹ ಅವಮಾನ ವಾದರೂ ಅದನ್ನು ಸಹಿಸಿಕೊಂಡು ತನ್ನ ಹೊಟ್ಟೆಪಾಡಿಗಾಗಿ ಮತ್ತು ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ಬಾಳುವವನು; **ಗಂಡರೋ ನೀವ್ ಭಂಡರೋ ಹೇಳು**=ನೀನೇ ಹೇಳು... ನೀವೇನು ನನ್ನ ಗಂಡಂದಿರೋ ಇಲ್ಲವೇ ಲಜ್ಜೆಗೇಡಿಗಳೋ; ಅಂದು=ಧರ್ಮರಾಯ ಮತ್ತು ದುರ್ಯೋಧನನ ನಡುವೆ ನಡೆದ ಪಗಡೆಯಾಟದ ಜೂಜಿನ ದಿನದಂದು; ಉನ್ನತಿ=ಅಧಿಕಾರ ಹಾಗೂ ಸಿರಿವಂತಿಕೆಯ ಸೊಕ್ಕಿನಿಂದ ಮೆರೆಯುತ್ತ, ಇತರರಿಗಿಂತ ಮೇಲುಗಯ್ ಪಡೆಯುವುದು; **ಅಂದು ಕೌರವ ನಾಯಿ ಸಭೆಯಲಿ ಉನ್ನತಿಯ ತಂದು ತೋರಿದನು**=ಜೂಜಿನ ದಿನದಂದು ತುಂಬಿದ ಒಡ್ಡೋಲಗದಲ್ಲಿ ಆ ದುರ್ಯೋಧನನೆಂಬ ನಾಯಿ ಅಧಿಕಾರದ ಸೊಕ್ಕಿನಿಂದ ತನ್ನ ತಮ್ಮನಾದ

ದುಶ್ಯಾಸನನಿಂದ ಒಡ್ಡೋಲಗಕ್ಕೆ ನನ್ನನ್ನು ಮುಡಿಯೆಳೆದು ಎಳೆತರಿಸಿ, ನನ್ನ ಸೀರೆಯನ್ನು ಸುಲಿಸಿ ಅಪಮಾನ ಮಾಡಿ ಮೆರೆದನು;

**ಬಳಿಕ ಇಂದು ಕೀಚಕ ಕುನ್ನಿ ರಾಜ ಸಭೆಯೊಳಗೆ ಒದೆದನು**=ಅನಂತರ ಇಂದು ಕೀಚಕನೆಂಬ ನಾಯಿಯು ರಾಜಸಭೆಯೊಳಗೆ ಸಭಾಸದರ ಮುಂದೆ ನನ್ನ ಒದ್ದು ಹಲ್ಲೆ ಮಾಡಿದನು; ಮೇಣ್=ಮತ್ತು; ಕುಂದು=ಕೀಳಾದುದು/ಹೀನವಾದುದು; ಆವುದು=ಯಾವುದು; **ಅಂದು ಮೇಣ್ ಇಂದು ಆದ ಭಂಗಕೆ ಕುಂದು ಅದು ಆವುದು**=ಅಂದು ಮತ್ತು ಇಂದು ಈ ಎರಡು ಸನ್ನಿವೇಶಗಳಲ್ಲಿಯೂ ನನಗೆ ಉಂಟಾದ ಅಪಮಾನಕ್ಕೆ ಕಾರಣವೇನು. ಯಾರ ಹೇಡಿತನದಿಂದ ನನಗೆ ಇಂತಹ ಸ್ಥಿತಿಯು ಬಂದೊದಗಿತು; ಬಲ್ಲಿದರು=ಶಕ್ತರು/ಪರಾಕ್ರಮಿಗಳು; ಹೊಕ್ಕರೆ=ಆಶ್ರಯವನ್ನು ಪಡೆದರೆ;

**ನೀವು ಬಲ್ಲಿದರು ಎಂದು ಹೊಕ್ಕರೆ ಹೆಣ್ಣ ಕೊಂದಿರಿ**=ನೀವು ಪಾಂಡವರು ಮಹಾಪರಾಕ್ರಮಿಗಳು ಎಂದು ನಿಮ್ಮನ್ನು ನಾನು ವರಿಸಿದರೆ, ಹೆಂಡತಿಯಾದ ನನ್ನ ಮಾನಪ್ರಾಣವನ್ನೇ ಕಡೆಗಣಿಸಿದ್ದೀರಿ; ದಾನವ=ರಕ್ಕಸ; ಎನ್ನ=ನನ್ನ; ಅಭಿಮಾನ=ಹಿರಿಮೆ/ಅಗ್ಗಳಿಕೆ/ಹೆಮ್ಮೆ; ಕೊಳ್=ಅಪಹರಿಸು/ಕಿತ್ತುಕೊಳ್ಳು; ಏನನು+ಎಂಬೆನು; **ದಾನವರು ಮಾನವರೊಳು ಎನ್ನ ಅಭಿಮಾನವನು ಕೊಂಬವನ ಹೆಸರನು ಅದು ಏನನೆಂಬೆನು**=ರಕ್ಕಸರಲ್ಲಿ ಇಲ್ಲವೇ ಮಾನವರಲ್ಲಿ ಮಹಾಬಲಶಾಲಿ ಭೀಮನೆಂಬ ನನ್ನ ಹಿರಿಮೆಗೆ ಸವಾಲನ್ನೊಡ್ಡುವ ವ್ಯಕ್ತಿಯು ಯಾರಿದ್ದಾನೆ. ಅಂತಹ ಹೆಸರಿನವನು ಯಾರೊಬ್ಬನೂ ಇಲ್ಲ; ಖಾತಿ=ಕೋಪ/ಸಿಟ್ಟು; **ನೊಂದು ನುಡಿದೊಡೆ ಎಮಗೆ ಖಾತಿಯಿಲ್ಲ**=ನೀನು ಸಂಕಟದಿಂದ ನನ್ನನ್ನು ಎಷ್ಟೇ ಹಂಗಿಸಿ ನುಡಿದರೂ ನಾನು ಕೋಪಿಸಿಕೊಳ್ಳುವುದಿಲ್ಲ; ನಪುಂಸಕರ+ಒಡನೆ; ನಪುಂಸಕ=ಗಂಡೂ ಅಲ್ಲದ ಹೆಣ್ಣು ಅಲ್ಲದ ಮಾನವ ಜೀವಿ/ಬಲಹೀನ/ದುರ್ಬಲ;

ಮೂಗುಳ್ಳವನು=ಮಾನವಂತ/ಸ್ವಾಭಿಮಾನಿ/ಆತ್ಮಗೌರವವುಳ್ಳವನು; ಮಾನಿನಿ= ಹೆಂಗಸು; **ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ ಮಾನಿನಿ=** ದ್ರೌಪದಿ, ಇಂತಹ ಬಲಹೀನರಾದ ಸೋದರರೊಡನೆ ಹುಟ್ಟಿರುವ ನಾನು ಮಾನವಂತನೇ. ಇವರ ನಡುವೆ ನಾನು ಅಸಹಾಯಕನಾಗಿದ್ದೇನೆ; ತೋರು= ಕಾಣು/ಗೋಚರವಾಗು; ಪರಿ=ರೀತಿ; ಎಂಬುದು=ನುಡಿಯುವುದು; ಭೀತ= ಹೆದರಿಕೆ; **ನೀನು ತೋರಿದ ಪರಿಯಲಿ ಎಂಬುದು...ಭೀತಿ ಬೇಡ**=ನಿನಗೆ ಏನೇನು ಬಯ್ಯಬೇಕೆಂದು ಅನಿಸುತ್ತದೆಯೋ ಆ ರೀತಿಯಲ್ಲಿ ಮಾತನಾಡು. ನಿನ್ನ ಸಂಕಟವನ್ನು ತೋಡಿಕೊಳ್ಳುವುದಕ್ಕೆ ಹಿಂಜರಿಕೆ ಬೇಡ;

ದುಶ್ಯಾಸನ=ದುರ್ಯೋಧನನ ತಮ್ಮ. ದ್ಯೂತದ ಪ್ರಸಂಗದಲ್ಲಿ ದ್ರೌಪದಿಯನ್ನು ರಾಣಿವಾಸದಿಂದ ದುರ್ಯೋಧನನ ರಾಜಸಭೆಗೆ ಎಳೆತಂದು, ಅವಳ ಮುಡಿಗೆ ಕಯ್ ಇಕ್ಕಿ, ಸೀರೆಯನ್ನು ಸುಲಿದು ಅಪಮಾನ ಮಾಡಿದ್ದವನು; **ತಿಂದಡಲ್ಲದೆ**= ತಿನ್ನದೆ ಹೋದರೆ; ತಣಿವು=ಸಮಾಧಾನ; ದೊರಕೊಳ್=ಸಿಗು; ಹಾಯ್= ಮುಂದೆ ನುಗ್ಗು/ಮೇಲೆ ಬೀಳು; ವ್ಯಥೆ=ನೋವು/ಯಾತನೆ; ಹಲ್ಲು+ಕಿರಿ; ಕಿರಿ=ತೆರೆ; ಹಲುಗಿರಿದು=ಹಲ್ಲುಗಳನ್ನು ತೆರೆದು; ಹಲುಗಿರಿ=ಹಲ್ಲುಗಿರಿ=ನಗು, ಸಂಕಟ, ದೀನತೆ, ನೋವು ಮುಂತಾದ ಒಳಮಿಡಿತಗಳನ್ನು ಸೂಚಿಸುವಾಗ ಹಲ್ಲು ಬಿಡುವುದು;

**ಅಂದು ದುಶ್ಯಾಸನನ ಕರುಳನು ತಿಂದಡಲ್ಲದೆ ತಣಿವು ದೊರೆಕೊಳದೆಂದು ಎಂದು ಹಾಯ್ದೊಡೆ, ಆ ವ್ಯಥೆಯ ಹಲುಗಿರಿದು ಮಾಣಿಸಿದನು**=ಅಂದು ದುರ್ಯೋಧನನ ಒಡ್ಡೋಲಗದಲ್ಲಿ ನಿನ್ನನ್ನು ಅಪಮಾನಿಸಿದ ದುಶ್ಯಾಸನನ ಕರುಳನ್ನು ಬಗೆದು ತಿಂದಲ್ಲದೆ ನನಗೆ ಸಮಾಧಾನವಾಗದೆಂದು ಕೊಲ್ಲಲು ಮುನ್ನುಗ್ಗುತ್ತಿದ್ದಾಗ, ಅಣ್ಣನಾದ ಧರ್ಮರಾಯನು ದೀನತೆಯಿಂದ ನನ್ನತ್ತ ನೋಡುತ್ತ ದುಶ್ಯಾಸನನ್ನು ಕೊಲ್ಲದಂತೆ ತಡೆದನು ; ಎರಗು=ಮೇಲೆ ಬೀಳು; ಹದನು=ರೀತಿ/ನಿಲುವು;

**ಇಂದು ಕೀಚಕ ನಾಯನು ಎರಗುವೆನು ಎಂದು ಮರನನು ನೋಡಿದರೆ ಬೇಡ ಎಂದ ಹದನನು ನೀನು ಕಂಡೆ**=ವಿರಾಟರಾಯನ ಒಡ್ಡೋಲಗದಲ್ಲಿ ನಿನ್ನ ಮೇಲೆ ಹಲ್ಲೆ ಮಾಡಿದ ದುರುಳ ಕೀಚಕನನ್ನು ಮರದ ಕೊಂಬೆರೆಂಬೆಗಳಿಂದಲೇ ಸದೆಬಡಿಯಲೆಂದು ಸಿದ್ಧನಾಗುತ್ತಿದ್ದಾಗ, ಆ ರೀತಿ ಮಾಡಬೇಡ ಎಂದು ಧರ್ಮರಾಯನು ತಡೆದ ರೀತಿಯನ್ನು ನೀನೇ ಕಂಡಿರುವೆ; ಅಪರಾಧ=ತಪ್ಪು; **ಎನಗುಂಟೆ ಅಪರಾಧ**=ನನ್ನಲ್ಲಿ ಏನಾದರೂ ತಪ್ಪಿದೆಯೇ; ಹರಿಬಕ್ಕೆ+ಓಸುಗವೆ; ಹರಿಬ=ಕಾಪಾಡುವಿಕೆ/ತೊಂದರೆ; ಓಸುಗ=ಸಲುವಾಗಿ/ಕಾರಣಕ್ಕಾಗಿ/ಅದಕ್ಕಾಗಿ; ಚಿಣ್ಣ=ಚಿಕ್ಕ ವಯಸ್ಸಿನವನು; ಕುಂತಿಯ ಚಿಣ್ಣ=ಭೀಮ; ಕುಜನರು+ಆದವರು; ಕುಜನ=ಕೆಟ್ಟ ನಡೆನುಡಿಯ ಜನರು; **ಹೆಣ್ಣ ಹರಿಬಕ್ಕೊಸುಗವೆ ತಮ್ಮಣ್ಣನ ಆಜ್ಞೆಯ ಮೀರಿ ಕುಂತಿಯ ಚಿಣ್ಣ ಬದುಕಿದನು ಎಂದು ಕುಜನರಾದವರು ನುಡಿವರು**=ಕೇವಲ ಒಂದು ಹೆಣ್ಣನ್ನು ಕಾಪಾಡುವುದಕ್ಕಾಗಿ ತನ್ನ ಅಣ್ಣನ ಅಪ್ಪಣೆಯನ್ನು ಭೀಮನು ಮೀರಿದನು ಎಂದು ಕೆಟ್ಟಜನರು ಆಡಿಕೊಳ್ಳುತ್ತಾರೆ; ದೂರು=ಮೊರೆಹೊಗು/ ಅಹವಾಲು;

**ಅಣ್ಣನವರಿಗೆ ದೂರುವುದು**=ದ್ರೌಪದಿಯೇ, ನಿನಗೆ ಬಂದಿರುವ ಸಂಕಟವನ್ನು ಅಣ್ಣನವರ ಮುಂದೆ ಹೇಳಿಕೊಳ್ಳುವುದು; ಉಣ್ಣದುರಿ+ಇವು; ಉಣ್= ಅನುಭವಿಸು; ಉರಿ=ಸುಡು/ಸುಟ್ಟುಹೋಗು; ಉಣ್ಣದುರಿ=ಇದೊಂದು ನುಡಿಗಟ್ಟು. ಪರಿಹರಿಸಲಾಗದ ಕಷ್ಟದ ಕೆಲಸ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; **ಇವು ನಾವು**

**ಉಣ್ಣದುರಿ**=ಈಗ ನಿನಗೆ ಬಂದಿರುವ ಕಷ್ಟವನ್ನು ನನ್ನಿಂದ ಪರಿಹರಿಸಲು ಆಗುವುದಿಲ್ಲ; ರಾಯ=ಅಣ್ಣ ಧರ್ಮರಾಯ; ಆಜ್ಞೆ=ಅಪ್ಪಣೆ; **ರಾಯನ ಆಜ್ಞೆ**= ಜೂಜಾಟದ ಕಟ್ಟಲೆಯಂತೆ ಅಜ್ಞಾತವಾಸದಲ್ಲಿರುವ ಪಾಂಡವರಾದ ನಾವು ಎಂತಹ ಆಪತ್ತು ಬಂದರೂ ಅದನ್ನು ಸಹಿಸಿಕೊಳ್ಳಬೇಕೆ ಹೊರತು, ನಮ್ಮ ಗುಟ್ಟನ್ನು ಹೊರಗೆಡಹುವಂತಹ ಕೆಲಸವನ್ನು ಮಾಡಬಾರದು ಎಂಬ ಧರ್ಮರಾಯನ ಮಾತು; ಕಣ್ಣಿ=ಹಗ್ಗ; ಬಿಗಿ+ಪಡೆದು; ಬಿಗಿ=ಕಟ್ಟು/ಬಂಧಿಸು; ಪಡೆದು=ಹೊಂದಿ; ಕೆಡೆ=ಉರುಳು/ಬೀಳು/ಕುಸಿ;

**ರಾಯನ ಆಜ್ಞೆಯ ಕಣ್ಣಿಯಲಿ ಬಿಗಿವಡೆದು ಕೆಡೆದೆವು**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಅಣ್ಣ ಧರ್ಮರಾಯನ ಅಪ್ಪಣೆಯೆಂಬ ಕಟ್ಟಲೆಯ ಹಗ್ಗದಲ್ಲಿ ಬಿಗಿಸಿಕೊಂಡು ಕುಸಿದು ಬಿದ್ದಿದ್ದೇನೆ. ಈಗ ನಿನಗಾಗಿ ಏನನ್ನೂ ಮಾಡಲಾರದವನಾಗಿದ್ದೇನೆ. ಈಗ ನಾನು ಬಲಹೀನನೇ ಹೊರತು ಬಲಶಾಲಿಯಲ್ಲ; ಕಾಂತೆ=ಹೆಂಗಸು; ಫಲುಗುಣ=ಅರ್ಜುನ; ಹೊದ್ದು= ಬಳಿಸಾರು/ಹತ್ತಿರ ಹೋಗು; **ಕಾಂತೆ ಕೇಳು, ಫಲುಗುಣನ ಹೊದ್ದುವುದು**= ದ್ರೌಪದಿಯೇ ಕೇಳು, ನೀನು ಅರ್ಜುನ ಬಳಿಸಾರಿ ನಿನ್ನ ಸಂಕಟವನ್ನು ಹೇಳಿಕೊಳ್ಳುವುದು; ಯಮನಂದನ=ಧರ್ಮರಾಯ; ತಿದ್ದು=ಸರಿಪಡಿಸು;

**ಯಮನಂದನನ ಪಾದಕೆ ಬಿದ್ದು ಮನವನು ತಿದ್ದುವುದು**=ಧರ್ಮರಾಯನ ಪಾದಕ್ಕೆ ನಮಿಸಿ ಅಂದರೆ ಅವನಲ್ಲಿ ಮೊರೆಯಿಟ್ಟು, ಜೂಜಿನ ಕಟ್ಟಲೆಗಿಂತ ಒಂದು ಹೆಣ್ಣಿನ ಮಾನಪ್ರಾಣವನ್ನು ಕಾಪಾಡುವುದು ದೊಡ್ಡದೆಂದು ಅವನಿಗೆ ಮನವರಿಕೆ ಮಾಡುವುದು; ಎನಿಸು=ಹೇಳಿಸು; **ಸಹದೇವ ನಕುಲರ ಕೈಯಲಿ ಎನಿಸುವುದು**= ಆಪತ್ತಿನಲ್ಲಿ ಸಿಲುಕಿರುವ ನಿನ್ನನ್ನು ಕಾಪಾಡುವುದು ಬಲುದೊಡ್ಡ ಕೆಲಸವೆಂದು **ಸಹದೇವ ನಕುಲರಿಂದ ಧರ್ಮರಾಯನಿಗೆ ಹೇಳಿಸು; ಗೆದ್ದು ಕೊಡುವರು**= ಅವರೆಲ್ಲರೂ ಜತೆಗೂಡಿ ಅಂದರೆ ಧರ್ಮರಾಯ, ಅರ್ಜುನ, ನಕುಲ, ಸಹದೇವರು ಕೀಚಕನನ್ನು ಸದೆಬಡಿದು ನಿನ್ನ ಮಾನಪ್ರಾಣವನ್ನು ಕಾಪಾಡುತ್ತಾರೆ;

ಪಾಲಿಸು=ಕಾಪಾಡು/ಸಲಹು; ಇದ್ದರು+ಆದಡೆ; ಆದಡೆ=ಆದರೆ; ಹೊದ್ದು=ತಟ್ಟು/ತಾಕು/ಹತ್ತು; **ನಿನ್ನ ಪಾಲಿಸದೆ ಇದ್ದರಾದೊಡೆ ದೋಷವು ಅವರನು ಹೊದ್ದುವುದು**=ನಿನ್ನನ್ನು ಕಾಪಾಡದೆ ಅವರು ತಮ್ಮ ಪಾಡಿಗೆ ತಾವು ತೆಪ್ಪಗಿದ್ದರೆ, ಆ ನಾಲ್ವರಿಗೆ ಪಾಪ ತಟ್ಟುತ್ತದೆ; ಎನ್ನ=ನನ್ನನ್ನು; ಬರಿದೇ=ಸುಮ್ಮನೆ; ಕಾಡು=ಪೀಡಿಸು/ ಹಿಂಸಿಸು; **ನೀನು ಎನ್ನ ಬರಿದೇ ಕಾಡ ಬೇಡ**=ನೀನು ನನ್ನನ್ನು ಸುಮ್ಮನೆ ಪೀಡಿಸಬೇಡ; ಗಂಡ=ಪರಾಕ್ರಮ/ಶೂರತನ; ಗರ್ವ=ಸೊಕ್ಕು; **ಗಂಡ ಗರ್ವವ ನುಡಿಯೆವು**=ನಾನು ಮಹಾಪರಾಕ್ರಮಿ ಎಂಬ ಸೊಕ್ಕಿನ ಮಾತನ್ನಾಡುವುದಿಲ್ಲ;

ಎಮ್ಮಯ=ನಮ್ಮ; ದಂಡಿ=ಶಕ್ತಿ/ಬಲ;

**ಎಮ್ಮಯ ದಂಡಿ ತಾನದು ಬೇರೆ**=ನನ್ನ ಬಲದ ರೀತಿಯ ಬೇರೆ. ಅಂದರೆ ಉಳಿದ ನಾಲ್ವರಂತಲ್ಲ; ಭಂಡತನ=ಹೊಟ್ಟೆಪಾಡಿಗಾಗಿ ಮತ್ತು ಪ್ರಾಣದ ಉಳಿವಿಗಾಗಿ ಮಾನ ಮರ್ಯಾದೆಯನ್ನು ಕಳೆದುಕೊಂಡು ಬಾಳುವ ಕೀಳು ನಡೆನುಡಿ; **ನಾವು ಈ ಭಂಡತನದಲಿ ಬದುಕಲು ಅರಿಯೆವು**=ಈ ರೀತಿ ಮಾನ ಮರ್ಯಾದೆಯನ್ನು ಕಳೆದುಕೊಂಡು ಏಕೆ ಬಾಳಬೇಕು ಎಂಬುದೇ ನನಗೆ ತಿಳಿಯುತ್ತಿಲ್ಲ; **ಧರ್ಮಗಿರ್ಮ**=ಕೋಪ, ಬೇಸರ, ಹಾಸ್ಯ ಇಲ್ಲವೇ ಅಸಹ್ಯವಾದ ಭಾವನೆಯನ್ನು ವ್ಯಕ್ತಪಡಿಸುವಾಗ ಈ ರೀತಿ ಮೊದಲು ಉಚ್ಚರಿಸಿದ ಪದದ ಮೊದಲ ಅಕ್ಕರದ ಜಾಗದಲ್ಲಿ ಗಕಾರವನ್ನು ಬಳಸುತ್ತಾರೆ; ಕೊನರು=ಚಿಗುರು/ಏಳಿಗೆಯಾಗು; **ಧರ್ಮಗಿರ್ಮವನು ಕೊಂಡು ಕೊನರುವರಲ್ಲ**=ಧರ್ಮಗಿರ್ಮ ಅಂದುಕೊಂಡು ಹೇಡಿಯಂತೆ ಹೇಗೋ ಬದುಕಲು ಇಚ್ಚಿಸುವವನಲ್ಲ; ರಾಯ=ಧರ್ಮರಾಯ; ಅಂಡಲೆ=ಹತ್ತಿರಕ್ಕೆ ಹೋಗಿ ಪೀಡಿಸು/ಕಾಡಿಸು; ಚೆಂಡನಾಡು=ಕತ್ತರಿಸಿ ಎಸೆದಾಡು; ರಮಣಿ=ಹೆಂಗಸು; ಮೇಣ್=ಇಲ್ಲವೇ;

**ರಾಯನನು ಅಂಡಲೆದು ಕೀಚಕನ ತಲೆಯನು ಚೆಂಡನಾಡಿಸು ರಮಣಿ**=ದ್ರೌಪದಿ, ನೀನು ಧರ್ಮರಾಯನ ಹತ್ತಿರಹೋಗಿ, ಅವನನ್ನು ಕಾಡಿಬೇಡಿ ಕೀಚಕನ ತಲೆಯನ್ನು ಕತ್ತರಿಸು; ಮೇಣ್=ಇಲ್ಲವೇ; **ಮೇಣ್ ಅರ್ಜುನಗೆ ಹೇಳು**= ಧರ್ಮರಾಯನು ಕೀಚಕನನ್ನು ಕೊಲ್ಲಲು ಒಪ್ಪದಿದ್ದರೆ, ಅರ್ಜುನನಿಗೆ ಹೇಳಿ ಕೀಚಕನನ್ನು ಕೊಲ್ಲಿಸು ; **ತರುಣಿ, ದಿಟ ಕೇಳ್ ಇಂದು ಮೊದಲಾಗೆ ನೀ ನಾಲ್ವರಿಗೆ ಅರಸಿ**=ದ್ರೌಪದಿ, ಒಂದು ಮಾತನ್ನು ನಿಜವಾಗಿ ಹೇಳುತ್ತಿದ್ದೇನೆ, ಕೇಳು. ಇಂದಿನಿಂದ ನೀನು ನಾಲ್ವರಿಗೆ ಮಾತ್ರ ಹೆಂಡತಿ; ಎಡೆಮುರಿ=ನಡುವೆ ನಿಂತುಹೋಗು/ನಂಟು ಇಲ್ಲವಾಗುವುದು; **ನಾವು ಎಡೆಮುರಿದವರು**=ನನಗೂ ನಿನಗೂ ಯಾವ ನಂಟು ಇಲ್ಲ. ಇಂದಿನಿಂದ ನಾನು ನಿನಗೆ ಗಂಡನಲ್ಲ; ನೀನು ನನಗೆ ಹೆಂಡತಿಯಲ್ಲ ; ಸೂಳು=(ರತಿ ಸುಖದ) ಸರದಿ; ಪಾಳೆಯ=ಬೀಡು/ಬಿಡಾರ; ಸೂಳು ಪಾಳೆಯ=ದ್ರೌಪದಿಯು ಅಯ್ದು ಮಂದಿಯ ಹೆಂಡತಿಯಾಗಿದ್ದುದರಿಂದ, ಸರದಿಯ ಪ್ರಕಾರ ಒಬ್ಬೊಬ್ಬ ಗಂಡನ ಬಳಿ ಕೆಲವು ದಿನಗಳ ಕಾಲ ಕಾಮದ ನಂಟನ್ನು ಹೊಂದುತ್ತಿದ್ದಳು ಎಂಬ ಸಂಗತಿ;

**ನಿನ್ನಯ ಸೂಳು ಪಾಳೆಯವ ಬಿಟ್ಟವರು**=ನಿನ್ನೊಡನೆ ಹೊಂದಿದ್ದ ಸರದಿಯ ಕಾಮದ ನಂಟನ್ನು ಇಂದಿನಿಂದ ತೊರೆದಿದ್ದೇನೆ; **ಅರಸನನು ಪ್ರಾರ್ಥಿಸುವುದು**= ಧರ್ಮರಾಯನಲ್ಲಿ ಮೊರೆಯಿಡುವುದು; **ಅರ್ಜುನ ವರ ನಕುಲ ಸಹದೇವರಿಗೆ ವಿಸ್ತರಿಸಿ ಹೇಳ್ವುದು**= ಉತ್ತಮರಾದ ನಕುಲ ಸಹದೇವರ ಮುಂದೆ ಮತ್ತು

ಅರ್ಜುನನ ಮುಂದೆ ನಿನ್ನ ಬವಣೆಯೆಲ್ಲವನ್ನೂ ಸಂಪೂರ್ಣವಾಗಿ ತೋಡಿಕೊಳ್ಳುವುದು ; ಫಲಸಿದ್ಧಿ=ಪ್ರಯೋಜನ;

**ನಮ್ಮೊಡನೆ ಫಲಸಿದ್ಧಿಯಿಲ್ಲ**=ನನ್ನ ಮುಂದೆ ಹೇಳಿಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ; ಕೇಳುತಿದ್ದಳು=ಭೀಮನು ಆಡಿದ ನುಡಿಗಳೆಲ್ಲವನ್ನೂ ದ್ರೌಪದಿಯು ಮನವಿಟ್ಟು ಆಲಿಸುತ್ತಿದ್ದಳು; ಸೆರೆ=ನರ; ಗೋನಾಳಿ=ಗಂಟಲ ಮಣಿ; ಔಕು=ಅದುಮು/ಹಿಸುಕು; **ಕೊರಳ ಸೆರೆ ಗೋನಾಳಿಗೆ ಔಕಿತು**=ಭೀಮನ ಮಾತುಗಳನ್ನು ಕೇಳುತ್ತ ದ್ರೌಪದಿಯ ಸಂಕಟ ಉಕ್ಕಿಬಂದು ಅವಳ ಕೊರಳಿನ ನರಗಳು ಬಿಗಿದುಕೊಂಡವು; ಅಕಟ=ಅಯ್ಯೋ; ಬಿಕ್ಕು=ಸಂಕಟ ಹೆಚ್ಚಾದಾಗ ಕೊರಳು ಬಿಗಿದುಬಂದು ಗದ್ಗದಿಸುತ್ತ ಅಳುವುದು; ವಿಲೋಲ=ಹೊಯ್ದಾಟ/ನಡುಕ; ಲೋಚನ=ಕಣ್ಣು; ವಿಲೋಲಲೋಚನ=ಕಣ್ಣುಗುಡ್ಡೆಗಳು ಅತ್ತಿತ್ತ ಆಡುತ್ತಿರುವುದು; ಬಾಷ್ಪವಾರಿ=ಕಣ್ಣೀರು; ನೆನೆ=ಒದ್ದೆಯಾಗು/ತೊಯ್ದುಹೋಗು;

**ಅಕಟ, ಬಿಕ್ಕಿ ಬಿಕ್ಕಿ ವಿಲೋಲಲೋಚನೆಯು ಬಾಷ್ಪವಾರಿಯಲಿ ನೆನೆದಳು**= ಅಯ್ಯೋ... ಬಿಕ್ಕಿ ಬಿಕ್ಕಿ ಅಳುತ್ತಿರುವ ದ್ರೌಪದಿಯು ಕಣ್ಣೀರಿನಲ್ಲಿ ತೊಯ್ದುಹೋದಳು; ಶೂಲ=ಚೂಪದ ಮೊನೆಯುಳ್ಳ ಒಂದು ಬಗೆಯ ಹತಾರ; ಮರು=ಮತ್ತೊಮ್ಮೆ; ಮೊನೆ=ಹರಿತವಾದದು; ಮರುಮೊನೆ=ಮತ್ತೆ ಸಾಣೆ ಹಿಡಿದು ಮೊನೆಯನ್ನು ಇನ್ನು ಚೆನ್ನಾಗಿ ಹರಿತಗೊಳಿಸುವುದು; **ಶೂಲ ಮರುಮೊನೆಗೊಂಡವೊಲು**=ಶೂಲವನ್ನು ಮತ್ತೆ ಹರಿತಗೊಳಿಸಿದಂತೆ; ಇದೊಂದು ರೂಪಕ. ಶೂಲದ ಮೊನೆ ಹರಿತವಾದಂತೆಲ್ಲಾ ಅದರಿಂದ ಚುಚ್ಚಿಸಿಕೊಂಡವರು ಹೆಚ್ಚಿನ ನೋವಿಗೆ ಗುರಿಯಾಗಿ ನರಳುತ್ತಾರೆ. ಅಂತೆಯೇ ಭೀಮನ ನುಡಿಗಳು ದ್ರೌಪದಿಯ ಮನಸ್ಸಿಗೆ ಶೂಲದ ಮೊನೆಯಂತೆ ಚುಚ್ಚಿದವು;

ಸುಳಿ+ಬಾಳೆ; ಸುಳಿ=ಆಗ ತಾನೆ ಮೂಡುತ್ತಿರುವ; ಸುಳಿವಾಳೆ=ಸುಳಿಯೊಡೆದ ಬಾಳೆ/ಎಳೆಯ ಬಾಳೆ; ಝಳ=ಬೆಂಕಿಯ ಉರಿ; **ಸುಳಿವಾಳೆ ಝಳ ತಾಗಿದವೊಲು**= ಇದೊಂದು ರೂಪಕ. ಕೋಮಲವಾದ ಎಳೆಯ ಬಾಳೆಗಿಡಕ್ಕೆ ಬೆಂಕಿಯ ಉರಿಯು ತಟ್ಟಿ ಬಾಡಿಹೋದಂತೆ ಭೀಮನ ಮಾತುಗಳನ್ನು ಕೇಳಿ ದ್ರೌಪದಿಯ ಮಯ್ ಮನವೆಲ್ಲವೂ ಸಂಕಟದ ತಾಪಕ್ಕೆ ಗುರಿಯಾಗಿ ಬೇಯತೊಡಗಿತು; ಉದರ= ಹೊಟ್ಟೆ; ಜ್ವಾಲೆ=ಉರಿ/ಬೆಂಕಿ; ಉದರಜ್ವಾಲೆ= ಇದೊಂದು ನುಡಿಗಟ್ಟು. ಹೊಟ್ಟೆಯ ಸಂಕಟ ಅಂದರೆ ಮಯ್ ಮನವನ್ನು ಸುಡುತ್ತಿರುವ ಸಂಕಟದ ಬೆಂಕಿ; ನೆತ್ತಿ=ನಡು ತಲೆ; ನಿಲುಕು=ಮುಟ್ಟು/ತಾಗು; **ಉದರ ಜ್ವಾಲೆ ನೆತ್ತಿಗೆ ನಿಲುಕೆ**=ದ್ರೌಪದಿಯ ಹೊಟ್ಟೆಯ ಸಂಕಟವು ನೆತ್ತಿಗೆ ಹತ್ತಲು. ಅಂದರೆ ದ್ರೌಪದಿಯ ಮಯ್ ಮನವೆಲ್ಲವೂ ತೀವ್ರತರವಾದ ಸಂಕಟಕ್ಕೆ ಗುರಿಯಾಗಲು; ಬಿಸುಸುಯ್=

ನಿಟ್ಟುಸಿರನ್ನು ಬಿಡು; ಹಲುಬು=ಗೋಳಾಡು/ಪ್ರಲಾಪಿಸು;

**ಅಬಲೆ ಬಿಸುಸುಯ್ದು ಹಲುಬಿದಳು**=ದ್ರೌಪದಿಯು ನಿಟ್ಟುಸಿರನ್ನು ಬಿಡುತ್ತ ಗೋಳಾಡತೊಡಗಿದಳು; ಕೆಂದಳ=ಕೆಂಪಾದ ಕಯ್; ಸೆಕೆ=ಕಾವು/ಶಾಖ; ಕಪೋಲ =ಕೆನ್ನೆ; ಕಂದು=ಕಳೆಗುಂದು/ಕಪ್ಪಾಗು; ಕಸರಿಕೆ+ಆಯ್ತು; ಕಸರಿಕೆ= ಸೊರಗುವಿಕೆ/ ಬಾಡುವಿಕೆ; **ಕೆಂದಳದ ಸೆಕೆಯಲಿ ಕಪೋಲವು ಕಂದಿ ಕಸರಿಕೆಯಾಯ್ತು**=ದ್ರೌಪದಿಯ ದೇಹವೆಲ್ಲವೂ ಸಂಕಟದ ತಾಪದಿಂದ ಬೇಯುತ್ತಿದ್ದುದರಿಂದ ಅವಳ ಅಂಗಯ್ ಬಿಸಿಯಾಗಿತ್ತು. ದ್ರೌಪದಿಯು ತನ್ನ ಅಂಗಯ್ ಮೇಲೆ ಕೆನ್ನೆಯನ್ನಿಟ್ಟುಕೊಂಡು ಸಂಕಟಪಡುತ್ತಿದ್ದಾಗ, ಆಕೆಯ ಕೆಂಪಾದ ಕೆನ್ನೆಯು ಕಳೆಗುಂದಿ ಸೊರಗಿಹೋಯಿತು;

ನಿಡುಸುಯಿಲು+ಇಂದ; ನಿಡಿದು+ಸುಯಿಲು; ನಿಡಿದು=ಉದ್ದನೆಯ; ಸುಯಿಲು=ಉಸಿರು; ನಿಡುಸುಯಿಲು=ನಿಟ್ಟುಸಿರು; ಏಕಾವಳಿ=ಒಂದೆಳೆಯ ಸರ; ಸೀಕರಿ=ಸೀಕಲು/ಕರಿಕು/ಸುಟ್ಟಿ ಕಪ್ಪಾದುದು; **ನಿಡುಸುಯಿಲಿಂದ ಏಕಾವಳಿಯ ಮುತ್ತುಗಳು ಸೀಕರಿಯೋದವು**=ನಿಟ್ಟುಸಿರಿನ ತಾಪದಿಂದ ದ್ರೌಪದಿಯು ಕೊರಳಲ್ಲಿ ತೊಟ್ಟಿದ್ದ ಒಂದೆಳೆಯ ಸರದ ಮುತ್ತುಗಳು ನಿಟ್ಟುಸಿರಿನ ತಾಪದಿಂದ ಕಪ್ಪಾದವು; ಸಂದಣಿಸು=ತುಂಬಿಬರು/ಒಟ್ಟಾಗು; ಎವೆ=ಕಣ್ಣಿನ ರೆಪ್ಪೆ; ಬಾಷ್ಪ=ನೀರು; ಬಿಂದು=ಹನಿ; ತಳಿ=ಚೆಲ್ಲು/ಉದುರಿಸು;

**ಸಂದಣಿಸಿದ ಎವೆಗಳಲಿ ಬಾಷ್ಪದ ಬಿಂದು ತಳಿತುದು**=ತುಂಬಿಬಂದ ರೆಪ್ಪೆಗಳಲ್ಲಿ ಕಣ್ಣೀರು ತುಂಬಿಬಂದು ಹನಿಹನಿಯಾಗಿ ಉದುರತೊಡಗಿತು; ನಟ್ಟ=ನೆಲೆ ನಿಂತ; ದೃಷ್ಟಿ=ನೋಟ; ನಟ್ಟದೃಷ್ಟಿ=ಒಂದೇ ಕಡೆ ನೋಡುವುದು; ಇಂದು=ಚಂದ್ರ; ಇಂದುಮುಖಿ=ಚಂದ್ರನಂತೆ ಮೊಗವುಳ್ಳವಳು/ಸುಂದರಿ; ಸೈಗರೆ=ಸತತವಾಗಿ ಸುರಿ; ಅಡಿಗಡಿಗೆ=ಪದೇ ಪದೇ; ಶಿರ=ತಲೆ; ತೂಗು=ಅಲ್ಲಾಡಿಸು; **ನಟ್ಟ ದೃಷ್ಟಿಯೊಳು ಇಂದುಮುಖಿ ಸೈಗರೆದು ಅಡಿಗಡಿಗೆ ಶಿರವ ತೂಗಿದಳು**= ದ್ರೌಪದಿಯು ಕಟುವಾಗಿ ಮಾತನಾಡಿದ ಭೀಮನನ್ನೇ ನೆಟ್ಟನೆಯ ನೋಟದಿಂದ ನೋಡುತ್ತ 'ಕಣ್ಣೀರು ಕರೆಯುತ್ತ' ಸಂಕಟದ ತೀವ್ರತೆಯನ್ನು ತಾಳಲಾರದೆ ಪದೇಪದೇ ತಲೆಯನ್ನು ಅತ್ತಿತ್ತ ಆಡಿಸುತ್ತಿದ್ದಳು;

ಆವ=ಯಾವ; ಅಳಲು=ಶೋಕ/ಸಂಕಟ; **ಆವ ಹೆಂಗುಸನು ಅಳಲಿಸಿದೆನು**= ಯಾವ ಹೆಂಗಸಿಗೆ ಕೇಡನ್ನು ಬಗೆದು ಆಕೆಯ ಸಂಕಟಕ್ಕೆ ಕಾರಣಳಾಗಿದ್ದೆನೊ; ಅಳಿ=ಕೆಡಿಸು/ಹಾಳುಮಾಡು; **ಇನ್ನಾವ ಧರ್ಮವನು ಅಳಿದೆನೋ**=ಯಾವ ಧರ್ಮ ವನ್ನು ನಾಶಪಡಿಸಿದ್ದೆನೋ; ಪಾಪದ ಫಲ=ಕೆಟ್ಟದ್ದನ್ನು ಮಾಡಿದ್ದರ ಕಾರಣಕ್ಕಾಗಿ ಅನುಭವಿಸುವ ಸಾವು ನೋವು; ಸಂಚಕಾರ=ಕೇಡು/ಹಾನಿ; ಸಂಚಕಾರ ತರು=

ಹಾನಿಯನ್ನುಂಟುಮಾಡು; ಸಂಚಕಾರ ಬರು=ಕೇಡುಂಟಾಗು/ಹಾನಿಯುಂಟಾಗು; **ತಾನು ಆವ ಪಾಪದ ಫಲಕೆ ಸಂಚಕಾರವನು ಪಿಡಿದೆನೊ**=ತಾನು ಮಾಡಿದ ಯಾವ ಪಾಪದ ಫಲಕ್ಕಾಗಿ ಇಂತಹ ಮಾನಹಾನಿಗೆ ಗುರಿಯಾದೆನೋ; **ಎನ್ನವೊಲು**= ನನ್ನಂತೆ; ನವೆ=ಕೊರಗು/ನರಳು;

**ಎನ್ನವೊಲು ಆವ ಹೆಂಗಸು ನವೆದಳು**=ನನ್ನ ರೀತಿಯಲ್ಲಿ ಯಾವ ಹೆಂಗಸು ತಾನೆ ಕೊರಗಿದ್ದಾಳೆ; **ಆವಳ ಅಳಲಿದು**=ಯಾವ ಹೆಂಗಸಿನ ಸಂಕಟ ನನಗೆ ತಟ್ಟಿದೆಯೋ; ಎನ್ನ+ಅಂದದ; ಎನ್ನ=ನನ್ನ; ಅಂದ=ರೀತಿ; **ಲೋಕದಲಿ ಯಾವಳು ಎನ್ನಂದದ ಮಗಳ ಪಡೆದವಳು**=ಲೋಕದಲ್ಲಿ ಯಾವ ತಾಯಿ ತಾನೆ ನನ್ನಂತಹ ಹತಭಾಗ್ಯೆಯಾದ ಮಗಳನ್ನು ಪಡೆದಿದ್ದಾಳೆ; **ಎನುತ ತಾ ಮರುಗಿದಳು**=ಎಂದು ನುಡಿಯುತ್ತ ದ್ರೌಪದಿಯು ಕೊರಗಿದಳು; ಭುವನದ+ಒಳು; ಭುವನ=ಜಗತ್ತು/ ಪ್ರಪಂಚ; ಒಳು=ಅಲ್ಲಿ; ಭಂಗಿತ=ಅಪಮಾನಗೊಂಡ ವ್ಯಕ್ತಿ;

**ಭುವನದೊಳು ನಾರಿಯರು ಎನ್ನವೊಲು ಭಂಗಿತರು ಇನ್ನು ಹುಟ್ಟದೆ ಇರಲಿ**= ನನ್ನಂತೆ ಅಪಮಾನಕ್ಕೆ ಬಲಿಯಾದ ಹೆಂಗಸರು ಇನ್ನು ಮುಂದೆ ಈ ಜಗತ್ತಿನಲ್ಲಿ ಹುಟ್ಟದೆ ಇರಲಿ; ಗಂಡ=ಪತಿ/ಶೂರ; ಸನ್ನಿಭ=ಸಮಾನವಾದ; **ಗಂಡರು ಭೀಮ ಸನ್ನಿಭರು ಇನ್ನು ಜನಿಸಲು ಬೇಡ**=ಭೀಮನಂತಹ ಗಂಡ ಈ ಜಗತ್ತಿನಲ್ಲಿ ಹುಟ್ಟುವುದು ಬೇಡ. ಹೆಂಡತಿಯ ಮಾನಪ್ರಾಣವನ್ನು ಕಾಪಾಡದ ಭೀಮನಂತಹ ಗಂಡ ಬೇಡ; ಮುನ್ನಿನವರ+ಒಳಗೆ; ಮುನ್ನಿನವರು=ಈ ಮೊದಲು ಹುಟ್ಟಿದವರು; ಸಂಪನ್ನ=ಪಡೆದ/ಗಳಿಸಿದ; ದುಃಖಿಗಳು+ಆರು; ನವೆ=ಕೊರಗು/ಸಂಕಟಪಡು; **ಮುನ್ನಿನವರೊಳಗೆ ಎನ್ನವೊಲು ಪಾಂಡವರವೊಲು ಸಂಪನ್ನ ದುಃಖಿಗಳಾರು ನವೆದರು**=ಜಗತ್ತಿನಲ್ಲಿ ಈ ಮೊದಲು ಹುಟ್ಟಿಬಂದ ವ್ಯಕ್ತಿಗಳಲ್ಲಿ ನನ್ನ ಹಾಗೆ ಪಾಂಡವರ ಹಾಗೆ ಸಂಕಟವನ್ನು ಹೊಂದಿ ಕೊರಗಿದವರು ಯಾರಿದ್ದಾರೆ; ಎಂದು **ದ್ರೌಪದಿ ಹಿರಿದು ಹಲುಬಿದಳು**=ಎಂದು ದ್ರೌಪದಿಯು ಬಹಳವಾಗಿ ಗೋಳಾಡಿದಳು;

ಗರಳ=ನಂಜು/ವಿಷ; **ಆವ ಗರಳವ ಕುಡಿವೆನೋ**=ಯಾವ ಬಗೆಯ ನಂಜನ್ನು ಕುಡಿದು ಸಾವನ್ನಪ್ಪಲಿ; ಮೇಣ್=ಇಲ್ಲವೇ; ಅಡರು=ಮೇಲಕ್ಕೆ ಹತ್ತು/ಏರು; **ಮೇಣ್ ಆವ ಬೆಟ್ಟವನು ಅಡರಿ ಬೀಳ್ವೆನೊ**=ಇಲ್ಲವೇ ಯಾವ ಬೆಟ್ಟದ ತುದಿಯನ್ನೇರಿ ಆಳವಾದ ಪ್ರಪಾತಕ್ಕೆ ಬಿದ್ದು ಸಾಯಲಿ; ಹಾಸರೆ=ಅಗಲವಾದ ಕಲ್ಲು/ಹಾಸುಬಂಡೆ; ಮಡು=ಹೊಳೆ ನದಿಗಳಲ್ಲಿ ಆಳವಾದ ನೀರಿನ ಜಾಗ; ಹೊಗು=ಒಳಸೇರು/ ಪ್ರವೇಶಿಸು; **ಹಾಸರೆಯ ಗುಂಪಿನಲಿ ಯಾವ ಮಡುವನು ಹೊಗುವೆನೋ**= ಹಾಸುಬಂಡೆಗಳ ಎಡೆಯಲ್ಲಿ ತುಂಬಿ ಹರಿಯುತ್ತಿರುವ ನದಿಯ ಯಾವ ಮಡುವಿನಲ್ಲಿ ಮುಳುಗಿ ಸಾವನ್ನಪ್ಪಲಿ; ಕುಂತ=ಈಟಿ/ಮೊನೆಯುಳ್ಳ ಹತಾರ;

ಹಾಯ್=ಮೇಲೆ ಬೀಳು; **ಆವ ಕುಂತವ ಹಾಯ್ವೆನೋ**=ಹರಿತವಾದ ಮೊನೆಯುಳ್ಳ ಯಾವ ಈಟಿಯ ಮೇಲೆ ಬಿದ್ದು ಸಾಯಲಿ ; ಮೇಣ್=ಇಲ್ಲವೇ; ಪಾವಕನ+ಒಳಗೆ; ಪಾವಕ=ಬೆಂಕಿ; ಹೊಗು=ಪ್ರವೇಶಿಸು/ಒಳನುಗ್ಗು;

**ಆವ ಪಾವಕನೊಳಗೆ ಹೊಗುವೆನೋ**=ಯಾವ ಬೆಂಕಿಯ ಕೊಂಡದೊಳಕ್ಕೆ ದುಮುಕಿ ಸುಟ್ಟುಕರಕಲಾಗಲಿ; ಸಮನಿಸು=ಒದಗು; **ಎನಗೆ ಸಾವು ಸಮನಿಸದೆ**= ನನಗೆ ಸಾವು ಬರಬಾರದೆ; ಮಂದಿ=ಗುಂಪು; ಎಳೆ=ತನ್ನ ಕಡೆಗೆ ಸೆಳೆದು ಕೊಳ್ಳುವುದು; **ಅಂದು ಪಾಪಿ ಕೌರವನು ಮಂದಿಗೆ ಎಳೆದನು**=ಅಂದು ಪಾಪಿಯಾದ ದುರ್ಯೋಧನನು ತನ್ನ ತಮ್ಮನಾದ ದುಶ್ಶಾಸನನಿಂದ ಸಭಾಸದರಿಂದ ತುಂಬಿದ್ದ ಒಡ್ಡೋಲಗಕ್ಕೆ ನನ್ನನ್ನು ಎಳೆದು ತರಿಸಿ ಎಲ್ಲರ ಮುಂದೆ ಅಪಮಾನಿಸಿದನು; ಬಳಿಕ=ಅನಂತರ; ಅರಣ್ಯವಾಸದೊಳು=ಜೂಜಾಟದ ನಿಯಮದಂತೆ ನಾವೆಲ್ಲ ಹನ್ನೆರಡು ವರುಶಗಳ ಕಾಲ ಕಾಡಿನಲ್ಲಿ ವನವಾಸದಲ್ಲಿದ್ದಾಗ; ಸೈಂಧವ= ದುರ್ಯೋಧನನ ತಂಗಿ ದುಶ್ಶಲೆಯ ಗಂಡ; ಮುಂದಿನ+ತಲೆ+ಪಿಡಿದು; ಮುಂದಲೆ=ತಲೆಯ ಮೇಲುಗಡೆ ಮುಂದಿನ ಜಾಗದಲ್ಲಿರುವ ತಲೆಕೂದಲು; ಪಿಡಿದು=ಹಿಡಿದು; ಒಯ್=ಹೊತ್ತುಕೊಂಡು ಹೋಗು/ಸಾಗಿಸು;

**ಬಳಿಕ ಅರಣ್ಯವಾಸದೊಳು ಸೈಂಧವ ಬಂದು ಮುಂದಲೆವಿಡಿದು ಎನ್ನನು ಎಳೆದು ಒಯ್ದ**=ವನವಾಸದಲ್ಲಿದ್ದಾಗ ಪಾಂಡವರಿಲ್ಲದ ಸಮಯವನ್ನು ಕಾದು ನೋಡಿ, ಒಬ್ಬಂಟಿಯಾಗಿದ್ದ ನನ್ನ ಮುಂದಲೆ ಹಿಡಿದು ನನ್ನನ್ನು ತೇರಿನೊಳಕ್ಕೆ ಹಾಕಿಕೊಂಡು ಅಪಹರಿಸಲು ಯತ್ನಿಸಿದ; **ಇಂದು ಕೀಚಕ ನಾಯ ಕಾಲಲಿ ನಾನು ನೊಂದೆ**=ಇಂದು ನೀಚ ಕೀಚಕನ ಕಾಲಿನ ಒದೆತದಿಂದ ಕಡುನೊಂದೆನು; **ಈ ಮೂರು ಬಾರಿಯೆ ಬಂದ ಭಂಗವೆ ಸಾಕು**=ಈ ರೀತಿ ಮೂರು ಬಾರಿ ಅಪಮಾನಕ್ಕೆ ಗುರಿಯಾಗಿ ನೊಂದಿರುವುದೇ ಸಾಕು. ಇನ್ನು ಮುಂದೆಯೂ ಹೀಗೆಯೇ ಅಪಮಾನಕ್ಕೆ ಗುರಿಯಾಗುವುದರ ಬದಲು ಸಾಯುವುದೇ ಈಗ ನನ್ನ ಪಾಲಿಗೆ ಉಳಿದಿರುವ ಒಂದೇ ದಾರಿ; ನಳಿನ+ಅಕ್ಷಿ; ನಳಿನ=ತಾವರೆ ಹೂವು; ಅಕ್ಷಿ=ಕಣ್ಣು; ನಳಿನಾಕ್ಷಿ= ತಾವರೆಯ ಕಣ್ಣಿನವಳು/ಸುಂದರಿ; **ಎನುತ ನಳಿನಾಕ್ಷಿ ಮರುಗಿದಳು**=ಎಂದು ನುಡಿಯುತ್ತ ದ್ರೌಪದಿಯು ಮರುಗಿದಳು;

ಜನನ=ಹುಟ್ಟು; ಪಾಂಚಾಲ=ಒಂದು ರಾಜ್ಯದ ಹೆಸರು; ರಾಯ=ರಾಜ; ಪಾಂಚಾಲ ರಾಯ=ಪಾಂಚಾಲ ದೇಶದ ರಾಜನಾದ ದ್ರುಪದ. ಈತನ ಮಗಳು ದ್ರೌಪದಿ; **ಜನನವೇ ಪಾಂಚಾಲ ರಾಯನ ಮನೆ**=ನಾನು ಹುಟ್ಟಿದ್ದು ಪಾಂಚಾಲ ರಾಜನ ಮನೆಯಲ್ಲಿ; ವಲ್ಲಭ=ಗಂಡ; ಮನೋವಲ್ಲಭರು=ಮನಮೆಚ್ಚಿದ ಗಂಡಂದಿರು; ಎನೆ=ಎನ್ನಲು/ಎಂದು ನೋಡಿದರೆ; ಮನುಜ=ಮಾನವ;

ಮನುಜಗಿನುಜ=ಕೋಪ, ತಿರಸ್ಕಾರ, ಹಾಸ್ಯ, ಸಂಕಟದ ಒಳಮಿಡಿತಗಳನ್ನು ಹೊರ ಹಾಕುವಾಗ ಈ ರೀತಿ ನುಡಿಯಲಾಗುತ್ತದೆ; ಗಣ್ಯ=ಮಾನ್ಯ; ಗೀರ್ವಾಣ=ದೇವತೆ; ಮಿಗಿಲು=ಹೆಚ್ಚು;

**ಮನೋವಲ್ಲಭರು ಅದು ಆರು ಎನೆ ಮನುಜಗಿನುಜರು ಗಣ್ಯವೇ ಗೀರ್ವಾಣರಿಂ ಮಿಗಿಲು**=ನನ್ನ ಮೆಚ್ಚಿನ ಗಂಡಂದಿರು ಯಾರೆಂದರೆ ಅವರು ಸಾಮಾನ್ಯ ಮಾನವರಲ್ಲ. ಸುರಲೋಕದ ದೇವತೆಗಳಿಗಿಂತಲೂ ಮಿಗಿಲಾದವರು; ಎನಗೆ=ನನಗೆ; ಎಡರು=ವಿಪತ್ತು/ಆತಂಕ/ಕಷ್ಟ; ವನಿತೆ=ಹೆಂಗಸು; ವಿರಾಟನ ವನಿತೆಯರು=ವಿರಾಟರಾಜ ಮನೆತನದ ಹೆಂಗಸರು; ಮುಡಿ=ತಲೆಕೂದಲು; ಮುಡಿ ಕಟ್ಟು=ತಲೆಗೂದಲನ್ನು ಬಾಚಿ ಜಡೆಯನ್ನು ಹಾಕುವುದು; ತನು=ದೇಹ/ಮಯ್; ತಿಗುರು=ಮುಖ ಮತ್ತು ದೇಹಕ್ಕೆ ಬಳಿದುಕೊಳ್ಳುವ ಪರಿಮಳಯುಕ್ತವಾದ ವಸ್ತುಗಳು; ತನು ತಿಗುರು=ಸುಗಂಧ ದ್ರವ್ಯವನ್ನು ಲೇಪಿಸುವುದು. ಅರಿಸಿಣ, ಅರೆದ ಗಂಧದ ಹಸಿ ಮುಂತಾದ ಮಂಗಳ ಹಾಗೂ ಸುವಾಸನೆಯ ವಸ್ತುಗಳನ್ನು ದೇಹಕ್ಕೆ ಲೇಪಿಸಿವುದು; ಕಾಲು ಒತ್ತು=ಕಾಲನ್ನು ಹಿಸುಕುವುದು; ಉತ್ಸಾಹ=ಹುರುಪು/ಆಸಕ್ತಿ; **ಎನಗೆ ಬಂದ ಎಡರು ಈ ವಿರಾಟನ ವನಿತೆಯರುಗಳ ಮುಡಿಯ ಕಟ್ಟುವ, ತನುವ ತಿರುಗುವ, ಕಾಲನು ಒತ್ತುವ ಕೆಲಸದ ಉತ್ಸಾಹ**=ನನಗೆ ಬಂದ ಕಷ್ಟ ಎಂತಹುದೆಂದರೆ ಈ ವಿರಾಟರಾಯನ ರಾಜಮನೆತನದ ಹೆಂಗಸರ ಮುಡಿಯನ್ನು ಕಟ್ಟುವ, ಅವರ ಶರೀರಕ್ಕೆ ಸುಗಂಧ ದ್ರವ್ಯಗಳನ್ನು ಲೇಪಿಸುವ, ಅವರ ಕಾಲನ್ನು ಒತ್ತುವ ಕೆಲಸದಲ್ಲಿ ತೊಡಗುವುದು ;

ಹಗೆ=ಶತ್ರು; **ಹಗೆಗಳಿಗೆ ತಂಪಾಗಿ ಬದುಕುವುದು**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡಿವೆ. ಒಬ್ಬ ವ್ಯಕ್ತಿಗೆ ಬಂದ ಸಾವುನೋವನ್ನು ಕಂಡು ಆತನ/ಆಕೆಯ ಹಗೆಗಳು ಆನಂದಗೊಳ್ಳುವುದು; ಮುಗುದ=ಏನು ತಿಳಿಯದವನು/ಸರಳವಾದ ನಡೆನುಡಿಯುಳ್ಳವನು; **ಹಗೆಗಳಿಗೆ ತಂಪಾಗಿ ಬದುಕುವ ಮುಗುದರು ಇನ್ನು ಆರುಂಟು**=ಹಗೆಗಳಿಗೆ ಆನಂದವುಂಟಾಗುವ ಬಗೆಯಲ್ಲಿ ರಾಣಿವಾಸದ ದಾಸಿಯಾಗಿ ದುಡಿಯುತ್ತಿರುವ ನನ್ನಂತಹವರು ಈ ಜಗತ್ತಿನಲ್ಲಿ ಇನ್ನು ಯಾರಿದ್ದಾರೆ ; ಭಂಗ=ಅಪಮಾನ; ಹೆಗಲು ಕೊಡು=ಸಹಾಯ ಮಾಡು/ನೆರವು ನೀಡು; ಆನು=ಹಿಡಿ/ವಹಿಸು/ಕಯ್ಗೊಳ್ಳು; ವಿರೋಧಿ=ಶತ್ರು/ಹಗೆ;

**ಭಂಗಕೆ ಹೆಗಲ ಕೊಟ್ಟು ಆನುವ ವಿರೋಧಿಗಳು ಲೋಕದಲಿ ಉಂಟೆ**=ನನಗೆ ಈಗ ಆಗುತ್ತಿರುವ ಅಪಮಾನಕ್ಕೆ ಒತ್ತಾಸೆಯಾಗಿ ನಿಲ್ಲುವ ಹಗೆಗಳು ಪಾಂಡವರಾದ ನೀವಲ್ಲದೆ ಇನ್ನು ಯಾರಿದ್ದಾರೆ. ಹೆಂಡತಿಯು ಆಪತ್ತಿನಲ್ಲಿ ಸಿಲುಕಿದ್ದರು ಸುಮ್ಮನಿರುವ ಗಂಡಂದಿರಾದ ನೀವು ನನ್ನ ಪಾಲಿಗೆ ಹಗೆಗಳಾಗಿದ್ದೀರಿ;

ವಿಗಡ=ವೀರ/ಪರಾಕ್ರಮ/ಶೂರ; ಬಿರುದು=ಪ್ರಶಸ್ತಿ; ಬಿಸುಟು=ತ್ಯಜಿಸಿ; ಹೋರಿ=ಗಂಡು ದನ; ಬಡಿಹೋರಿ=ಬೀಜ ಒಡೆದ ಹೋರಿ. ಗಂಡು ದನದ ಬೀಜ ಒಡೆಯುವುದನ್ನು 'ಹಿಡ ಒಡೆಯುವುದು' ಎನ್ನುತ್ತಾರೆ. ಬೀಜ ಒಡೆದ ಹೋರಿಯನ್ನು ಕೂಡುವುದರಿಂದ ಹಸುವು ಗರ್ಭವನ್ನು ತಳೆಯುವುದಿಲ್ಲ. ಬಡಿಹೋರಿ ಎಂಬ ಪದವು ಒಂದು ಬಯ್ಗುಳವಾಗಿ ಬಳಕೆಗೊಂಡಿದೆ. ಬಲಹೀನ/ ದುರ್ಬಲ/ನಪುಂಸಕ ಎಂಬ ತಿರುಳನ್ನು ಹೊಂದಿದೆ; ಮೂಗುರ್ಚಿ=ಇದೊಂದು ನುಡಿಗಟ್ಟು. ಮೂಗುದಾರ ಹಾಕಿಸಿಕೊಂಡವನು ಎಂದರೆ ಮತ್ತೊಬ್ಬರ ಹತೋಟಿಗೆ ಒಳಗಾಗಿ ಅಡಿಯಾಳಾಗಿ ಬಾಳುವವನು;

**ವಿಗಡ ಬಿರುದನು ಬಿಸುಟ ಬಡಿಹೋರಿಗಳು ಪಾಂಡವರಂತೆ ಮೂಗುರ್ಚಿಗಳು ಅದು ಇನ್ನು ಆರು ಉಂಟು**=ಶೂರರೆಂಬ ಬಿರುದನ್ನು ಮರೆತು, ಬಡಿಹೋರಿ ಗಳಾದ ಪಾಂಡವರ ಹಾಗೆ ಇತರರಿಗೆ ಅಡಿಯಾಳುಗಳಾಗಿ ಬಾಳುತ್ತಿರುವವರು ಈ ಜಗತ್ತಿನಲ್ಲಿ ಇನ್ನು ಯಾರಾದರೂ ಇದ್ದಾರೆಯೇ; ಕೆರಳು=ಉದ್ರಿಕ್ತವಾಗು/ ಕೋಪಗೊಳ್ಳು; ಕಾಲ=ಸಾವಿನ ದೇವತೆಯಾದ ಯಮ;

ಮುರಿ=ಹಿಮ್ಮೆಟ್ಟಿಸು/ಬಗ್ಗಿಸು/ಸೋಲಿಸು; ಎಚ್ಚಾಳುತನ=ವೀರತನ/ಪರಾಕ್ರಮ; ಎನ್ನನು+ಒಬ್ಬಳನು; ಆಳಲು+ಆರಿರಿ; ಆಳು=ಕಾಪಾಡು; **ಕೆರಳಿದೊಡೆ ಕಾಲನನು ಮುರಿವ ಎಚ್ಚಾಳುತನದವರು ಎನ್ನನೊಬ್ಬಳನು ಆಳಲಾರಿರಿ**=ಕೋಪಗೊಂಡರೆ ಯಮನನ್ನೇ ಸೋಲಿಸುವ ಪರಾಕ್ರಮಶಾಲಿಗಳಾದ ನೀವು ನನ್ನೊಬ್ಬಳ ಮಾನ ಪ್ರಾಣವನ್ನು ಕಾಪಾಡಲಾರಿರಿ; ಅಪಕೀರ್ತಿ=ಕೆಟ್ಟ ಹೆಸರು; ಅಳುಕು=ಹಿಂಜರಿ/ ಹಿಂದೆಗೆ/ಹೆದರು; **ಪಾಪಿಗಳಿರ...ಅಪಕೀರ್ತಿಗೆ ಅಳುಕಿರಲ**=ಪಾಪಿಗಳೇ, ಕಾಮಿ ಕೀಚಕನನ್ನು ಕೊಂದರೆ 'ಆಶ್ರಯವನ್ನು ಕೊಟ್ಟ ರಾಜಮನೆತನಕ್ಕೆ ಕೇಡನ್ನು ಬಗೆದರು' ಎಂಬ ಕೆಟ್ಟ ಹೆಸರು ಬರುತ್ತದೆ ಎಂದು ಹಿಂಜರಿಯುತ್ತಿರುವಿರಾ; ಹೊರೆ=ತೂಕ/ಭಾರ; **ತೋಳ ಹೊರೆ**=ಇದೊಂದು ನುಡಿಗಟ್ಟು. ದೊಡ್ಡ ದೊಡ್ಡ ತೋಳುಗಳನ್ನುಳ್ಳ ನೀವು ಅವನ್ನು ಸದುಪಯೋಗ ಮಾಡಿಕೊಳ್ಳದೆ ಹೇಡಿಗಳಾಗಿದ್ದೀರಿ. ಅವು ನಿಮಗೊಂದು ಹೊರೆಯಾಗಿವೆ;

**ತೋಳ ಹೊರೆ ನಿಮಗೇಕೆ**=ನಿಮಗೇಕೆ ಇಂತಹ ದೊಡ್ಡ ದೇಹ; ಕೆಲಸಗೇಡಿಯಾಗಿ ಇಲ್ಲವೇ ಸೋಂಬೇರಿಯಾಗಿ ಕಾಲಕಳೆಯುತ್ತಿರುವ ವ್ಯಕ್ತಿಯನ್ನು 'ಭೂಮಿಗೆ ಭಾರವಾಗಿದ್ದೀಯಲ್ಲ' ಎಂದು ನಿಂದಿಸುವ ನುಡಿಗಟ್ಟು ಕನ್ನಡದಲ್ಲಿ ಬಳಕೆಯಲ್ಲಿದೆ; ಭೂಮೀಪಾಲ=ರಾಜ; ಉದಿಸಲು+ಏತಕೆ; **ಭೂಮೀಪಾಲ ವಂಶದೊಳು ಉದಿಸಲೇತಕೆ**=ನಾಡನ್ನಾಳುವ ರಾಜವಂಶದಲ್ಲೇಕೆ ಹುಟ್ಟಿದ್ದೀರಿ; ಕೂಳು+ಕೇಡಿಂಗೆ; ಕೂಳು=ಅನ್ನ/ಆಹಾರ; ಕೇಡು=ನಾಶ; **ಕೂಳುಗೇಡು**=

ಇದೊಂದು ನುಡಿಗಟ್ಟು. ತಿನ್ನುವ ಅನ್ನಕ್ಕೆ ತಕ್ಕಂತೆ ದುಡಿಮೆಯನ್ನು ಮಾಡದೆ ಆಲಸಿಯಾಗಿ ಬಾಳುತ್ತಿರುವ ವ್ಯಕ್ತಿಯು ಬದುಕಿದ್ದರೂ ಸತ್ತಂತೆಯೇ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; ಒಡಲು=ದೇಹ; ಹೊರೆ=ಕಾಪಾಡು; **ಒಡಲನ್ನು ಹೊರೆದುಕೊಳ್ಳುವುದು**=ದೇಹವನ್ನು ಕಾಪಾಡಿಕೊಳ್ಳುವುದು;

ಇಂದುಮುಖಿ=ಚಂದ್ರನಂತೆ ಮೊಗವನ್ನುಳ್ಳವಳು/ಸುಂದರಿ; **ಕೂಳುಗೇಡಿಂಗೆ ಒಡಲ ಹೊರೆವಿರಿ ಎಂದಳು ಇಂದುಮುಖಿ**=ತಿನ್ನುವ ಅನ್ನಕ್ಕೆ ದಂಡವಾಗಿ ಒಡಲನ್ನು ಸಾಕುತ್ತಿರುವಿರಿ ಎಂದು ದ್ರೌಪದಿಯು ಭೀಮನ ಮುಂದೆ ತನ್ನ ಒಡಲಿನ ಆಕ್ರೋಶವನ್ನು ಕಾರಿದಳು; ಕುರುಕುಲ+ಅಗ್ರಣಿ; ಅಗ್ರಣಿ=ಮುಂದಾಳು; ಕುರುಕುಲಾಗ್ರಣಿ=ದುರ್ಯೋಧನ; ಹೊರವಡಿಸು=ತಳ್ಳಿ/ಅಟ್ಟಿ/ಹೊರಕ್ಕೆ ಹಾಕು; ಧರೆ=ಭೂಮಿ/ರಾಜ್ಯ; ಭಂಡಾರ=ಬೆಲೆ ಬಾಳುವ ಚಿನ್ನ ಬೆಳ್ಳಿ ವಜ್ರ ಒಡವೆ ಹಣವನ್ನು ಇಡುವ ಜಾಗ/ಬೊಕ್ಕಸ; ಪುರ=ಪಟ್ಟಣ/ಕೋಟೆ; ಕರಿ=ಆನೆ; ತುರಗ=ಕುದುರೆ; ಪಾಯದಳ=ಕಾಲಾಳುಗಳ ದಂಡು; ಸೆಳೆ=ಕೀಳು;

**ಕುರುಕುಲಾಗ್ರಣಿ ನಿಮ್ಮ ಹೊರವಡಿಸಿ ಧರೆಯ ಭಂಡಾರವನು ಪುರವನು ಕರಿ ತುರಗ ರಥ ಪಾಯದಳವನು ಸೆಳೆದುಕೊಂಡನು**=ಕುರುವಂಶದ ನೇತಾರನಾದ ದುರ್ಯೋಧನನು ನಿಮ್ಮನ್ನು ಜೂಜಿನ ಬಲೆಗೆ ಬೀಳಿಸಿಕೊಂಡು ನಿಮ್ಮನ್ನು ಹಸ್ತಿನಾವತಿಯಿಂದ ಹೊರಹಾಕಿ, ರಾಜ್ಯದ ಬೊಕ್ಕಸವನ್ನು, ಹಸ್ತಿನಾವತಿಯನ್ನು, ಆನೆ, ಕುದುರೆ, ರಥ ಮತ್ತು ಕಾಲುದಳದ ಸೇನೆಯನ್ನೆಲ್ಲಾ ವಶಮಾಡಿಕೊಂಡನು;

ದುರುಳ–ನೀಚ/ಕೇಡಿ; **ದುರುಳ ಕೀಚಕಗೆ ಎನ್ನ ಕೊಟ್ಟಿರಿ**=ಕೇಡಿಯಾದ ಕೀಚಕನು ನನ್ನ ಮೇಲೆ ಹಲ್ಲೆ ಮಾಡುತ್ತಿದ್ದರೂ ನೋಡಿಕೊಂಡು ಸುಮ್ಮನಿದ್ದೀರಿ; ಪರಿಮಿತ=ಎಲ್ಲೆಯನ್ನು ಹೊಂದಿದ/ಸೀಮಿತವಾದ; ಇರವು+ಆಯ್ತು; ಇರವು= ಜೀವನ/ಬಾಳು; **ನಿಮ್ಮೈವರಿಗೆ ಪರಿಮಿತದಲಿ ಇರವಾಯ್ತು**=ಕೆಟ್ಟದ್ದನ್ನು ನಾಶ ಮಾಡದ, ಒಳ್ಳೆಯದನ್ನು ನೆಲೆಗೊಳಿಸದ ಸೀಮಿತವಾದ ಬದುಕು ನಿಮ್ಮದು; ಅಕಟ=ಅಯ್ಯೋ; ಲೇಸು+ಆಯ್ತು; ಲೇಸು=ಒಳ್ಳೆಯದು; ಲೇಸಾಯ್ತು=ಈ ಪದ ವ್ಯಂಗ್ಯವನ್ನು ಸೂಚಿಸುತ್ತಿದೆ. ಒಳ್ಳೆಯದಾಯ್ತು ಎಂದರೆ 'ಹೆಂಡತಿಯಾದ ನನ್ನ ಮಾನಪ್ರಾಣಕ್ಕೆ ಹಾನಿ ಬಂದರೂ ಚಿಂತೆಯಿಲ್ಲ, ಹೇಗೋ ನಿಮ್ಮ ಅಯ್ದು ಮಂದಿಯ ಮಾನಪ್ರಾಣಗಳಿಗೆ ಕೇಡು ಉಂಟಾಗಲಿಲ್ಲವಲ್ಲ. ಅದೇ ಒಳ್ಳೆಯದು'.

ಅಂಬುಜ+ಅಕ್ಷಿ; ಅಂಬುಜ=ತಾವರೆಯ ಹೂವು; ಅಕ್ಷಿ=ಕಣ್ಣು; ಅಂಬುಜಾಕ್ಷಿ= ತಾವರೆಯ ಹೂವಿನಂತಹ ಕಣ್ಣುಳ್ಳವಳು/ಸುಂದರಿ; ಹಲುಬು=ಸಂಕಟವನ್ನು ತೋಡಿಕೊಳ್ಳುವುದು/ಅಳು; **ಅಕಟ ಲೇಸಾಯ್ತು ಎಂದು ಅಂಬುಜಾಕ್ಷಿ ಹಲುಬಿದಳು**= ಅಯ್ಯೋ..ನನಗೆ ಕೇಡಾದರೂ ನಿಮಗೆ ಒಳ್ಳೆಯದಾಯಿತಲ್ಲ...

ಅಷ್ಟೇ ಸಾಕು ಎಂದು ಅಣಕದ ನುಡಿಯಿಂದ ಭೀಮನನ್ನು ಚುಚ್ಚುತ್ತ, ದ್ರೌಪದಿಯು ಸಂಕಟದಿಂದ ಕುದಿಯತೊಡಗಿದಳು. ಭಾವ=ಪಾಂಡವರಿಗೆ ದುರ್ಯೋಧನನು ಸೋದರ ಸಂಬಂಧಿಯಾದುದರಿಂದ, ದ್ರೌಪದಿಗೆ ಭಾವನಾಗಿದ್ದಾನೆ; ಭಾಗ್ಯ+ಅಧಿಕನು; ಅಧಿಕ=ಹೆಚ್ಚಿಗೆ/ದೊಡ್ಡ ಪ್ರಮಾಣ; **ಭಾವ ಕೌರವದೇವನು ಭಾಗ್ಯಾಧಿಕನು**=ಭಾವನಾದ ದುರ್ಯೋಧನನು ಮಹಾಭಾಗ್ಯಶಾಲಿ; ಕೂರ್ಮೆ=ಪ್ರೀತಿ; ಧರ್ಮ=ಒಳ್ಳೆಯ ನಡೆನುಡಿ; ಪಾಲಿಸು=ಆಡಳಿತ ನಡೆಸು;

**ಕೃಷ್ಣನ ಕೂರ್ಮೆ ಧರ್ಮದಿ ಅರಸುಗಳ ಒಡೆತನವನು ನೀವು ಪಾಲಿಸಿದಿರಿ**=ಕೃಷ್ಣನ ಪ್ರೀತಿ ಮತ್ತು ಒಳ್ಳೆಯ ನಡೆನುಡಿಯ ಮಾರ್ಗದರ್ಶನದಿಂದ ರಾಜರ ಒಡೆತನದ ಆಡಳಿತವನ್ನು ನೀವು ನಡೆಸಿಕೊಂಡುಬಂದಿರಿ; ತಟಮಟ+ಆಗಿ; ತಟಮಟ= ತೊಂದರೆ; ಲೋಗರ=ಲೋಕದಲ್ಲಿರುವ ಜನರ; ಸೇವೆ=ಚಾಕರಿ/ಊಳಿಗ; ಬೆಂದ+ ಒಡಲು; ಒಡಲು=ಹೊಟ್ಟೆ/ದೇಹ; **ಬೆಂದೊಡಲು**=ಇದೊಂದು ನುಡಿಗಟ್ಟು. ಸಾಯುವ ತನಕ ಎಷ್ಟು ಸಾರಿ ಉಣಿಸು ತಿನಸುಗಳನ್ನು ಸೇವಿಸುತ್ತಿದ್ದರು, ಎಲ್ಲವನ್ನೂ ಜೀರ್ಣಿಸಿಕೊಳ್ಳುತ್ತ ಮತ್ತೆ ಮತ್ತೆ ಹಸಿವಿನ ಸಂಕಟಕ್ಕೆ ಒಳಗಾಗುವ ಮಾನವ ಶರೀರ;

**ಈಗ ನೀವು ತಟಮಟವಾಗಿ ಲೋಗರ ಸೇವೆಯಲಿ ಬೆಂದೊಡಲ ಹೊರೆವಿರಿ**= ಈಗ ಆಪತ್ತಿಗೆ ಒಳಗಾಗಿ ತಲೆಮರೆಸಿಕೊಂಡು ಮಾರುವೇಷದಲ್ಲಿ ಜನರ ಊಳಿಗದ ಆಳುಗಳಾಗಿ ಹೊಟ್ಟೆಹೊರೆದುಕೊಳ್ಳುತ್ತಿದ್ದೀರಿ; ಅಂಜಲು+ಏಕೆ; ಅಂಜು=ಹೆದರು; ಒರಲು=ನರಳು/ಅರಚು; **ಸಾವವಳು ನಿಮಗೆ ಅಂಜಲೇಕೆ ಎಂದು ಅಬಲೆ ಒರಲಿದಳು**=ನನಗೆ ಕೀಚಕನ ಹಲ್ಲೆಯಿಂದ ಪಾರಾಗಿ ಬದುಕಿ ಉಳಿಯುವ ಅವಕಾಶವೇ ಇಲ್ಲವಾಗಿದೆ. ನನ್ನನ್ನು ಕಾಪಾಡಲು ಮುಂದೆ ಬರದ ನಿಮಗೆ ಎದುರಾಡಲು ನಾನೇಕೆ ಹೆದರಬೇಕು ಎಂದು ದ್ರೌಪದಿಯು ತೀವ್ರವಾದ ಸಂಕಟದಿಂದ ನುಡಿದಳು; ನೇಮ=ಅಪ್ಪಣೆ/ಅನುಮತಿ/ಒಪ್ಪಿಗೆ; **ಭೀಮ ತನಗೆ ಸಾವಿನ ನೇಮವನು ಕೊಟ್ಟೈ**=ಭೀಮನೇ, ನೀನು ನನಗೆ ಸಾಯಲು ಒಪ್ಪಿಗೆಯನ್ನು ನೀಡಿರುವೆ; ನಿಮ್ಮಣ್ಣನ+ಆಜ್ಞೆ; ಆಜ್ಞೆ=ಅಪ್ಪಣೆ; ವಿರಾಮ+ಆಗದೆ; ವಿರಾಮ= ಕೊನೆಗಾಣುವುದು/ಅಂತ್ಯ; ಮೈಸಿರಿ=ಸತ್ತ್ವ/ಗುಣ;

**ನಿಮ್ಮಣ್ಣನಾಜ್ಞೆ ವಿರಾಮವಾಗದೆ ಧರ್ಮದ ಮೈಸಿರಿಯನು ಅರಿದು ಬದುಕಿ**=ನಿಮ್ಮ ಅಣ್ಣನ ಅಪ್ಪಣೆಗೆ ಕುಂದುಬರದಂತೆ ಧರ್ಮದ ಗುಣವನ್ನು ಅರಿತುಕೊಂಡು ಬಾಳಿರಿ; ಕಾಮಿನಿ=ಹೆಂಗಸು; ಕೇಳಿ=ಆಟ/ಕ್ರೀಡೆ; **ಕಾಮಿನಿಯ ಕೇಳಿಯಲಿ ನೆನೆವುದು**=ಹೆಂಗಸಿನೊಡನೆ ಕಾಮದ ನಂಟನ್ನು ನೀನು ಪಡೆದ ಸಮಯದಲ್ಲಿ ನನ್ನನ್ನು ನೆನಪಿಸಿಕೊಳ್ಳುವುದು. ಈ ನುಡಿಯಲ್ಲಿ ವ್ಯಂಗ್ಯದ ದನಿಯಿದೆ. ಪಾಂಡವರಾದ ನಿಮ್ಮೆಲ್ಲರ ಕಾಮ ದಾಹವನ್ನು ಹಿಂಗಿಸಿಕೊಳ್ಳುವುದಕ್ಕೆ ನನ್ನ ದೇಹ

ಬೇಕಾಗಿತ್ತೆ ಹೊರತು, ನನ್ನ ಬಗ್ಗೆ ಯಾವುದೇ ಪ್ರೀತಿಯಾಗಲಿ ಇಲ್ಲವೇ ಜವಾಬ್ದಾರಿಯಾಗಲಿ ನಿಮ್ಮಲ್ಲಿ ಇರಲಿಲ್ಲ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; ತಾಮಸ=ತಿಳುವಳಿಕೆಯಿಲ್ಲದಿರುವುದು/ಅರಿವಿಲ್ಲದಿರುವುದು; ಮೀರಿ=ಲೆಕ್ಕಿಸದೆ; ಉದ್ದಾಮತೆ=ಸಿಟ್ಟು/ಕೋಪ; ಸೈರಿಸು=ಸಹಿಸು/ತಾಳು; ಚರಣ=ಪಾದ; ಎರಗು=ಮೇಲೆ ಬೀಳು; **ತಾಮಸದಿ ತಾ ಮೀರಿ ನುಡಿದ ಉದ್ದಾಮತೆಯ ಸೈರಿಸುವುದು ಎಂದು ಚರಣದಲಿ ಎರಗಿದಳು**=ತಿಳುವಳಿಕೆಯಿಲ್ಲದ ನಾನು ನಿನ್ನನ್ನು ಲೆಕ್ಕಿಸದೆ ಆಕ್ರೋಶದಿಂದ ನುಡಿದ ಮಾತುಗಳನ್ನು ಸಹಿಸಿಕೊಳ್ಳುವುದು ಎಂದು ಹೇಳುತ್ತ ಭೀಮನ ಪಾದಗಳ ಮೇಲೆ ಉರುಳಿದಳು;

**ಕಲಿಭೀಮ ಕಂಬಿನಿ ತುಂಬಿದನು**=ಕಂಗಾಲಾಗಿರುವ ದ್ರೌಪದಿಯನ್ನು ಕಂಡು ಶೂರನಾದ ಭೀಮನ ಕಣ್ಣುಗಳು ತುಂಬಿಬಂದವು; ಅಂತಃಕರಣ=ಮನಸ್ಸು; ಕಡು=ಬಹಳ; ನೆನೆ=ಯೋಚನೆ ಮಾಡು/ಆಲೋಚಿಸು; **ಅಂತಃಕರಣ ಕಡು ನೆನೆದುದು**=ದ್ರೌಪದಿಗೆ ಬಂದೊದಗಿರುವ ಆಪತ್ತನ್ನು ಕುರಿತು ಭೀಮನು ಬಹಳವಾಗಿ ಆಲೋಚಿಸತೊಡಗಿದನು ; ರೋಷ=ಸಿಟ್ಟು/ಕೋಪ; ಘನತೆ=ದಟ್ಟಣೆ; **ರೋಷದ ಘನತೆ ಹೆಚ್ಚಿತು**=ಕೋಪದ ಆವೇಶ ಹೆಚ್ಚಾಯಿತು; ಹಗೆ=ಶತ್ರು; ಹಿಂಡು=ಹಿಸುಕು/ನುಲಿಚು/ತಿರುಚು;

**ಹಗೆಗಳನು ಮನದೊಳಗೆ ಹಿಂಡಿದನು**=ದ್ರೌಪದಿಯ ಅಪಮಾನಕ್ಕೆ ಕಾರಣರಾದ ವಿರಾಟರಾಯನ ಕಡೆಯವರಾದ ರಾಣಿ ಸುದೇಷ್ಣೆ ಮತ್ತು ಕೀಚಕನನ್ನು ಮನಸ್ಸಿನಲ್ಲಿಯೇ ಸದೆಬಡಿದನು; ತನು=ದೇಹ; ಪುಳಕ= ರೋಮಾಂಚನ/ಮಯ್ ನವಿರೇಳುವಿಕೆ; ಉಬ್ಬರಿಸು=ಹೆಚ್ಚಾಗು; **ತನುಪುಳಕ ಉಬ್ಬರಿಸಿ**=ಹಗೆಗಳ ಬಗ್ಗೆ ಕೋಪೋದ್ರೇಕ ಮತ್ತು ದ್ರೌಪದಿಯ ಬಗ್ಗೆ ಪ್ರೀತಿಕರುಣೆಯ ಭಾವಗಳು ಒಡನೊಡನೆ ಮೂಡುತ್ತಿದ್ದಂತೆಯೇ ಭೀಮನ ಮಯ್ ಮನದಲ್ಲಿ ರೋಮಾಂಚನ ಹೆಚ್ಚಾಗಿ; ವನಿತೆ=ಹೆಂಗಸು; **ಮೆಲ್ಲನೆ ವನಿತೆಯನು ತೆಗೆದು ಅಪ್ಪಿದನು**=ಹಿತಕರವಾದ ರೀತಿಯಲ್ಲಿ ದ್ರೌಪದಿಯನ್ನು ಅಪ್ಪಿಕೊಂಡನು; ಸೆರಗು=ಮೇಲುಹೊದಿಕೆ; ತೊಡೆ=ಒರಸು;

**ಸೆರಗಿನಲಿ ಕಂಬನಿಯ ತೊಡೆದನು**=ತನ್ನ ಹೆಗಲಿನಲ್ಲಿದ್ದ ಹೊದಿಕೆಯ ತುದಿಯಿಂದ ದ್ರೌಪದಿಯ ಕಣ್ಣೀರನ್ನು ಒರೆಸಿದನು; ಮಾನಿನಿ=ಹೆಂಗಸು; ಕುರುಳು=ತಲೆಗೂದಲು; ನೇವರಿಸು=ಪ್ರೀತಿಯಿಂದ ಪಕ್ಕಕ್ಕೆ ಸರಿಸು; **ಮಾನಿನಿಯ ಕುರುಳ ನೇವರಿಸಿದನು**=ದ್ರೌಪದಿಯ ತಲೆಗೂದಲನ್ನು ಒಲವಿನಿಂದ ಸವರಿದನು; ಗಲ್ಲ=ತುಟಿಯ ಕೆಳಭಾಗ; ಮುಂಡಾಡು=ಮುತ್ತಿಡು/ಚುಂಬಿಸು; **ಗಲ್ಲವನು ಒರೆಸಿ ಮುಂಡಾಡಿದನು**=ಕಣ್ಣೀರ ಹನಿಗಳ ಕರೆಯಿಂದ ಕೂಡಿದ್ದ ದ್ರೌಪದಿಯ ಗಲ್ಲವನ್ನು

ಒರೆಸಿ ಮುತ್ತಿಟ್ಟನು; ಹೊರೆ=ಹತ್ತಿರ; ಗಿಂಡಿ=ಕಿರಿದಾದ ಬಾಯುಳ್ಳ ಪಾತ್ರೆ; ಮುಖ+ಅಂಬುಜ; ಅಂಬುಜ=ತಾವರೆಯ ಹೂವು; ಮುಖಾಂಬುಜ= ತಾವರೆಯ ಹೂವಿನಂತಹ ಕೋಮಲವಾದ ಮೊಗ;

**ಮಂಚದ ಹೊರೆಯ ಗಿಂಡಿಯ ನೀರಿನಲಿ ಮುಖಾಂಬುಜವ ತೊಳೆದನು**= ಮಂಚದ ಹತ್ತಿರದಲ್ಲಿದ್ದ ಗಿಂಡಿಯ ನೀರಿನಿಂದ ದ್ರೌಪದಿಯ ಮೊಗವನ್ನು ತೊಳೆದನು; ಅರಸಿ=ರಾಣಿ; ವಿಸ್ತರಿಸು=ದೊಡ್ಡದಾಗಿಸು/ಬೆಳೆಸು; **ಅರಸಿ, ವಿಸ್ತರಿಸಲೇಕೆ... ಹೋಗು**=ರಾಣಿಯೇ, ಇನ್ನು ಹೆಚ್ಚಿನದೇನನ್ನೂ ಹೇಳಬೇಡ ನನಗೆಲ್ಲವೂ ತಿಳಿದಿದೆ, ಸುಮ್ಮನಿರು; ಖಾತಿ=ಕೋಪ/ರೇಗುವಿಕೆ; **ಖಾತಿಯನು ಬಿಡು ಬಿಡು**=ನನ್ನ ಮೇಲಿನ ಕೋಪವನ್ನು ಬಿಟ್ಟುಬಿಡು ; ಆಜ್ಞೆ=ಅಪ್ಪಣೆ; ಗೆರೆ=ಗೀಟು; ದಾಂಟು=ಹಾರು/ನೆಗೆ/ಮೀರು; **ಎಮ್ಮಣ್ಣನ ಆಜ್ಞೆಯ ಗೆರೆಯ ದಾಂಟಿದೆ ದಾಂಟಿದೆನು**=ನಮ್ಮಣ್ಣನ ಆಜ್ಞೆಯ ಗೆರೆಯನ್ನು ದಾಟಿದೆನು... ದಾಟಿದೆನು.

ಯಾವುದೇ ಕಾರಣದಿಂದಲೂ ಇನ್ನು ಮುಂದೆ ನಮ್ಮಣ್ಣನ ಆಜ್ಞೆಯನ್ನು ಲೆಕ್ಕಿಸದೆ ಮುನ್ನುಗ್ಗುತ್ತೇನೆ;

ನಸು=ಕೊಂಚ/ತುಸು/ಸ್ವಲ್ಪ; ಮಿಸುಕು=ಕದಲು/ಅಲ್ಲಾಡು; ಬಸುರು=ಹೊಟ್ಟೆ; ಬಗಿ=ಸೀಳು; **ನಸು ಮಿಸುಕಿದೊಡೆ ಕೀಚಕನ ಬಸುರ ಬಗಿವೆನು**=ನಿನ್ನನ್ನು ಮತ್ತೆ ಕೆಣಕಲು ಕೀಚಕನು ಬಂದರೆ ಅವನ ಹೊಟ್ಟೆಯನ್ನು ಬಗಿಯುತ್ತೇನೆ; ವೈರಾಟ= ವಿರಾಟರಾಜನ; ತೊಡೆ=ಅಳಿಸು/ನಾಶಮಾಡು; **ವೈರಾಟ ವಂಶದ ಹೆಸರ ತೊಡೆವೆನು**=ವಿರಾಟರಾಜನ ವಂಶವನ್ನೇ ಬುಡಸಮೇತ ಕಿತ್ತುಹಾಕುತ್ತೇನೆ; ಅರಿ=ತಿಳಿ; ವ್ರಜ=ಗುಂಪು/ಸಮೂಹ; ಕುಸುರಿ=ತುಂಡು/ಚೂರು; ತರಿ=ಕತ್ತರಿಸು; ಕುಸುರಿ ತರಿ=ಇದೊಂದು ನುಡಿಗಟ್ಟು. ಸಣ್ಣ ಸಣ್ಣದಾಗಿ ಕತ್ತರಿಸು/ತುಂಡುಮಾಡು; **ನಮ್ಮ ಅರಿದೊಡೆ ಕೌರವವ್ರಜವ ಕುಸುರಿ ತರಿವೆನು**=ವಿರಾಟನಗರಿಯಲ್ಲಿ ಅಜ್ಞಾತ ವಾಸದಲ್ಲಿರುವ ನಮ್ಮ ಬಗ್ಗೆ ದುರ್ಯೋಧನಾದಿಗಳಿಗೆ ತಿಳಿದರೆ, ಕುರುಕುಲದ ಸಮೂಹವನ್ನು ಕಡಿದು ಕತ್ತರಿಸಿ ತುಂಡುತುಂಡು ಮಾಡುತ್ತೇನೆ; ಕಷ್ಟ=ತೊಂದರೆ/ ಸಂಕಟ; ಎಸಗು=ಮಾಡು; ಹಾಯ್=ತುಡಿ/ಮಿಡುಕು/ತವಕಿಸು/ತಳಮಳಿಸು; ಎಂದರ್+ಆದೊಡೆ; ಅಮರ+ಅದ್ರಿಯಲಿ; ಸಂತತಿ=ವಂಶ/ಗುಂಪು; ಮುಸುಡು= ಮೊಗ; ಅಮರ=ದೇವತೆ; ಅದ್ರಿ=ಬೆಟ್ಟ/ಪರ್ವತ; ಅಮರಾದ್ರಿ=ದೇವತೆಗಳು ನೆಲೆಸಿರುವ ಮೇರು ಪರ್ವತ; ತೇಯ್=ಉಜ್ಜು;

**ಭೀಮ ಕಷ್ಟವನು ಎಸಗಿದನು ಹಾಯ್ ಎಂದರಾದೊಡೆ ದೇವಸಂತತಿಯ ಮುಸುಡನು ಅಮರಾದ್ರಿಯಲಿ ತೇವೆನು**=ಭೀಮನು ಕೊಲೆಗೆಲಸಕ್ಕೆ ಮುಂದಾಗಿದ್ದಾನೆ ಎಂದು ದೇವತೆಗಳು ತಳಮಳಿಸಿದರೆ, ಅಮರಾದ್ರಿಯಲ್ಲಿರುವ

ಕೋಡುಗಲ್ಲಿನ ಮೇಲೆ ದೇವತೆಗಳ ಮುಸುಡಿಯನ್ನು ಉಜ್ಜುತ್ತೇನೆ. ಅವರೆಲ್ಲರನ್ನೂ ಸದೆಬಡಿಯುತ್ತೇನೆ; ಮುನಿದನ್+ಆದೊಡೆ; ಮುನಿ=ಸಿಟ್ಟಾಗು/ಕೋಪಗೊಳ್ಳು; ಹರಿ=ಕಡಿ/ಕತ್ತರಿಸು; **ಮುನಿದನಾದೊಡೆ ಅಣ್ಣತನ ಇಂದಿನಲಿ ಹರಿಯಲಿ**=ಧರ್ಮರಾಯನು ತನ್ನ ಆಜ್ಞೆಯನ್ನು ಮೀರಿದ್ದಕ್ಕಾಗಿ ಕೋಪಿಸಿಕೊಂಡರೆ, ಇಂದಿನಿಂದ ಅವನು ನನಗೆ ಅಣ್ಣನಲ್ಲ, ನಾನು ಅವನಿಗೆ ತಮ್ಮನಲ್ಲ. ನಮ್ಮಿಬ್ಬರ ಅಣ್ಣ–ತಮ್ಮನೆಂಬ ನಂಟು ಇಂದಿಗೆ ಕಿತ್ತುಹೋಗಲಿ; ಕನಲು=ಸಿಟ್ಟು/ಕೋಪ; ಕೈದೋರು=ತೋಳ್ಬಲವನ್ನು ತೋರಿಸು;

**ಪಾರ್ಥ ಸಹದೇವ ನಕುಲರು ಕನಲಿದೊಡೆ ಕೈದೋರುವೆನು**=ಅರ್ಜುನ ಸಹದೇವ ನಕಲರು ನನ್ನ ಬಗ್ಗೆ ಕೋಪಿಸಿಕೊಂಡರೆ ಅವರಿಗೂ ನನ್ನ ತೋಳ್ಬಲವನ್ನು ತೋರಿಸುತ್ತೇನೆ; ಅನುಜ=ತಮ್ಮ; **ಇವರುಗಳ ಅನುಜರು ಎಂಬೆನೆ**=ನಿನ್ನ ಮಾನಪ್ರಾಣವನ್ನು ಕಾಪಾಡಲು ಮನಸ್ಸು ಮಾಡದ, ಮುಂದೆ ಬರದ ಆ ಅರ್ಜುನ ಸಹದೇವ ನಕುಲರನ್ನು ತಮ್ಮಂದಿರೆಂದು ಹೇಳಲು ನಾಚಿಕೆಯಾಗುತ್ತದೆ; ಹಾಯ್=ಮೇಲೆ ಬೀಳು; ಘನ=ದೊಡ್ಡದಾದುದು/ಅತಿಶಯವಾದುದು; ಮುರಾರಿ=ಮುರನೆಂಬ ರಕ್ಕಸನನ್ನು ಕೊಂದವನು/ಕೃಷ್ಣ; ಮೀರು=ವಿರೋಧಿಸು/ಪ್ರತಿಭಟಿಸು; **ಕೃಷ್ಣ ಹಾಯ್ದರೆ ಘನ ಮುರಾರಿಯ ಮೀರುವೆನು**=ಕೃಷ್ಣನು ನನ್ನನ್ನು ವಿರೋಧಿಸಿದರೆ ದೊಡ್ಡವನಾದ ಆ ಮುರಾರಿಯನ್ನು ಲೆಕ್ಕಿಸುವುದಿಲ್ಲ; **ಬಳಿಕ ಎನಗೆ ಸಮಬಲರು ಆರು**=ಈ ರೀತಿ ಯಾರನ್ನೂ ನಾನು ಲೆಕ್ಕಿಸದೇ ಇರುವಾಗ ನನಗೆ ಸಮಬಲರು ಯಾರಿದ್ದಾರೆ; ಅನ್ವಯ=ವಂಶ; ತರಿ=ಕಡಿ/ಕತ್ತರಿಸು;

**ಕೀಚಕ ಅನ್ವಯವ ತರಿವೆನು**=ಕೀಚಕನ ವಂಶವನ್ನೇ ನಾಶಮಾಡುತ್ತೇನೆ; ಈಸು=ಇಷ್ಟು; ಪಾಶ=ಹಗ್ಗ; **ಈಸು ದಿನವು ಎಮ್ಮಣ್ಣನ ಆಜ್ಞೆಯ ಪಾಶದಲಿ ಸಿಕ್ಕಿರ್ದೆ**=ಇಷ್ಟು ದಿನ ನಮ್ಮಣ್ಣನ ಆಜ್ಞೆಯೆಂಬ ಹಗ್ಗದಿಂದ ಕಟ್ಟಲ್ಪಟ್ಟಿದ್ದೆನು; ಕೂಸು= ಮರಿ; ಕೆಣಕು=ರೇಗಿಸು/ಕೆರಳಿಸು; ವೊಲು=ಅಂತೆ/ಹಾಗೆ; ಕುರು= ಕುರುವಂಶಕ್ಕೆ ಸೇರಿದ ದುರ್ಯೋಧನ ಮತ್ತು ಅವನ ತಮ್ಮಂದಿರು; ಕೀಚಕ+ಆದಿಗಳು; ಆದಿಗಳು=ಮೊದಲಾದವರು; ಗಾಸಿ=ತೊಂದರೆ; **ಸಿಂಹದ ಕೂಸ ನರಿ ಕೆಣಕುವವೊಲು ಈ ಕುರು ಕೀಚಕಾದಿಗಳು ಕೆಣಕಿ ಗಾಸಿಯಾದರು**=ಕಾಡಿನ ರಾಜನಾದ ಸಿಂಹದ ಮರಿಯನ್ನು ನರಿಯು ಕೆಣಕುವಂತೆ ಈ ಕುರುವಂಶದ ದುರ್ಯೋಧನ, ದುಶ್ಶಾಸನ ಮತ್ತು ವಿರಾಟರಾಜನ ಸೇನಾನಿಯಾದ ಕೀಚಕ ಮುಂತಾದವರು ನಿನಗೆ ಅಪಮಾನ ಮಾಡುವುದರ ಮೂಲಕ ನನ್ನನ್ನು ಕೆಣಕಿ ದುರಂತಕ್ಕೆ ಒಳಗಾದರು ;

ವೀಸ=ಈಗ ಇಂಡಿಯಾ ದೇಶದಲ್ಲಿ ಚಲಾವಣೆಯಲ್ಲಿರುವ ನೂರು ಪೈಸೆಗಳಿಗೆ ಒಂದು ರೂಪಾಯಿ ಎಂಬ ಹಣಕಾಸಿನ ವ್ಯವಸ್ಥೆಯು ಬರುವುದಕ್ಕೆ ಮೊದಲು

ಹದಿನಾರು ಆಣೆಗಳಿಗೆ ಒಂದು ರೂಪಾಯಿ ಎಂಬ ವ್ಯವಸ್ಥೆಯಿತ್ತು. ರೂಪಾಯಿಯ ಈ ಹದಿನಾರು ಆಣೆಗಳ ಮೊತ್ತದಲ್ಲಿ ಒಂದು ಆಣೆಯ ಭಾಗವನ್ನು 'ವೀಸ' ಎಂದು ಕರೆಯುತ್ತಿದ್ದರು; ಬಡ್ಡಿ=ಸಾಲವಾಗಿ ತೆಗೆದುಕೊಂಡ ಹಣಕ್ಕೆ ದಿನ/ವಾರ/ತಿಂಗಳು/ವರುಶದ ಲೆಕ್ಕದಲ್ಲಿ ಕೊಡುವ ಹೆಚ್ಚಿನ ಹಣ; **ವೀಸಬಡ್ಡಿ**=ಸಾಲವಾಗಿ ತೆಗೆದು ಕೊಂಡಾಗ ಪಡೆಯುವ ಮೂಲ ಹಣವಾದ ಅಸಲು ಮತ್ತು ಅದಕ್ಕೆ ಕಾಲಕಾಲದಲ್ಲಿ ಕಟ್ಟುವ ಬಡ್ಡಿ. **ವೀಸಬಡ್ಡಿಯಲಿ**=ಅಸಲು ಬಡ್ಡಿ ಸಮೇತ; ಇಲ್ಲಿ 'ವೀಸಬಡ್ಡಿಯಲಿ' ಎಂಬುದು ಒಂದು ರೂಪಕವಾಗಿ ಬಳಕೆಗೊಂಡಿದೆ. ಇದುವರೆಗೆ ಪಾಂಡವರಿಗೆ ಹಗೆಗಳು ಯಾವಾವ ಕೇಡುಗಳನ್ನು ಬಗೆದಿದ್ದಾರೆಯೋ, ಅವೆಲ್ಲಕ್ಕೂ ಇಮ್ಮಡಿ/ಮುಮ್ಮಡಿ/ನಾಲ್ವಡಿಯಾಗಿ/ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಹಗೆಗಳಿಗೆ ಸಾವುನೋವನ್ನುಂಟುಮಾಡುವುದು; ನಾಯ್ಗಳ=ನಾಯಿಗಳ. ಬಯ್ಗುಳದ ಪದ; ಅಸು=ಪ್ರಾಣ/ಜೀವ;

**ವೀಸ ಬಡ್ಡಿಯಲಿ ನಾಯ್ಗಳ ಅಸುವ ಕೊಂಬೆನು**=ನಮಗೆ ಕೇಡನ್ನು ಬಗೆದಿರುವ ನಾಯಿಗಳನ್ನು ಚೆನ್ನಾಗಿ ಸದೆಬಡಿದು, ಅವರ ಜೀವವನ್ನೇ ತೆಗೆದುಕೊಳ್ಳುತ್ತೇನೆ; ವಾಸಿ=ಹಿರಿಮೆ; ಮೇರೆ=ಎಲ್ಲೆ/ಸೀಮೆ; **ವಾಸಿ ಧರ್ಮದ ಮೇರೆ ತಪ್ಪಿತು**=ದೊಡ್ಡದಾಗಿ ಹೇಳಿಕೊಳ್ಳುವ ಧರ್ಮದ ಹಿರಿಮೆಯು ತನ್ನ ಎಲ್ಲೆಯನ್ನು ಮೀರಿದೆ. ಅಂದರೆ ಇನ್ನು ಮುಂದೆ ಧರ್ಮದ ಹೆಸರನ್ನು ಹೇಳಿಕೊಂಡು ತಾಳ್ಮೆಯಿಂದ ಸುಮ್ಮನಿರ ಲಾಗದು; ಹರಣ=ಜೀವ/ಪ್ರಾಣ; ಇದಕೋ=ಇದೋ ನೋಡು; ಸಂಚಕಾರ=ಕೇಡು/ಹಾನಿ;

**ಕಾಂತೆ ಕೇಳು, ಕೀಚಕ ಕೌರವೇಂದ್ರರ ಹರಣಕೆ ಇದಕೋ ಸಂಚಕಾರವ**=ದ್ರೌಪದಿಯೇ ಕೇಳು ಕೀಚಕ, ದುರ್ಯೋಧನಾದಿಗಳ ಜೀವಕ್ಕೆ ಇದೋ ನೋಡು... ಇನ್ನು ಮುಂದೆ ಕೇಡುಗಾಲ ಬಂದಿದೆ; ಬಗೆ=ಆಲೋಚನೆ/ಯೋಚನ; ಬಗೆವನೆ=ಲೆಕ್ಕಿಸುತ್ತಾನೆಯೇ; ಬಗೆ=ಗಣಿಸು/ಲೆಕ್ಕಿಸು; **ಕೆರಳಿದೊಡೆ ನೀತಿಗೀತಿಗಳ ಈ ಭೀಮ ಬಗೆವನೆ**=ಅಪಮಾನ ಮತ್ತು ಸಂಕಟದಿಂದ ನೊಂದಿರುವ ಭೀಮನಾದ ನಾನು ಕೋಪೋದ್ರೇಕದಿಂದ ಕೆರಳಿದರೆ, ಲೋಕದ ನೀತಿಗೀತಿಗಳನ್ನು ಲೆಕ್ಕಿಸುವುದಿಲ್ಲ; **ಕೆರಳಿಚು=ಉದ್ರೇಕಿಸು; ಹರಿಬ=ಸಂಕಟ;** ಎನ್ನದು=ನನ್ನದು; **ಕೆರಳಿಚಿದೆ...ಇನ್ನೇನು ನಿನ್ನಯ ಹರಿಬವು ಎನ್ನದು**=ನಿನ್ನ ಮಾನಪ್ರಾಣಕ್ಕೆ ಬಂದಿರುವ ಆಪತ್ತನ್ನು ನನಗೆ ತಿಳಿಸಿ ನನ್ನನ್ನು ಹೋರಾಟಕ್ಕೆ ಅಣಿಗೊಳಿಸಿರುವೆ. ಇನ್ನು ಮುಂದೆ ನಿನ್ನ ಸಂಕಟವೇ ನನ್ನ ಸಂಕಟ; ಜಾರ=ವಿಟ/ಹಾದರಿಗ; ಸಂಕೇತ=ಗುರುತು;

**ನಾಯಿ ಜಾರನ ಕರೆದು ನಾಟ್ಯ ಮಂದಿರವ ಸಂಕೇತದಲಿ ಸೂಚಿಸು**=ಹಾದರಿಗನಾದ ಆ ನಾಯಿ ಕೀಚಕನನ್ನು ಕರೆದು ನಾಟ್ಯಮಂದಿರದ ಬಳಿಗೆ ಬರಲು

ಸೂಚಿಸು; ಇರುಳು=ರಾತ್ರಿ; ಐತಂದು=ಬಂದು/ಆಗಮಿಸಿ; ಖುಲ್ಲ=ನೀಚ/ಕೇಡಿ; ಉದರ=ಹೊಟ್ಟೆ; ಬಗಿದು=ಸೀಳಿ; ಶಾಕಿನಿ=ದುರ್ಗಾದೇವಿಯ ಪರಿಚಾರಿಕೆಯರಲ್ಲಿ ಒಬ್ಬಳು; **ಅಲ್ಲಿಗೆ ಇರುಳು ಐತಂದು ಮರೆಯಲಿ ಖುಲ್ಲನ ಉದರವ ಬಗಿದು ರಕುತವ ಶಾಕಿನಿಯರಿಗೆ ಚೆಲ್ಲುವೆನು**=ನಾಟ್ಯಮಂದಿರಕ್ಕೆ ಇಂದಿನ ರಾತ್ರಿ ಬಂದು, ಮರೆಯಲ್ಲಿದ್ದುಕೊಂಡು ಕಾದು ಕುಳಿತು, ಆ ನೀಚನ ಹೊಟ್ಟೆಯನ್ನು ಬಗಿದು, ಅವನ ನೆತ್ತರನ್ನು ಶಾಕಿನಿಯರು ಕುಡಿಯುವಂತೆ ಮಾಡುತ್ತೇನೆ;

**ಇದಕೆ ಸಂದೇಹ ಬೇಡ**=ಇದರಲ್ಲಿ ಯಾವ ಅನುಮಾನವನ್ನು ಪಡಬೇಡ. ನಾನು ಹೇಳಿದಂತೆಯೇ ಆ ಕೇಡಿಯನ್ನು ಕೊಲ್ಲುತ್ತೇನೆ; ಕೆಲಬಲನು= ಅಕ್ಕಪಕ್ಕದವರು; ಅರಿದುದು+ಆದೊಡೆ; ಅರಿ=ತಿಳಿ; ಆದೊಡೆ=ಆದರೆ; ಔಷಧಿ=ಮದ್ದು; **ಔಷಧಿಯ ಬಲ್ಲೆನು**=ಇದೊಂದು ನುಡಿಗಟ್ಟು. ಯಾವುದೇ ಸಮಸ್ಯೆ ಬಂದಾಗ ಯುಕ್ತಿಯಿಂದ ಮತ್ತು ಶಕ್ತಿಯಿಂದ ಅದನ್ನು ಪರಿಹರಿಸುವ ಬಗೆಯನ್ನು ತಿಳಿದಿರುವುದು;

**ಅಲ್ಲಿ ಕೆಲಬಲನು ಅರಿದುದಾದೊಡೆ ಅದಕೆ ಔಷಧಿಯ ಬಲ್ಲೆನು**= ನಾಟ್ಯ ಮಂದಿರದ ಅಕ್ಕಪಕ್ಕದಲ್ಲಿರುವ ಇತರರಿಗೆ ನಾನು ಕೀಚಕನನ್ನು ಕೊಂದ ವಿಚಾರ ತಿಳಿದರೆ, ಅದಕ್ಕೆ ಏನು ಮಾಡಬೇಕೆಂಬುದು ನನಗೆ ಗೊತ್ತಿದೆ; ಕರೆಮರೆ= ಮುಚ್ಚುಮರೆ; **ಕರೆಮರೆಯಿಲ್ಲ**=ನಾನು ಹೇಳುತ್ತಿರುವ ಮಾತುಗಳಲ್ಲಿ ಯಾವ ಮುಚ್ಚುಮರೆಯಿಲ್ಲ. ಅಂದರೆ ನಾನು ಹೇಳಿದಂತೆಯೇ ಮಾಡುತ್ತೇನೆ; ಮಾನಿನಿ= ಹೆಂಗಸು; ಅಂಗನೆ=ಹೆಂಗಸು; ಬೀಳ್ಕೊಡು=ಕಳುಹಿಸುವುದು; **ಮಾನಿನಿ ಹೋಗು ಎನುತ ಅಂಗನೆಯ ಬೀಳ್ಕೊಟ್ಟನು**=ದ್ರೌಪದಿಯೇ ಹೋಗು ಎಂದು ಹೇಳಿ, ಅವಳನ್ನು ಕಳುಹಿಸಿಕೊಟ್ಟನು; **ಹರುಷದಲಿ ಹೆಚ್ಚಿದಳು**=ಆನಂದದಿಂದ ಉಬ್ಬಿಹೋದಳು ; ಪುರುಷ=ಗಂಡಸು/ಪರಾಕ್ರಮಿ/ಗಂಡುಗಲಿ;

**ಪುರುಷರ ಪುರುಷನಲ್ಲಾ ಭೀಮ**=ಗಂಡುಗಲಿಗಳ ಗುಂಪಿನಲ್ಲಿ ಈ ನನ್ನ ಭೀಮ ಮಹಾಗಂಡುಗಲಿ ಆಗಿದ್ದಾನೆ; ತನ್ನಯ=ನನ್ನ ಪಾಲಿನ; ಪರಮ=ಅತಿಶಯವಾದ/ ಅತ್ಯುತ್ತಮವಾದ; ಸುಕೃತ=ಪುಣ್ಯ/ಭಾಗ್ಯ; ಉದಯ=ಹುಟ್ಟು/ಕಾಂತಿ; **ತನ್ನಯ ಪರಮ ಸುಕೃತ ಉದಯವಲಾ ನೀನೊಬ್ಬನು ಎಂದು ಎನುತ ಅರಸಿ ಕಾಂತನ ಬೀಳುಕೊಂಡಳು**=ತನ್ನ ಪರಮ ಪುಣ್ಯವೇ ನಿನ್ನ ರೂಪಿನಲ್ಲಿ ಹುಟ್ಟಿಬಂದಿದೆ ಎಂದು ದ್ರೌಪದಿಯು ಭೀಮನನ್ನು ಹಾಡಿಹೊಗಳುತ್ತ, ಅವನಿಂದ ಬೀಳ್ಕೊಂಡಳು; **ನಿಜಭವನಕೆ ತಿರುಗಿದಳು**=ತನ್ನ ರಾಣಿವಾಸದ ಕೊಟಡಿಗೆ ಹಿಂತಿರುಗಿದಳು.



## ನೋಟ-೧೦

ಇತ್ತಲು=ಈ ಕಡೆ; ತರಣಿ=ಸೂರ್ಯ; ತಾವರೆಯ ಬಾಗಿಲು=ರಾತ್ರಿಯ ವೇಳೆಯಲ್ಲಿ ಮುಚ್ಚಿಕೊಂಡಿದ್ದ ತಾವರೆಯ ಹೂವಿನ ದಳಗಳು; ಬೀಯಗ=ಬೀಗ; **ಇತ್ತಲು ತರಣಿ ತಾವರೆಯ ಬಾಗಿಲಿನ ಬೀಯಗವ ತೆಗೆದನು**=ಈ ಕಡೆ ಸೂರ್ಯನು ತಾವರೆಯ ಬಾಗಿಲಿನ ಬೀಗವನ್ನು ತೆರೆದನು. ಅಂದರೆ ಸೂರ್ಯನು ಮೂಡಲ ದಿಕ್ಕಿನಲ್ಲಿ ಕಾಣಿಸಿಕೊಳ್ಳುತ್ತಿದ್ದಂತೆಯೇ ಎಳೆ ಬಿಸಿಲಿನ ಕಿರಣಗಳ ತಾಕುವಿಕೆಯಿಂದ ರಾತ್ರಿಯ ವೇಳೆಯಲ್ಲಿ ಮುಚ್ಚಿಕೊಂಡಿದ್ದ ತಾವರೆಯ ಹೂವಿನ ದಳಗಳು ಅರಳಿದವು; ವೃಕೋದರ=ಭೀಮ; ವೃಕ+ಉದರ; ವೃಕ=ತೋಳ; ಉದರ= ಹೊಟ್ಟೆ; ವೃಕೋದರ=ತೋಳದ ಹೊಟ್ಟೆಯಂತಹವನು ಎಂಬ ನುಡಿಗಟ್ಟು. ಎಷ್ಟು ಉಂಡರೂ ತಿಂದರೂ ಸಾಕಾಗದ 'ಹೊಟ್ಟೆಬಾಕ' ಎನ್ನುವ ತಿರುಳನ್ನು ಒಳಗೊಂಡಿದೆ; ವಲ್ಲಭೆ=ಹೆಂಡತಿ; ವೃಕೋದರನ ವಲಭೆ=ಸೈರಂಧ್ರಿ;

**ಆ ದಿವಸ ಕೀಚಕ ಅರಮನೆಗೆ ಬರುತ ವೃಕೋದರನ ವಲ್ಲಭೆಯ ಕಂಡನು**= ಮಾರನೆಯ ದಿನ ಬೆಳಗ್ಗೆ ಕೀಚಕನು ಅರಮನೆಗೆ ಬರುತ್ತಿರುವಾಗ ಸೈರಂಧ್ರಿಯನ್ನು ಕಂಡನು; ಕೈದುಡುಕು=ಮುನ್ನುಗ್ಗಿ ತಟ್ಟನೆ ಕಯ್ಯಿಂದ ಹಿಡಿದುಕೊಳ್ಳುವುದು; ಅಂಜು=ಹೆದರು; **ಕೈದುಡಕಲು ಅಂಜಿದನು**=ನೆನ್ನೆಯ ದಿನ ತನ್ನ ಕೊಟಡಿಗೆ ಜೇನುತುಪ್ಪವನ್ನು ತೆಗೆದುಕೊಂಡು ಹೋಗಲೆಂದು ಸೈರಂಧ್ರಿಯು ಬಂದಿದ್ದಾಗ ತಟ್ಟನೆ ಅವಳನ್ನು ತಬ್ಬಿ ಹಿಡಿದುಕೊಂಡಿದ್ದಂತೆ ಇಂದು ಅವಳನ್ನು ಹಿಡಿದುಕೊಳ್ಳಲು ಹೆದರಿದನು; ಅಂಗನೆ=ಹೆಣ್ಣು;

**ಅಂಗನೆಯ ಮಾತಾಡಿಸಿದನು**=ಸೈರಂಧ್ರಿಯನ್ನು ತಾನಾಗಿಯೇ ಮಾತನಾಡಿಸಿದನು; ಇರುಳು=ರಾತ್ರಿ; ಯುಗ=ಅತಿ ಹೆಚ್ಚಿನ ಸಮಯ; ಸವೆ=ಕಳೆ/ ತೀರು/ಮುಗಿ; **ಹೋದ ಇರುಳು ಯುಗವಾಗಿ ಸವೆದುದು**=ಕಳೆದ ರಾತ್ರಿ ನಿದ್ರೆಯಿಲ್ಲದೆ ನನ್ನ ಪಾಲಿಗೆ ಒಂದು ಯುಗದಂತಾಯಿತು. ಅಂದರೆ ಕಳೆದ ರಾತ್ರಿಯೆಲ್ಲಾ ನಿನ್ನ

ನೆನಪಿನಲ್ಲಿಯೇ ನಾನು ಒಂದು ಗಳಿಗೆಯಾದರೂ ಕಣ್ಣುಮುಚ್ಚಲಿಲ್ಲ; ನೀ=ನೀನು; ದಯಾ+ಅಂಬುಧಿ; ದಯಾ=ಕರುಣೆ/ಅನುಕಂಪ/ಕನಿಕರ; ಅಂಬುಧಿ=ಸಾಗರ;

**ನೀ ದಯಾಂಬುಧಿ**=ನೀನು ಕರುಣೆಯುಳ್ಳವಳು. ನನ್ನ ಮನಸ್ಸಿನ ತುಡಿತವೇನೆಂಬುದನ್ನು ಅರಿತುಕೊಂಡು, ಅದನ್ನು ಪರಿಹರಿಸುವಂತಹ ಕರುಣೆಯ ಗುಣವುಳ್ಳವಳು; ಕುಸುಮ=ಹೂವು; ಶರ=ಬಾಣ; ಕುಸುಮಶರ=ಹೂಬಾಣವನ್ನು ತನ್ನ ಹತಾರವನ್ನಾಗಿ ಉಳ್ಳ ಕಾಮದೇವ/ಮನ್ಮಥ; ಯಮ=ಸಾವಿನ ದೇವತೆ; **ಕುಸುಮಶರ ಯಮನಾದನು**=ನಿನ್ನಿಂದಾಗಿ ಕಾಮದೇವನೇ ನನ್ನ ಪಾಲಿಗೆ ಸಾವಿನ ದೇವನಾಗಿದ್ದಾನೆ. ನಿನ್ನನ್ನು ಕೂಡಲಾಗದಿದ್ದರೆ ನಾನು ಸಾಯಲಿದ್ದೇನೆ;

**ಅದ ನೀ ಬಲ್ಲೆ ಎಂದನು ಕೀಚಕನು ನಗುತ**=ಕೀಚಕನು ನಗೆಯನ್ನು ಬೀರುತ್ತ ನನ್ನ ಮನಸ್ಸಿನ ಒಳತುಡಿತಗಳೆಲ್ಲವನ್ನೂ ನೀನು ಚೆನ್ನಾಗಿ ತಿಳಿದಿರುವೆ ಎಂದನು; **ಎಲೆ ಪಾಪಿ ಕೀಚಕ**=ಹೆಂಗಸರ ಮೇಲೆ ಕಾಮದ ಹಲ್ಲೆಯನ್ನು ಮಾಡುವ ಎಲೆ ಪಾಪಿ ಕೀಚಕನೇ; **ಕುಸುಮಶರ ಯಮನಹನು**=ನಿನ್ನಂತಹ ಕಾಮಿಯ ಪಾಲಿಗೆ ಕಾಮದೇವನು ಸಾವಿನ ದೇವನಾಗುತ್ತಾನೆ. ನಿನ್ನ ಕಾಮವಿಕಾರ ನಿನ್ನನ್ನೇ ಬಲಿತೆಗೆದುಕೊಳ್ಳುತ್ತದೆ; ಅಮೃತ=ಒಂದು ಬಗೆಯ ಪಾನೀಯ. ಇದನ್ನು ಕುಡಿದರೆ ಸಾವು ಬರುವುದಿಲ್ಲವೆಂಬ ಒಂದು ನಂಬಿಕೆಯು ಜನಮನದಲ್ಲಿ ನೆಲೆಸಿದೆ; ವಿಷ=ನಂಜು/ಸೇವಿಸಿದ ಕೂಡಲೇ ಸಾವನ್ನು ತರುವಂತಹ ವಸ್ತು/ಪಾನೀಯ;

**ಅಮೃತವು ವಿಷವಹುದು**=ಕಾಮವಿಕಾರಿಯಾದ ನಿನ್ನ ಪಾಲಿಗೆ ಅಮೃತವೇ ನಂಜಾಗುತ್ತದೆ; ಬಳಿಕ=ಅನಂತರ; ಆಲಿಕಲು=ಆಲಿಕಲ್ಲು/ಹನಿಗಳು ಜತೆಗೂಡಿ ಸಣ್ಣ ಸಣ್ಣ ಹರಳಿನಂತಾಗಿರುವುದು; ಬಿಸಿ+ಅಹವು; **ಬಳಿಕ ಆಲಿಕಲುಗಳು ಬಿಸಿಯಹವು**=ಕ್ರೂರವಾದ ನಡೆನುಡಿಯುಳ್ಳ ನಿನ್ನ ಪಾಲಿಗೆ ತಣ್ಣನೆಯ ಆಲಿ ಕಲ್ಲುಗಳು ಬಿಸಿಯಾಗುತ್ತವೆ. ಅಂದರೆ ನಿನಗೆ ಎಲ್ಲ ರೀತಿಯಿಂದಲೂ ಕೇಡಾಗುತ್ತದೆ; ಬಾಂಧವ=ನೆಂಟ; ವೈರಿಗಳು+ಅಹರು; **ಬಾಂಧವರು ವೈರಿಗಳಹರು**=ನಿನ್ನನ್ನು ಪ್ರೀತಿಸುವ ನೆಂಟರು ಮತ್ತು ಮಿತ್ರರು ನಿನಗೆ ಹಗೆಗಳಾಗುತ್ತಾರೆ. ನಿನ್ನ ಕಾಮುಕತನವು ಎಲ್ಲರಿಂದಲೂ ನಿನ್ನನ್ನು ದೂರಮಾಡುತ್ತದೆ; ನಿಮಿಷ=ಒಂದು ಗಳಿಗೆ; ಒಸೆ=ಒಲಿ/ಮೆಚ್ಚು; ಒಸೆದರು=ಒಲಿದವರು/ಮೆಚ್ಚಿಕೊಂಡವರು; ಒಲ್=ಒಪ್ಪು; ಒಲ್ಲದವರು=ಒಪ್ಪದವರು; **ನಿಮಿಷದಲಿ ಒಸೆದರು ಒಲ್ಲದರಹರು**=ನೀನು ಇಂತಹ ಕೆಟ್ಟನಡೆನುಡಿಯುಳ್ಳವನು ಎಂದು ತಿಳಿದ ಮರುಗಳಿಗೆಯಲ್ಲಿಯೇ ನಿನ್ನನ್ನು ಪ್ರೀತಿಸುತ್ತಿದ್ದವರು ಕೂಡ ನಿನ್ನ ಬಗ್ಗೆ ಅಸಹ್ಯಪಟ್ಟುಕೊಂಡು ನಿನ್ನನ್ನು ತಿರಸ್ಕರಿಸುತ್ತಾರೆ;

ಲೋಗರು=ಲೋಕದ ಜನರು; ಶಶಿ=ಚಂದ್ರ; ವದನ=ಮೊಗ; ಶಶಿವದನೆ=ಚಂದ್ರನಂತಹ ಮೊಗವುಳ್ಳವಳು/ಸುಂದರಿ; ಲೋಗರ ಶಶಿವದನೆ=ಲೋಕದಲ್ಲಿನ

ಹೆಂಗಸರು ಎಂಬ ತಿರುಳಿನಲ್ಲಿ ಬಳಕೆಯಾಗಿದೆ; ಅಳುಪು=ಬಯಸು; ದುರಾತ್ಮ=ನೀಚ/ಕೇಡಿ; ವಸುಧೆ=ಭೂಮಿ; ಹೊರು=ತಾಳು/ಸಹಿಸು/ಕಾಪಾಡು; **ಲೋಗರ ಶಶಿವದನೆಗೆ ಅಳುಪಿದ ದುರಾತ್ಮನ ವಸುಧೆ ಹೊರದು**=ನಿನ್ನ ಹಾಗೆ ಲೋಕದಲ್ಲಿ ಹೆಂಗಸನ್ನು ಬಲಾತ್ಕಾರದಿಂದ ಕೂಡಲು ಬಯಸಿ, ಕಾಮದ ಹಲ್ಲೆಯನ್ನು ನಡೆಸುವ ನೀಚನನ್ನು ಈ ಭೂಮಿತಾಯಿಯು ಕಾಪಾಡುವುದಿಲ್ಲ;

ಪುರಾಣ=ಹಳೆಯ ಕಾಲದ ವಿಚಾರಗಳನ್ನು ಒಳಗೊಂಡಿದ್ದು; ಧರ್ಮ=ಸತ್ಯ ನೀತಿ ನ್ಯಾಯದ ನಡೆನುಡಿ; **ನಿನ್ನ ಪುರಾಣ ಧರ್ಮವ ಬಳಿಕ ತಿಳಿದುಕೊಂಬೆನು**=ಈಗ ನೀನು ಹೇಳುತ್ತಿರುವ ಹಳೆಯ ಕಾಲದ ಧರ್ಮದ ಸಂಗತಿಗಳನ್ನು ಆಮೇಲೆ ತಿಳಿದು ಕೊಳ್ಳುತ್ತೇನೆ. ಈಗ ಅವೆಲ್ಲವನ್ನೂ ಕೇಳುವ ತಾಳ್ಮೆ ನನಗಿಲ್ಲ; ಲಲಿತ=ಚೆಲುವು/ ಸುಂದರವಾದುದು; ಕಟಾಕ್ಷ; ಕಟ+ಅಕ್ಷ; ಕಟ=ಕಡೆ/ಕೊನೆ/ತುದಿ; ಅಕ್ಷ=ಕಣ್ಣು; ಕಟಾಕ್ಷ=ಕುಡಿನೋಟ/ಕಡೆಗಣ್ಣಿನ ನೋಟ; ಕವಚ=ಹೊದಿಕೆ; ಕರುಣ ಕಟಾಕ್ಷಕವಚ=ಒಲವು ನಲಿವು ಕರುಣೆಯಿಂದ ಕೂಡಿದ ಕಡೆಗಣ್ಣಿನ ನೋಟ;

**ಇದು ಒಮ್ಮೆ ನಿನ್ನಯ ಲಲಿತ ಕರುಣ ಕಟಾಕ್ಷಕವಚವ ತೊಡಿಸಿ**=ಈಗ ಒಂದು ಬಾರಿ ನಿನ್ನ ಒಲವು ನಲಿವಿನಿಂದ ತುಂಬಿದ ಕಡೆಗಣ್ಣಿನ ನೋಟವನ್ನು ನನ್ನತ್ತ ಬೀರಿ; ಒಡಲು=ದೇಹ; ಅಳುಕು=ಹಿಂಜರಿ/ಹೆದರು; ಎಸು=ಬಾಣ ಪ್ರಯೋಗಮಾಡು; ಮನೋಜ=ಮನ್ಮಥ/ಕಾಮದೇವ; ಅಂಬು=ಬಾಣ; ಹಿಳುಕು=ಬಾಣದ ಮುಂದಿನ ತುದಿಯು ಹರಿತವಾದ ಮೊನೆಯಿಂದ ಕೂಡಿದ್ದರೆ, ಬಾಣದ ಹಿಂದಿನ ತುದಿಯು ಬಾಣವನ್ನು ಬಿಡುವುದಕ್ಕೆ ಅಗತ್ಯವಾದ ಗರಿಗಳಿಂದ ಕೂಡಿರುತ್ತದೆ. ಹಿಂದಿನ ತುದಿಯ ಗರಿಗಳ ಜಾಗವನ್ನು ಹಿಳುಕು ಎನ್ನುತ್ತಾರೆ; ಮುರಿ=ಬಗ್ಗಿಸು/ತಿರುಗಿಸು;

**ತನ್ನ ಒಡಲ ಅಳುಕದೆ ಎಸುವ ಮನೋಜನ ಅಂಬಿನ ಹಿಳುಕ ಮುರಿ**= ಯಾವುದೇ ಬಗೆಯ ಹಿಂಜರಿಕೆಯಿಲ್ಲದೆ ನನ್ನ ದೇಹದ ಮೇಲೆ ಹೂಬಾಣಗಳನ್ನು ಪ್ರಯೋಗಿಸುತ್ತಿರುವ ಮನ್ಮಥನ ಬಾಣದ ಹಿಳುಕನ್ನು ಮುರಿದು, ಹೂಬಾಣಗಳನ್ನು ತೊಡದಂತೆ ಮಾಡು. ಇದೊಂದು ರೂಪಕ. ಕಾಮದ ಪರಿತಾಪವನ್ನು ತಡೆದುಕೊಳ್ಳಲು ನನ್ನಿಂದ ಆಗುತ್ತಿಲ್ಲ. ನೀನು ನನ್ನನ್ನು ಕೂಡುವುದರಿಂದ ಮಾತ್ರ ಪಾರಾಗಬಲ್ಲೆ; ಡಿಂಗರಿಗ=ಸೇವಕ/ಅಡಿಯಾಳು/ದಾಸ; ಅಹೆನು=ಆಗುವೆನು; ಅಳಿಮನ=ಕೆಟ್ಟಮನಸ್ಸು; ಖೂಳ=ನೀಚ; ಅಬುಜ+ಆನನೆ; ಅಬುಜ=ತಾವರೆ; ಆನನ=ಮೊಗ; ಅಬುಜಾನನೆ=ತಾವರೆಯ ಮೊಗದವಳು/ಸುಂದರಿ;

**ಡಿಂಗರಿಗನು ಅಹೆನು ಎಂದು ಅಳಿಮನದಲಿ ಆ ಖೂಳನು ಅಬುಜಾನನೆಗೆ ಕೈಮುಗಿದ**=ಕೆಟ್ಟ ಮನಸ್ಸಿನ ಆ ನೀಚ ಕೀಚಕನು "ನಾನು ನಿನಗೆ ದಾಸನಾಗುತ್ತೇನೆ"

ಎಂದು ಸೈರಂಧ್ರಿಯನ್ನು ಕಯ್ ಮುಗಿದು ಬೇಡಿಕೊಂಡ; ಎನ್ನವರು=ನನ್ನ ಗಂಡಂದಿರು; ಅರಿದರು+ಆದಡೆ; ಅರಿದರು=ತಿಳಿದವರು; ತರಿ=ಕತ್ತರಿಸು/ತುಂಡು ತುಂಡು ಮಾಡು; **ಎಲವೊ, ಎನ್ನವರು ಅರಿದರಾದಡೆ ನಿನ್ನ ವಂಶವ ತರಿವರು**=ಎಲವೋ ಕೀಚಕ, ನನ್ನ ಗಂಡಂದಿರಿಗೆ ನೀನು ನನ್ನನ್ನು ಕೆಣಕುತ್ತಿರುವ ಸಂಗತಿಯು ಗೊತ್ತಾದರೆ, ನಿನ್ನ ವಂಶವನ್ನೇ ಕಡಿದು ತುಂಡುತುಂಡು ಮಾಡುವರು. ನಿನ್ನ ಕುಟುಂಬದವರೆಲ್ಲರನ್ನೂ ನಾಶಮಾಡುತ್ತಾರೆ; **ಎನ್ನನು ಮರೆದು ನೀ ಬಿಡೆ**=ನೀನು ನನ್ನನ್ನು ಮರೆತು ಇರಲಾರೆ/ ನನ್ನ ಬಗ್ಗೆ ನಿನ್ನ ಮಯ್ ಮನದಲ್ಲಿ ತುಂಬಿರುವ ಕೆಟ್ಟ ಬಯಕೆಗಳನ್ನು ಬಿಡಲಾರೆ; ನೆರೆ=ತುಂಬಿಕೊಳ್ಳು;

**ನಿನಗೆ ಆಯುಷ ನೆರೆದುದು**=ನಿನಗೆ ಆಯುಸ್ಸು ತುಂಬಿಬಂದಿದೆ/ಸಾಯುವ ಕೇಡುಗಾಲ ಬಂದಿದೆ; ಕೆಲಬಲನು=ಅಕ್ಕಪಕ್ಕದವರು/ಇತರರು; ಅರಿ=ತಿಳಿ; ಅಂದ=ರೀತಿ; **ಕೆಲಬಲನು ಅರಿಯದ ಅಂದದಿ ಬಂದು**=ಇತರರು ತಿಳಿಯದಂತೆ ಬಂದು; ನಾಟ್ಯದ ಗರುಡಿ+ಒಳಗೆ; ಗರುಡಿ=ವ್ಯಾಯಾಮ ಮಂದಿರ/ಮಲ್ಲ ವಿದ್ಯೆಯನ್ನು ಕಲಿಸುವ ನೆಲೆ; ನಾಟ್ಯದ ಗರುಡಿ=ಅಂಗಾಗಗಳನ್ನು ಕಲಾತ್ಮಕವಾಗಿ ಆಡಿಸುತ್ತ ಭಾವನೆಗಳನ್ನು ವ್ಯಕ್ತಪಡಿಸುವ ಕುಣಿತ ಮತ್ತು ನಾಟಕದ ತರಬೇತಿಯನ್ನು ನೀಡುವ ಮಂದಿರ/ನಾಟ್ಯ ಮಂದಿರ; ಇಹುದು=ಇರುವುದು;

**ನಾಟ್ಯದ ಗರುಡಿಯೊಳಗೆ ಕತ್ತಲೆ ಮನೆಯೊಳು ಇಹುದು**=ನಾಟ್ಯಮಂದಿರದಲ್ಲಿ ಇಂದು ರಾತ್ರಿ ಯಾರೊಬ್ಬರೂ ಇಲ್ಲದ ವೇಳೆಯಲ್ಲಿ ಇರುವುದು; **ಆದುದುದಾಗಲಿ**= ನಿನ್ನ ಕೆಟ್ಟತನದ ಈ ಬಯಕೆಯಿಂದ ಮುಂದೆ ಏನಾಗುತ್ತದೆಯೋ ಆಗಲಿ; ಆನು=ನಾನು; ಐತರು=ಬರು/ಆಗಮಿಸು; ಇಂದುಮುಖಿ=ಚಂದ್ರನಂತೆ ಮೊಗವುಳ್ಳವಳು/ಸುಂದರಿ; **ಆನು ಐತಹೆನು ಎಂದಳು ಇಂದುಮುಖಿ**=ನಾನು ನಾಟ್ಯ ಮಂದಿರಕ್ಕೆ ಬರುತ್ತೇನೆ ಎಂದು ಸೈರಂಧ್ರಿಯು ಹೇಳಿದಳು;

ಖಳ=ನೀಚ; ಹಸಾದ=ಪ್ರಸಾದ/ಅನುಗ್ರಹ/ದಯೆ; ಹಾಯ್ಕು=ಉಂಟು ಮಾಡು; **ಹಸಾದವ ಹಾಯ್ಕಿ**=ಅನುಗ್ರಹ ದೊರೆಯಿತು/ಒಪ್ಪಿಗೆ ಸಿಕ್ಕಿತು ಎಂಬ ಆನಂದದಿಂದ; **ಖಳ ಹಸಾದವ ಹಾಯ್ಕಿ ತನ್ನಯ ನಿಳಯಕೆ ಐದಿದನು**= ನೀಚನಾದ ಕೀಚಕನು ತನ್ನನ್ನು ಕೂಡಲು ಸೈರಂಧ್ರಿಯು ಒಪ್ಪಿಕೊಂಡಳು ಎಂಬ ಆನಂದದಿಂದ ತನ್ನ ಮನೆಯತ್ತ ನಡೆದನು



## ನೋಟ–೧೧

ಅಬುಜ=ತಾವರೆ; ಬಾಂಧವ=ನೆಂಟ; ಅಬುಜ ಬಾಂಧವ=ಸೂರ್ಯ; ಅಸ್ತ+ಅಚಲ; ಅಸ್ತ=ಮರೆಯಾಗುವುದು; ಅಚಲ=ಬೆಟ್ಟ; ಅಸ್ತಾಚಲ=ಪಶ್ಚಿಮ ದಿಕ್ಕಿನಲ್ಲಿರುವ ಬೆಟ್ಟ; ತಪ್ಪಲು=ಬೆಟ್ಟದ ಮಗ್ಗುಲು; ಬನ=ತೋಟ/ತೋಪು; **ಅಬುಜ ಬಾಂಧವನು ಅಸ್ತಾಚಲದ ತಪ್ಪಲ ತಾವರೆಯ ಬನಕೆ ಇಳಿದನು**=ಸೂರ್ಯನು ಪಶ್ಚಿಮದಿಕ್ಕಿನಲ್ಲಿದ್ದ ಬೆಟ್ಟದ ತಪ್ಪಲಿನಲ್ಲಿದ್ದ ತಾವರೆಯ ಹೂಗಳ ತೋಪಿನಲ್ಲಿ ಮರೆಯಾಗುತ್ತಿದ್ದಂತೆಯೇ ಕತ್ತಲು ಕವಿಯಿತು ;

ಕರಿದು+ಕತ್ತಲೆ; ಹಬ್ಬುಗೆ+ಒಳಗೆ; ಹಬ್ಬುಗೆ=ಹರಡುವಿಕೆ; ಕಗ್ಗತ್ತಲ ಹಬ್ಬುಗೆ=ಹೆಚ್ಚಾಗಿ ಕವಿದಿರುವ ಕತ್ತಲಿನಲ್ಲಿ; ಕಣ್ಣ್+ಗಳ=ಕಂಗಳ; ಕಂಗಳ=ಕಣ್ಣುಗಳ; ಬಟ್ಟೆ=ದಾರಿ; ತೋರೆ=ತೋರುತ್ತಿರಲು; **ಕಗ್ಗತ್ತಲೆಯ ಹಬ್ಬುಗೆಯೊಳಗೆ ಕಂಗಳ ಬೆಳಗು ಬಟ್ಟೆಯ ತೋರೆ**=ದಟ್ಟವಾಗಿ ಹಬ್ಬಿಕೊಂಡಿರುವ ಕತ್ತಲೆಯಲ್ಲಿ ಸೈರಂಧ್ರಿಯ ಕಣ್ಣಗಳ ಕಾಂತಿಯೇ ದಾರಿಯನ್ನು ತೋರಿಸುತ್ತಿರಲು;

ನಳಿನ=ತಾವರೆ; ನಳಿನಮುಖಿ=ತಾವರೆಯ ಮೊಗದವಳು/ಸುಂದರಿ; ನಲವು=ಆನಂದ; ಏರಿ=ಹೆಚ್ಚಾಗಿ; ಬಾಣಸಿನ ಮನೆ=ಅಡುಗೆ ಮನೆ; **ನಳಿನಮುಖಿ ನಲವು ಏರಿ, ಬಾಣಸಿನ ಮನೆಗೆ ಬಂದಳು**=ಸೈರಂಧ್ರಿಯು ಅಪಾರವಾದ ಆನಂದದಿಂದ ಭೀಮನು ಇದ್ದ ಅಡುಗೆಯ ಮನೆಗೆ ಬಂದಳು; **ಭೀಮ ನಾಟ್ಯನಿಲಯವನು ನಿಂದಿರು**=ಭೀಮ, ನೀನು ನಾಟ್ಯನಿಲಯದಲ್ಲಿದ್ದುಕೊಂಡು ಕೀಚಕನು ಬರುವುದನ್ನೇ ಕಾಯುತ್ತಿರು; ಮದ+ಅಂಧಗೆ; ಮದ=ಸೊಕ್ಕು/ಗರ್ವ; ಅಂಧ=ಕುರುಡ; **ಆ ಮದಾಂಧಗೆ ನುಡಿದು ಬಂದೆನು**=ತೋಳ್ಬಲದಿಂದ ಮತ್ತು ತಾನು ರಾಜನ ಸೇನಾನಿಯೆಂಬ ಅಧಿಕಾರ ಬಲದಿಂದ ಸೊಕ್ಕಿರುವ ಕಾಮಿ ಕೀಚಕನಿಗೆ ಇಂದು ರಾತ್ರಿ ನಾಟ್ಯ ಮಂದಿರಕ್ಕೆ ಬರುವಂತೆ ಸೂಚಿಸಿ ಬಂದಿದ್ದೇನೆ;

ತಾಮಸ=ತಡ/ವಿಳಂಬ; **ತಾಮಸವ ಮಾಡದಿರು**=ನಾಟ್ಯನಿಲಯಕ್ಕೆ ರಾತ್ರಿ

ಬರುವುದಕ್ಕೆ ತಡಮಾಡಬೇಡ. ಕೀಚಕನು ಅಲ್ಲಿಗೆ ಬರುವುದಕ್ಕೆ ಮುಂಚೆ ನೀನು ಬಂದು ಕಾಯುತ್ತಿರುವುದು; ಅಲ್ಪಬುದ್ಧಿ=ಸಣ್ಣತನ/ದಡ್ಡತನ; ಹೂಡು= ಆಲೋಚಿಸು/ಯೋಜಿಸು; **ಅಲ್ಪ ಬುದ್ಧಿಗಳ ಹೂಡದಿರು**=ಸಣ್ಣತನದಿಂದ ನಡೆದು ಕೊಳ್ಳಬೇಡ. ಅಂದರೆ ಕೊಟ್ಟ ಮಾತಿಗೆ ತಪ್ಪಿ ನಡೆಯಬೇಡ. ಆ ದುರುಳ ಕೀಚಕನನ್ನು ಕೊಲ್ಲುವುದೋ ಬೇಡವೋ ಎಂಬ ತಾಕಲಾಟಕ್ಕೆ ಒಳಗಾಗಬೇಡ; ನಡೆ+ಕೆಡಹು; ನಡೆ=ನಡಗೆ/ನಡೆಯುವಿಕೆ; ಕೆಡಹು=ಕೆಳಕ್ಕೆ ಉರುಳಿಸು; ನಡೆಗೆಡಹು=ನಡೆಯದಂತೆ ಕೆಳಕ್ಕೆ ಉರುಳಿಸು. ನಡೆಗೆಡಹು ಎಂಬ ಪದರೂಪ ಒಂದು ನುಡಿಗಟ್ಟಾಗಿ **'ಕೊಲ್ಲು/ನಾಶ ಮಾಡು'** ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

**ಕಾಮುಕನ ನಡೆಗೆಡಹಿ ನಿಜ ಪ್ರೇಮವನು ತೋರು ಎನಲು**=ಕಾಮಿ ಕೀಚಕನನ್ನು ಕೆಳಕ್ಕೆ ಉರುಳಿಸಿ ಕೊಂದು, ನನ್ನ ಬಗ್ಗೆ ನೀನು ಇಟ್ಟಿರುವ ನಿಜ ಪ್ರೇಮವನ್ನು ತೋರು ಎಂದು ಸೈರಂಧ್ರಿಯು ನುಡಿಯಲು ; ಉದ್ದಾಮ=ಉತ್ತಮವಾದ; **ಉದ್ದಾಮನು ನಗುತ ಎದ್ದನು**=ಬಲಶಾಲಿಯೂ ಕರುಣಾಶೀಲನೂ ಆದ ಭೀಮನು ನಗುತ್ತ ಮೇಲೆದ್ದನು ; ಮಲ್ಲಗಂಟು=ಜಟ್ಟಿಗಳು ಕಟ್ಟಿಕೊಳ್ಳುವ ನಡುಕಟ್ಟು; ಪಳಿ=ಬಟ್ಟೆ/ವಸ್ತ್ರ; **ಮಲ್ಲಗಂಟಿನಲಿ ಪಳಿಯನು ಉಟ್ಟನು**=ಭೀಮನು ಬಟ್ಟೆಯಿಂದ ತನ್ನ ನಡುವಿಗೆ ಕುಸ್ತಿಪಟುಗಳು ತೊಡುವ ಮಲ್ಲಗಂಟನ್ನು ಬಿಗಿದು ಕಟ್ಟಿಕೊಂಡನು ; ಖಳ=ನೀಚ/ ಕೇಡಿ; ಮುರಿ=ಕೊಲ್ಲು; ಅಬಲೆ=ಹೆಂಗಸು; ನೊಸಲು=ಹಣೆ; ತಿಲಕ=ಬೊಟ್ಟು/ ಕುಂಕುಮ, ಅರಿಸಿನ, ಸಿರಿಗಂಧದ ಹಸಿ ಮುಂತಾದುವನ್ನು ಒಳ್ಳೆಯ ಕೆಲಸಗಳಿಗೆ ಹೋಗುವಾಗ ಮಂಗಳಕರವೆಂದು ಹಣೆಗೆ ಇಡುತ್ತಾರೆ; **ಖಳನ ಮುರಿಯೆಂದು ಅಬಲೆ ನೊಸಲಲಿ ತಿಲಕವನು ರಚಿಸಿದಳು**=ಕಾಮಿ ಕೀಚಕನನ್ನು ಕೊಲ್ಲು ಎಂದು ಹೇಳುತ್ತ ಸೈರಂಧ್ರಿಯು ಭೀಮನ ಹಣೆಗೆ ತಿಲಕವನ್ನು ಇಟ್ಟಳು ;

ಸೇಸೆ=ಅರಿಸಿನ ಕಲೆಸಿದ ಅಕ್ಕಿಯ ಕಾಳುಗಳು; ತಳಿ=ಎರಚು/ಉದುರಿಸು; **ಸೇಸೆಯ ತಳಿದಳು**=ಅರಿಸಿನದ ಅಕ್ಕಿಯ ಕಾಳುಗಳನ್ನು ಭೀಮನ ತಲೆಯ ಮೇಲೆ ಎರಚಿದಳು. ಕಯ್ಗೊಂಡ ಕೆಲಸದಲ್ಲಿ ಜಯ ದೊರೆಯಲಿ ಎಂಬ ಉದ್ದೇಶದಿಂದ ಈ ರೀತಿ ಸೇಸೆಯನ್ನು ಹಾಕುವ ಆಚರಣೆಯಿದೆ; ತಿಗುರು=ಪರಿಮಳ ದ್ರವ್ಯ; ಏರಿಸು=ಹಾಕಿ; ಗೆಲಿ=ಲೇಪಿಸು; **ತಿಗುರ ಏರಿಸಿ ಗೆಲಿದಳು**=ಪರಿಮಳ ದ್ರವ್ಯಗಳನ್ನು ಭೀಮನ ಮೊಗ ಮತ್ತು ದೇಹಕ್ಕೆ ಬಳಿದಳು; ಹಿಣಿಲು=ಜಡೆ/ಹೆರಳು; ಬಲುಭುಜನು=ಹೆಚ್ಚಿನ ತೋಳ್ಬಲವುಳ್ಳವನು; ಹರಸು=ಒಳಿತನ್ನು ಕೋರುವುದು; **ಹಿಣಿಲ ಹೊಸ ಪರಿಯ ಬಲುಭುಜನ ಹರಸಿದಳು**=ಹೊಸ ಬಗೆಯಲ್ಲಿ ತಲೆಗೂದಲನ್ನು ಹೆಣೆದು ಎತ್ತಿಕಟ್ಟಿರುವ ಬಲಶಾಲಿ ಭೀಮನಿಗೆ ಒಳಿತಾಗಲೆಂದು ಹಾರೈಸಿದಳು ;

ಮಣಿ=ರತ್ನ, ಮುತ್ತು, ವಜ್ರದ ಹರಳುಗಳು; ಪವಡಿಸು=ಮಲಗು; **ಕಗ್ಗತ್ತಲೆಯ ಹಬ್ಬುಗೆಯೊಳಗೆ ನಾಟ್ಯದ ನಿಲಯ ಮಧ್ಯದ ಮಣಿಯ ಮಂಚದ ಮೇಲೆ ಪವಡಿಸಿದ**=ದಟ್ಟವಾಗಿ ಹಬ್ಬಿದ್ದ ಕತ್ತಲೆಯಲ್ಲಿ ಅಡುಗೆಯ ಮನೆಯಿಂದ ನಾಟ್ಯನಿಲಯಕ್ಕೆ ಬಂದ ಭೀಮನು, ಅಲ್ಲಿದ್ದ ರತ್ನದ ಹರಳುಗಳಿಂದ ಸಿಂಗರಿಸಿದ್ದ ಮಂಚದ ಮೇಲೆ ಮಲಗಿಕೊಂಡ; ಉರಿ=ಬೆಂಕಿಯ ನಾಲಗೆ/ಜ್ವಾಲೆ; ಮಾರಿ=ಒಬ್ಬ ದೇವತೆ. ಒಲಿದವರಿಗೆ ಒಳಿತನ್ನು ಮಾಡುವ... ಮುನಿದವರಿಗೆ ಕೇಡನ್ನು ಮಾಡುವ ದೇವತೆಯೆಂದು ಜನಮನದಲ್ಲಿ ಹೆಸರಾಗಿದ್ದಾಳೆ; ಬೇಟ=ಕಾಮದ ಬಯಕೆ; ಬೇಟದಾತ=ಕಾಮದ ಬಯಕೆಯಿಂದ ಪರಿತಪಿಸುತ್ತಿರುವ ಕೀಚಕ; **ಉರಿವ ಮಾರಿಯ ಬೇಟದಾತನು**=ಉಗ್ರ ದೇವತೆಯಾದ ಮಾರಿಯನ್ನು ಕಾಮಿಸಿ ಬಂದಿರುವ ಕೀಚಕ. ಈಗ ಕೀಚಕನ ಪಾಲಿಗೆ ಸೈರಂಧ್ರಿಯು ಸಾವಿನ ದೇವತೆಯಾಗಿದ್ದಾಳೆ;

ನಿರಿಕಿ=ಜೋಡಿಸಿಕೊಂಡು; ತುರುಗು=ಮುಡಿದುಕೊಂಡನು/ಒತ್ತಾಗಿ ಇಡು; **ಉರಿವ ಮಾರಿಯ ಬೇಟದಾತನು ಮಲ್ಲಿಗೆಯ ಮೊಗ್ಗೆಯ ನಿರಿಕಿ ತುರುಗಿದನು**= ಕಾಮಿಯಾದ ಕೀಚಕನು ಮಲ್ಲಿಗೆಯ ಮೊಗ್ಗುಗಳಿಂದ ತನ್ನನ್ನು ಸಿಂಗರಿಸಿ ಕೊಂಡನು ; ಸಾದು=ಹಣೆಗೆ ಇಟ್ಟುಕೊಳ್ಳುವ ಒಂದು ಬಗೆಯ ಕಪ್ಪನೆಯ ತಿಲಕ; ಜವಾಜಿ=ಒಂದು ಬಗೆಯ ಸುವಾಸನೆಯ ದ್ರವ್ಯ; ಕತ್ತುರಿ=ಕಸ್ತೂರಿ ಎಂಬ ಪ್ರಾಣಿಯ ಹೊಕ್ಕಳಿನಲ್ಲಿ ದೊರೆಯುವ ಸುವಾಸನೆಯ ವಸ್ತು; ತಾ=ತಾನು; ಪೂಸು=ಬಳಿ/ಸವರು/ಲೇಪಿಸು; **ಸಾದು ಜವಾಜಿ ಕತ್ತುರಿಯ ತಾ ಪೂಸಿದನು**= ಸುವಾಸನೆಯ ವಸ್ತುಗಳಾದ ಸಾದು ಜವಾಜಿ ಕಸ್ತೂರಿಯನ್ನು ಮಯ್ಗೆ ಲೇಪಿಸಿ ಕೊಂಡನು; ಮೆರೆ=ಕಂಗೊಳಿಸು/ಎದ್ದು ಕಾಣು; ಗಂಡು+ಉಡಿಗೆ; ಉಡಿಗೆ= ಮಯ್ ಮೇಲೆ ಉಟ್ಟುಕೊಳ್ಳುವ ಬಟ್ಟೆ; ಗಂಡುಡುಗೆ=ಪಂಚೆಯ ನಿರಿಯನ್ನು ಹಿಂದಕ್ಕೆ ಹೊರಳಿಸಿ ಬಿಗಿದು ಕಟ್ಟಿದ ಕಚ್ಚೆ; ರಚಿಸು=ಅಣಿಮಾಡು/ಸಜ್ಜುಗೊಳಿಸು;

ಸೆರಗು=ಉತ್ತರೀಯದ ಅಂಚು/ಹೆಗಲ ಮೇಲೆ ಹಾಕಿಕೊಳ್ಳುವ ಶಲ್ಯದ ಅಂಚು; ಒಯ್ಯಾರ=ಬೆಡಗು/ಬಿನ್ನಾಣ; ಸುರಗಿ=ಒಂದು ಬಗೆಯ ಸುವಾಸನೆಯ ಹೂವು; ತಿರುಹು=ಚಕ್ರಾಕಾರವಾಗಿ ತಿರುಗಿಸು; **ಮೆರೆವ ಗಂಡುಡಿಗೆಯನು ರಚಿಸಿದ ಸೆರಗಿನ ಒಯ್ಯಾರದಲಿ ಸುರಗಿಯ ತಿರುಹುತ**=ಕಂಗೊಳಿಸುವಂತಹ ಗಂಡುಡಿಗೆಯನ್ನು ಹಾಕಿಕೊಂಡು, ಉತ್ತರೀಯದ ಸೆರಗಿನ ಒಯ್ಯಾರದಿಂದ ಕೂಡಿ, ಸುರಗಿಯ ಹೂವನ್ನು ಕಯ್ಯಿಂದ ಚಕ್ರಾಕಾರವಾಗಿ ತಿರುಗಿಸುತ್ತ ; ಇರುಳು=ರಾತ್ರಿ; ನಿಜ+ಆಲಯ+ಇಂದ; ನಿಜ=ತನ್ನ; ಆಲಯ=ಮನೆ; **ಇರುಳು ಒಬ್ಬನೆ ನಿಜಾಲಯದಿಂದ ಹೊರವಂಟ**=ಅಂದಿನ ರಾತ್ರಿ ಕೀಚಕನು ತನ್ನ ಮನೆಯಿಂದ

ನಾಟ್ಯನಿಲಯದ ಕಡೆಗೆ ಒಬ್ಬನೇ ಹೊರಟನು ;

ಕಾಲ=ಯಮ; ಪಾಶ=ಹಗ್ಗ/ಕೊರಳಿಗೆ ಹಾಕಿ ಎಳೆವ ನೇಣಿನ ಕುಣಿಕೆ; ಕಾಲಪಾಶ=ಸಾವಿನ ಕುಣಿಕೆ; ಕರಾಳ=ವಿಕಾರವಾದ; ಮತಿ=ಬುದ್ಧಿ; ಕರಾಳಮತಿ=ಕಾಮದ ಬಯಕೆಯಿಂದ ಮನೋವಿಕಾರಕ್ಕೆ ಒಳಗಾಗಿರುವ ಕೀಚಕ; ಕೃತಾಂತ=ಯಮ; ಹೊಗು=ಪ್ರವೇಶಿಸು/ಒಳಸೇರು; ಸುಡುಗಾಡು=ಮಸಣ; ಐತಂದು=ನಡೆದುಬಂದು; ಆಲಯ=ಮಂದಿರ;

**ಕಾಲಪಾಶದಲಿ ಎಳಸಿಕೊಂಬ ಕರಾಳಮತಿ ಕೃತಾಂತನ ಬಾಯ ಹೊಗುವಂತೆ ಸುಡುಗಾಡಲಿ ಐತಂದು ಆಲಯವ ಹೊಕ್ಕನು**=ಸಾವಿನ ಕುಣಿಕೆಯಲ್ಲಿ ಸಿಲುಕಿದ ಮನೋವಿಕಾರಿಯು ಯಮನ ಬಾಯೊಳಕ್ಕೆ ಹೋಗುವಂತೆ ಕೀಚಕನು ತನ್ನ ಮನೆಯಿಂದ ಸುಡುಗಾಡಿನ ಹಾದಿಯಲ್ಲಿ ಹಾಯ್ದುಬಂದು ನಾಟ್ಯ ನಿಲಯವನ್ನು ಹೊಕ್ಕನು ; ಮೇಲೆ+ಅಪಶಕುನ; ಶಕುನ=ಸುಳಿವು/ಸೂಚನೆ; ಅಪಶಕುನ=ಕೇಡು ಉಂಟಾಗಲಿದೆ ಎಂಬುದನ್ನು ಸೂಚಿಸುವ ನೋಟಗಳು ಇಲ್ಲವೇ ಕ್ರಿಯೆಗಳು; ಶತಕ=ನೂರು ; ಆಲಿಸು=ಕೇಳು ;

**ಮೇಲೆ ಮೇಲಪಶಕುನ ಶತಕವನು ಆಲಿಸದೆ**=ಕೀಚಕನು ತನ್ನ ಮನೆಯಿಂದ ಕತ್ತಲು ಕವಿದ ರಾತ್ರಿಯಲ್ಲಿ ನಾಟ್ಯಮಂದಿರದ ಕಡೆಗೆ ಬರುತ್ತಿರುವಾಗ, ದಾರಿಯುದ್ದಕ್ಕೂ ಮುಂದೆ ಕೇಡಾಗಲಿದೆ ಎಂಬುದನ್ನು ಸೂಚಿಸುವಂತೆ ಅನೇಕ ಬಗೆಯ ಪ್ರಾಣಿ ಪಕ್ಷಿಗಳ ದನಿಯು ಕೇಳಿಬರುತ್ತಿದ್ದರೂ, ಅಪಶಕುನಗಳನ್ನು ಲೆಕ್ಕಿಸದೆ; ಸುಮ್ಮಾನ=ಅತಿಯಾದ ಸಡಗರ, ಆನಂದ ಮತ್ತು ಉದ್ರೇಕದ ವರ್ತನೆ; ತಡವರಿಸು=ನಾಟ್ಯಮಂದಿರದ ಕತ್ತಲಕೋಣೆಯೊಳಗೆ ಅತ್ತಿತ್ತ ಕಯ್ ಕಾಲುಗಳನ್ನು ಆಡಿಸಿ ಹುಡುಕುತ್ತ; ಕೇಡಾಳಿ=ಕೇಡಿಗ;

**ಸುಮ್ಮಾನದಲಿ ಮಂಚವಿದ್ದ ಎಡೆಗಾಗಿ ತಡವರಿಸಿ ಕೇಡಾಳಿ ಬಂದನು**= ಕಾಮಜ್ವರದಿಂದ ಉನ್ಮತ್ತನಾಗಿರುವ ಕೀಚಕನು ನಾಟ್ಯಮಂದಿರದಲ್ಲಿ ಮಂಚವಿದ್ದ ಜಾಗವನ್ನು ಕತ್ತಲಲ್ಲಿ ತಡವರಿಸಿಕೊಂಡು ಹುಡುಕುತ್ತ ಒಳಬಂದನು; ವನಜ=ತಾವರೆ; ವನಜಮುಖಿ=ತಾವರೆ ಮೊಗದವಳು/ಸುಂದರಿ; ವೀಳೆಯ= ಎಲೆ,ಅಡಿಕೆ, ಸುಣ್ಣ ಮೊದಲಾದುವುಗಳಿಂದ ಸಿದ್ಧಗೊಂಡಿರುವ ತಾಂಬೂಲ; ಅನುಲೇಪನ=ದೇಹಕ್ಕೆ ಬಳಿದುಕೊಳ್ಳುವ ಸುಗಂಧ ವಸ್ತುಗಳು; ಮಲ್ಲಿಗೆ+ಅರಳ; ಅರಳು=ಹೂವು; ತೊಡಿಗೆ=ತೊಟ್ಟುಕೊಳ್ಳುವ ಹಾರ ಮತ್ತು ಇನ್ನಿತರ ಒಡವೆ ; ಅನುಪಮ+ಅಂಬರ; ಅನುಪಮ=ಸೊಗಸಾದ/ಸುಂದರವಾದ; ಅಂಬರ=ಬಟ್ಟೆ/ ವಸ್ತ್ರ;

**ವನಜಮುಖಿ, ವೀಳೆಯವನು ಅನುಲೇಪನವ ಮಲ್ಲಿಗೆಯರಳ ತೊಡಿಗೆಯನು ಅನುಪಮಾಂಬರ ಇವೆ**=ಮಂಚದಲ್ಲಿ ಮಲಗಿರುವ ಭೀಮನನ್ನು ಸೈರಂಧ್ರಿಯೆಂದು ತಿಳಿದು, ಆಕೆಯನ್ನು ಉದ್ದೇಶಿಸಿ ಕೀಚಕನು ಮಾತನಾಡತೊಡಗುತ್ತಾನೆ. ತಾವರೆಮೊಗದ ಸುಂದರಿಯೇ, ವೀಳೆಯ, ಸುವಾಸನೆಯ ದ್ರವ್ಯಗಳು, ಮಲ್ಲಿಗೆಯ ಮೊಗ್ಗಿನ ಹಾರ, ಅತ್ಯಂತ ಸೊಗಸಾದ ಬಟ್ಟೆಗಳೆಲ್ಲವನ್ನೂ ನಿನಗಾಗಿ ತಂದಿರುವೆ; ಅಹರೆ=ಆಗಿರಲು; ಚಿತ್ತೈಸು=ಗಮನಿಸು/ಅನುಗ್ರಹಿಸು; **ಮನೋಹರ ಅಹರೆ ಚಿತ್ತೈಸು**=ಮನಸ್ಸಿಗೆ ಮುದವನ್ನು ನೀಡುವಂತಿರುವ ಇವೆಲ್ಲವನ್ನೂ ಸ್ವೀಕರಿಸು; ಪಾಸಟಿ=ಸರಿ/ಸಮ;

**ನಿನಗೆ ಪಾಸಟಿ ಆನು**=ನಿನಗೆ ನಾನು ಸಮಾನ. ನಿನ್ನಂತಹ ಸುಂದರಿಯಾದ ಹೆಣ್ಣಿನ ಜೊತೆಗೂಡಲು ಯೋಗ್ಯನಾದ ಗಂಡು ನಾನು; ಅನಿಮಿಷ=ದೇವತೆ; ಆರು+ಉಂಟು; **ಎನ್ನವೊಲು ಅನಿಮಿಷರೊಳು ಆರುಂಟು**=ದೇವತೆಗಳ ಸಮೂಹದಲ್ಲಿ ತಾನೆ ನನ್ನಂತಹ ಗಂಡು ಯಾರಿದ್ದಾರೆ; **ಚೆಲುವರು ಮನುಜರು ಎನ್ನನು ಹೋಲುವರೆ**=ಲೋಕದಲ್ಲಿನ ಸುಂದರ ಗಂಡುಗಳಲ್ಲಿ ನನ್ನ ಅಂದಚೆಂದವನ್ನು ಹೋಲುವವರು ಯಾರಿದ್ದಾರೆ. ಲೋಕದ ಚೆಲುವರಲ್ಲಿ ಚೆಲುವ ನಾನು;

**ಸೈರಂಧ್ರಿ ಕೇಳು**= ಸೈರಂಧ್ರಿ, ನನ್ನ ಮಾತನ್ನು ಮನವಿಟ್ಟು ಕೇಳು; **ಎನ್ನವೋಲ್ ಪುರುಷರಲಿ ಚೆಲುವರ ಮುನ್ನ ನೀ ಕಂಡು ಅರಿದೆಯಾದೊಡೆ**=ಗಂಡಸರಲ್ಲಿ ನನ್ನಂತಹ ಚೆಲುವನನ್ನು ನೀನು ನೋಡಿ ಅರಿತಿದ್ದರೆ; **ಎನ್ನ ಮೇಲಾಣೆ. ಎಲೆಗೆ, ಹುಸಿಯದೆ ಹೇಳು ಹೇಳು**=ನನ್ನ ಮೇಲಾಣೆ... ಸುಳ್ಳನ್ನಾಡದೆ ಹೇಳು..ನೀನು ನೋಡಿರುವೆಯಾ..ಹೇಳು;

ಮುನ್ನ=ಮೊದಲು; ನಿನ್ನಂತಪ್ಪ=ನಿನ್ನಂತಹ; **ಮುನ್ನ ನಿನ್ನಂತಪ್ಪ ಸತಿಯರು ಎನ್ನನೇ ಬಯಸುವರು**=ಮೊದಲಿನಿಂದಲೂ ನಿನ್ನಂತಹ ಹೆಣ್ಣುಗಳು ರೂಪವಂತನಾದ ನನ್ನನ್ನೇ ಕೂಡಲು ಬಯಸುತ್ತಾರೆ; **ಎಲೆಗೆ ನಿನ್ನಾಣೆ**=ಎಲೆ ಸೈರಂಧ್ರಿಯೇ ನಿನ್ನಾಣೆಯಾಗಿಯೂ ನಾನು ನಿಜವನ್ನೇ ನುಡಿಯುತ್ತಿದ್ದೇನೆ; ಸೋಲು= ವಶವಾಗು; **ಎನ್ನ ಕಂಡರೆ ನಾರಿಯರು ಸೋಲದವರಿಲ್ಲ**=ನನ್ನನ್ನು ನೋಡಿದರೆ ನನಗೆ ಮನಸೋತು ವಶವಾಗದ ಹೆಣ್ಣುಗಳೇ ಇಲ್ಲ ;

**ಎಲವೊ ಕೀಚಕ, ನಿನ್ನ ಹೋಲುವ ಚೆಲುವರಿಲ್ಲ**=ಕಾಮಿ ಕೀಚಕನು ತನ್ನ ರೂಪದ ಚೆಲುವನ್ನು ತಾನೇ ಹೊಗಳಿಕೊಂಡು ನುಡಿದ ಮಾತುಗಳೆಲ್ಲವನ್ನೂ ಆಲಿಸಿದ ಭೀಮನು ಈಗ ಮಾತನಾಡತೊಡಗುತ್ತಾನೆ; ಎಲವೋ ಕೀಚಕ, ನಿನ್ನ ಮಾತು ನಿಜ. ನಿನ್ನನ್ನು ಹೋಲುವಂತಹ ಚೆಲುವರು ಈ ಭೂಮಂಡಲದಲ್ಲಿ

ಯಾರೂ ಇಲ್ಲ; ಅಂತು+ಇರಲಿ; **ಅಂತಿರಲಿ**=ನಿನ್ನ ಹೊಗಳಿಕೆಯ ನುಡಿಗಳು ಹಾಗಿರಲಿ. ಈಗ ನನ್ನ ಚೆಲುವನ್ನು ಕೇಳು; ಲಲನೆ=ಹೆಂಗಸು; ಪರಿ=ರೀತಿ; **ತನ್ನಯ ರೂಪು ಲೋಕದ ಲಲನೆಯರ ಪರಿಯಲ್ಲ, ಬೇರೊಂದು**=ನನ್ನ ರೂಪು ಲೋಕದಲ್ಲಿನ ಹೆಣ್ಣುಗಳ ರೀತಿಯಲ್ಲಿಲ್ಲ. ನನ್ನ ಅಂದಚೆಂದದ ಬಗೆಯೇ ಮತ್ತೊಂದು ರೀತಿಯಲ್ಲಿದೆ ; ಇಳೆ=ಭೂಮಿ; ಎಣೆ+ಇಲ್ಲ; ಎಣೆ=ಸಮ/ಸಾಟಿ; **ಇಳೆಯೊಳು ಎನಗೆ ಎಣೆಯಿಲ್ಲ**=ಈ ಭೂಮಂಡಲದಲ್ಲಿ ನನಗೆ ಸರಿಸಾಟಿಯಾದ ಸುಂದರಿಯೇ ಇಲ್ಲ ; **ನಿನಗೆ ಆನು ಒಲಿದು ಬಂದೆನು**=ಈಗ ನಾನು ನಿನ್ನನ್ನು ಒಲಿದು ಬಂದಿದ್ದೇನೆ ; **ತನ್ನ ಪರಿಯನು ಬೇಗ ತೋರುವೆನು**=ನನ್ನ ರೂಪದ ಸೊಬಗಿನ ಸಿರಿಯ ಬಗೆಯನ್ನು ನನ್ನ ಮಯ್ ಮಾಟವನ್ನು ನಿನಗೆ ಬೇಗ ತೋರಿಸುತ್ತೇನೆ ;

**ಬಳಿಕ ನೋಡಾ**=ಅನಂತರ ನೀನು ನೋಡಿ ಸವಿಯುವುದು; ಸೋಲು= ಮೋಹಗೊಳ್ಳು/ಪರವಶವಾಗು; **ಪುರುಷರು ಎನಗೆ ಸೋಲದವರಿಲ್ಲ**= ಲೋಕದ ಗಂಡಸರಲ್ಲಿ ನನ್ನ ಮಯ್ ಮಾಟವನ್ನು ಕಂಡು ಮರುಳಾಗದವರು ಯಾರು ಇಲ್ಲ. ನನ್ನನ್ನು ನೋಡಿದವರೆಲ್ಲರೂ ನನ್ನೊಡನೆ ಕೂಡಿ ಆಡಿ ರಮಿಸಲು ಬಯಸುತ್ತಾರೆ; ಪಾಸಟಿ=ಸರಿ/ಸಮ; **ಎನಗೆ ಪಾಸಟಿ ನೀನು**=ಎಲ್ಲ ರೀತಿಯಿಂದಲೂ ನನಗೆ ನೀನು ಸಮಾನ; ನಿನಗೆ+ಆ; ಮನ+ಒಲಿದೆ; **ನಿನಗಾ ಮನವೊಲಿದೆ**=ನಿನ್ನ ಚೆಲುವಿಗೆ ನಾನು ಮನಸೋತಿದ್ದೇನೆ; ತನ್ನಯ=ನನ್ನ; ಹೆಣ್ಣುತನ=ಹೆಣ್ಣಿನ ಕೋಮಲವಾದ ದೇಹ, ಇಂಪಾದ ದನಿ ಮತ್ತು ಮನಮೋಹಕವಾದ ನಡೆನುಡಿ; ಅನು=ಸೊಗಸು; **ನೀ ನೋಡು ತನ್ನಯ ಹೆಣ್ಣುತನದ ಅನುವ**=ನನ್ನ ದೇಹದ ಸೊಗಸಿನ ಸಿರಿಯನ್ನು ಈಗ ನೀನು ನೋಡು; **ಹರುಷದಲಿ ಉಬ್ಬಿ ಕೀಚಕನು**=ಸೈರಂಧ್ರಿಯ ಬದಲು ಬಂದಿರುವ ಭೀಮನು ಆಡಿದ ಮಾತುಗಳನ್ನು ಕೇಳಿ ಆನಂದದಿಂದ ಉಬ್ಬಿದ ಕೀಚಕನು;

ಅನಿಲಜ=ಭೀಮ; ಮೈದಡವು=ದೇಹವನ್ನು ನೇವರಿಸುವುದು/ಸವರುವುದು; **ಅನಿಲಜನ ಮೈದಡವಿ**=ಕಾಮಾತುರತೆಯಿಂದ ಭೀಮನ ದೇಹದ ಮೇಲೆ ಕಯ್ ಆಡಿಸುತ್ತಿರಲು; ವೃತ್ತ=ಗುಂಡಾಗಿರುವ/ದುಂಡಾಗಿರುವ; ಸ್ತನ=ಮೊಲೆ; **ವೃತ್ತಸ್ತನವ ಕಾಣದೆ**=ದುಂಡನೆಯ ಮೊಲೆಗಳನ್ನು ಕಾಣದೆ; **ಹೆದರಿ ಬಳಿಕ ಅವ ನಗುತ ಇಂತು ಎಂದನು**=ಅರೆಗಳಿಗೆ ಬೆಚ್ಚಿಬಿದ್ದ ಕೀಚಕನು, ಅನಂತರ ಚೇತರಿಸಿಕೊಂಡು ನಗುತ್ತ ಈ ರೀತಿ ನುಡಿದನು ; ಎಲೆಗೆ=ಹೆಂಗಸನ್ನು ಕುರಿತು ಮಾತನಾಡಿಸುವಾಗ ಬಳಸುವ ಪದ; ಕಲುಮೈ+ಆದೆ; ಕಲುಮೈ=ಕಲ್ಲಿನಂತೆ ಗಟ್ಟಿಯಾದ ದೇಹ; ಕಡು= ಅತಿಶಯವಾದ; ಕೋಮಲತೆ=ಮೆತ್ತಗಿರುವಿಕೆ; ಎತ್ತಲು=ಯಾವ ಕಡೆ ಹೋಯಿತು

/ಏನಾಯಿತು; ಕರ್ಕಶ+ಅಂಗದ; ಕರ್ಕಶ=ಬಲುಗಟ್ಟಿಯಾದ/ಬಿರುಸಾದ; ಅಂಗ=ದೇಹ/ಶರೀರ; ಬಲುಹು=ಶಕ್ತಿ/ಕಸುವು; **ಎಲೆಗೆ ಕಲುಮೈಯಾದೆ... ಕಡು ಕೋಮಲತೆ ಎತ್ತಲು...ಕರ್ಕಶಾಂಗದ ಬಲುಹು ಇದು ಎತ್ತಲು**= ಎಲೆ ಸೈರಂಧ್ರಿಯೇ **"**ಇದೇನಿದು ನಿನ್ನ ಮಯ್ ಕಲ್ಲಾಗಿದೆ... ನಿನ್ನ ದೇಹದ ಕೋಮಲತೆ ಎತ್ತ ಹೋಯಿತು... ನಿನ್ನ ದೇಹಕ್ಕೆ ಗಟ್ಟಿತನದ ಕಸುವು ಹೇಗೆ ಉಂಟಾಯಿತು;**"**

ಮೇಣು=ಇಲ್ಲವೇ; **ಮಾಯವೇಷ ಧರಿಸುವುದು**=ನಿಜವಾದ ರೂಪವನ್ನು ಮರೆಸಿಕೊಂಡು, ಮತ್ತೊಂದು ರೂಪವನ್ನು ಹೊಂದುವುದು; **ಮಾಯ ವೇಷವ ಧರಿಸಿದೆಯೊ ತಿಳುಹು**=ಮಾಯಾವೇಷವನ್ನು ಹೊಂದಿ ಕೋಮಲತೆಯ ಪ್ರತಿರೂಪವಾಗಿದ್ದ ನೀನು ಈಗ ಗಡುಸಿನ ಪ್ರತಿರೂಪವನ್ನು ತಳೆದೆಯೋ; **ಕೇಳು ಎಲವೊ**=ಕಾಮಿ ಕೀಚಕನನ್ನು ಉದ್ದೇಶಿಸಿ ಭೀಮನು ನುಡಿಯತೊಡಗುತ್ತಾನೆ; ಪರ ಸತಿ=ಇತರರ ಹೆಂಡತಿ; ಅಳುಪಿದ+ಆತಂಗೆ; ಅಳುಪು=ಬಯಸು/ಕಾಮಿಸು; ಆತಂಗೆ=ಅವನಿಗೆ/ಅಂತಹ ವ್ಯಕ್ತಿಗೆ;

ಅಮೃತ=ಒಂದು ಬಗೆಯ ಪಾನೀಯ. ಇದನ್ನು ಕುಡಿದವರಿಗೆ ಸಾವು ಬರುವುದಿಲ್ಲವೆಂಬ ಕಲ್ಪನೆಯು ಜನಮನದಲ್ಲಿದೆ; ವಿಷ=ಒಂದು ಬಗೆಯ ವಸ್ತು/ ಪಾನೀಯ. ಇದನ್ನು ಸೇವಿಸಿದವರು ಸಾವನ್ನಪ್ಪುತ್ತಾರೆ; **ಪರಸತಿಗೆ ಅಳುಪಿದಾತಂಗೆ ಅಮೃತ ವಿಷ**=ಮತ್ತೊಬ್ಬರ ಹೆಂಡತಿಯೊಡನೆ ಕಾಮದ ನಂಟನ್ನು ಪಡೆಯಲು ಬಯಸುವ ವ್ಯಕ್ತಿಗೆ ಅಮೃತವು ನಂಜಾಗುತ್ತದೆ; ಮುಂದಲೆ=ತಲೆಯ ಮುಂದಿನ ಕೂದಲನ್ನು; ತುಡುಕು=ತಟ್ಟನೆ ಹಿಡಿ;

**ಕೋಮಲತೆ ಕರ್ಕಶ ಅಹುದು ಎನುತ ಮುಂದಲೆಯ ತುಡುಕಿದನು**= ಕೋಮಲವಾಗಿದ್ದುದು ಗಡುಸಾಗುತ್ತದೆ ಎನ್ನುತ್ತ ಕೀಚಕನ ಮುಂದಲೆಯನ್ನು ತಟ್ಟನೆ ಹಿಡಿದುಕೊಂಡನು; ಕೃಪಣ=ನೀಚ; ಮತಿ=ಬುದ್ಧಿ; ಕೃಪಣಮತಿ= ನೀಚಬುದ್ಧಿಯ ಕೀಚಕ; ಚಪಳೆ=ಚಂಚಲಗುಣದವಳು; ಫಡ=ತಿರಸ್ಕಾರ ಇಲ್ಲವೇ ಕೋಪವನ್ನು ಸೂಚಿಸುವಾಗ ಹೇಳುವ ಪದ; ಹಾಯ್ದನು=ಪಕ್ಕಕ್ಕೆ ಸರಿದನು; **ಕೃಪಣಮತಿ ಚಪಳೆ ಫಡ ಹೋಗು ಎನುತ ಹಾಯ್ದನು**=ನೀಚನಾದ ಕೀಚಕನು **"**ಚಂಚಲೆಯೇ, ಇದೇನಿದು... ಅತ್ತ ತೊಲಗು**"** ಎಂದು ತಿರಸ್ಕಾರದಿಂದ ನುಡಿಯುತ್ತ ದೂರ ಸರಿದನು; ಅನಿಲಜ=ಭೀಮ; ಅಪರ=ಹಿಂದುಗಡೆ; ತುರುಬು= ತಲೆಗೂದಲು; **ಅನಿಲಜನು ಅಪರಭಾಗಕೆ ಹಾಯ್ದು ಕೀಚಕನ ತುರುಬ ಮುಂಗೈಯಲಿ ಹಿಡಿದನು**=ಭೀಮನು ಕೂಡಲೇ ಹಿಂದಿನಿಂದ ನುಗ್ಗಿ ಕೀಚಕನ ತಲೆಗೂದಲನ್ನು ಮುಂಗಯ್ ಇಂದ ಹಿಡಿದು ಕೊಂಡನು; ವಿಪುಲ=ಹೆಚ್ಚು/ದೊಡ್ಡದಾದ; ವಿಪುಲಬಲ= ಮಹಾಬಲಶಾಲಿ; ಕಳವಳಿಸು=ಆತಂಕಗೊಳ್ಳು/ಚಡಪಡಿಸು;

**ವಿಪುಳಬಲ ಕಳವಳಿಸಿದನು**=ಮಹಾಬಲಶಾಲಿಯಾಗಿದ್ದ ಕೀಚಕನು ಆತಂಕಗೊಂಡನು ; **ಕಡು ಕುಪಿತನಾದನು**=ಕೀಚಕನು ಬಹಳ ಕೋಪಗೊಂಡನು ; ಅಪಸದ=ಕೇಡಿ; ಒಳಹೊಕ್ಕು=ಒಳಕ್ಕೆ ಬಂದು; ಹೆಣಗು=ಏಗು/ನಿಭಾಯಿಸು/ ಪ್ರಯಾಸಪಡು; **ಹೆಂಗುಸಲ್ಲ... ಇವನು ಅಪಸದನು...ತೆಗೆ ಕರುಳನು ಎನುತ ಒಳಹೊಕ್ಕು ಹೆಣಗಿದನು**= ಇಲ್ಲಿರುವ ವ್ಯಕ್ತಿ ಹೆಂಗುಸಲ್ಲ... ಇವನು ಕೇಡಿ... ಇವನ ಕರುಳನ್ನು ಕಿತ್ತು ತೆಗೆಯಬೇಕು ಎನ್ನುತ್ತ ಕೀಚಕನು ಮತ್ತೆ ಒಳಕ್ಕೆ ಬಂದು ಇದುವರೆಗೂ ತನ್ನನ್ನು ಏಮಾರಿಸಿದ್ದ ಭೀಮನೊಡನೆ ಪ್ರಯಾಸದಿಂದ ಹೋರಾಡತೊಡಗಿದನು; ಉರವಣಿಸು=ರಭಸದಿಂದ ಮುಂದೆ ನುಗ್ಗಿ; ತಿವಿ=ಮುಷ್ಟಿಯಿಂದ ಹೊಡೆ/ಗುದ್ದು; **ಅವನು ಉರವಣಿಸಿ ತಿವಿದನು**=ಕೀಚಕನು ರಭಸದಿಂದ ಮುನ್ನುಗ್ಗಿ ಭೀಮನಿಗೆ ಮುಷ್ಟಿಯಿಂದ ಗುದ್ದಿದನು; ಮಾರುತಿ=ಭೀಮ; ಕವಿ=ಮೇಲೆ ಬೀಳು/ಎರಗು;

**ಮಾರುತಿ ಕವಿದು ಹೆಣಗಿದನು**=ಭೀಮನು ತನ್ನ ಸರಿಸಮಾನಬಲವುಳ್ಳ ಕೀಚಕನ ಮೇಲೆ ಬಿದ್ದು ಪ್ರಯಾಸದಿಂದಲೇ ಹೋರಾಡತೊಡಗಿದನು. ಏಕೆಂದರೆ ಭೀಮ ಮತ್ತು ಕೀಚಕ 'ಮಯ್' ಬಲ ಮತ್ತು ಗದಾ ವಿದ್ಯೆಯಲ್ಲಿ ಇಬ್ಬರು ಸಮಬಲರು ; ಅಡಸು=ಮೆಟ್ಟು/ಬಿಗಿಯಾಗಿ ಒತ್ತು; ಬವರಿ=ಮಲ್ಲಕಾಳೆಗದ ಒಂದು ಪಟ್ಟು/ವರಸೆ; **ಅಡಸಿ ಬವರಿಯಲಿ ಹೊಯ್ದೊಡೆ**=ಭೀಮನು ಕೀಚಕನನ್ನು ಮೆಟ್ಟಿಕೊಂಡು ಮಲ್ಲಕಾಳೆಗದ ಒಂದು ಪಟ್ಟಿನಲ್ಲಿ ಹೊಡೆದರೆ; ಟೊಣೆ=ತಿವಿ/ ಚುಚ್ಚು; ಔಕು=ಅದುಮು; **ಟೊಣೆದು ಔಕಿದೊಡೆ**=ಕೀಚಕನನ್ನು ಕಯ್ಗಳಿಂದ ತಿವಿದು ಅದುಮಿದರೆ; ಮಡಮುರಿ=ಹಿಮ್ಮೆಟ್ಟು/ಹಿಂದಕ್ಕೆ ಹೊರಳು; **ಮಡಮುರಿಯದೆ ಒಳಹೊಕ್ಕು**= ಮಹಾಬಲನಾಗಿದ್ದ ಕೀಚಕನು ಹಿಮ್ಮೆಟ್ಟದೆ, ಒಳಕ್ಕೆ ನುಗ್ಗಿ ಬಂದು ; ಸವಡಿ=ಜೊತೆ/ಜೋಡಿ; ಮಂದರ=ಒಂದು ಪರ್ವತದ ಹೆಸರು; ಪವನಸುತ=ಭೀಮ;

ಒಪ್ಪು=ಪ್ರಕಟವಾಗು/ಕಂಡುಬರುವುದು; **ಸವಡಿ ಮಂದರದಂತೆ ಕೀಚಕ ಪವನಸುತರು ಒಪ್ಪಿದರು**=ಎರಡು ಮಂದರ ಪರ್ವತಗಳಂತೆ ಕಂಡುಬಂದ ಕೀಚಕ ಮತ್ತು ಭೀಮ – ಇಬ್ಬರೂ ಮಲ್ಲಯುದ್ಧದ ನಾನಾ ಪಟ್ಟುಗಳಲ್ಲಿ ಹೋರಾಡ ತೊಡಗಿದರು; ಭೀಮನ ಯುವತಿ=ಸೈರಂಧ್ರಿ; ಹೊಯಿಲ್=ಏಟು/ಪೆಟ್ಟು/ಹೊಡೆತ; ಹೋರಟೆ=ಕಾಳೆಗ; ಆಲಿಸು=ಕೇಳು; **ಭೀಮನ ಯುವತಿ ನಗುತ ಹೊಯ್ಲ ಹೋರಟೆಯ ಆಲಿಸುತಲಿದ್ದಳು**=ಕತ್ತಲೆ ಕವಿದಿರುವ ನಾಟ್ಯಮಂದಿರದಲ್ಲಿ ಇಬ್ಬರು ಸಮಬಲರ ನಡುವಿನ ಮಲ್ಲಯುದ್ಧದ ಹೊಡೆತಗಳ ಶಬ್ದವನ್ನು ಸೈರಂಧ್ರಿಯು ನಗುತ್ತ ಕೇಳಿಸಿಕೊಳ್ಳುತ್ತಿದ್ದಳು ; ಗಾಯ=ಪೆಟ್ಟು; ತರವರಿಸು= ತತ್ತರಿಸು/ನಡುಗು;

ಮಂಡಿಸು=ಬಾಗಿಸು/ಬಗ್ಗಿಸು; ಮರೆ+ಪಡೆದು; ಮರೆ=ಮಯ್ ಮೇಲಿನ ಪ್ರಜ್ಞೆಯನ್ನು ಕಳೆದುಕೊಳ್ಳುವುದು; **ಎರಗಿದೊಡೆ ಕೀಚಕನ ಗಾಯಕೆ ತರವರಿಸಿ ಕಲಿಭೀಮ ಮಂಡಿಸಿ ಮರೆವಡೆದು**=ಕೀಚಕನು ಆಕ್ರಮಣಮಾಡಿ ಹೊಡೆದ ಪೆಟ್ಟಿಗೆ ಭೀಮನು ಕೆಳಕ್ಕೆ ಕುಸಿದು ಮೂರ್ಚೆಹೋಗಿ ; ಮುರಿದು+ಎದ್ದು;

ಮುರಿ=ಮತ್ತೆ ಬರುವುದು/ಪುನಹ ಬರುವುದು; ಮುರಿದೆದ್ದು=ಭೀಮನು ಮತ್ತೆ ಚೇತರಿಸಿಕೊಂಡು ಮೇಲೆದ್ದು; ರೋಷ=ಸಿಟ್ಟು/ಆಕ್ರೋಶ; ಔಡು=ದವಡೆ/ ಕೆಳತುಟಿ; ಒಡೆಯಗಿದು=ಜೊತೆಯಲ್ಲಿಯೇ ಹಲ್ಲು ಕಚ್ಚುತ್ತ; **ಮುರಿದೆದ್ದು ರೋಷದಲಿ ಔಡನು ಒಡೆಯಗಿದು**=ಕೆಲವು ಗಳಿಗೆಗಳಲ್ಲಿಯೇ ಭೀಮನು ಮತ್ತೆ ಚೇತರಿಸಿಕೊಂಡು ಕೋಪೋದ್ರೇಕದಿಂದ ಅವುಡು ಕಚ್ಚುತ್ತ; ಸಿಡಿಲು=ಮೋಡಗಳ ತಾಕುವಿಕೆಯಿಂದ ದೊಡ್ಡ ಶಬ್ದದೊಡನೆ ಹೊರಹೊಮ್ಮುವ ಬೆಂಕಿ; ಬರಸಿಡಿಲು=ಇದ್ದಕ್ಕಿದ್ದಂತೆ ಬಂದು ಬಡಿಯುವ ಸಿಡಿಲು; ಶಿಖರ=ಮೇಲಿನ ತುದಿ; **ಬರಸಿಡಿಲು ಪರ್ವತದ ಶಿಖರವನು ಎರಗುವಂತಿರೆ**=ಬರಸಿಡಿಲು ಪರ್ವತದ ಮೇಲಿನ ತುದಿಗೆ ಬಂದು ಬಡಿಯುವಂತೆ; ರಣಧೀರ=ಕಾಳೆಗದ ಶೂರ; ಉನ್ನತ=ಹೆಚ್ಚಿನ/ ಮೇಲಾದ; ಬಾಹುಸತ್ತ್ವ=ತೋಳಿನ ಬಲ; ಖಳ=ನೀಚ/ಕೇಡಿ; **ರಣಧೀರನು ಉನ್ನತ ಬಾಹುಸತ್ವದಲಿ ಖಳನ ನೆತ್ತಿಯನು ಎರಗಿದನು**=ಕಾಳೆಗದ ಮಲ್ಲನಾದ ಭೀಮನು ತನ್ನ ದೊಡ್ಡ ಬಾಹುಗಳ ಕಸುವಿನಿಂದ ಕಾಮಿ ಕೀಚಕನ ತಲೆಯ ಮೇಲೆ ಬಡಿದನು; ಅರಿ=ಹಗೆ/ಶತ್ರು; ಮುಷ್ಟಿ=ಬಿಗಿಹಿಡಿದ ಮುಂಗಯ್; ಅರಿಯ ಮುಷ್ಟಿ=ಕೀಚಕನ ಪಾಲಿಗೆ ಹಗೆಯಾಗಿರುವ ಭೀಮನ ಮುಷ್ಟಿಯ ಹೊಡೆತ;

ಬಿರಿ=ಸೀಳು/ಒಡೆ; ಬಿರಿ=ಸೀಳು/ಒಡೆ/ಹೋಳು; **ಅರಿಯ ಮುಷ್ಟಿಯ ಗಾಯದಲಿ ತಲೆಬಿರಿಯೆ**=ಭೀಮನ ಮುಷ್ಟಿಯ ಹೊಡೆತದಿಂದ ಉಂಟಾದ ಗಾಯದಿಂದ ಕೀಚಕನ ತಲೆಯು ಒಡೆಯಿತು; ತನು=ದೇಹ; ಡೆಂಡಣಿಸು= ನಡುಗು/ಕಂಪಿಸು; **ತನು ಡೆಂಡಣಿಸಿ**=ಕೀಚಕನ ದೇಹ ನಡುಗತೊಡಗಿತು; ಜೋಲು=ಇಳಿಬೀಳು; **ಕಂಗಳು ತಿರುಗಿ**=ಕಣ್ಣುಗಳು ತಿರುಗುತ್ತ ಅಂದರೆ ಮಿದುಳಿಗೆ ಬಿದ್ದ ಪೆಟ್ಟಿನಿಂದಾಗಿ ಕಣ್ಣುಗಳ ದಿಟ್ಟಿ ಮಂಜಾಗುತ್ತಿರಲು; **ಜೋಲಿದು**=ಜೋತು ಬಿದ್ದು/ಕುಸಿದು ಬಿದ್ದು; ಅಸು=ಪ್ರಾಣ/ಜೀವ; ಪಸರಿಸು=ವ್ಯಾಪಿಸು/ಆವರಿಸಿಕೊಳ್ಳು;

**ಮೆಲ್ಲ ಮೆಲ್ಲನೆ ಅಸುವ ಪಸರಿಸುತ**=ತೀವ್ರವಾದ ಪೆಟ್ಟಾಗಿದ್ದರೂ ಕೀಚಕನು ಮೆಲ್ಲ ಮೆಲ್ಲಗೆ ಮತ್ತೆ ತನ್ನ ಬಲವನ್ನು ಒಗ್ಗೂಡಿಸಿಕೊಂಡು; ಕರಿ=ಆನೆ; ಕೇಸರಿ=ಸಿಂಹ; ಉರೆ=ಅತಿಶಯವಾಗಿ; ತಿರುಗು=ಹಿಮ್ಮೆಟ್ಟು/ಹೊರಳು; **ಕೆರಳಿ ಕರಿ ಕೇಸರಿಯ ಹೊಯ್ದು ಉರೆ ತಿರುಗುವಂತಿರೆ**=ಕೆರಳಿದ ಆನೆಯು ತನ್ನ ಸೊಂಡಲಿನಿಂದ

ಸಿಂಹವನ್ನು ಹೊಡೆದು ಹಿಮ್ಮೆಟ್ಟಿಸುವಂತೆ; ಬರಿ=ಪಕ್ಕೆ; **ಹಲು ಮೊರೆ=** ಕೋಪೋದ್ರೇಕದಿಂದ ಹಲ್ಲುಗಳನ್ನು ಬಿಗಿಯಾಗಿ ಕಚ್ಚಿಕೊಳ್ಳುವುದು;

**ಭೀಮಸೇನನ ಬರಿಯ ತಿವಿದನು**= ಕೀಚಕನು ಭೀಮನ ಪಕ್ಕೆಗೆ ಗುದ್ದಿದನು; **ಖಳರಾಯ ಬೀಳು ಎನುತ ಹಲು ಮೊರೆದ**=ಕೇಡಿಯೇ ಬೀಳು ಎನ್ನುತ್ತ ಹಲ್ಲುಮುರಿಯನ್ನು ಕಚ್ಚಿದ; ಪೈಸರ+ಪೋಗಿ; ಪೈಸರ=ಮಲ್ಲಯುದ್ಧದ ಒಂದು ವರಸೆ/ಪಟ್ಟು; ಮರಳು=ಹಿಂತಿರುಗು; **ತಿರುಗಿ ಪೈಸರವೋಗಿ ಮರಳಿ**=ಈಗ ಭೀಮನು ಮಲ್ಲಯುದ್ಧದ ಒಂದು ಪಟ್ಟಿನಂತೆ ಕೆಲವು ಹೆಜ್ಜೆ ಹಿಂದಕ್ಕೆ ಸರಿದು ಮತ್ತೆ ಮುಂದೆ ಬಂದು; ಪವನಜ=ಭೀಮ; ಪಿರಿದು+ಉರ=ಪೇರುರ; ಪಿರಿದು= ಅಗಲವಾದ/ದೊಡ್ಡದಾದ; ಉರ=ಎದೆ; ಪೇರುರ=ದೊಡ್ಡ ಎದೆ; **ಕೀಚಕನ ಪೇರುರವನು ಪವನಜ ತಿವಿದನು**=ಕೀಚಕನ ದೊಡ್ಡದಾದ ಎದೆಯ ಮೇಲೆ ಭೀಮನು ಬಲವಾಗಿ ಗುದ್ದಿದನು; ಜರ್ಝರಿತ=ಚಿದ್ರಚಿದ್ರವಾದುದು/ಒಡೆದು ಹೋದುದು; **ಎದೆ ಜರ್ಝರಿತವಾಗಲು**=ಕೀಚಕನ ಎದೆಯ ಮೂಳೆಗಳು ನರುಕಿ ಹೋದವು; ಕಾರು=ವಾಂತಿ ಮಾಡು; **ಕರುಳ ಕಾರಿದನು**=ಕೀಚಕನ ಹೊಟ್ಟೆಯಿಂದ ಕರುಳು ಕಿತ್ತು ಹೊರಬಂದಿತು ; ಆಲಿ=ಕಣ್ಣು ಗುಡ್ಡೆ; ಬಿರಿ=ಒಡೆ/ಸೀಳು; **ಆಲಿಗಳು ಬಿರಿದವು**=ಕೀಚಕನ ಕಣ್ಣುಗುಡ್ಡೆಗಳು ಒಡೆದವು; ಉರುಗು=ಹೊರಳು; ಒಲೆದು=ತೂರಾಡು; ಒಲದೊಲೆದು=ತೂರಾಡುತ್ತ;

**ಕಣ್ಣು ಉರುಗಿ ಒಲೆದು ತೊಲೆದು**=ಕಣ್ಣುಗಳು ಹೊರಳಿ ಅಂದರೆ ಏನೂ ಕಾಣದಂತಾಗಿ ಕೀಚಕನು ತೂರಾಡುತ್ತ ; **ಧೊಪ್ಪನೆ ಕೆಡೆದು**=ದೊಪ್ಪನೆ ಕೆಳಕ್ಕೆ ಬಿದ್ದು; ಹೊರಳು=ಉರುಳಾಡು/ಉರುಳು; **ನಿಮಿಷಕೆ ಹೊರಳಿ**=ಕೀಚಕನು ಕೆಲವು ಗಳಿಗೆಯ ಕಾಲ ನೆಲದ ಮೇಲೆ ಮಿಲಮಿಲನೆ ಒದ್ದಾಡುತ್ತಿರುವಾಗಲೇ; ಕಾಯ= ದೇಹ; ಹರಣ=ಜೀವ/ಪ್ರಾಣ;

**ಕೀಚಕನ ಕಾಯ ಹರಣವ ಕಳುಹಿ ಕಳೆದುದು**=ಕೀಚಕನ ದೇಹದಿಂದ ಜೀವ ಹಾರಿಹೋಯಿತು; ಬಸುರು=ಹೊಟ್ಟೆ; **ತಲೆಯನು ಎದೆಯೊಳಗೆ ಇಕ್ಕಿ**=ಭೀಮನು ಕೀಚಕನ ತಲೆಯನ್ನು ಬಗ್ಗಿಸಿ ಎದೆಯಲ್ಲಿಟ್ಟು; **ಕೈ ಕಾಲ್ಗಳನು ಬಸುರೊಳು ಸಿಕ್ಕಿ**=ಕೀಚಕನ ಕಯ್ ಕಾಲುಗಳನ್ನು ಅವನ ಹೊಟ್ಟೆಯೊಳಕ್ಕೆ ಸಿಕ್ಕಿಸಿ; ತೊಲಗು= ಮರಳು/ಹಿಂತಿರುಗು; **ದೂರಕೆ ತೊಲಗಿದನು**=ಕೀಚಕನ ಹೆಣ ಬಿದ್ದಿರುವ ಜಾಗದಿಂದ ಭೀಮನು ದೂರ ಬಂದನು; ರಮಣಿ=ಹೆಂಡತಿ; ಹದನು=ಅವಸ್ಥೆ/ ಸ್ಥಿತಿ;

**ರಮಣಿಗೆ ಕೀಚಕನ ಹದನ ತೋರಿದನು**=ದ್ರೌಪದಿಗೆ ಕೀಚಕನು ಹೆಣವಾಗಿ ಬಿದ್ದಿರುವುದನ್ನು ತೋರಿಸಿದನು ; ಕಾಲ=ಯಮ; ಕೋಣ=ಗಂಡು ಎಮ್ಮೆ; ಕಾಲನ

ಕೋಣ=ಸಾವಿನ ದೇವತೆಯಾದ ಯಮನು ಸಂಚರಿಸಲು ಕೋಣವನ್ನು ವಾಹನವನ್ನಾಗಿ ಬಳಸುತ್ತಾನೆ ಎಂಬ ಕಲ್ಪನೆಯು ಜನಮನದಲ್ಲಿದೆ; ಇಳೆ=ಭೂಮಿ; ಒರಗು=ಮಲಗು; **ಕಾಲನ ಕೋಣ ಖಳನ ತುಳಿದಂತೆ ಇಳೆಯೊಳು ಒರಗಿರೆ ಕಂಡು**=ಯಮನ ಕೋಣವೇ ನೀಚನನ್ನು ತುಳಿದಿರುವಂತೆ ನೆಲದಲ್ಲಿ ಬಿದ್ದಿರುವ ಕೀಚಕನ ಹೆಣವನ್ನು ಕಂಡು; ಅಪ್ಪು=ತಬ್ಬಿಕೊಳ್ಳು/ಆಲಂಗಿಸು; ಮುಂಡಾಡು= ಮುತ್ತಿಡು/ಚುಂಬಿಸು; ಕಾಮಿನಿ=ಹೆಂಗಸು; ಕಳಕಳಿಸು=ಅಕ್ಕರೆ/ಪ್ರೀತಿ;

**ಕಾಮಿನಿ ಭೀಮಸೇನನನು ಅಪ್ಪಿ ಮುಂಡಾಡಿ ಕಳಕಳಿಸಿದಳು**=ದ್ರೌಪದಿಯು ಭೀಮಸೇನನನ್ನು ತಬ್ಬಿಕೊಂಡು ಮುತ್ತನ್ನಿಟ್ಟು ತನ್ನ ಅಕ್ಕರೆಯನ್ನು ತೋರಿಸಿದಳು ; ಸಾರು=ದೂರ ಸರಿ/ಮರೆಯಾಗು; ಪವನಜ=ಭೀಮ; ಅತ್ತಲು=ಆ ಕಡೆ; ಸರಿ=ಹೋಗು/ತೆರಳು; **ತರುಣಿ ಬಿಡು ಸಾರು ಎನುತ ಪವನಜ ಅತ್ತಲು ಸರಿದನು**= ದ್ರೌಪದಿಯ ಆಲಿಂಗನದಿಂದ ತನ್ನನ್ನು ಬಿಡಿಸಿಕೊಳ್ಳುತ್ತ "ದ್ರೌಪದಿಯೇ ನನ್ನನ್ನು ಬಿಡು. ಇಲ್ಲಿಂದ ಮರೆಯಾಗು" ಎಂದು ಹೇಳುತ್ತ ಭೀಮನು ಅಡುಗೆಯ ಮನೆಯತ್ತ ತೆರಳಿದನು;



## ನೋಟ–೧೨

ದ್ರುಪದ ನಂದನೆ=ದ್ರುಪದ ರಾಜನ ಮಗಳು ದ್ರೌಪದಿ; ಕಾಹು=ಕಾಯುವಿಕೆ/ಪಹರೆ; ಕಾಹಿನವರು=ಕಾವಲುಗಾರರು; ಹದನ=ಸುದ್ದಿ; **ದ್ರುಪದನಂದನೆ ಕರೆದು ಕಾಹಿನವರಿಗೆ ಕೀಚಕನ ಹದನ ನುಡಿದಳು**=ದ್ರೌಪದಿಯು ರಾಜಭಟರನ್ನು ಕರೆದು ಕೀಚಕನ ಸಾವಿನ ಸುದ್ದಿಯನ್ನು ಅವರಿಗೆ ಹೇಳಿದಳು; ದುರುಳ=ನೀಚ; ಬಲುಹು=ಬಲಾತ್ಕಾರ; ಎನ್ನನು=ನನ್ನನ್ನು; ಎಳೆದೊಡೆ=ಎಳೆದಿದ್ದರಿಂದ; **ದುರುಳ ಬಲುಹಿಂದ ಎನ್ನನು ಎಳೆದೊಡೆ**=ನೀಚನಾದ ಕೀಚಕನು ಬಲಾತ್ಕಾರದಿಂದ ನನ್ನ ಮಾನಹಾನಿ ಮಾಡಲು ಎಳೆದಿದ್ದರಿಂದ;

ಗಂಧರ್ವ=ದೇವತೆ; ಕೆರಳು=ಕೋಪಗೊಳ್ಳು/ಉದ್ರಿಕ್ತವಾಗು; **ಗಂಧರ್ವರು ನೋಡಿ ಕೆರಳಿದರು**=ನನ್ನ ಗಂಡಂದಿರಾದ ದೇವತೆಗಳು ಕೀಚಕನ ಹಲ್ಲೆಯನ್ನು ನೋಡಿ ಕೋಪಗೊಂಡರು; ಹರುವು=ನಾಶ/ಅಳಿವು/ಕೊನೆ; **ಈತಗೆ ಹರುವ ಕಂಡರು**=ಈತನಿಗೆ ಕೊನೆಗಾಣಿಸಿದರು/ ಇವನನ್ನು ಕೊಂದರು; ಎನೆ=ಎಂದು ಹೇಳಲು; ಕಾಹಿನ+ಅವದಿರು; ಕಾಹಿನ=ಕಾವಲಿನ; ಅವದಿರು=ಅವರು; ಕಾಹಿನವದಿರು=ಕಾವಲಿನ ಪಡೆಯವರು; ಹರಿ=ಓಡು/ವೇಗವಾಗಿ ಚಲಿಸು;

**ಕಾಹಿನವದಿರು ಅವಳೊಡನೆ ಹರಿತಂದರು**=ಕಾವಲಿನ ಪಡೆಯವರು ಸೈರಂಧ್ರಿಯೊಡನೆ ನಾಟ್ಯಮಂದಿರದೊಳಕ್ಕೆ ಓಡೋಡಿ ಬಂದರು; ದೀವಿಗೆ=ಸೊಡರು/ದೀಪ; ಕೈದೀವಿಗೆ=ಪಂಜು; ಅರಸು=ಹುಡುಕು; ಇಹ=ಇರುವ; ಪರಿ=ರೀತಿ/ಅವಸ್ಥೆ; **ಕೈದೀವಿಗೆಯಲಿ ಅರಸಿ ಅವನು ಇಹ ಪರಿಯ ಕಂಡರು**=ಕತ್ತಲು ಕವಿದಿದ್ದ ನಾಟ್ಯಮಂದಿರದೊಳಗೆ ಪಂಜನ್ನು ಹಿಡಿದುಕೊಂಡು ಹುಡುಕುತ್ತ ಹೋಗಿ, ನೆಲದ ಮೇಲೆ ಸತ್ತು ಬಿದ್ದಿರುವ ಕೀಚಕನನ್ನು ಕಂಡರು; ಅನುಜಾತ=ಒಡಹುಟ್ಟಿದ/ತಮ್ಮ; **ಬೇಗದಲಿ ಹರಿದು ಆತನ ಅನುಜಾತರಿಗೆ**

**ಹೇಳಿದರು**=ಕಾವಲು ಪಡೆಯವರು ಅಲ್ಲಿಂದ ವೇಗವಾಗಿ ಓಡಿಬಂದು ಕೀಚಕನ ತಮ್ಮಂದಿರಿಗೆ ಕೀಚಕನ ಸಾವಿನ ಸುದ್ದಿಯನ್ನು ತಿಳಿಸಿದರು;

ಕರ=ಕಯ್; **ಕೀಚಕನ ಸೋದರರು ಕರದಿ ಬಾಯ್ಗಳ ಹೊಯ್ದು**=ಅಣ್ಣನ ಸಾವಿನ ಸುದ್ದಿಯನ್ನು ಕೇಳಿ ಸಂಕಟಕ್ಕೀಡಾದ ಕೀಚಕನ ತಮ್ಮಂದಿರು ತಮ್ಮ ಕಯ್ಗಳಿಂದ ಬಾಯನ್ನು ಬಡಿದುಕೊಳ್ಳುತ್ತ; ಹೃದಯ=ಎದೆ; ಉರಿ=ಸಂಕಟ/ ಬೆಂಕಿಯ ಜ್ವಾಲೆ; ಚಡಾಳಿಸು=ಹಬ್ಬು/ಹೆಚ್ಚಾಗು/ತುಂಬು; **ಹೃದಯದೊಳು ಉರಿ ಚಡಾಳಿಸೆ**=ಎದೆಯಲ್ಲಿ ಸಂಕಟವು ಬೆಂಕಿಯ ಉರಿಯಂತೆ ಹಬ್ಬುತ್ತಿರಲು; ಮಂಡೆ=ತಲೆ; ಮಂಡೆಯೊಳು+ಇರದೆ; ಬಿಟ್ಟ ಮಂಡೆ=ಕೆದರಿದ ತಲೆಗೂದಲು; ಬಾಯ್+ಬಿಡು; ಬಾಯ್ಬಿಡು=ಗೋಳಾಡು/ಸಂಕಟಪಡು; **ಬಿಟ್ಟ ಮಂಡೆಯೊಳಿರದೆ ಬಾಯ್ಬಿಡುತ ಬಂದರು**=ಕೀಚಕನ ಸಾವಿನ ಸುದ್ದಿಯನ್ನು ಕೇಳಿದ ಕೂಡಲೇ ಉಟ್ಟಬಟ್ಟೆಯಲ್ಲಿಯೇ ಹೇಗಿದ್ದರೋ ಹಾಗೆ ಗೋಳಾಡುತ್ತ ನಾಟ್ಯಮಂದಿರಕ್ಕೆ ಬಂದರು; ಅಕಟ=ಅಯ್ಯೋ; ಗತಿ=ಆದಾರ/ಆಶ್ರಯ;

**ಅಕಟ, ಕೀಚಕ ವೀರ, ಎಮಗೆ ಆರು ಗತಿ**=ಅಯ್ಯೋ... ಅಣ್ಣಾ... ಇನ್ನು ಮುಂದೆ ನಮಗೆ ಯಾರು ದಿಕ್ಕು. ನಮ್ಮನ್ನು ಕಾಪಾಡುವವರು ಯಾರು; ದೇಶಿಗರು+ಆದೆವು; ದೇಶಿಗ=ಗತಿಯಿಲ್ಲದವನು/ಪರದೇಶಿ/ತಬ್ಬಲಿ; **ಆವು ದೇಶಿಗರಾದೆವು**=ನಾವು ತಬ್ಬಲಿಗಳಾದೆವು; **ಇನ್ನಾರ ಸೇರುವೆವು ಎನುತ**=ಇನ್ನು ಯಾರ ಜತೆಗೂಡಿ ಬಾಳುವೆವು ಎಂದು ಗೋಳಿಡುತ್ತ; ತಕ್ಕೈಸು=ಅಪ್ಪು/ಆಲಂಗಿಸು; ಹಲುಬು= ರೋದಿಸು/ಗೋಳಾಡು; **ಅವನ ತಕ್ಕೈಸಿ ಹಲುಬಿದರು**=ಕೀಚಕನ ಹೆಣವನ್ನು ತಬ್ಬಿಕೊಂಡು ಅಳತೊಡಗಿದರು; ಕ್ರೂರ=ಕರುಣೆಯಿಲ್ಲದ; ಕರ್ಮ=ಕೆಲಸ;

ಕ್ರೂರಕರ್ಮರು=ದಯೆಯಿಲ್ಲದವರು/ಕರುಣೆಯಿಲ್ಲದವರು; ಆರು=ಯಾರು; ಹಾ 'ಹಾ=ಸಂಕಟದ ದನಿ; **ಕ್ರೂರಕರ್ಮರು ನಿನ್ನ ಕೊಂದವರು ಆರು... ಹಾ... ಹಾ... ಎನುತ ಹಲುಬಲು**="ನಿನ್ನನ್ನು ಕೊಂದ ಕ್ರೂರಿಗಳು ಯಾರು" ಎಂದು ಸಂಕಟದಿಂದ ಬಾಯ್ಬಿಡುತ್ತ ಅಳುತ್ತಿರಲು; ವಾರಿಜ+ಆನನೆ; ವಾರಿಜ=ತಾವರೆ; ಆನನ=ಮೊಗ; ವಾರಿಜಾನನೆ=ತಾವರೆ ಮೊಗದವಳು/ಸುಂದರಿ; ಖಳ=ನೀಚ; **ವಾರಿಜಾನನೆ ಮುಗುಳುನಗೆಯಲಿ ಖಳರ ನೋಡಿದಳು**=ಸೈರಂಧ್ರಿಯು ಮುಗುಳುನಗೆಯನ್ನು ಬೀರುತ್ತ ನೀಚರಾದ ಕೀಚಕನ ತಮ್ಮಂದಿರನ್ನು ನೋಡಿದಳು; ಸಹಭವ=ಒಡಹುಟ್ಟಿದವನು/ಸೋದರ; ಇವಳಿಗೆ+ಓಸುಗವೆ; ಓಸುಗ=ಸಲುವಾಗಿ /ದೆಸೆಯಿಂದ; ಅಳಿ=ಸಾಯು;

**ಸಹಭವನು ಇವಳಿಗೋಸುಗವೆ ಅಳಿದನೇ**=ನಮ್ಮ ಅಣ್ಣನು ಇವಳ ದೆಸೆಯಿಂದ ಸತ್ತನೇ; **ತಪ್ಪೇನು ಎನುತ** =ಈಕೆಯನ್ನು ನಮ್ಮ ಅಣ್ಣ ಬಯಸಿದ್ದರಲ್ಲಿ ಯಾವ ತಪ್ಪು

ಇಲ್ಲ. ಏಕೆಂದರೆ ಮತ್ಸ್ಯದೇಶದ ಮಹಾಸೇನಾನಿಯಾಗಿದ್ದ ಆತ ತಾನು ಬಯಸಿದ ಯಾವುದೇ ಹೆಣ್ಣನ್ನು ಪಡೆಯಬಲ್ಲ ಅಧಿಕಾರವನ್ನು ಹೊಂದಿದ್ದ ಎಂದು ತಮ್ಮ ಅಣ್ಣನ ಪರವಾಗಿಯೇ ಮಾತನಾಡುತ್ತ; ನಡು=ಮಧ್ಯ; ಇರುಳು=ರಾತ್ರಿ; ಐತಂದು=ಆಗಮಿಸಿ; ಅರುಹು=ತಿಳಿಸು;

**ನಡು ಇರುಳು ಅವದಿರು ಐತಂದು ವೈರಾಟರಾಯಂಗೆ ಅರುಹಿದರು**= ನಡುರಾತ್ರಿಯಲ್ಲಿ ಅವರು ನಾಟ್ಯಮಂದಿರದಿಂದ ಅರಮನೆಗೆ ಬಂದು ವಿರಾಟರಾಯನಿಗೆ ಕೀಚಕನ ಸಾವಿನ ಸುದ್ದಿಯನ್ನು ತಿಳಿಸಿದರು; ಎವಗೆ=ನಮಗೆ; ನೇಮ=ಕಟ್ಟಳೆ/ನಿಯಮ. ಈ ಪದ ಮಹಾಭಾರತ ರಚನೆಗೊಂಡ ಕಾಲದಲ್ಲಿ ಇದ್ದ ಒಂದು ಸಾಮಾಜಿಕ ಆಚರಣೆಯನ್ನು ತಿಳಿಸುತ್ತದೆ. ಗಂಡನು ಸಾವನ್ನಪ್ಪಿದಾಗ, ಆತನ ಚಿತೆಯೊಡನೆ ಅವನ ಹೆಂಡತಿಯನ್ನು ಸುಡುವ 'ಸಹಗಮನ ಪದ್ಧತಿ' ಎನ್ನುವ ಆಚರಣೆಯಿತ್ತು. 'ಎವಗೆ ನೇಮ' ಎಂಬ ಮಾತು ಕೀಚಕನ ಹೆಣದ ಚಿತೆಯಲ್ಲಿ ಅವನು ಬಯಸಿದ್ದ ಸೈರಂಧ್ರಿಯನ್ನು ಬಲಿಕೊಡುತ್ತೇವೆ ಎಂಬುದನ್ನು ರಾಜನ ಗಮನಕ್ಕೆ ತರುತ್ತಾರೆ;

**ಅವಳನು ಆತನ ಕೂಡೆ ಕಳುಹುವೊಡೆ ಎವಗೆ ನೇಮ ಎಂದು ಬೀಳ್ಕೊಂಡು**= ಸೈರಂಧ್ರಿಯನ್ನು ಅಣ್ಣನ ಚಿತೆಯೊಡನೆ ಸುಡುವುದೇ ನಮಗೆ ಕಟ್ಟಳೆ ಎಂದು ಹೇಳಿ, ವಿರಾಟರಾಯನಿಂದ ಬೀಳ್ಕೊಂಡು; ಮರಳಿದು=ಹಿಂತಿರುಗಿ; ಕಮಲಲೋಚನೆ= ಕಮಲದ ಹೂವಿನ ಕಣ್ಣುಳ್ಳವಳು/ಸುಂದರಿ; **ಅವರು ಮರಳಿದು ಬಂದು ಕಮಲಲೋಚನೆಯ ಹಿಡಿದರು**=ಅರಮನೆಯಿಂದ ನಾಟ್ಯಮಂದಿರಕ್ಕೆ ಹಿಂತಿರುಗಿ ಬಂದು ಸೈರಂಧ್ರಿಯನ್ನು ಹಿಡಿದುಕೊಂಡರು; **ಮಂಚದಲಿ ಅವನ ಹೆಣನನು ತೆಗೆದು**=ನೆಲದಲ್ಲಿ ಬಿದ್ದಿದ್ದ ಕೀಚಕನ ಹೆಣವನ್ನು ಒಂದು ಮರದ ಮಂಚದ ಮೇಲಿಟ್ಟು; ದೆಸೆ=ಎಡೆ/ಜಾಗ; **ಅವಳನು ಕಾಲ ದೆಸೆಯಲಿ ಬಿಗಿದರು**= ಸೈರಂಧ್ರಿಯನ್ನು ಮಂಚದ ಒಂದು ಕಾಲಿಗೆ ಬಿಗಿದುಕಟ್ಟಿದರು; ಕಾಮಿನಿ=ಹೆಂಗಸು;

**ನಗುವುದು ಇನ್ನೊಮ್ಮೆ ಎನುತ ಅವರು ಕಾಮಿನಿಯ ಕಟ್ಟಿದರು**=ಈಗ ಇನ್ನೊಮ್ಮೆ ನಗು ನೋಡೋಣ ಎಂದು ಹಂಗಿಸುತ್ತ, ಸೈರಂಧ್ರಿಯನ್ನು ಮಂಚದ ಕಾಲಿಗೆ ಕಟ್ಟಿದರು; ಬೆಗಡು=ಹೆದರಿಕೆ/ಅಂಜಿಕೆ; ಅಂಭೋಜ=ತಾವರೆ ಹೂವು; ಅಂಭೋಜಮುಖಿ=ತಾವರೆಮೊಗದವಳು/ಸುಂದರಿ; ಉಬ್ಬೆಗ=ತಳಮಳ/ ಉದ್ವೇಗ; ಒದರು=ಕಿರುಚು/ಜೋರಾಗಿ ಅರಚು/ದೊಡ್ಡದನಿಯಲ್ಲಿ ಕೂಗು;

**ಬೆಗಡುಗೊಂಡ ಅಂಭೋಜಮುಖಿಯು ಉಬ್ಬೆಗದೊಳು ಒದರಿದಳು**= ಸಾವಿನ ಅಂಜಿಕೆಯಿಂದ ತತ್ತರಿಸಿದ ಸೈರಂಧ್ರಿಯು ಉದ್ವೇಗದಿಂದ ಜೋರಾಗಿ ಕಿರುಚ ತೊಡಗಿದಳು; ಅಕಟಕಟ=ಅಯ್ಯಯ್ಯೋ; **ಅಕಟಕಟ ಪಾಪಿಗಳಿರಾ**= ಅಯ್ಯಯ್ಯೋ...

ಪಾಪಿಗಳೇ ಏನನ್ನು ಮಾಡುತ್ತಿರುವಿರಿ. ತನ್ನನ್ನು ಮಂಚಕ್ಕೆ ಬಿಗಿದುಕಟ್ಟಿ ಕೀಚಕನ ಚಿತೆಯೊಡನೆ ಸುಡಲಿರುವ ಕೀಚಕನ ತಮ್ಮಂದಿರನ್ನು ಆಕ್ರೋಶದಿಂದ ಕೇಳುತ್ತಾಳೆ;

**ಗಂಧರ್ವರಿರ...ಹಾಯ್ ಎನುತ ಹಲುಬಿದಳು**=ಮರುಗಳಿಗೆಯಲ್ಲಿಯೇ ತನ್ನ ಗಂಡಂದಿರನ್ನು ನೆನೆದುಕೊಂಡು ಅಯ್ಯೋ ಎಂದು ಅಳತೊಡಗುತ್ತಾಳೆ; **ಅಕಟ ಕೇಳು...ಜಯನೇ...ಜಯಂತನೇ ಕೇಳು...ವಿಜಯ... ಜಯೋದ್ಭವನೆ ನೀ ಕೇಳು.. ಜಯಸೇನನೆ**=ಅಯ್ಯೋ 'ಜಯ'... ಜಯಂತ... 'ವಿಜಯ'... 'ಜಯೋದ್ಭವ'... ಜಯಸೇನ ನೀವೆಲ್ಲರೂ ನಾನು ಎಂತಹ ಆಪತ್ತಿಗೆ ಸಿಲುಕಿದ್ದೇನೆ ಎಂಬುದನ್ನು ಕೇಳಿಸಿಕೊಳ್ಳಿರಿ. ಪಾಂಡವರು ವಿರಾಟನಗರಿಯಲ್ಲಿ ಅಜ್ಞಾತವಾಸದಲ್ಲಿದ್ದಾಗ ಈ ಬಗೆಯ ಹೆಸರುಗಳನ್ನು ಜಯ/ಧರ್ಮರಾಯ; ಜಯಂತ/ಭೀಮ; ವಿಜಯ/ಅರ್ಜುನ; ಜಯೋದ್ಭವ/ನಕುಲ; ಜಯಸೇನ/ಸಹದೇವ ಎಂಬ ಹೆಸರುಗಳನ್ನು ಸಂಕೇತವಾಗಿ ಇಟ್ಟುಕೊಂಡಿದ್ದರು; ಪಾಂಡವರು ತಮ್ಮಲ್ಲಿಯೇ ಈ ಹೆಸರಿನಲ್ಲಿ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು; ದುರಾತ್ಮಕ=ಕೇಡಿ/ನೀಚ;

**ದುರಾತ್ಮಕರು ಎನ್ನನು ಎಳೆದೊಯ್ದು ಅಗ್ನಿಯಲಿ ಬೀಳಿಸುವರು**=ಕೇಡಿಗಳಾದ ಕೀಚಕನ ತಮ್ಮಂದಿರು ನನ್ನನ್ನು ಎಳೆದೊಯ್ದು ಕೀಚಕನ ಚಿತೆಯ ಬೆಂಕಿಗೆ ತಳ್ಳುತ್ತಿದ್ದಾರೆ; ತಡ=ವಿಳಂಬ/ನಿಧಾನ; ಮೊರೆಯಿಡು=ಬೇಡಿಕೊಳ್ಳು; **ಅಕಟ, ನೀವು ಏಳಿ...ತಡವೇಕೆ ಎನುತ ಮೊರೆಯಿಡೆ**=ಅಯ್ಯೋ "ನೀವೆಲ್ಲರೂ ಎಚ್ಚರಗೊಳ್ಳಿ" ಏಕೆ ತಡಮಾಡುತ್ತಿರುವಿರಿ ಎಂದು ಗೋಳಿಡುತ್ತ ಬೇಡಿಕೊಳ್ಳುತ್ತಿರಲು; ಆಕ್ರಂದನ=ಗಟ್ಟಿಯಾಗಿ ಅಳು/ದೊಡ್ಡದನಿಯಲ್ಲಿ ಗೋಳಾಡು; ಕಲಿ=ಶೂರ; **ಸತಿಯ ಆಕ್ರಂದನ ಧ್ವನಿಯ ಕಲಿ ಭೀಮ ಕೇಳಿದನು**=ಸೈರಂಧ್ರಿಯ ಗೋಳಿನ ಮೊರೆಯ ದನಿಯನ್ನು ಭೀಮ ಕೇಳಿಸಿಕೊಂಡನು; ದುರಾತ್ಮ=ಕೇಡಿ/ನೀಚ; ಅಗ್ರಜ=ಅಣ್ಣ; ಐದು=ಬರುವುದು; **ಈ ದುರಾತ್ಮರಿಗೆ ಅಗ್ರಜನ ಸಾವು ಐದದೇ**=ಈ ಕೇಡಿಗಳೆಲ್ಲರಿಗೂ ಅವರ ಅಣ್ಣ ಕೀಚಕನಂತೆಯೇ ಸಾವು ಬರದಿರುವುದೇ;

ಕುನ್ನಿ=ನಾಯಿ. ತಿರಸ್ಕಾರವನ್ನು ಸೂಚಿಸುವ ಬಯ್ಗುಳದ ಪದ; ಹೊಯ್=ಹೊಡಿ/ಬಡಿ; ಕ್ಷಣ=ಗಳಿಗೆ; **ಕುನ್ನಿಗಳನು ಹೊಯ್ದು ಈ ಕ್ಷಣಕೆ ತಮ್ಮ ಅಣ್ಣನಲ್ಲಿಗೆ ಕಳುಹಲುಬೇಕಲಾ**=ಈ ನಾಯಿಗಳನ್ನು ಹೊಡೆದು ಕೊಂದು ಈ ಗಳಿಗೆಯಲ್ಲಿಯೇ ಅವರ ಅಣ್ಣನ ಬಳಿಗೆ ಕಳುಹಿಸಬೇಕಲ್ಲವೇ ; ಮಾರುತಿ=ಭೀಮ; ಹಾಯ್ದು=ಮುನ್ನುಗ್ಗಿ; ಝುಂಕಿಸು=ಅಬ್ಬರಿಸುವುದು/ದೊಡ್ಡ ದನಿಯಲ್ಲಿ ಗರ್ಜಿಸುವುದು; ರುದ್ರಭೂಮಿ=ಮಸಣ; ಎಯ್ದಿದನು=ಬಂದು ಸೇರಿದನು;

**ಬೈಯ್ದು ಫಲವೇನು ಎಂದು ಮಾರುತಿ ಹಾಯ್ದು ಝುಂಕಿಸಿ ರುದ್ರಭೂಮಿಯನು**

**ಎಯ್ದಿದನು**=ದ್ರೌಪದಿಯನ್ನು ಕೀಚಕನ ಚಿತೆಗೆ ಒಡ್ಡುತ್ತಿರುವ ಈ ಕೇಡಿಗಳನ್ನು ಬಯ್ಯುವುದರಿಂದ ಯಾವ ಪ್ರಯೋಜನವೂ ಇಲ್ಲ ಎಂದು ತೀರ್ಮಾನಿಸಿಕೊಂಡ ಭೀಮನು ಅಬ್ಬರದ ದನಿಯಿಂದ ಕೂಗುತ್ತ, ಮಸಣದ ಜಾಗಕ್ಕೆ ಬಂದನು; ಫಡ=ತಿರಸ್ಕಾರ ಹಾಗೂ ಕೋಪವನ್ನು ಸೂಚಿಸುವ ಉದ್ಗಾರದ ಪದ; ಪಿರಿದಾದ ಮರ=ಪೆರ್ಮರ=ಹೆಮ್ಮರ; ಹೆಮ್ಮರ=ದೊಡ್ಡ ಮರ;

**ಫಡ ಎನುತ ಹೆಮ್ಮರನ ಮುರಿದುಕೊಂಡನು**=ಫಡ ಎಂದು ಅಬ್ಬರಿಸುತ್ತ ಕೇಡಿಗಳನ್ನು ಸದೆಬಡಿಯಲು ದೊಡ್ಡ ಮರದ ಗಟ್ಟಿಯಾದ ಕೊಂಬೆಯೊಂದನ್ನು ಮುರಿದುಕೊಂಡ; ಕೊಲೆ+ಕಡಿಗ; ಕೊಲೆಗಡಿಗ=ಕೊಲೆಗಾರ; ದೆಸೆ=ದಿಕ್ಕು; ದೆಸೆದೆಸೆ=ಎಲ್ಲಾ ದಿಕ್ಕಿನ ಕಡೆಗೆ/ದಿಕ್ಕಾಪಾಲಾಗಿ; ತಲೆ+ಕೆದರು; ತಲೆಕೆದರು=ಬಿಚ್ಚಿದ ಮುಡಿ;

**ಎಲೆಲೆ ಗಂಧರ್ವಕನ ಹೆಂಗುಸ ಕಳಚಿ ಬಿಡಿರೋ. ಪಾಪಿ ಹೋಗಲಿ. ಇವನು ಕೊಲೆಗಡಿಗನು ಎನುತ ಹೆಣನನು ಬಿಸುಟು ದೆಸೆದೆಸೆಗೆ ತಲೆಗೆದರಿ ತೆಗೆದು ಓಡೆ**= ಮಸಣದಲ್ಲಿ ಕೀಚಕನ ಚಿತೆಯನ್ನು ಸಿದ್ಧಪಡಿಸುತ್ತಿದ್ದ ತಮ್ಮಂದಿರು ತಮ್ಮತ್ತ ದೊಡ್ಡ ಮರದ ಕೊಂಬೆಯೊಂದನ್ನು ಹಿಡಿದು ಅಬ್ಬರಿಸುತ್ತ ಬರುತ್ತಿರುವ ಭೀಮನನ್ನು ಕಂಡು ಬೆದರಿ... ಎಲೆಲೆ ಗಂಧರ್ವನ ಹೆಂಡತಿಯನ್ನು ಮಂಚದ ಕಾಲಿನಿಂದ ಕಳಚಿ ಬಿಟ್ಟುಬಿಡಿರೋ. ಈ ಪಾಪಿ ಹೆಂಗಸು ತೊಲಗಲಿ... ಬರುತ್ತಿರುವವನು ಕೊಲೆಗಡಿಗನು... ಎಂದು ಕೀಚಕನ ಹೆಣವನ್ನು ಅಲ್ಲಿಯೇ ಬಿಟ್ಟು ಬಿಚ್ಚಿದ ಮುಡಿಯಲ್ಲಿಯೇ ದಿಕ್ಕಾಪಾಲಾಗಿ ಓಡುತ್ತಿರಲು; ಕಳಕಳಿಸು=ಉತ್ಸಾಹದ ದನಿಯನ್ನು ಮಾಡುವುದು;

**ಕಲಿಭೀಮನು ಕಳಕಳಸಿ ನಕ್ಕನು**=ಶೂರನಾದ ಭೀಮನು ಸಡಗರದಿಂದ ನಕ್ಕನು; **ಎಲೆ ನಾಯ್ಗಳಿರ ಹೋದೊಡೆ ಬಿಡುವೆನೇ...ಹಾಯ್ ಎನುತ ಕೈಕೊಂಡ ಹೆಮ್ಮರನನು ತಿರುಹಿದನು**=ಎಲೆ ನಾಯಿಗಳಿರ, ತಪ್ಪಿಸಿಕೊಂಡು ಓಡಲು ತೊಡಗಿದರೆ ಬಿಡುತ್ತೇನೆಯೇ. ಹಾಯ್ ಎಂದು ಗರ್ಜಿಸುತ್ತ ತನ್ನ ಕಯ್ಯಲ್ಲಿದ್ದ ಹೆಮ್ಮರದ ಕೊಂಬೆಯನ್ನು ಚಕ್ರಾಕಾರವಾಗಿ ತಿರುಗಿಸಿ ಹೊಡೆಯತೊಡಗಿದನು; ಅವದಿರನು=ಅವರನ್ನು; ಅರೆ=ನುಣ್ಣಗೆ ಪುಡಿ ಮಾಡು/ತೇಯು; ನಿಟ್ಟೊರೆಸು=ಸಂಪೂರ್ಣವಾಗಿ ನಾಶಮಾಡು;

**ಅವದಿರನು ಅರೆದು ನಿಟ್ಟೊರೆಸಿದನು**=ಕೀಚಕನ ತಮ್ಮಂದಿರೆಲ್ಲರನ್ನೂ ಸದೆಬಡಿದು ಕೀಚಕನ ವಂಶವನ್ನೇ ನಾಶ ಮಾಡತೊಡಗಿದನು; ದೆಸೆ=ದಿಕ್ಕು; ಒರಲು=ಅರಚು/ಕೂಗಿಕೊಳ್ಳು; ಚಿಮ್ಮುವ=ನೆಗೆಯುವ; ಚಪಲರು=

ಜೀವಭಯದಿಂದ ನಡುಗುತ್ತಿರುವವರು; ಬೆಂಬತ್ತಿ=ಹಿಂಬಾಲಿಸಿ/ಬೆನ್ನಟ್ಟಿ; **ದೆಸೆ ದೆಸೆಗೆ ಒರಲಿ ಚಿಮ್ಮುವ ಚಪಲರನು ಬೆಂಬತ್ತಿ**=ಜೀವಭಯದಿಂದ ಕಿರುಚುತ್ತ, ಜೀವವನ್ನು ಉಳಿಸಿಕೊಳ್ಳಲೆಂದು ದಿಕ್ಕಾಪಾಲಾಗಿ ಬಿದ್ದಂಬೀಳ ಓಡುತ್ತಿರುವ ಕೀಚಕನ ತಮ್ಮಂದಿರನ್ನು ಬೆನ್ನಟ್ಟಿ; ಬರಿಕೈದು=ಕೊಂದು/ಸಂಹರಿಸಿ; ಕುರಿ+ತರಿ; ತರಿ=ಕಡಿ/ಕತ್ತರಿಸು; ಕುರಿದರಿ=ಕುರಿಗಳ ತಲೆಯನ್ನು ಕತ್ತರಿಸುವಂತೆ ಕತ್ತರಿಸಿ ತುಂಡುತುಂಡು ಮಾಡುವುದು/ಕಗ್ಗೊಲೆ ಮಾಡು;

**ಬರಿಕೈದು ಕುರಿದರಿಯ ಮಾಡಿದನು**=ಕೀಚಕನ ತಮ್ಮಂದಿರನ್ನು ಕೊಂದು, ಅವರ ದೇಹಗಳನ್ನು ಮರದ ಕೊಂಬೆಯಿಂದ ಬಡಿಬಡಿದು ತುಂಡು ತುಂಡು ಮಾಡಿದನು; **ನೂರೈವರನು ಕೊಂದನು**=ಕೀಚಕನ ತಮ್ಮಂದಿರಾದ ನೂರ ಅಯ್ದುಮಂದಿಯನ್ನು ಕೊಂದನು; ಹಾಯಿಕು=ಎಸೆ/ತೂರು; **ಮರನ ಹಾಯಿಕಿ**= ಕೊಲ್ಲುವುದಕ್ಕೆ ಹಿಡಿದಿದ್ದ ಮರದ ಕೊಂಬೆಯನ್ನು ಅತ್ತ ಬಿಸಾಡಿ; ಮರಳಿ=ಹಿಂತಿರುಗಿ; ಮಿಣ್ಣನೆ=ಸದ್ದಿಲ್ಲದೆ; **ಮರಳಿ ಮಿಣ್ಣನೆ ಬಂದು ಬಾಣಸದ ಮನೆಯ ಹೊಕ್ಕನು**=ಮಸಣದಿಂದ ಸದ್ದಿಲ್ಲದೆ ಹಿಂತಿರುಗಿ ಬಂದು ಅಡುಗೆಯ ಮನೆಯನ್ನು ಹೊಕ್ಕನು; ಸುಳಿಯಲು+ಅಮ್ಮದು; ಅಮ್ಮು=ಶಕ್ತವಾಗು; ಅಮ್ಮದು=ಶಕ್ತಿಯಿಲ್ಲ/ಮಾಡಲು ಆಗುತ್ತಿಲ್ಲ; ಸುಳಿ=ಕಾಣಿಸಿಕೊಳ್ಳು;

**ಪೌರಜನವು ಸುಳಿಯಲಮ್ಮದು**=ವಿರಾಟನಗರದ ಪುರಜನರು ಹೊರಬಂದು ಕಾಣಿಸಿಕೊಳ್ಳುವ ಧೈರ್ಯ ಮಾಡುತ್ತಿಲ್ಲ; ಮಂದಿ=ಜನರು; ಗುಜುಗುಜಿಸು= ತಮ್ಮತಮ್ಮಲ್ಲಿಯೇ ಮೆಲುದನಿಯಲ್ಲಿ ಮಾತನಾಡುವುದು; ಇವರ=ಕೀಚಕ ಮತ್ತು ಕೀಚಕನ ತಮ್ಮಂದಿರ; ಅಳಿವು=ಸಾವು/ಮರಣ; ವಚನಿಸಲು+ಅಮ್ಮದು; ವಚನ=ಮಾತು; ವಚನಿಸಲು=ಮಾತನಾಡಲು/ಮಾತನಾಡಿಕೊಳ್ಳಲು;

**ಮಂದಿ ಗುಜುಗುಜಿಸಿ...ಇವರ ಅಳಿವ ವಚನಿಸಲಮ್ಮದು**=ಜನರು ತಮ್ಮ ತಮ್ಮಲ್ಲಿಯೇ ಮೆಲುದನಿಯಲ್ಲಿ ಮಾತನಾಡಿಕೊಳ್ಳುತ್ತಾರೆಯೇ ಹೊರತು ಬಹಿರಂಗವಾಗಿ ಕೀಚಕಾದಿಗಳ ಸಾವಿನ ಸುದ್ದಿಯನ್ನು ಮಾತನಾಡಲು ಹಿಂಜರಿಯುತ್ತಾರೆ;

ಅಲುಕಲು+ಅಮ್ಮದು; ಅಲುಕು=ಒಂದು ಕಡೆ ನಿಲ್ಲುವುದು; **ಈಕೆಯನು ಅಲುಕಲಮ್ಮದು**=ಸೈರಂಧ್ರಿಯನ್ನು ತಡೆದು ನಿಲ್ಲಿಸಿ ಏನಾಯಿತೆಂದು ಕೇಳುವುದಕ್ಕೂ ಹೆದರುತ್ತಾರೆ; ನೋಡಲು+ಅಮ್ಮದು; **ನೋಡಲಮ್ಮದು**=ಸೈರಂಧ್ರಿಯನ್ನು ನೋಡುವುದಕ್ಕೂ ಅಂಜುತ್ತಾರೆ; ನಳಿನ=ತಾವರೆ ಹೂವು; ನಳಿನಮುಖಿ=ತಾವರೆ ಮೊಗದವಳು/ಸುಂದರಿ; ತಿಳಿ+ಕೊಳದ+ಒಳಗೆ; ಹೊಕ್ಕಳು=ಪ್ರವೇಶಿಸಿದಳು; **ನಸುನಗುತ ತಿಳಿಗೊಳದೊಳಗೆ ಹೊಕ್ಕಳು**=ಮುಗುಳ್ನಗುತ್ತ ತಿಳಿನೀರಿನ ಕೊಳವನ್ನು

ಪ್ರವೇಶಿಸಿದಳು; ಮೀ=ಸ್ನಾನ ಮಾಡು; **ಮಿಂದು ಬೀದಿಗಳೊಳಗೆ ಬರುತಿರೆ**= ಸೈರಂಧ್ರಿಯು ಸ್ನಾನ ಮಾಡಿಕೊಂಡು ಮಡಿಯಾಗಿ ಬರುತ್ತಿರಲು; ಅಖಿಲ=ಸಮಸ್ತ/ಎಲ್ಲ;

**ಅಖಿಲ ಜನ ಕಂಡು ಕೈಗಳ ಮುಗಿದುದು**=ಈಗ ಯಾವ ಆತಂಕವಾಗಲಿ ಸಂಕಟವಾಗಲಿ ಇಲ್ಲದೆ ಶಾಂತಚಿತ್ತದಿಂದ ಪುರದ ಬೀದಿಯಲ್ಲಿ ಬರುತ್ತಿರುವ ಸೈರಂಧ್ರಿಯನ್ನು ಜನರೆಲ್ಲರೂ ನೋಡಿ ಕಯ್ ಮುಗಿದರು; ಅವಿವೇಕಿ=ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ಎಂಬ ವಿವೇಚನೆಯಿಲ್ಲದ ವ್ಯಕ್ತಿ; ಈಕೆಗೆ+ಓಸುಗ; ಓಸುಗ=ಸಲುವಾಗಿ;

**ಅಕಟ, ಅವಿವೇಕಿ ಕೀಚಕನು ಈಕೆಗೋಸುಗ ಅಳಿದನು ಎಂದು ಕೆಲಬರು**= ಅಯ್ಯೋ ಅವಿವೇಕಿಯಾದ ಕೀಚಕನು ಈಕೆಯನ್ನು ಪಡೆಯಲೆಂದು ಹೋಗಿ ಸಾವನ್ನಪ್ಪಿದನು ಎಂದು ಕೆಲವರು ಮಾತನಾಡಿಕೊಂಡರು; ಶಿವ... ಶಿವ=ವ್ಯಕ್ತಿಯು ತನ್ನಿಂದ ಏನನ್ನೂ ಮಾಡಲಾಗದು ಎನ್ನುವ ಹಂತಕ್ಕೆ ತಲುಪಿದಾಗ ಉಚ್ಚರಿಸುವ ಪದಗಳು; ನೂಕಿ=ತಳ್ಳಿಕೊಂಡು; ಕವಿ=ಮುತ್ತು/ಸುತ್ತುವರಿ; **ಇದೇಕೆ ನಮಗೆ ಈ ಚಿಂತೆ... ಶಿವ... ಶಿವ... ಎಂದು ಕೆಲಕೆಲರು ನೂಕಿ ಕವಿದುದು**=ನಮಗೇಕೆ ದೊಡ್ಡವರ ಸುದ್ದಿ. ಇಂತಹವರ ಬಗ್ಗೆ ನಾವೇನು ಮಾಡಲಾಗದು... ಆಡಲಾಗದು. ಶಿವ... ಶಿವ... ಎನ್ನುತ್ತ ಜನರಲ್ಲಿ ಕೆಲವರು ಮುನ್ನುಗ್ಗಿ ಬಂದು ದಾರಿಯಲ್ಲಿ ಬರುತ್ತಿದ್ದ ದ್ರೌಪದಿಯನ್ನು ಸುತ್ತುವರಿದರು;

**ಮಂದಿ ಮಧ್ಯದೊಳು ಈಕೆ ಮೆಲ್ಲನೆ ಬರುತಲು**=ತನ್ನ ಸುತ್ತುವರಿದ ಜನರ ನಡುವೆ ಸೈರಂಧ್ರಿಯು ಮೆಲ್ಲನೆ ಬರುತ್ತ; ಲೋಕ+ಏಕ; ಲೋಕೈಕ=ಲೋಕದಲ್ಲಿ ಒಬ್ಬನೇ; ಲೋಕೈಕ ವೀರ=ಇದೊಂದು ನುಡಿಗಟ್ಟು. ಮಹಾಪರಾಕ್ರಮಿ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; **ಆ ಲೋಕೈಕ ವೀರನ ಆ ಬಾಣಸಿನ ಬಾಗಿಲಲಿ ಕಂಡಳು**=ಲೋಕದಲ್ಲಿಯೇ ಮಹಾವೀರನೆಂದು ಹೆಸರಾಂತ ಭೀಮನನ್ನು ಅಡುಗೆಯ ಮನೆಯ ಬಾಗಿಲ ಬಳಿ ಕಂಡಳು; ಕಣ್ಣ ಕಡೆಯಲಿ=ಕಣ್ಣಂಚಿನ ನೋಟ/ಕಡೆಗಣ್ಣಿನ ನೋಟ/ಕುಡಿನೋಟ; ವಿಗಡ=ಶೂರ/ವೀರ;

**ಮುಗುಳು ನಗೆಯಲಿ ಕಣ್ಣ ಕಡೆಯಲಿ ವಿಗಡ ಭೀಮನ ನೋಡಿ**=ದ್ರೌಪದಿಯು ಮುಗುಳು ನಗೆಯನ್ನು ಚೆಲ್ಲುತ್ತ, ಕಡೆಗಣ್ಣಿನ ನೋಟದಿಂದ ಕಲಿಭೀಮನನ್ನು ನೋಡುತ್ತ; ಗಂಧರ್ವ=ದೇವತೆ; ಪತಿ=ಒಡೆಯ; ಗಂಧರ್ವಪತಿ=ದೇವತೆಗಳ ಒಡೆಯ; ಆವ್=ನಾವು; ನಮೋ=ನಮಸ್ಕಾರ ಮಾಡುತ್ತೇನೆ; **ಗಂಧರ್ವಪತಿಗೆ ಆವ್ ಕೈಗಳ ಮುಗಿದೆವು...ನಮೋ ನಮೋ ಎನುತ**=ದೇವತೆಗಳ ಒಡೆಯನಿಗೆ ನಾವು ಕಯ್ ಮುಗಿಯುತ್ತಿದ್ದೇವೆ. ನಮೋ ನಮೋ ಎನ್ನುತ್ತ; ಹೊಗರು+ಇಡು;

ಹೊಗರು=ಹೆಚ್ಚಳ; ಹೊಗರಿಡು=ಹೆಚ್ಚಾಗುತ್ತಿರುವ; **ಹೊಗರಿಡುವ ಹರುಷದಲಿ=** ಇಮ್ಮಡಿಯಾದ ಆನಂದದಲ್ಲಿ;

**ರೋಮಾಳಿ=ರೋಮಾಂಚನ; ಗುಡಿ=ಗುಂಪು; ರೋಮಾಳಿಗಳ ಗುಡಿಯಲಿ=** ಕೀಚಕಾದಿಗಳ ನಾಶದಿಂದ ಉಂಟಾದ ಆನಂದದಿಂದ ಸೈರಂಧ್ರಿಯು ರೋಮಾಂಚನಗೊಂಡವಳಾಗಿ; ಮುಗುದೆ=ಸುಂದರಿ; **ತನ್ನ ನಿಳಯಕೆ ಮುಗುದೆ ಬಂದಳು**=ರಾಣಿವಾಸದಲ್ಲಿದ್ದ ತನ್ನ ಕೊಟಡಿಗೆ ಸೈರಂಧ್ರಿಯು ಹಿಂತಿರುಗಿ ಬಂದಳು;



## ನೋಟ–೧೩

ಉದಯ ಪರ್ವತ=ಮೂಡಲ ದಿಕ್ಕಿನಲ್ಲಿರುವ ಪರ್ವತ; ಅಡರು=ಏರು/ ಮೇಲಕ್ಕೆ ಹತ್ತು;

**ಸೂರ್ಯನು ಉದಯ ಪರ್ವತವ ಅಡರಿದನು**=ಸೂರ್ಯನು ಮೂಡಲ ದಿಕ್ಕಿನಲ್ಲಿರುವ ಪರ್ವತ ಪ್ರಾಂತ್ಯದಲ್ಲಿ ಕಾಣಿಸಿಕೊಂಡನು. ಸೂರ್ಯಕಿರಣಗಳ ಕಾಂತಿಯಿಂದ ಇರುಳು ಕಳೆದು ಹಗಲಾಯಿತು; ಗುಜುಗುಜಿಸು=ಜನರು ತಮ್ಮತಮ್ಮಲ್ಲಿಯೇ ಆಡಿಕೊಳ್ಳುವ ಪಿಸುಮಾತು; ವಾರ್ತಾಭಾರ=ದೊಡ್ಡ ಸುದ್ದಿ; ಮಸಗು=ಹರಡು; **ಊರೊಳಗೆ ಗುಜುಗುಜಿಸಿ ವಾರ್ತಾಭಾರ ಮಸಗಿತು**= ಕೀಚಕ ಮತ್ತು ಅವನ ೧೦೫ ಮಂದಿ ತಮ್ಮಂದಿರು ಗಂಧರ್ವರಿಂದ ಕೊಲೆಯಾದ ದುರಂತದ ಸುದ್ದಿಯನ್ನು ವಿರಾಟನಗರಿಯ ಜನರು ತಮ್ಮತಮ್ಮಲ್ಲಿಯೇ ಪಿಸುದನಿಯಲ್ಲಿ ಮಾತನಾಡತೊಡಗಿ, ಸಾವಿನ ಸಂಗತಿಯು ಎಲ್ಲೆಡೆ ಹರಡಿತು; ನೆರೆ=ಸೇರು/ಕೂಡು; ನೆರವಿ+ಒಳು; ನೆರವಿ=ಗುಂಪು/ಸಮೂಹ; ಒಳು=ಅಲ್ಲಿ; ಆರ+ಬಾಯ್ಗಳ್+ಒಳ್+ಆದೊಡೆಯು; ಆರ=ಯಾರ; ಆದೊಡೆ=ಆದರೆ; **ಆರಬಾಯ್ಗಳೊಳಾದೊಡೆಯು**=ಎಲ್ಲರ ಮಾತುಕತೆಗಳಲ್ಲಿಯೂ; ಜನಜನಿತ= ಜನರೆಲ್ಲರಿಗೂ ತಿಳಿದಿರುವ ಸುದ್ದಿ; ಜಪ=ಒಂದೇ ಬಗೆಯ ಹೆಸರನ್ನು ಇಲ್ಲವೇ ಸಂಗತಿಯನ್ನು ಮತ್ತೆ ಮತ್ತೆ ಹೇಳುತ್ತಿರುವುದು;

**ನೆರೆದ ನೆರವಿಯೊಳು ಆರಬಾಯ್ಗಳೊಳಾದೊಡೆಯು ಜನಜನಿತ ಜಪವಾಯ್ತು**= ವಿರಾಟನಗರದಲ್ಲಿ ಎಲ್ಲೆಲ್ಲಿ ಜನರು ಗುಂಪುಗೂಡುತ್ತಾರೆಯೋ ಅಲ್ಲೆಲ್ಲ ಜನರ ಬಾಯಲ್ಲಿ ಕೀಚಕಾದಿಗಳ ಕೊಲೆಯ ಸಂಗತಿಯೇ ಪ್ರಸ್ತಾಪವಾಗತೊಡಗಿತು; ಭೂರಿ=ಹೆಚ್ಚು; ಚಿಂತಾ+ಆತುರ; ಚಿಂತೆ=ಕಳವಳ/ಯೋಚನೆ; ಆತುರ= ಯಾತನೆಯಿಂದ ಪೀಡಿತನಾದವನು;

**ಭೂರಿ ಚಿಂತಾತುರ ವಿರಾಟನು**=ಸೇನಾನಿಯಾಗಿದ್ದ ಕೀಚಕ ಮತ್ತು ಅವನ

ತಮ್ಮಂದಿರೆಲ್ಲರ ಅಕಾಲಮರಣದಿಂದ ಅತಿಹೆಚ್ಚಿನ ಚಿಂತೆಯಿಂದ ಕಂಗಾಲಾಗಿರುವ ವಿರಾಟರಾಯನು; ಮಾರಿ=ಒಬ್ಬ ದೇವತೆಯ ಹೆಸರು. ಒಲಿದವರಿಗೆ ಒಳಿತನ್ನು ಮಾಡುವ, ಮುನಿದವರಿಗೆ ಕೇಡನ್ನು ಬಗೆಯುವ ದೇವತೆಯೆಂದು ಹೆಸರಾಗಿದ್ದಾಳೆ; ನಾರಿ=ಹೆಂಗಸು; ನೇಮ=ಅಪ್ಪಣೆ/ಆಜ್ಞೆ; ಸತಿ=ಹೆಂಡತಿ;

**ಮಾರಿಯೋ ಸೈರಂಧ್ರಿಯೋ ಈ ನಾರಿ ಇರಬೇಡ ಎಂದು ತನ್ನಯ ಸತಿಗೆ ನೇಮಿಸಿದ**=ಕೀಚಕಾದಿಗಳ ಅಕಾಲಮರಣಕ್ಕೆ ಕಾರಣಳಾದ ಹೆಂಗಸು ಮಾರಿಯೋ ಇಲ್ಲವೇ ಸೈರಂಧ್ರಿಯೋ. ಅಂತಹ ಹೆಂಗಸನ್ನು ನಿನ್ನ ರಾಣಿವಾಸದಲ್ಲಿ ಇಟ್ಟುಕೊಳ್ಳಬೇಡ. ಈ ಕೂಡಲೇ ಅವಳನ್ನು ಹೊರಹಾಕು ಎಂದು ವಿರಾಟರಾಯನು ರಾಣಿ ಸುದೇಷ್ಣೆಗೆ ಆಜ್ಞಾಪಿಸಿದ;

ಅಳಲು=ಸಂಕಟ/ಶೋಕ; ಕೈಮಿಗಲು=ತುಂಬಾ ಹೆಚ್ಚಾಗಲು; ಲಲನೆ= ಹೆಂಡತಿ; **ಅಳಲು ಕೈಮಿಗಲು ಆ ವಿರಾಟನ ಲಲನೆ ಸೈರಂಧ್ರಿಯನು ಕರೆಸಿದಳು**= ತಮ್ಮನಾದ ಕೀಚಕನ ಸಾವಿನಿಂದ ಅತಿಸಂಕಟಕ್ಕೆ ಒಳಗಾಗಿರುವ ವಿರಾಟರಾಯನ ಹೆಂಡತಿ ರಾಣಿ ಸುದೇಷ್ಣೆಯು ಸೈರಂಧ್ರಿಯನ್ನು ಕರೆಸಿದಳು; ಮಹಾತುಮೆ= ದೊಡ್ಡವಳು/ ಹೆಚ್ಚಿನ ಮಹಿಮೆಯುಳ್ಳವಳು; ಅಂಜು=ಹೆದರು; ಶರಣು=ನಮಸ್ಕಾರ;

**ಎಲೆ ಮಹಾತುಮೆ ತಾಯೆ, ನಿಮಗೆ ಅಂಜುವೆವು ಶರಣು**=ಸೈರಂಧ್ರಿಗೆ ಮಹಾಬಲರಾದ ಗಂಧರ್ವರು ಗಂಡಂದಿರಾಗಿರುವುದರಿಂದಲೇ ಕೀಚಕಾದಿಗಳು ಸಾವನ್ನಪ್ಪಿದ್ದಾರೆ ಎಂಬುದು ರಾಣಿ ಸುದೇಷ್ಣೆಗೆ ಮನದಟ್ಟಾಗಿದೆ. ಆದ್ದರಿಂದಲೇ ತನ್ನ ದಾಸಿಯಾಗಿದ್ದ ಸೈರಂಧ್ರಿಯನ್ನು 'ಮಹಾತುಮೆ ತಾಯೆ' ಎಂದು ಉದ್ದೇಶಿಸಿ ಮಾತನಾಡತೊಡಗಿದ್ದಾಳೆ. ನಿಮಗೆ ನಾವು ಹೆದರುತ್ತೇವೆ. ನಿಮಗೆ ನಮಸ್ಕಾರ;

ಹೊಳಲ್+ಒಳು; ಹೊಳಲ್=ಪಟ್ಟಣ/ನಗರ; ಭೀತಿ=ಹೆದರಿಕೆ/ಅಂಜಿಕೆ; ಘನ= ದೊಡ್ಡದಾದ/ಹೆಚ್ಚಿನ; **ನೀವು ಹೊಳಲೊಳು ಇದ್ದರೆ ಭೀತಿ ಘನ**=ನೀವು ನಮ್ಮ ಬಳಿ ದಾಸಿಯಾಗಿ ವಿರಾಟನಗರಿಯಲ್ಲಿಯೇ ಇದ್ದರೆ ಇನ್ನು ಏನೇನು ದುರಂತ ಉಂಟಾಗುವುದೋ ಎಂಬ ಹೆದರಿಕೆಯು ನಮ್ಮನ್ನು ಹೆಚ್ಚಾಗಿ ಕಾಡುತ್ತಿದೆ; ಒಲಿ=ಬಯಸು/ಮೆಚ್ಚು/ಇಷ್ಟಪಡು; ತಾವು=ಎಡೆ/ಜಾಗ/ತಾಣ; ಬಿಜಯ= ತೆರಳುವಿಕೆ/ಹೋಗುವುದು;

**ನೀವು ಒಲಿದ ತಾವಿಗೆ ಬಿಜಯ ಮಾಡುವುದು**=ನೀವು ಈ ಕೂಡಲೇ ಇಲ್ಲಿಂದ ನಿಮಗೆ ಮೆಚ್ಚುಗೆಯಾದ ಕಡೆಗೆ ಹೋಗುವುದು; **ಉಳುಹ ಬೇಹುದು**=ಬದುಕಲು ಬಿಡುವುದು; **ನಮ್ಮನು ಉಳುಹ ಬೇಹುದು ಎನಲು**=ನಾವು ಜೀವಂತವಾಗಿರಲು ಅವಕಾಶವನ್ನು ನೀಡುವುದು ಎಂದು ಸಂಕಟ ಮತ್ತು ಆತಂಕದಿಂದ ನುಡಿಯಲು;

ಇಂದು=ಚಂದ್ರ; ಇಂದುಮುಖಿ=ಚಂದ್ರನ ಮೊಗದವಳು/ಸುಂದರಿ; **ಇಂದುಮುಖಿ ಇಂತು ಎಂದಳು**=ಸೈರಂಧ್ರಿಯು ಈ ರೀತಿ ಹೇಳಿದಳು; ದೇವಿ=ಪಟ್ಟದ ರಾಣಿ; ಎಮ್ಮದು=ನಮ್ಮದು; ಅಪರಾಧ=ತಪ್ಪು;

**ದೇವಿಯೆ, ಎಮ್ಮದು ಏನು ಅಪರಾಧ**=ರಾಣಿಯವರೇ, ನಮ್ಮ ಕಡೆಯಿಂದ ಯಾವ ತಪ್ಪಾಗಿದೆ; ರಮಣ=ಗಂಡ; ದುರ್ಜನ=ಕೆಟ್ಟ ವ್ಯಕ್ತಿಗಳು/ನೀಚರು/ ಕೇಡಿಗಳು; ಸೈರಿಸು=ತಾಳು/ಸಹಿಸು; ಸೀಳು=ತುಂಡುಮಾಡು;

**ನಿಮ್ಮ ತಮ್ಮನು ತಪ್ಪಿ ನಡೆದೊಡೆ ಎಮ್ಮ ರಮಣರು ದುರ್ಜನರ ಸೈರಿಸದೆ ಸೀಳಿದರು**=ನಿಮ್ಮ ತಮ್ಮನು ಪರರ ಹೆಂಡತಿಯಾದ ನನ್ನ ಮಾನಪ್ರಾಣವನ್ನು ತೆಗೆಯುವ ತಪ್ಪನ್ನು ಮಾಡಲು ಹೊರಟಿದ್ದರಿಂದ, ನನ್ನ ಗಂಡಂದಿರು ಅದನ್ನು ನೋಡಿ ಸಹಿಸಿಕೊಳ್ಳದೆ ನೀಚರಾದ ನಿಮ್ಮ ತಮ್ಮಂದಿರೆಲ್ಲರನ್ನೂ ಕೊಂದರು;

ಓಲೈಸು=ಊಳಿಗ ಮಾಡು/ಕೆಲಸ ಮಾಡು; ಮರಳಿದು=ಅದಕ್ಕೆ ಪ್ರತಿಯಾಗಿ/ ಬದಲಾಗಿ; ಕೆಡಿಸು=ಕೆಟ್ಟದ್ದನ್ನು ಮಾಡು; **ನಿಮ್ಮ ನಾವು ಓಲೈಸಿ, ಮರಳಿದು ನಿಮ್ಮ ಕೆಡಿಸುವರಲ್ಲ**=ನಿಮ್ಮ ಆಶ್ರಯವನ್ನು ಪಡೆದು ನಿಮ್ಮಲ್ಲಿ ಊಳಿಗವನ್ನು ಮಾಡುತ್ತಿರುವ ನಾವು, ಉಪಕಾರ ಮಾಡಿರುವ ನಿಮಗೆ ಕೇಡನ್ನು ಬಗೆಯುವವರಲ್ಲ; ಧೂರ್ತ=ನೀಚ/ಕೇಡಿ; ನೀತಿ=ಒಳ್ಳೆಯ ನಡೆನುಡಿ; ಬಾಹಿರ= ಹೊರತಾದುದು; **ನೀತಿಬಾಹಿರರು**=ನೀತಿಗೆಟ್ಟ ನಡೆನುಡಿಯುಳ್ಳವರು; ಮತ=ಆಲೋಚನೆ/ವಿಚಾರ; **ಧೂರ್ತರು ನೀತಿ ಬಾಹಿರರು ತಮ್ಮ ಮತದಲಿ ತಾವೆ ಕೆಟ್ಟರು**= ಕೇಡಿಗಳು ಮತ್ತು ನೀತಿಗೆಟ್ಟ ನಡೆನುಡಿಯುಳ್ಳ ನಿಮ್ಮ ತಮ್ಮಂದಿರು ತಾವು ಮಾಡಿದ ಕೆಟ್ಟ ಆಲೋಚನೆ ಮತ್ತು ಕೆಟ್ಟ ಕೆಲಸಗಳಿಂದ ತಮಗೆ ತಾವೇ ಸಾವನ್ನು ತಂದುಕೊಂಡರು; **ತಾವು ತಮ್ಮಿಂದ ಅಳಿದರೆ ಅದು ಸಾಕು**=ತನ್ನ ತಮ್ಮಂದಿರಿಂದ ಸೈರಂಧ್ರಿಗೆ ಆದ ಕೇಡಿನ "ಕೆಲಸವನ್ನು ಮತ್ತೆ ಮತ್ತೆ ಕೇಳಿ ಮನನೊಂದ ಸುದೇಷ್ಣೆಯು... ಅವರೆಲ್ಲರೂ ತಾವು ಮಾಡಿದ ತಪ್ಪಿನಿಂದಲೇ ಸಾವನ್ನಪ್ಪಿದ್ದಾರೆ. ಇನ್ನು ಆ ವಿಚಾರ ಸಾಕು..." ಎಂದಳು.

**ಆವು ನಿಮಗೆ ಅಂಜುವೆವು**=ನಿನ್ನಿಂದ ಮತ್ತು ನಿನ್ನ ಗಂಧರ್ವಪತಿಗಳಿಂದ ಮುಂದಿನ ದಿನಗಳಲ್ಲಿ ನಮಗೆ ಯಾವ ಬಗೆಯ ಆಪತ್ತು ಬರುವುದೋ ಎಂದು ನಾವು ಹೆದರುವೆವು; **ನಿಮ್ಮಲಿ ಯಾವುದೂ ತಪ್ಪಿಲ್ಲ. ನೀವು ಇಲ್ಲಿರಲು ಬೇಡ ಎನಲು**=ನಿಮ್ಮ ನಡೆನುಡಿಯಲ್ಲಿ ಯಾವೊಂದು ತಪ್ಪು ಇಲ್ಲ. ಆದರೆ ನೀನು ಇನ್ನು ಮುಂದೆ ನನ್ನ ರಾಣಿವಾಸದಲ್ಲಿ ದಾಸಿಯಾಗಿರಲಾಗದು. ಬೇರೆಡೆಗೆ ಹೋಗುವುದು ಎಂದು ಹೇಳಲು; ಚಿತ್ತೈಸು=ಅನುಗ್ರಹಿಸು/ದಯೆಯನ್ನು ತೋರು;

**ದೇವಿ ಚಿತ್ತೈಸು**=ದೇವಿಯೇ ದಯೆಯನ್ನು ತೋರು; ಮುನ್ನ=ಮೊದಲು; ಇಹರು+ಅಲ್ಲ; ಇಹ=ಇರುವ; ಇಹರು=ಇರುವವರು;

**ನಾವು ಮುನ್ನ ಇಹರಲ್ಲ**=ನಾನು ಮೊದಲಿನಂತೆ ಬಹುಕಾಲ ನಿಮ್ಮ ದಾಸಿಯಾಗಿರುವುದಿಲ್ಲ; ನೂಕಿದಡೆ+ಇರದೆ; ನೂಕಿದಡೆ=ಹೊರತಳ್ಳಿದರೂ; ಮಾಣೆವು=ಬಿಡೆವು; ಇರದೆ ಮಾಣೆವು=ಇಲ್ಲಿಂದ ಹೋಗುವುದಿಲ್ಲ;

**ನಿಮ್ಮಯ ಸೇವೆಯಲಿ ಹದಿಮೂರು ದಿವಸವು ನೀವು ನೂಕಿದೊಡಿರದೆ ಮಾಣೆವು**=ನಿಮ್ಮ ಸೇವೆಯಲ್ಲಿ ಇನ್ನು ಹದಿಮೂರು ದಿನಗಳ ಕಾಲ ನೀವು ತಳ್ಳಿದರೂ ನಾನು ಇಲ್ಲಿಂದ ಹೋಗುವುದಿಲ್ಲ; ಅಳುಕು=ಹೆದರು/ಅಂಜು; ಎಮಗೆ+ಎಲ್ಲ; ಎಮಗೆ=ನಮಗೆ; ಲೇಸು+ಅಹುದು; ಲೇಸು=ಒಳ್ಳೆಯದು; ಅಹುದು=ಆಗುತ್ತದೆ;

**ಅಳುಕದಿರಿ ಹದಿಮೂರು ದಿವಸವ ಕಳೆದ ಬಳಿಕ ಎಮಗೆಲ್ಲ ಲೇಸಹುದು**= ನಮ್ಮಿಂದ ನಿಮಗೆ ಏನು ಆಪತ್ತು ಬರುವುದೋ ಎಂದು ಹೆದರಬೇಡಿ. ಹದಿಮೂರು ದಿನಗಳ ನಂತರ ನನ್ನ ಪಾಲಿಗೆ ಒಳ್ಳೆಯ ದಿನಗಳು ಬರುತ್ತವೆ; **ದುಷ್ಟರಾದವರು ಅಳಿದು ಹೋದರು**=ಕೆಟ್ಟ ನಡೆನುಡಿಯಿಂದ ಜೀವಿಸುತ್ತಿದ್ದ ಕೇಡಿಗಳು ಸಾವನ್ನಪ್ಪಿ ಇಲ್ಲವಾದರು; **ಇನ್ನು ಭಯ ಬೇಡ**=ನಿಮಗೆ ಕೆಟ್ಟ ಹೆಸರನ್ನು ತರುತ್ತಿದ್ದ ಕೇಡಿಗಳು ಈಗ ಇಲ್ಲವಾದ್ದರಿಂದ ನಿಮಗೆ ಯಾವ ಆಪತ್ತು ಬರುವುದಿಲ್ಲ. ನೀವು ಹೆದರಬೇಡಿ; ಆವು=ನಾವು; ಕಲಹ+ಅವರು+ಅಲ್ಲ; ಕಲಹ=ಜಗಳ/ ಹೊಡೆದಾಟ/ಕಾಳೆಗ; ನಿಜ=ತನ್ನ; ನಿಳಯ=ಮನೆ; ಸಾರು=ತೆರಳು;

**ಆವು ಕಲಹದವರಲ್ಲ ಎನುತ ದುರುಪದಿ ನಿಜನಿಳಯವನು ಸಾರಿದಳು**= ನಾವಾಗಿಯೇ ಯಾರ ಮೇಲು ಕಾಲುಕೆರೆದುಕೊಂಡು ಜಗಳಕ್ಕೆ ಹೋಗುವವರಲ್ಲ. ನಮಗೆ ಆಪತ್ತು ಬಂದಾಗ ಮಾತ್ರ ಈ ರೀತಿ ಕೇಡಿಗಳನ್ನು ಸದೆಬಡಿಯುತ್ತೇವೆ ಎಂದು ಸೈರಂಧ್ರಿಯು ರಾಣಿ ಸುದೇಷ್ಣೆಯ ಮನದ ಆತಂಕವನ್ನು ನಿವಾರಿಸುವ ನುಡಿಗಳನ್ನಾಡುತ್ತ ರಾಣಿವಾಸದಲ್ಲಿದ್ದ ತನ್ನ ಕೊಟಡಿಯತ್ತ ನಡೆದಳು; ವೃತ್ತಾಂತ=ಸುದ್ದಿ/ಸಮಾಚಾರ; ಪಸರು=ಹಬ್ಬು/ಹರಡು;

**ಕೀಚಕನ ವೃತ್ತಾಂತ ಗಳಿಗೆ ಗಳಿಗೆಗೆ ಪಸರಿಸಿತು**=ಮತ್ಸ್ಯ ದೇಶದ ಮಹಾ ಸೇನಾನಿಯಾಗಿದ್ದ ಮಹಾಬಲಶಾಲಿ ಕೀಚಕನು ಅಕಾಲಮರಣಕ್ಕೆ ತುತ್ತಾಗಿ ಬಲಿಯಾದ ಸುದ್ದಿಯು ಗಳಿಗೆ ಗಳಿಗೆಗೂ ಎಲ್ಲೆಡೆ ಹಬ್ಬತೊಡಗಿತು;



# ಉತ್ತರಕುಮಾರನ ಪ್ರಸಂಗ

(ಕುಮಾರವ್ಯಾಸ ಭಾರತ ಕಾವ್ಯದಲ್ಲಿನ ವಿರಾಟಪರ್ವದ ಅಯ್ದನೆಯ ಸಂಧಿಯಿಂದ ೪೭ ಪದ್ಯಗಳನ್ನು, ಆರನೆಯ ಸಂಧಿಯಿಂದ ೬೬ ಪದ್ಯಗಳನ್ನು, ಒಂಬತ್ತನೆಯ ಸಂಧಿಯಿಂದ ೪೧ ಪದ್ಯಗಳನ್ನು ಮತ್ತು ೧೦ ನೆಯ ಸಂಧಿಯಿಂದ ೨೮ ಪದ್ಯಗಳನ್ನು ಆಯ್ಕೆ ಮಾಡಿಕೊಂಡು ಒಟ್ಟು ೧೮೨ ಪದ್ಯಗಳನ್ನು ನಾಟಕ ರೂಪದಲ್ಲಿ ಜೋಡಿಸಲಾಗಿದೆ.)

## ಪಾತ್ರಗಳು

**ಗೋಪಾಲಕ** : ವಿರಾಟರಾಜನ ಗೋವುಗಳನ್ನು ಸಾಕಿ ಸಲಹುವ ಗೊಲ್ಲ.

**ವಿರಾಟರಾಜ** : ಮತ್ಸ್ಯದೇಶದ ರಾಜ.

**ಸುದೇಷ್ಣೆ** : ವಿರಾಟರಾಜನ ಹೆಂಡತಿ. ಪಟ್ಟದ ರಾಣಿ. ಕೀಚಕನ ಅಕ್ಕ.

**ಉತ್ತರಕುಮಾರ** : ವಿರಾಟರಾಜ ಮತ್ತು ಸುದೇಷ್ಣೆ ದಂಪತಿಯ ಮಗ.

**ಉತ್ತರೆ** : ವಿರಾಟರಾಜ ಮತ್ತು ಸುದೇಷ್ಣೆ ದಂಪತಿಯ ಮಗಳು.

**ಸೈರಂಧ್ರಿ / ದ್ರೌಪದಿ** : ಪಾಂಡವರ ಹೆಂಡತಿ. ಈಗ ವಿರಾಟನಗರಿಯ ಪಟ್ಟದ ರಾಣಿ ಸುದೇಷ್ಣೆಯ ರಾಣಿವಾಸದಲ್ಲಿ ದಾಸಿಯಾಗಿದ್ದಾಳೆ.

**ವಲಲ / ಭೀಮ** : ಪಾಂಡುರಾಜ ಮತ್ತು ಕುಂತಿಯ ಮಗ. ಈಗ ವಿರಾಟ ರಾಜನ ಅರಮನೆಯ ಅಡುಗೆಮನೆಯಲ್ಲಿ ಬಾಣಸಿಗ ನಾಗಿದ್ದಾನೆ.

**ಕಂಕಭಟ್ಟ / ಧರ್ಮರಾಯ** : ಪಾಂಡುರಾಜ ಮತ್ತು ಕುಂತಿಯ ಮಗ. ಈಗ ವಿರಾಟರಾಜನ ಆಪ್ತ ಪರಿಚಾರಕನಾಗಿದ್ದಾನೆ.

**ಬೃಹನ್ನಳೆ / ಅರ್ಜುನ** : ಪಾಂಡುರಾಜ ಮತ್ತು ಕುಂತಿಯ ಮಗ. ಈಗ ವಿರಾಟ ರಾಜನ ರಾಣಿವಾಸದಲ್ಲಿ ಹೆಣ್ಣುಮಕ್ಕಳಿಗೆ ನಾಟ್ಯವಿದ್ಯೆಯನ್ನು ಕಲಿಸುವ ಗುರುವಾಗಿದ್ದಾನೆ.

**ಕರ್ಣ** : ಅಂಗರಾಜ್ಯದ ಒಡೆಯ. ದುರ್ಯೋಧನನ ಸೇನಾಪಡೆಯ ನಾಯಕರಲ್ಲಿ ಒಬ್ಬ.

**ಕಂಚುಕಿ** : ವಿರಾಟರಾಜನ ರಾಣಿವಾಸದ ಮೇಲ್ವಿಚಾರಕ.

**ವಿರಾಟ ನಗರದ ಪ್ರಜೆಗಳು.**

**ದುರ್ಯೋಧನನ ಸೇನಾಪಡೆಯವರು.**

**ವಿರಾಟರಾಜನ ರಾಣಿವಾಸದ ದಾಸಿಯರು.**

# ಉತ್ತರಕುಮಾರನ ಪ್ರಸಂಗ

## ನೋಟ–೧

ಕೇಳು ಜನಮೇಜಯ, ಸುಯೋಧನನ ಆಳು ತುರುಗಳನು ಮುತ್ತಿತು. ಭೀಷ್ಮ ಕರ್ಣ ದ್ರೋಣ ಮೊದಲಾಗಿ ಮೇಲಾಳು ಕವಿದುದು. ಕೋಲ ಸೂಟಿಯ ಸರಿವಳೆಗೆ ಗೋಪಾಲ ಪಡೆ ಮುಗ್ಗಿದುದು. ಕರ್ಣ ದುಶ್ಶಾಸನ ಜಯದ್ರಥರು ಗೋವರ ಸಾಲ ಹೊಯ್ದರು. ರಾಯ ಚೂಣಿಯ ಚಾತುರಂಗದ ನಾಯಕರು ಸಮರೋಪಾಯದಲಿ ಮೇಳವಿಸಿ ಕವಿದರು. ಗರುವ ಗೋವರು ಹುಯ್ಯಲಿಗೆ ಹರಿಹರಿದು ಕೆಡೆದರು. ಅಮರರ ರಾಜಧಾನಿಗಳ ಧೂಳಿಗೋಟೆಯಗೊಂಡರು. ಸಾಯಲು ಅಲಸದ ಗೋವರನು ಕೋಡಕೈಯವರು ಕೈಗಾಯದೆ ಎಸುತವೆ ಹಿಂದಿಕ್ಕಿ ಸೆರೆಯಕೊಂಡರು. ತುರುಹರ ಕಾಳಗದೊಳು ಮೇಲುದಳಕೆ ಇದಿರಾಗಿ ಗೋವರು ಒಡೆಮುರಿದು ಸಾಲರಿದು ಕೆಟ್ಟೋಡಿದರು...

ರಣದೊಳಗೆ ಹರಿಬಕಾರರ ಸೇನೆ ಮಾಯವಾಯಿತು. ರಾಯ ಮೋಹರ ತೆರಳಿ ತುರುಗಳ ಹಿಡಿದು ಹಿಂದಿಕ್ಕಿದರು. ಗೋಪಾಲನೊಬ್ಬನ ಹಿಡಿದು ಮೂಗಿನ ಮೇಲೆ ಸುಣ್ಣವ ಬರೆದು ಹಗೆಯ ಪಟ್ಟಣಕೆ ಬಿಟ್ಟರು.

**ದುರ್ಯೋಧನನ ಸೇನಾನಿ** : ಕಾಳಗಕೆ ಬಿರುದರನು ಬರಹೇಳು ಹೋಗು.

(ಎನೆ ಕರದ ಬಿಲ್ಲನು ಬಿಸುಟು ಬದುಕಿದ ಶಿರವ ತಡವುತ ಗೋವನೊಬ್ಬನು ಪುರಕೆ ಹರಿತಂದ.)



## ನೋಟ–೨

**ವಿರಾಟನಗರದ ಪ್ರಜೆಗಳು** : ಎಲವೋ ರಣದ ವಾರ್ತೆಯು ಅದೇನದು.

(ಎನುತ ಜನವೆಲ್ಲ ಗಜಬಜಿಸೆ...)

**ಗೋಪಾಲಕ** : ರಣವು ಕಿರಿದಲ್ಲ. ಗಣನೆಯಿಲ್ಲದು, ಮತ್ತೆ ಮೇಲಂಕಣದ ಭಾರಣೆ ನೂಕಿತು.

(ಎನುತ ಐತಂದು ಮೇಳದ ಗಣಿಕೆಯರ ಮಧ್ಯದಲಿ ಮೆರೆದಿರೆ ಉತ್ತರನ ಕಂಡನು. ಬೆಗಡು ಮುಸುಕಿದ ಭೀತಿಯ ಮುಖದ... ಢಗೆಯ ಹೊಯ್ಲಿನ ಹೃದಯ... ತುದಿ ನಾಲಗೆಯ ತೊದಳಿನ... ಬೆರಗಿನ ಬರತ ತಾಳಿಗೆಯ ಅಗಿವ ಹುಯ್ಯಲುಗಾರ ಬಹಳೋಲಗಕೆ ಬಂದನು. ನೃಪ ವಿರಾಟನ ಮಗನ ಕಾಲಿಂಗೆ ಎರಗಿದನು. ಕಳಕಳವ ದೂರಿದನು.)

**ಗೋಪಾಲಕ** : ಏಳು ಮನ್ನೆಯ ಗಂಡನಾಗು. ನೃಪಾಲ ಕೌರವ ರಾಯ ತುರುಗಳ ಕೋಳ ಹಿಡಿದನು. ಧರಣಿಯಗಲದಲಿ ಸೇನೆ ಬಂದುದು. ದಾಳಿ ಬರುತಿದೆ. ನಿನ್ನಾಳು ಕುದುರೆಯ ಕರೆಸಿಕೋ. ರಾಣಿವಾಸದ ಗೂಳೆಯವ ತೆಗೆಸು.

(ಎಂದು ಬಿನ್ನಹದ ಬಿರುಬ ನುಡಿದನು.)

**ಉತ್ತರಕುಮಾರ** : ಏನೆಲವೊ... ತುದಿ ಮೂಗಿನಲಿ ಬಿಳುಪೇನು... ಢಗೆ ಹೊಯ್ದೇಕೆ ಬಂದೆ... ಇದೇನು... ನಿನ್ನಿನ ರಣವನು ಅಯ್ಯನು ಗೆಲಿದುದೇನಾಯ್ತು... ಇನ್ನು ಏನು ಭಯ ಬೇಡ. ಅದೇನು ಕಲಹ ನಿಧಾನ ವಾರ್ತೆ.

**ಗೋಪಾಲಕ** : ಜೀಯ ಬಿನ್ನಹ. ಕುರುಸೇನೆ ಬಂದುದು. ರಾಯ ತಾನು ಐತಂದನು. ಆತನ ನಾಯಕರು ಗುರುಸುತನು, ಗುರು, ಗಾಂಗೇಯ, ಶಕುನಿ, ವಿಕರ್ಣ, ಕರ್ಣ ಜಯದ್ರಥಾದಿಗಳು. ಬಡಗ ದಿಕ್ಕಿನಲಿ ತುರುವ ಹಿಡಿದರು. ತಾಯಿಮಳಲ ಅಂಬುಧಿಗೆ ದಳದ ತೆರಳಿಕೆ. ಮೋಹರದ ಆಯತವ ಹೊಕ್ಕು ಹೊಗಳುವರೆ ನಾನೆತ್ತ ಬಲ್ಲೆನು. ಎತ್ತ ಆಲಿಗಳ ದುವ್ವಾಳಿಸುವಡೆ... ಅತ್ತಲು ಆನೆಯ ಥಟ್ಟು; ಕಾಲಾಳೊತ್ತರದ ರಣವಾಜಿ; ರೂಢಿಯ ರಾಯ ರಾವುತರು. ಸುತ್ತ ಬಳಸಿಹುದು... ಎತ್ತ ಮನ ಹರಿವತ್ತ ಮೋಹರವಲ್ಲದೆ ಅನ್ಯವ ಮತ್ತೆ ಕಾಣೆನು.

ಜೀಯ, ಇದು ವೈರಿ ವಾಹಿನಿಯ ಹದನ. ಪಡಿನೆಲನನು ಒಡ್ಡಿದರೊ... ಮೇಣ್ ಅವನಿಯ ದಡ್ಡಿಯೋ ಎನಲು, ಚಮರ ಸೀಗುರಿಗಳ ಪತಾಕೆಯಲಿ ಝುಲ್ಲರಿಯೊಡ್ಡು ತಳಿತುದು. ಅಡ್ಡ ಹಾಯ್ದು ಇನಕಿರಣ ಪವನನ ಖಡ್ಡತನ ನಗೆಯಾಯ್ತು. ಕೌರವನ ಒಡ್ಡನು ಅಭಿವರ್ಣಿಸುವಡೆ ಅರಿಯೆನು. ಜೀಯ ಕೇಳು... ಒಳಗೆ ನೀ ಕಾದುವೊಡೆ ದುರ್ಗವ ಬಲಿಸು. ಬವರಕೆ ಹಿಂದುಗಳೆಯದೆ ನಿಲುವ ಮನ ನಿನಗೀಗಲು ಉಂಟೇ ನಡೆಯಬೇಕು.

(ಎನಲು, ಉತ್ತರ ಕೆಲಬಲನ ನೋಡಿದನು. ಮೀಸೆಯನು ಅಲುಗಿದನು. ತನ್ನಿದಿರ ಮೇಳದ ಲಲನೆಯರ ಮೊಗ ನೋಡುತ ಬಿರುದ ಕೆದರಿದನು.)

**ಉತ್ತರಕುಮಾರ** : ಕುನ್ನಿಯನು ನೂಕು. ತಾನೀಗ ಆಹವದ ಭೀತಾಕುಳನು. ಇವನು ಹೆಂಡಿರ ಸಾಕಿ ಬದುಕುವ ಲೌಲ್ಯತೆಯಲಿ ಒಟ್ಟೈಸಿ ಬಂದು, ಎನಗೆ ಕಾಕ ಬಳಸುವನು. ತಾನು ಉದ್ರೇಕಿಸಿಯೆ ನಿಲಲು ಸಮರದಲಿ ಪಿನಾಕಧರನಿಗೆ ನೂಕದು.

(ಎಂದನು ಸತಿಯರ ಇದಿರಿನಲಿ...)

**ಗೋಪಾಲಕ** : ಜೀಯ, ಬಲ ಎನಿತು ಘನವಾದೊಡೇನು... ಅದು ನಿನಗೆ ಗಹನವೆ. ಜಗದಲಿ ದಿನಪನ ಇದಿರಲಿ ತಮದ ಗಾವಳಿಗೆ ದಿಟ್ಟತನವೇ. ಬಿನುಗು ರಾಯರ ಬಿಂಕ ಗೋವರ ಮೊನೆಗೆ ಮೆರೆದೊಡೆ ಸಾಕು. ಜನಪ ನಿಂದಿರು. ಕೌರವನ ಥಟ್ಟಿನಲಿ ಕೈಗುಣವ ತೋರಿಸು.

(ಎಂದಡೆ ಉಬ್ಬರಿಸಿದನು. ತಾ ಕಲಿಯೆಂದು ಬಗೆದನು. ಮೀಸೆಯನು ಬೆರಳಿಂದ ತಿರುಹುತ ಮುಗುಳುನಗೆ ಹರುಷದಲಿ ಮೈಮರೆದ. ರೋಮಾಂಚ ಸಂದಣಿಸಿ ಕೆಲಬಲದ ಇಂದುಮುಖಿಯರ ನೋಡಿದನು. ತನ್ನ ಪೌರುಷತನದ ಪರಿಣತೆಯ ನಲವಿಂದ ನುಡಿದನು.)

**ಉತ್ತರಕುಮಾರ :** ಅಹುದಹುದು ತಪ್ಪೇನು. ಸುಯೋಧನನು ಜೂಜಿನ ಕುಹಕದಲಿ ಪಾಂಡವರ ಸೋಲಿಸಿ ಮಹಿಯ ಕೊಂಡಂತೆ ಎನ್ನ ಕೆಣಕಿದನೇ. ಸಹಸದಿಂದವೆ ತುರುವ ಮರಳಿಚಿ ತಹೆನು. ಬಳಿಕ ಆ ಕೌರವನ ನಿರ್ವಹಿಸಲು ಈವೆನೆ. ಹಸ್ತಿನಾಪುರವ ಸೂರೆಗೊಂಬೆನು. ಹಿಡಿದು ರಾಜ್ಯವ ಕೊಂಡು, ಹೆಂಗುಸ ಬಡಿದು ಪಾಂಡವ ರಾಯರನು ಹೊರವಡಿಸಿ ಕೊಬ್ಬಿದ ಭುಜಬಲವನು ಎನ್ನೊಡನೆ ತೋರಿದನೆ... ಬಡಯುಧಿಷ್ಠಿರನೆಂದು ಬಗೆದನೆ... ಅರಿಯನಲಾ... ಕಡುಗಿದೊಡೆ ಕೌರವನ ಕೀರ್ತಿಯ ತೊಡೆವೆನು...

(ಎನುತ ಸುಕುಮಾರ ಖತಿಗೊಂಡ.)

ತನಗೆ ಬಡ ಪಾಂಡವರ ತೆವರಿದ ಮನದ ಗರ್ವದ ಕೊಬ್ಬು ಕಾಲನ ಮನೆಯನಾಳ್ವಿಪುದು. ಅಲ್ಲದಿದ್ದೊಡೆ ತನ್ನ ವೈರವನು ನೆನೆದು ದುರ್ಯೋಧನನು ತಾ ಮೇದಿನಿಯನು ಆಳ್ವನೆ. ಹಾ ಮಹಾದೇವ.

(ಎನುತಲು ಹೆಂಗಳಿದಿರಿನಲಿ ಉತ್ತರ ಬಿರುದ ನುಡಿದನು.)

ಜವನ ಮೀಸೆಯ ಮುರಿದನೋ...ಭೈರವನ ದಾಡೆಯನು ಅಲುಗಿದನೊ... ಮೃತ್ಯುವಿನ ಮೇಲುದ ಸೆಳೆದನೋ... ಕೇಸರಿಯ ಕೆಣಕಿದನೋ...ಬವರವನು ತೊಡಗಿದನಲಾ... ಅಕಟ, ಕೌರವನು ಮರುಳಾದನು.

(ಎಂದು ಆ ಯುವತಿಯರ ಮೊಗ ನೋಡುತ ಉತ್ತರ ಬಿರುದ ಕೆದರಿದನು.)

ಆರೊಡನೆ ಕಾದುವೆನು... ಕೆಲಬರು ಹಾರುವರು...ಕೆಲರು ಅಂತಕನ ನೆರೆ ಊರವರು... ಕೆಲರು ಅಧಮ ಕುಲದಲಿ ಸಂದು ಬಂದವರು...ವೀರರು ಎಂಬವರು ಇವರು... ಮೇಲೆ ಇನ್ನು ಆರ ಹೆಸರುಂಟು ಅವರೊಳು.

(ಎಂದು ಕುಮಾರ ಹೆಂಗಳ ಇದಿರಿನಲಿ ನೆಣಗೊಬ್ಬಿನಲಿ ನುಡಿದನು.)

ಪೊಡವಿಪತಿಗಳು ಬಂದು ತುರುಗಳ ಹಿಡಿವರೇ. ಲೋಕದಲಿ ಅಧಮರ ಬಡಮನದ ಮನ್ನೆಯರ ಮೈಸಿರಿ ಕೌರವನೊಳು ಆಯ್ತು. ಕಡೆಗೆ ದುರಿಯಶವು ಉಳಿವುದು. ಅಲ್ಲದೆ ಗೋಧನವನು ಬಿಡುವೆನೇ. ಎನ್ನೊಳು ತೊಡಕಿ ಬದುಕುವನು ಆವನು...

(ಎಂದು ಖಂಡೆಯವ ಜಡಿದು...)

ಖಳನ ಮುರಿವೆನು. ಹಸ್ತಿನಾಪುರದೊಳಗೆ ಠಾಣಾಂತರವನು ಇಕ್ಕುವೆ. ಕೌರವನ ಸೇನೆಯ ಧೂಳಿಪಟ ಮಾಡಿ ತೊಲಗಿಸುವೆ. ಗೆಲವ ತಹೆನು.

(ಎಂದು ಕೋಮಲೆಯರ ಇದಿರಲಿ ಉತ್ತರನು ಬಾಯ್ಗೆ ಬಂದುದ ಗಳಹುತಿದ್ದನು.)

ಬೇಕು ಬೇಡ ಎಂಬವರ ನಾ ಕಾಣೆ. ಅರಿಯೆನೇ ಗಾಂಗೆಯನನು...ತಾನು ಅರಿಯದವನೇ ದ್ರೋಣ...ಕುಲದಲಿ ಕೊರತೆ ಎನಿಸುವ ಕರ್ಣನ್ ಎಂಬವನು ಎನಗೆ ಸಮಬಲನೆ. ಬರಿಯ ಬಯಲಾಡಂಬರದಿ ಬರಿ ತುರುವ ಹಿಡಿದೊಡೆ ತನ್ನ ಹೆಂಡಿರ ಸೆರೆಯ ತಾರದೆ ಮಾಣೆನು.

(ಎಂದನು ನಾರಿಯರ ಮುಂದೆ.)

ಇನ್ನು ನುಡಿದು ಫಲವೇನು. ನಿನ್ನಿನ ಬವರದಲಿ ಸಾರಥಿ ಮಡಿದ. ಶಿವ ಶಿವಾ ತಾನು ಉಡುಹನಾದೆನು. ಇಂದು ಎನ್ನ ಕೈಮನಕೆ ಗಡಣಿಸುವ ಸಾರಥಿಯನು ಒಬ್ಬನ ಪಡೆದೆನಾದಡೆ ಕೌರವೇಂದ್ರನ ಪಡೆಗೆ ಹಬ್ಬವ ಮಾಡುವೆನು. ಕೈಗುಣವ ತೋರುವೆನು. ಸಾರಥಿಯ ಶಿವ ಕೊಟ್ಟನಾದಡೆ ಮಾರಿಗೆ ಉಬ್ಬಸ ವಾಗದೆ... ಅಂತಕನ ಊರು ತುಂಬದೆ... ರಣಪಿಶಾಚರಿಗೆ ದೋರೆ ಕರುಳಲಿ ದೊಳ್ಳು ನೂಕದೆ... ದಾನವಿಯರ ಒಡಲು ಏರು ಹತ್ತದೆ... ಭೂರಿಬೇತಾಳರಿಗೆ ಹಬ್ಬವಾಗದೆ. ರಣ ಬರಿದೆ ಹೋಹುದೆ.

(ಎಂದ. ಕಲಿಪಾರ್ಥನು ಈತನ ಬಾಲಭಾಷೆಗಳೆಲ್ಲವನು ಕೇಳಿದನು. ಪಾಂಚಾಲೆಗೆ ಎಕ್ಕಟಿ ನುಡಿದ..)

**ಅರ್ಜುನ** : ನಾವು ಇನ್ನು ಇಹುದು ಮತವಲ್ಲ. ಕಾಲ ಸವೆದುದು. ನಮ್ಮ ರಾಜ್ಯದ ಮೇಲೆ ನಿಲುಕಲು ಬೇಕು. ಕೌರವರ ಆಳು ನವಗೋಸುಗವೆ

ಬಂದುದು. ಕಾಂತೆ ಕೇಳು, ನರನ ಸಾರಥಿಯೆಂದು ನೀನು ಉತ್ತರೆಗೆ ಸೂಚಿಸಿ ತನ್ನನು ಈಗಳೆ ಕರೆಸು.

(ಎನಲು ಕೈಕೊಂಡು ದುರುಪದಿ ಒಲವಿನಲಿ ಬಂದಳು.)

**ಸೈರಂಧ್ರಿ** : (ಉತ್ತರೆಗೆ)

ತರುಣಿ ಕೇಳು. ವರ ಬೃಹನ್ನಳೆ ಅರ್ಜುನನ ಸಾರಥಿ. ಇವ ತಾನು ಖಾಂಡವ ಅಗ್ನಿಯ ಹೊರೆದನು.

(ಉತ್ತರೆ ಕೇಳಿ ಹರುಷಿತೆಯಾದಳು. ಲೋಲಲೋಚನೆಯು ಓಲಗಕೆ ಬಂದು ಅಣ್ಣನ ಅಂಘ್ರಿಗೆ ಎರಗಿ ಕೈಮುಗಿದು ಈ ಹದನ ಎಂದಳು.)

**ಉತ್ತರೆ** : ಸಾರಥಿಯ ನೆಲೆಯನು ಕೇಳಿದೆನು. ಅಣ್ಣದೇವ, ಕಾಳಗಕೆ ನಡೆ. ನೃಪಾಲಕರ ಜಯಿಸು.

(ಎಂದಡೆ ಉತ್ತರ ನಗುತ ಬೆಸಗೊಂಡ.)

**ಉತ್ತರಕುಮಾರ** : ತಂಗಿ ಹೇಳೌ ತಾಯೆ. ನಿನಗೆ ಈ ಸಂಗತಿಯನು ಆರು ಎಂದರು. ಆವ ಅವನು ಸಾರಥಿತನದ ಕೈಮೆಯಲಿ ಅಂಗವಣೆ ಯುಳ್ಳವನೆ. ಮಂಗಳವಲೆ... ಬಳಿಕ ನಿನ್ನಾಣೆ, ರಣದೊಳು ಅಭಂಗನಹೆ. ತನ್ನಯ ತುಂಗ ವಿಕ್ರಮತನವನು ಉಳುಹಿದೆ ಹೇಳು ಹೇಳು.

**ಉತ್ತರೆ** : ಈ ಹದನ ನಾವು ಅರಿಯೆವು. ಈ ಸೈರಂಧ್ರಿ ಎಂದಳು. ಸುರಪನ ನಂದನವ ಸುಡುವಂದು ಪಾರ್ಥನ ಮುಂದೆ ಸಾರಥಿಯಾದ ಗಡ. ಹಿಂದುಗಳೆಯದೆ ನಮ್ಮ ಬೃಹನ್ನಳೆಯನು ಕರೆಸು.

(ಎನೆ ನಗುತ 'ಲೇಸಾಯ್ತು' ಎಂದು ಪರಮ ಉತ್ಸಾಹದಲಿ ಸೈರಂಧ್ರಿಗೆ ಇಂತೆಂದ.)

**ಉತ್ತರಕುಮಾರ** : ಸಾರಥಿಯ ಕೊಟ್ಟು ಎನ್ನನು ಉಳುಹಿದೆ. ವಾರಿಜಾನನೆ ಲೇಸು ಮಾಡಿದೆ. ಕೌರವನ ತನಿಗರುಳ ಬಗಿವೆನು. ತಡವ ಮಾಡಿಸದೆ ನಾರಿ ನೀನೇ ಹೋಗಿ ಪಾರ್ಥನ ಸಾರಥಿಯ ತಾ.

**ಸೈರಂಧ್ರಿ** : ನಮ್ಮನು ವೀರ ಬಗೆಯನು. ನಿಮ್ಮ ತಂಗಿಯ ಕಳುಹಿ ಕರೆಸುವುದು.

**ಉತ್ತರಕುಮಾರ** : (ಉತ್ತರೆಗೆ)

ತಾಯೆ, ನೀನೇ ಹೋಗಿ ಸೂತನ ತಾ.

(ಎನಲು ಕೈಕೊಂಡು ಕಮಲದಳಾಯತಾಕ್ಷಿ ಮನೋಭವನ ಮರಿಯಾನೆಯ ಅಂದದಲಿ ರಾಯಕುವರಿ ನವಾಯಿ ಗತಿ ಗರುವಾಯಿಯಲಿ ಬರೆ...ಬರವ ಕಂಡನು ಪಾರ್ಥನು...)

**ಬೃಹನ್ನಳೆ** : ಏನು ಉತ್ತರ ಕುಮಾರಿ, ಕಠೋರ ಗತಿಯಲಿ ಬರವು ಭಾರಿಯ ಕಾರಿಯವ ಸೂಚಿಸುವುದು.

(ಎನಲು ನಗುತ)

**ಉತ್ತರೆ** : ಬರವು ಬೇರೆ ಇಲ್ಲ. ಎನ್ನ ಮಾತನು ಹುರುಳು ಕೆಡಿಸದೆ ಸಲಿಸುವೊಡೆ ನಿಮಗೆ ಅರುಹಿದಪೆನು.

**ಬೃಹನ್ನಳೆ** : ಮೀರಬಲ್ಲನೆ ಮಗಳೆ ಹೇಳು.

**ಉತ್ತರೆ** : ಹಸ್ತಿನಾಪುರದ ಅರಸುಗಳು ಪುರಕೆ ಹಾಯ್ದರು. ಹೊಲನೊಳಗೆ ಶತ ಸಾವಿರದ ತುರುಗಳ ಹಿಡಿದರು. ಗೋಪ ಪಡೆ ಅಳಿದುದು. ಕಾದಿ ಮರಳಿಚುವೊಡೆ ಎಮ್ಮಣ್ಣ ದೇವನ ಧುರಕೆ ಸಾರಥಿ ಇಲ್ಲ. ನೀವು ಆ ನರನ ಸಾರಥಿಯೆಂದು ಕೇಳಿದೆವು. ಇನ್ನು ನೀವೇ ಬಲ್ಲಿರಿ.

**ಬೃಹನ್ನಳೆ** : ನಿನ್ನ ಮಾತನು ಮೀರಬಲ್ಲನೆ. ಮುನ್ನ ಸಾರಥಿ ಅಹೆನು, ನೋಡುವೆನು.

(ಎನುತ ವಹಿಲದಲಿ ಅಬಲೆಯನು ಬೆನ್ನಲಿ ಐದಲು, ಆ ಸಂಪನ್ನಬಲನು ಓಲಗಕೆ ಬರೆ ಹರುಷೋನ್ನತಿಯಲಿ ಉತ್ತರ ಕುಮಾರನು ಕರೆದು ಮನ್ನಿಸಿದ.)

**ಉತ್ತರಕುಮಾರ** : ಎಲೆ ಬೃಹನ್ನಳೆ, ಎನಗೆ ಅಗ್ಗಳೆಯರೊಳು ವಿಗ್ರಹವು ತೆತ್ತುದು. ಎನ್ನವ ಸಾರಥಿ ಅಳಿದನು. ಸಮರದಲಿ ನೀನು ಸಾರಥಿಯಾಗಿ ಉಳುಹ ಬೇಹುದು. ಫಲುಗುಣನ ಸಾರಥಿಯಲೈ. ನೀ ಸಮರ್ಥನು. ನೀನು ಒಲಿದು ಮೆಚ್ಚಲು ಸೇನೆಯಲಿ ಕಾದಿ ತೋರುವೆನು.

**ಬೃಹನ್ನಳೆ** : ನಮಗೆ ಭರತ ವಿದ್ಯಾ ವಿಷಯದಲಿ ಪರಿಚಯತನ. ಅಲ್ಲದೆ ಹಲವು ಕಾಲದಲಿ ಈ ಸಂಗರದ ಸಾರಥಿತನವ ಮರೆದೆವು. ಅರಿಭಟರು ಭೀಷ್ಮಾದಿಗಳು. ನಿಲಲು ಅರಿದು. ಸಾರಥಿತನದ ಕೈ ಮನ ರಣ ಸೂರೆಯಲ್ಲಿ ಬರಡರಿಗೆ ದೊರೆಕೊಂಬುದೇ.

**ಉತ್ತರಕುಮಾರ** : ಆನು ಇರಲು ಭೀಷ್ಮಾದಿಗಳು ನಿನಗೆ ಏನ ಮಾಡಲು ಬಲ್ಲರು.

ಅಳುಕದೆ ನೀನು ನಿಲು ಸಾಕು. ಅವರುಗಳ ಒಂದು ನಿಮಿಷಕೆ ಗೆಲುವೆನು. ತಾನು ಅದು ಆರೆಂದು ಅರಿಯಲಾ. ಗುರುಸೂನು, ಕರ್ಣ, ದ್ರೋಣರು ಎಂಬವರು ಆನು ಅರಿಯದವರಲ್ಲ. ಸಾರಥಿಯಾಗು ಸಾಕು.

**ಬೃಹನ್ನಳೆ** : ವೀರನು ಅಹೆ. ಬಳಿಕ ಏನು. ರಾಜಕುಮಾರನು ಇರಿವೊಡೆ ಹರೆಯವಲ್ಲಾ. ಸಾರಥಿತ್ವವ ಮಾಡಿ ನೋಡುವೆ. ರಥವ ತರಿಸು.

(ಕಲಿಪಾರ್ಥ ವಾರುವದ ಮಂದಿರದಲಿ ಆಯಿದು ಚಾರು ತುರಗಾವಳಿಯ ಬಿಗಿದನು. ತೇರ ಸಂವರಿಸಿದನು. ರಥವ ಏರಿದನು. ನಿಖಿಳಾಂಗನೆಯರು ಉತ್ತರಗೆ ಮಂಗಳಾರತಿಯ ಎತ್ತಿದರು. ನಿಜ ಸರ್ವಾಂಗ ಶೃಂಗಾರದಲಿ ಹೊಳೆವುತ ಬಂದು ರಥವೇರಿ ಹೊಂಗೆಲಸಮಯ ಕವಚವನು ಪಾರ್ಥಂಗೆ ಕೊಟ್ಟನು. ರಾಜಕುಮಾರನು ಜೋಡು ಸೀಸಕದ ಅಂಗಿಗಳನು ಅಳವಡಿಸಿ ಅನುವಾದ. ನರನು ತಲೆ ಕೆಳಗಾಗಿ ಕವಚವ ಸರಿವುತ ಇರೆ ಘೊಳ್ಳೆಂದು ಕೈ ಹೊಯ್ದು ಅರಸಿಯರು ನಗೆ... ನಾಚಿದಂತಿರೆ ಪಾರ್ಥ... ತಲೆವಾಗಿ ತಿರುಗಿ ಮೇಲ್ಮುಖನಾಗಿ ತೊಡಲು, ಉತ್ತರೆ ಬಳಿಕ ನಸುನಗಲು...)

**ಉತ್ತರಕುಮಾರ** : ಸಾರಥಿ ಅರಿಯ. ತಪ್ಪೇನು.

(ಎನುತಲು ಉತ್ತರ ತಾನೆ ತೊಡಿಸಿದನು.)

**ನಾರಿಯರು** : ಕವಚವನು ತೊಡಲು ಅರಿಯದವನು ಆಹವಕೆ ಸಾರಥಿತನವ ಮಾಡುವ ಹವಣು ತಾನೆಂತು.

**ಉತ್ತರೆ** : ಬವರವನು ನಮ್ಮಣ್ಣ ಗೆಲಿದಪನು. ಸಾರಥಿ, ಅವರ ಮಣಿ ಪರಿಧಾನ ಆಭರಣವನು ಕೊಂಡು ಬಾ.

(ಎಂದಳು ಸರೋಜಮುಖಿ. ಅರ್ಜುನನು ನಸು ನಗುತ ರಥವನು ಕೈಕೊಂಡನು, ಎಸಗಿದನು. ವಿಗಡ ವಾಜಿಗಳು ಸಮೀರನ ಮಿಸುಕಲು ಈಯದೆ ಮುಂದೆ ಮಿಕ್ಕವು.)

**ಸೇನೆಯವರು** : ಹೊಸ ಪರಿಯ ಸಾರಥಿಯಲಾ. ನಮಗೆ ಸಂಗಾತ ಬರಲು ಅಸದಳವು...

(ಎಂದು ಚಾತುರಂಗ ಬಲ ಪುರದಲಿ ಹಿಂದೆ ಉಸುರದೆ ಉಳಿದುದು.)

❖

## ನೋಟ–೩

ಎಲೆ ಪರೀಕ್ಷಿತ ತನಯ ಕೇಳ್, ನೃಪತಿಲಕನು ಅತಿ ವೇಗದಲಿ ರಥವನು ಕೊಳುಗುಳಕೆ ತರೆ, ಉತ್ತರ ಮುಂದೆ ದೂರದಲಿ ತಳಿತ ಕುಂತದ ಬಾಯಿಧಾರೆಯ ಹೊಳವುಗಳ, ಹೊದರೆದ್ದ ಸಿಂಧದ ಸೆಳೆಯ ಸೀಗುರಿಗಳ, ವಿಡಂಬದ ಸಕಲ ಮೋಹರವ ಕಂಡನು. ಕರಿಘಟಾವಳಿಯ ಒಡ್ಡುಗಲ್ಲಿನ, ತುರಗ ನಿಕರದ ತೆರೆಯ, ತೇರಿನ ಹೊರಳಿಗಳ ಸುಳಿಯ, ಆತಪತ್ರದ ಬಹಳ ಬುದ್ಬುದದ, ನರನಿಕಾಯದ ಜಲಚರ ಓಘದ, ತರದ ವಾದ್ಯ ಧ್ವನಿಯ ರವದುಬ್ಬರದೊಳು ಬಹಳ ಜಲನಿಧಿಯಂತೆ ಕುರುಸೇನೆ ಇದ್ದುದು. ಖಡ್ಗದ ಜಡಿವ ಕಿಡಿಯ, ಸೇನೆಯ ಕಡುಹುಗಳ ಕೇಸುರಿಯ, ಬಲದುಗ್ಗಡದ ರಭಸದ ರೌದ್ರರವ ಛಟಛಟಿತ ನಿಸ್ವನದ, ಧೂಳಿಯ ಇಡಿದ ಧೂಮರಾಶಿಯ ಪಡೆ ಒಡನೊಡನೆ ಇದಿರಿನಲಿ ವಿರಾಟನ ಮಗನ ಕಂಗಳಿಗೆ ದಾವಾಗ್ನಿಯಂತಿರೆ ತೋರಿತು.

**ಉತ್ತರಕುಮಾರ :** (ತನ್ನಲ್ಲಿಯೇ)

ಪ್ರಳಯ ಮೇಘದ ಮಾತೃಕೆಯೊ... ಕರಿಕುಲವೊ... ಸಿಡಿಲಿನ ಗರುಡಿಯೋ... ಕಳಕಳವೊ... ಕಲ್ಪಾನಲನ ಧೂಮಾವಳಿಯೊ... ಕೈದುಗಳೊ... ನೆಲನ ದಡ್ಡಿಯ ಬೆಟ್ಟದಡವಿಯೊ... ತಳಿತ ಟೆಕ್ಕೆಯವೋ... ಜಗಂಗಳನು ಅಳಿವ ಜಲಧಿಯೊ... ಸೇನೆಯೋ... ಇದನು ನಾವು ಅರಿಯೆವು. ಕಾಲಕೂಟದ ತೊರೆಯೊ... ಮಾರಿಯ ಗೂಳೆಯವೊ... ಮೃತ್ಯುವಿನ ಗಂಟಲ ತಾಳಿಗೆಯೊ... ಭೈರವನ ಥಟ್ಟೋ... ಜವನ ಜಂಗುಳಿಯೊ... ಕಾಲರುದ್ರನ ನೊಸಲ ವಹ್ನಿಜ್ವಾಲೆಯೋ... ಕೌರವನ ಸೇನಾಜಾಲವೋ... ಶಿವ

(ಎನುತ ಸುಕುಮಾರ ಅಂದು ಹೆದರಿದನು. ತನ್ನಲ್ಲಿಯೇ ಮಾತನಾಡಿಕೊಳ್ಳತೊಡಗಿದನು.)

ಕಂಗಳು ಕಡೆಗೆ ಹಾಯವು. ಮನವು ಈ ಬಲಗಡಲ ಈಸಾಡಲಾರದು. ಒಡಲುವಿಡಿದಿರಲು ಅದ್ಭುತವ ಏನ ಕಾಣಲುಬಾರದು. ಪೊಡವಿ ಈದುದೊ ಮೋಹರವನು. ಇದರೊಡನೆ ಕಾದುವನು ಆವನು ಆತನೆ ಮೃಡನು. ಶಿವ ಶಿವ ಕಾದಿ ಗೆಲಿದೆವು. ಬಲಕೆ ನಮೊ.

(ಎಂದ. ಅನಂತರ ಬೃಹನ್ನಳೆಯನ್ನು ಕುರಿತು)

ಬೃಹನ್ನಳೆ, ಹಸಿದ ಮಾರಿಯ ಮಂದೆಯಲಿ ಕುರಿ ನುಸುಳಿದಂತಾದೆನು. ತೇಜಿಗಳ ಎಸಗದಿರು ತಡೆ. ಚಮ್ಮಟಿಗೆಯನು ಬಿಸುಡು. ಮಿಸುಕಬಾರದು. ಪ್ರಳಯ ಕಾಲನ ಮುಸುಕನು ಉಗಿವವನಾರು. ಕೌರವನು ಅಸಮ ಬಲನೈ. ರಥವ ಮರಳಿಚು ಜಾಳಿಸುವೆನು.

**ಬೃಹನ್ನಳೆ** : ಎಲೆ ಕುಮಾರಕ, ಮೊದಲ ಚುಂಬನದೊಳಗೆ ಹಲು ಬಿದ್ದಂತೆ ಕಾಳಗದೊಳಗೆ ಬೆರೆಯದ ಮುನ್ನ ಸಮರ ಭೀತಿಯನು ಹಿಡಿದೈ. ಅಳುಕಲಾಗದು. ನಿಮ್ಮ ತಂದೆಯ ಕುಲಕೆ ಕುಂದನು ತಾರದಿರು. ಮನ ಗೆಲವಿನಲಿ ಕಾದು.

(ಎನುತ ರಥವನು ಬೇಗ ಹರಿಸಿದನು. ಸಾರಿ ಬರಬರಲು ಅವನ ತನು ಮಿಗೆ ಭಾರಿಸಿತು. ಮೈಮುರಿದು ರೋಮ ವಿಕಾರ ಘನ ಕಾಹೇರಿತು. ಅವಯವ ನಡುಗಿ ಡೆಂಡಣಿಸಿ ಭೂರಿಭಯ ತಾಪದಲಿ ತಾಳಿಗೆ ನೀರು ತೆಗೆದುದು. ತುಟಿ ಒಣಗಿ, ಸುಕುಮಾರ ಕಣ್ಣೆವೆ ಸೀಯೆ ಕರದಲಿ ಮುಖವ ಮುಚ್ಚಿದನು.)

**ಉತ್ತರಕುಮಾರ** : ಏಕೆ ಸಾರಥಿ, ರಥವ ಮುಂದಕೆ ನೂಕಿ ಗಂಟಲ ಕೊಯ್ವೆ. ಸುಡು ಸುಡು. ಕಾಕಲಾ, ಕಣ್ಣು ಒಡೆದವೇ. ಆ ಮಹಾಬಲವ ಕಾಣು. ನಾಕನಿಲಯರಿಗೆ ಅರಿದು. ನಿನಗೆ ವಿವೇಕವು ಎಳ್ಳನಿತಿಲ್ಲ. ತೆಗೆ ತೆಗೆ ಸಾಕು. ವಾಘೆಯ ಮರಳಿ ಹಿಡಿ. ತೇಜಿಗಳ ತಿರುಹು.

(ಎಂದ ನುಡಿಯ ಕೇಳದೆ ಅರ್ಜುನ ರಥವ ಹತ್ತೆಂಟು ಅಡಿಯನು ಮುಂದೆ ಹರಿಸಲು, ಹಿಡಿದ ಬಿಲ್ಲಂಬುಗಳು

ಬಿದ್ದವು. ಕೈಯನು ಅರೆತೆಗೆದು...)

ಇರಿಗಾರ ಸಾರಥಿ, ಹಯವನು ಹಿಡಿ.. ನುಡಿವವರು ನಾವ್ ಹಗೆಗಳೇ. ನಿನ್ನ ಒಡೆಯರಲ್ಲಾ. ಸ್ವಾಮಿ ದುರುಹಿಕೆ ಲೇಸು ಲೇಸು.

(ಎಂದೊಡೆ, ಅರ್ಜುನ ನಗುತ ರಥವನು ಮುಂದೆ ನಾಲ್ಕೆಂಟು ಅಡಿಯ ನೂಕಲು...)

**ಉತ್ತರಕುಮಾರ :** ಈ ಸಾರಥಿ ಕೊಂದನು...

(ಎನುತ ಮುಂಜೆರಗ ಸಂವರಿಸಿ, ಮೆಲ್ಲನೆ ರಥದ ಹಿಂದಕೆ ಬಂದು ನಿಂದು, ದುಮ್ಮಿಕ್ಕಿದನು.)

**ಉತ್ತರಕುಮಾರ :** ಬದುಕಿದೆನು...

(ಎಂದು ಬಿಟ್ಟಮಂಡೆಯಲಿ ನಿಟ್ಟೋಟದಲಿ ಹಾಯ್ದನು. ಕಲಿಪಾರ್ಥನು ನೋಡಿದನು. ಈ ಕೇಡಾಡಿ ಕೆದರಿದ ಕೇಶದಲಿ ಕೆಟ್ಟೋಡುತಿರಲು...)

**ಬೃಹನ್ನಳೆ :** ಎಲಲೆ...ಪಾಪಿ ಹಾಯ್ದನು ಹಿಡಿಯಬೇಕು.

(ಎನುತ ಕೂಡೆ ಸೂಟಿಯೊಳು ಅಟ್ಟಲು...ಇಳೆಯು ಅಲ್ಲಾಡಲು...ಅಹಿಪತಿ ಹೆದರಲು...ಇತ್ತಲು ಕೌರವ ಸೇನೆ ನೋಡಿ, ನಗೆಯ ಕಡಲೊಳಗೆ ಕೆಡೆದುದು.)

**ಕೌರವನ ಸೈನಿಕರು:** ಎಲೆಲೆ...ಕಾದಲು ಬಂದ ವೀರನ ಬಲುಹ ನೋಡಾ. ಶಿವ ಶಿವಾ...ಬೆಂಬಳಿಯಲಿ ಅಟ್ಟುವ ವೀರನು ಆವನೊ ಸುಭಟನಹನು. ಅವನು ತಿಳಿಯಲು ಅರಿದು. ಇವನಾವನೋ ವೆಗ್ಗಳೆಯನಹನು. ಆಕಾರದಲಿ ನೆರೆ ಫಲುಗುಣನ ಹೋಲುವನು.

(ಎನುತ ಅರಿಸೇನೆ ಗಜಬಜಿಸಿತು.)

**ಕರ್ಣ :** ಸಾರಥಿ ಅಳವಿಯಲಿ ಮಿಗುವಾತನು ಈತ ಉತ್ತರ. ಅರ್ಜುನಂಗೆ ಈ ಸೂತತನವು ಎತ್ತಲು. ವೀಕ್ಷಿಸಲು ನಪುಂಸಕ ವೇಷ. ಈತ ಅರ್ಜುನನಾಗಲಿ... ಆ ಪುರುಹೂತನಾಗಲಿ... ರಾಮನಾಗಲಿ... ಬರಲಿ ಆತಡೆ ಇರಿವೆನು.

(ಎಂದನು ಕರ್ಣ ಖಾತಿಯಲಿ.)



## ನೋಟ–೪

ಇತ್ತಲು ಅರ್ಜುನನು ಉತ್ತರನ ಬೆಂಬತ್ತಿ ಬಂದನು.

**ಬೃಹನ್ನಳೆ** : ಹೋದೆಯಾದರೆ ನಿನ್ನ ತಲೆಯನು ಕಿತ್ತು ಬಿಸುಡುವೆ. ನಿಲ್ಲು...ನಿಲ್ಲು.

**ಉತ್ತರಕುಮಾರ** : ಮೃತ್ಯುವೋ...ಸಾರಥಿಯೊ. ಪಾಪಿಯನು ಎತ್ತಣಿಂದವೆ ಮಾಡಿಕೊಂಡೆನು.

(ಎನುತ್ತ ಮರಳಿದು ನೋಡಿ ನಿಲ್ಲದೆ ಮತ್ತೆ ಸೈವರಿದ. ನರ ನೂರು ಹಜ್ಜೆಯೊಳು ಇಟ್ಟಣಿಸಿ ಅಟ್ಟಿ ಹಿಡಿದನು.)

**ಬೃಹನ್ನಳೆ** : ಇದೇನ ಮಾಡಿದೆ. ಹಾದರಕೆ ಹುಟ್ಟಿದೆಯೊ. ನೀನು ಕ್ಷತ್ರಿಯ ಬೀಜವೋ. ಹೆಂಗಳ ಇದಿರಲಿ ದಿಟ್ಟತನ ಮಿಗೆ ಹೊಟ್ಟುಗುಟ್ಟಿದೆ. ಹಗೆಗಳ ಇದಿರಲಿ ಬಿಟ್ಟುಕೊಂಡೆ. ದುರಾತ್ಮ, ವಿರಾಟನ ಅನ್ವಯವ ಮುರಿದೆ.

**ಉತ್ತರಕುಮಾರ** : (ಹಲುಗಿರಿದು ಬಾಯೊಳಗೆ ಬೆರಳಿಟ್ಟು ಅಳುಕಿ ತಲೆವಾಗಿದನು.)

ಸಾರಥಿ, ಕಳುಹಿ ಕಳೆಯೈ. ನಿನ್ನ ಬಸುರಲಿ ಮರಳಿ ಬಂದವನು. ಕೊಳುಗುಳದೊಳು ಈ ಒಡ್ಡ ಮುರಿವ ಅಗ್ಗಳೆಯರು ಉಂಟೇ. ಲೋಗರಿಂದವೆ ಕೊಲಿಸದಿರು. ನೀ ಕುತ್ತಿ ಕೆಡಹು. ಕಠಾರಿಯಿದೆ.

(ಎಂದ. ಅರ್ಜುನನು ಮನದಲಿ ಒಡಲು ಒಡೆವಂತೆ ನಗುತ ಗಜರಿದನು.)

**ಬೃಹನ್ನಳೆ** : ಎಲವೊ...ಸಭೆಯಲಿ ವನಜಮುಖಿಯರ ಮುಂದೆ ಬಾಯ್ಗೆ ಬಂದಂತೆ ಸೊರಹಿದೆ. ಅನುವರದೊಳು ಏನಾಯ್ತು.

ರಿಪುವಾಹಿನಿಯನು ಇರಿಯದೆ ನಾಡ ನರಿಯವೊಲು ಎನಗೆ ನೀ ಹಲುಗಿರಿಯೆ ಬಿಡುವೆನೆ ಕಾದು ನಡೆ. ಹೇವ ಬೇಡಾ. ವೀರರು ಈ ಪರಿ ಜೀವಗಳ್ಳರ ಪಥವ ಹಿಡಿವರೆ. ಎಮ್ಮ ನೋಡು... ನಪುಂಸಕರು...... ಸಾವಿಗೆ ಅಂಜಿದೆವೇ,.

**ಉತ್ತರಕುಮಾರ** : ನೀವು ವೀರರು. ಆವು ನೆರೆ ನಪುಂಸಕರು. ಸಾವವರಲ್ಲ. ಲೋಕದ ಜೀವಗಳ್ಳರಿಗೆ ಆವು ಗುರುಗಳು. ಬಿಟ್ಟು ಕಳುಹು.

**ಬೃಹನ್ನಳೆ** : ಎಲವೊ ನೀನು ಹರುಕನೇ. ನಿಮ್ಮಯ್ಯ ರಾಯರೊಳು ಉರುವ ನೃಪ. ಇಂದು ನೀನು ಇರಿದು ಮೆರೆವ ಅವಸರವಲಾ. ಜವ್ವನದ ಧುರಭರವ ರವಿ ಶಶಿ ಮುರಿದು ಬೀಳ್ವನ್ನಬರ ಅಪಕೀರ್ತಿ ಸರಿಗಳೆಯದೆ. ಎಲೆ ನರಗುರಿಯೆ ಕಾಳಗಕೆ ನಡೆ...

(ಎನುತ ಉತ್ತರನ ಹಿಡಿದೆಳೆದನು.)

ಕೊಳುಗುಳದೊಳು ಓಡಿದೊಡೆ ಹಜ್ಜೆಗೆ ಮಹಾಪಾತಕವು ಫಲ. ಮುಂದಣಿಗೆ ಒಲಿದು ಹಜ್ಜೆಯನಿಡಲು ಹಜ್ಜೆಯೊಳು ಅಶ್ವಮೇಧ ಫಲ. ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು. ಸುರೇಂದ್ರನು ನೆಲನನು ಉಗ್ಗಡಿಸುವನು. ವೀರಸ್ವರ್ಗವಹುದು.

**ಉತ್ತರಕುಮಾರ** : ಧುರದೊಳು ಓಡಿದ ಪಾತಕವ ಭೂಸುರರು ಕಳೆದಪರು. ಅಶ್ವಮೇಧವ ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದು. ಎಮಗೆ ಸುರರ ಸತಿಯರನು ಒಲ್ಲೆವು. ಎಮಗೆ ಎಮ್ಮ ಅರಮನೆಯ ನಾರಿಯರೆ ಸಾಕು. ಎಮ್ಮ ಅರಸುತನವೆ ಎಮಗೆ ಇಂದ್ರ ಪದವಿಯು. ಬಿಟ್ಟು ಕಳುಹು.

**ಬೃಹನ್ನಳೆ** : ಆಳೊಳು ಒಡ್ಡುಳ್ಳವನು. ಭಾರಿಯ ತೋಳುಗಳ ಹೊತ್ತವನು. ಮನೆಯಲಿ ಸೂಳೆಯರ ಮುಂದೆ ಒದರಿ ಬಾಷ್ಕಳಗೆಡೆದು ಬಂದು, ಈಗ ಕೋಲನಿಕ್ಕದೆ ಗಾಯವಡೆಯದೆ, ಕಾಲು ವೇಗವ ತೋರಿದಡೆ, ಅಕಟ...ನಿನ್ನ ಓಲಗದೊಳು ಎಂತು ನಾಚದೆ ಕುಳ್ಳಿತಿಹೆ.

**ಉತ್ತರದೇವ** : 'ಕೆತ್ತುಕೊಂಡ ಆ ನಾಚಿಕೆಗೆ ನೆರೆಕುತ್ತಿಕೊಳಬೇಕು' ಎಂಬ ಗಾದೆಯನು ಇತ್ತ ಹೊದ್ದಿಸಬೇಡ. ನಾವು ಕಾಳಗಕೆ ಅಂಜುವೆವು. ತೆತ್ತಿಗನು ನೀನು. ಅಹಿತನಂತಿರೆ ಮಿತ್ತು

ಅಹರೇ. ನಿನಗೆ ಬೇಡಿದನಿತ್ತು ಸಲಹುವೆನು. ಎನ್ನ ಕೊಲ್ಲದೆ ಬಿಟ್ಟು ಕಳುಹು. ರಾಜಭವನದಲಿ ವಳಿತವನು ವಾರುವವ ಮುಕ್ತಾವಳಿಯ ಅಲಂಕಾರವನು ರಥವನು ಲಲನೆಯರ ನಾನು ಈಸಿ ಕೊಡುವೆನು. ಎಲೆ ಬೃಹನ್ನಳೆ, ನಮ್ಮ ಬೊಪ್ಪನು ಸಲಹಿದಕೆ ಕೈಯೊಡನೆ ತೋರಿದೆ. ನಿನ್ನದು ಕಲುಮನವಲಾ.

(ಎಂದಡೆ ಪಾರ್ಥನು ಇಂತೆಂದ. )

**ಬೃಹನ್ನಳೆ** : ಪೊಡವಿಪತಿಗಳ ಬಸುರ ಬಂದು ಈ ಒಡಲ ಕಕ್ಕುಲಿತೆಯನು ಕಾಳಗದೆಡೆಗೆ ಭೂತ ಭವಿಷ್ಯಮಾನದಲಿ ಮಾಡಿದರಿಲ್ಲ. ಬಂಜೆವಾತನು ನುಡಿಯಬಹುದೇ. ಎಲವೋ ರಾಜಬಾಹಿರ ಸುಡು ಸುಡು, ವರೂಥದ ಹೊರೆಗೆ  ನಡೆ. ಕಾದಲು ಬೇಡ... ಬಾ. ನೀನು ಎನ್ನಯ ರಥವ ಐದಿಸು. ಮನದಲಿ ಭೇದತನವನು ಬಿಟ್ಟು ಸಾರಥಿಯಾಗು ಸಾಕು. ಮಾರೊಡ್ಡಿನಲಿ ಕಾದುವೆನು.

**ಉತ್ತರಕುಮಾರ** : ಆದಿಯಲಿ ನೀನಾವ ರಾಯರ ಕಾದಿ ಗೆಲಿದೈ. ಹುಲು ಬೃಹನ್ನಳೆಯಾದ ನಿನಗೆ ಈ ಕದನ ನಾಟಕ ವಿದ್ಯವಲ್ಲ. ಇನ್ನು ಎನ್ನವಂದಿಗ ರಾಜ ಪುತ್ರರಿಗೆ ಮೊಗಸಲು ಬಾರದಿದೆ. ನೀನು ಎನ್ನ ಸಾರಥಿ ಮಾಡಿಕೊಂಡು ಈ ಬಲವ ಜಯಿಸುವೆಯ. ಅನ್ಯರನು ಮನಗಾಂಬರಲ್ಲದೆ ತನ್ನ ತಾ ಮನಗಾಂಬರೇ. ಈ ಗನ್ನಗತಕವ ನಾವು ಬಲ್ಲೆವು ಬಿಟ್ಟು ಕಳುಹು.

**ಬೃಹನ್ನಳೆ** : ಎಲವೊ... ಸಾರಥಿಯಾಗು ನಡೆ. ನೀ ಗಳಹಿದೊಡೆ ಕಟವಾಯ ಕೊಯ್ವೆನು. ಈ ಪ್ರತಿಭಟ ನಿಕಾಯವ ನಿನ್ನ ಸಾಕ್ಷಿಯಲಿ ಕೊಲುವೆನು. ಬಳಿಕ ನೀ ನಗು, ನಡೆ.

(ಎನುತ ರಿಪುಬಲಭಯಂಕರನು ಉತ್ತರನ ಹೆಡತಲೆಯ ಹಗರಿನೊಳು ಔಂಕಿ ತಂದನು. ರಥವನು ಏರಿಸಿದ.)

**ಬೃಹನ್ನಳೆ** : ಎಲವೊ, ಖೇಡತನ ಬೇಡ. ರಣದೊಳಗೆ ಅಹಿತರನು ಓಡಿಸುವೆನು. ಥಟ್ಟ ನಡೆಹೊಯ್ದು ಅಂತಕನ ನಗರಿಗೆ ಹರಣವ ಹೂಡಿಸುವೆನು. ಕೋಡದಿರು...ಕೊಂಕದಿರು. ಧೈರ್ಯವ ಮಾಡಿ ಸಾರಥಿಯಾಗು.

(ಎನುತ ಕಲಿ ಮಾಡಿ ಸಮೀಪದ ಶಮಿಯ ಹೊರೆಗಾಗಿ ಕೊಂಡೊಯ್ದನು.)



## ನೋಟ–೫

**ಬೃಹನ್ನಳೆ** : ಮರನನು ಏರು. ಇದರೊಳಗೆ ಪಾಂಡವರು ಮಿಗೆ ಹರಣ ಭರಣ ಕ್ಷಮೆಗಳಲಿ ಕೈದುಗಳ ಇರಿಸಿ ಹೋದರು. ನೀನು ಎನಗೆ ನೀಡು.

**ಉತ್ತರಕುಮಾರ** : ವರ ಬೃಹನ್ನಳೆ ಇದೇನೈ, ಮರದ ಮೇಲಣ ಹೆಣನ ಅರಸು ಮಕ್ಕಳು ಮುಟ್ಟಲು ಅನುಚಿತ. ತನಗೆ ಮತ್ತೆ ಕೆಲಸವ ಹೇಳು.

**ಬೃಹನ್ನಳೆ** : ಹೆಣನಲ್ಲ, ತೆಗೆ. ಪಾಂಡು ನಂದನರು ಕೆಲ ಬಲನು ಅರಿಯದ ಅಂದದಿ ಹೊರಗೆ ತೊಗಲಲಿ ಬಿಗಿದು ಉರುವ ಕೈದುವ ಕಟ್ಟಿದರು.

(ಎನಲು ಭೀತಿಯ ತೊರೆದು, ಸೆರಗನು ಅಳವಡಿಸಿ ಇಕ್ಕಿ, ತುದಿಗೇರಿದನು. ನೇಣ್ಗಳ ಹರಿದು, ಕೈದುವ ಬಿಟ್ಟು, ಕಂಡು ಅಂಜಿದನು. ಭಯ ಹೊಡೆದು...)

**ಉತ್ತರಕುಮಾರ** : ಕಾಲ ಭುಜಗನ ನಾಲಗೆಯೊ...ಶರ ಜಾಲವೋ..ಕಲ್ಪಾಂತ ವಹ್ನಿಜ್ವಾಲೆಯೋ...ಕೈದುಗಳೊ...ಕಾಲಾಂತಕನ ದಾಡೆಗಳೊ. ಎಂತು ತೋಳು ಧರಿಸುವವು. ನೋಡಿದಡೆ ಆಲಿ ಉರೆ ಬೆಂದವು. ಬೃಹನ್ನಳೆ, ಕಾಳು ಮಾಡಿದೆ ಕೊಂದೆ.

(ಎನುತ ಓರಂತೆ ಹಲುಬಿದನು. ಹೊಗರ ಹೊರಳಿಯ ಹೊಳೆಯ ಬಾಯ್ದಾರೆಗಳ ತಳಪದ ಕಾಂತಿ ಹೊನ್ನಾಯುಗದ ಬಹಳ ಪ್ರಭೆ ಶರ ಓಘ ಅನಲನ ಗಹಗಹಿಸಿ ಝುಗಝುಗಿಸಿ ಕಣ್ಮುಚ್ಚಿ ಕೈಗಳ ಮುಗಿದು ಸಾರಥಿಗೆ...)

**ಉತ್ತರಕುಮಾರ** : ತಂದೆ ಎನ್ನನು ತೆಗೆದುಕೊಳ್ಳೈ. ಅಸ್ತ್ರ ಸೀಮೆಯಲಿ

ಸಿಲುಕಿದೆನು. ಹಾವಿನ ಕೊಡನ ದೋಷಿ ತುಡುಕಬಹುದೇ. ಇವು ನಿನಗೆ ಕೈದುಗಳೆ. ಬರಸಿಡಿಲ ದಾವಣಿಯಾಗುತಿವೆ. ಕೈಯಿಕ್ಕಲು ಅಂಜುವೆನು. ಸಾರಥಿ ಎನ್ನನು ಬಿಡಿಸು.

**ಬೃಹನ್ನಳೆ** : ಫಡ, ನಡುಗದಿರು. ಫಲುಗುಣನ ನೆನೆ. ತೆಗೆ ಸಾಕು. ಕೈವಶ ಅಹವು, ಕೈದುಡುಕು.

(ಎಂದನು ಆ ಪಾರ್ಥ. ಉಲಿದು ಸತ್ವದೊಳು ಔಕಿ, ಕಾಯವ ಬಲಿದು, ತೆಕ್ಕೆಯೊಳು ಒತ್ತಿ, ಬೆವರಿದು ಬಳಲಿ ಅರ್ಜುನನ ಕರತಳಕೆ ಗಾಂಡಿವವ ನೀಡಿದನು. ಬಲುಹಿನಿಂದ ಅವಡೊತ್ತಿ ತೆಗೆ ತೆಗೆದು ಉಳಿದ ಬಿಲುಗಳ ನೀಡಿ, ಮರನನು ಮಲಗಿ ಢಗೆಯಿಂದ ಅಳ್ಳೆವೊಯ್ದು...ಕುಮಾರನು ಇಂತು ಎಂದ...)

**ಉತ್ತರಕುಮಾರ** : ಗಿರಿಯನು ಎತ್ತಲುಬಹುದು. ಬಿಲುಗಳ ತೆರಳಿಚುವಡೆ ಆರೆನು. ಬೃಹನ್ನಳೆ, ನೀ ಸಮರ್ಥನು ಧರಿಸಲಾಪ್ಪೆ. ನಿನಗೆ ಶರಣು...

(ಎನುತ ಸರಳ ಹೊದೆಗಳ, ದೇವದತ್ತವ, ಪರಶು ತೋಮರ ಕುಂತವಸಿ ಮುದ್ಗರ ಗದಾ ದಂಡಾದಿ ಶಸ್ತ್ರವ ತೆಗೆದು ನೀಡಿದನು.)

ಹೇಳು ಸಾರಥಿ, ಬಿಲ್ಲು ಇದು ಆವನ ತೋಳಿಗೆ ಅಳವಡುವುದು. ಮಹಾಶರ ಜಾಲ ಬೆಸಗೈದಪವು. ಇದು ಆರಿಗೆ ಮಿಕ್ಕ ಬಿಲ್ಲುಗಳು. ಕಾಳಗದೊಳು ಇವನು ಆರು ತೆಗೆವರು. ಮೇಲು ಕೈದುಗಳು ಆರಿಗೆ ಇವು ಕೈಮೇಳವಿಸುವವು. ಮನದ ಸಂಶಯ ಹಿಂಗೆ ಹೇಳು.

**ಬೃಹನ್ನಳೆ** : ಇದು ಕಣಾ, ಗಾಂಡೀವವು ಎಂದು ಎಂಬುದು. ಮಹಾಧನು ಪಾರ್ಥನದು. ಬಳಿಕ ಇದು ಯುಧಿಷ್ಠಿರ ಚಾಪವು. ಈ ಧನು ಭೀಮಸೇನನದು. ಇದು ನಕುಲ ಕೋದಂಡ. ಬಿಲು ತಾನು ಇದುವೆ ಸಹದೇವನದು. ಭಾರಿಯ ಗದೆಯಿದು ಅನಿಲಜನದು. ಕಿರೀಟಿಯ ಬಾಣವು ಇವು.

(ಎಂದ. ಅವರವರ ಬತ್ತಳಿಕೆ ಚಾಪವನು, ಅವರ ಶರವನು ಕಂಬು ಖಡುಗವ ಕವಚ ಸೀಸಕ ಜೋಡುಗಳ ಬಿರುದುಗಳ ಟೆಕ್ಕೆಯವ ವಿವಿಧ ಶಸ್ತ್ರಾಸ್ತ್ರವನು ಫಲುಗುಣ ವಿವರಿಸಲು

ಬೆರಗಾಗಿ, ಸಾರಥಿಯಿವನು ತಾನಾರು ಎಂದು ಮತ್ಸ್ಯನ ಸೂನು ಬೆಸಗೊಂಡ...)

**ಉತ್ತರಕುಮಾರ** : ಆರು ನೀನು. ಅರ್ಜುನನೊ... ನಕುಲನೊ...ಮಾರುತನ ಸುತನೋ... ಯುಧಿಷ್ಠಿರ ವೀರನೋ... ಸಹದೇವನೋ... ಮೇಣ್ ಅವರ ಬಾಂಧವನೊ. ಧೀರ ಹೇಳೈ ಬೇಡಿಕೊಂಬೆನು. ಕಾರಣವ ವಿಸ್ತರಿಸು. ಪಾಂಡು ಕುಮಾರರ ಆಯುಧ ತತಿಯ ನೀನು ಎಂತು ಅರಿವೆ.

**ಬೃಹನ್ನಳೆ** : ಆನು ಅರ್ಜುನನು. ಎಮಗೆ ರಾಣಿವಾಸವು. ಬಾಣಸಿಯಾದ ವಲಲನು ಭೀಮ. ವರ ಯತಿಯಾದ ಕಂಕನು ಧರ್ಮಪುತ್ರನು. ನಿಮ್ಮ ಗೋಕುಲವ ಕಾದವನು ಸಹದೇವ. ರಾವುತನಾದವನು ನಕುಲನು. ವಿಳಾಸಿನಿಯಾದವಳು ಸೈರಂಧ್ರಿ.

**ಉತ್ತರಕುಮಾರ** : ಉಳಿದವರಿಗೆ ಈ ಮಹಿಮೆ ತಾನು ಎಲ್ಲಿಯದು ಕಾಣಲು ಬಹುದಲಾ. ಅಹುದು ಬಳಿಕೇನು. ಮಹಾದೇವ ಗಹನ ಮಾಡದೆ ಅತಿಶಯವನು ಜೀವಿಸಿದರು. ನುಡಿದ ತಪ್ಪಿನ ಬಹುಳತೆಯ ಭಾವಿಸದೆ ತನ್ನನು ಕುಹಕಿ ಎನ್ನದೆ ಕಾಯಬೇಕು.

(ಎಂದು ಪದಕೆ ಎರಗಿದನು. ಅರ್ಜುನನು ಮೌಳಿಯನು ನೆಗಹಿದನು.)

**ಅರ್ಜುನ** : ನಿನ್ನಯ ಮೇಲೆ ತಪ್ಪಿಲ್ಲ.

(ಎನುತ ಫಲುಗುಣ ಬೋಳವಿಸೆ, ಉತ್ತರನು ನಿಂದಿರ್ದು ಕೈಮುಗಿದು ನಗುತ...)

**ಉತ್ತರಕುಮಾರ** : ಬಾಲಕನ ಬಿನ್ನಪವನು ಒಂದನು ಕೇಳಬಹುದು. ನಿಮ್ಮ ದಶ ನಾಮಾವಳಿಯನು ಪೇಳ್ದು ಅಲ್ಪಮತಿಯನು ತಿಳುಹಬೇಕು.

(ಎನಲು ನಸು ನಗುತ ಅರ್ಜುನನು...)

**ಅರ್ಜುನ** : ಫಲುಗುಣ... ಧನಂಜಯ... ಜಿಷ್ಣು... ಸಿತವಾಹನ... ವಿಜಯ... ಬೀಭತ್ಸು...ಪಾರ್ಥ...ಕಿರೀಟಿ ಮೊದಲಾದ ವಿನುತ ಕೃಷ್ಣನು..ಸವ್ಯಸಾಚಿಗಳು...

(ಎನಿಪ ಪೆಸರನು ತಿಳುಹಿ, ಪುನರಪಿ ತನಗೆ ಬಂದ ಅಂದವನು ವಿಸ್ತರವಾಗಿ ವಿರಚಿಸಿದ.)

**ಉತ್ತರಕುಮಾರ :** ಪಾರ್ಥ, ಲೇಸಾಗಿ ನಂಬಿದೆನು. ನಿಶ್ಚಯವು ಇಂಬುಗೊಂಡುದು. ನಿನಗೆ ಹುಲು ಬೃಹನ್ನಳೆತನದ ಬಹು ರೂಪು. ಈ ಡೊಂಬು ಇದೇಕೈ... ನೀನು ಅಂಬುಜಾಕ್ಷನ ಸಾಹಸ ಪ್ರತಿಬಿಂಬವಲ್ಲಾ. ನಿನ್ನ ವಿಡಂಬಿಸಿದ ರೂಹಿಂಗೆ ಕಾರಣವೇನು ಹೇಳು.

**ಅರ್ಜುನ :** ಇದು ಕಣಾ, ಧರ್ಮಜನ ಸತ್ಯಾಭ್ಯುದಯಕೋಸುಗ ಊರ್ವಶಿಯ ಶಾಪದಲಿ ಬಂದುದು. ಒಂದು ವತ್ಸರವ ನಿರ್ವಿಘ್ನದಲಿ ಹೊತ್ತು ನೂಕಿದೆನು. ಅವಧಿಯನು ನೂಕಿದೆವು. ಇದಕೆ ನಿಜ್ಜೋಡು ಆಯ್ತು. ತನ್ನ ಅದಟುತನವನು ನೀನು ಭೀತಿಗೊಳ್ಳದೆ ನೋಡು.

(ಕೌರವ ಬಲದ ಗಂಟಲ ಬಳೆಯ ಮುರಿವವೊಲು ಬಳೆಯ ನೆಗ್ಗೊತ್ತಿದನು. ಅಲಘು ಸಾಹಸಿ ಮಲ್ಲಗಂಟಿನಲಿ ಪಳಿಯನು ಉಟ್ಟನು. ತಲೆ ನವಿರ ಹಿಣಿಲಿರಿದು, ತಿಲಕವ ಗೆಲಿದು, ಕಿಗ್ಗಟ್ಟಿನ ಕಠಾರಿಯ ಹೊಳೆವ ಗೊಂಡೆಯ ಮೆರೆಯೆ ಗಂಡಂದವನು ಕೈಕೊಂಡ. ತೇರ ತೆಗೆದನು. ತನ್ನ ಮುನ್ನಿನ ವಾರುವಂಗಳ ಹೂಡಿದನು. ಕಪಿವೀರ ನೆನೆಯಲು ಬಂದು ಧ್ವಜಾಗ್ರದಲಿ ಮಂಡಿಸಿದನು. ಚಾರು ಸೀಸಕ ಜೋಡು ಕುಲಿಶದ ಸಾರ ಕವಚವ ಬಿಗಿದು, ಬೊಬ್ಬೆಯ ಭಾರವಣೆ ಮಿಗೆ ತಿರುವನೇರಿಸಿದ ಧನುವ ಕೊಂಡನು. ರಾಯ ಧರ್ಮಜ ಬಾಳುಗೆ ಎನುತ, ನಿಜಾಯುಧದ ಗುರುವಿಂಗೆ ಎರಗಿ, ಸುರರಾಯ ನಂದನನು ಒಲವಿನಲಿ ಗಾಂಡಿವವ ಜೇವಡಿಸಿ...)

**ಅರ್ಜುನ :** ರಾಯ ಕುವರನ ಸೂತತನದ ವಿಡಾಯಿಯ ಅರಿಯಲುಬಹುದು

(ಎನುತ ಸಮರಾಯತಾಸ್ತ್ರನು ಪಾರ್ಥ ಪರಬಲಕೆ ಮೈದೋರಿದನು.)



## ನೋಟ–೬

ಸಡಿಲ ಬಿಡೆ ವಾಘೆಯನು, ಒಡನೊಡನೆ ವೇಗಾಯ್ಲ ತೇಜಿಗಳು ಚಿಮ್ಮಿದವು. ಒಡೆದುದು ಇಳೆಯೆನೆ ಗಜರು ಮಿಗೆ ಗರ್ಜಿಸಿದವು. ಅಳ್ಳಿರಿದು ಕುಡಿ ನೊರೆಯ ಕಟವಾಯ ಲೋಳೆಯೊಳು ಒಡಲ ಸಂಚದ ನುಡಿಯ ಘುಡುಘುಡು ಘುಡಿಪ ನಾಸಾಪುಟದ ಹುಂಕೃತಿ ಮಸಗೆ ಮುಂಚಿದವು.)

**ಉತ್ತರಕುಮಾರ** : ಅಲ್ಲಿ ಆರು ಕೌರವನು... ಭೀಷ್ಮನು ಅದಾರು...ಕೃಪನು ಆವವನು...ದ್ರೋಣನು ಅದಾರು... ಅಶ್ವತ್ಥಾಮನು ಎಂಬವನು ಆವನು...ಕರ್ಣನು ಅದಾರು...ಬಳದೊಳಗೆ ನಾ ಕಂಡರಿಯೆನು. ವೀರ, ಇಲ್ಲಿ ಎನಗೆ ತಿಳುಹು.

(ಎನಲು ವೈರಿದಲ್ಲಣ ಪಾರ್ಥ ನಗುತ ಉತ್ತರನೊಳು ಇಂತು ಎಂದ.)

**ಅರ್ಜುನ** : ಉದಯದ ಅರುಣನ ಕರುವ ಹಿಡಿದ ಅಂದದಲಿ ವರ್ಣಚ್ಛವಿಯಲು ಒಪ್ಪುವ ಕುದುರೆಗಳ...ತಳತಳಸಿ ಬೆಳಗುವ ಕೊಡನ ಹಳವಿಗೆಯ ಗದಗದಿಪ ಮಣಿಮಯದ ತೇರಿನ... ಕದನ ಕೋಳಾಹಲನು ಗರುಡಿಯ ಸದನ ಸರ್ವಜ್ಞನನು ನೋಡೈ...ಅವನು **ದ್ರೋಣನು;** ನವರತುನ ಕೇವಣದ ರಥ... ಅತಿಜವದ ತೇಜಿಯ ತೆಕ್ಕೆಗಳ...ರೌರವದ ರೌದ್ರಾಯುಧದ ಗಡಣದ... ಹರಿಯ ಹಳವಿಗೆಯ ಬವರ ಭೈರವನಾತನು... ಅತಿ ಬಲ ಶಿವನ ನೊಸಲ ಅಂದದಲಿ ಮೆರೆವವನು ನೋಡು... ಇವನು ಜಿತಸಂಗ್ರಾಮನು **ಅಶ್ವತ್ಥಾಮ;** ಖುರದಲಿ ಅವನಿಯ ಹೊಯ್ದು ಲಹರಿಯಲಿ ಉರಿ ಮಸಗಲು ಉಬ್ಬೆದ್ದ ತೇಜಿಯ ಮೆರೆವ...ಮುಕ್ತಾವಳಿಯ ತೇರಿನ...

ನವವಿಳಾಸದಲಿ ಸರಳ ತಿರುಹುತ ನಿಂದು ಧನುವನು ನಿರುತವನು ನೆರೆ ನೋಡಿ ತಾ ಝೇಂಕರಿಸುವವನು ನೋಡು... ಅತಿಬಲ **ಕೃಪಾಚಾರಿಯನು;**

ಲಲಿತ ರತ್ನಪ್ರಭೆಯ ತೇರಿನಲಿ ಉಲಿವ ಬಹುವಿಧ ವಾದ್ಯ ರಭಸದ ಕಳಕಳದ ಕಡುದರ್ಪದಿಂದ ಅಳ್ಳಿರಿವ ತೇಜಿಗಳ...ಲಳಿಯ ಲಹರಿಯ ಲಗ್ಗೆಗಳ ಮೋಹಳಿಸಿ... ಬಿಲು ಝೇಂಕಾರ ರವದಿಂದ ಉಲಿವವನು... ಅತುಳ ಪರಾಕ್ರಮಾನಲನು **ಕಲಿಕರ್ಣನು;**

ಬಹಳ ಬಲದ ಒತ್ತೊತ್ತೆಯಲಿ ಹೂಡಿದ ಬಿಳಿಯ ತೇಜಿಗಳ... ತೆತ್ತಿಸಿದ ಹೊಂದಾಳ ಸಿಂಧದ ಸತ್ತಿಗೆಯ ಸಾಲಿನಲಿ... ರಿಪುಕುಲ ಮೃತ್ಯುವಾತನು ನೋಡು... ಅತ್ತಲೈದನೆ...... ನಮ್ಮ ಉಭಯ ರಾಯರ ಮುತ್ತಯನು ತಾನು ಎನಿಸಿ ವೀರ **ಗಂಗಾಸುತನು;**

ಅಗಿವ ಹಾವಿನ ಹಳವಿಗೆಯ... ಮಿಗೆ ನೆಗಹಿ ಮುಸುಕಿದ ಝಲ್ಲರಿಯ ಜೋಡಿಗಳ... ತುಡುಕುವ ತಂಬಟಂಗಳ... ಮೊರೆವ ಚಂಬಕದ... ನೆಗಹಿ ನಿಗುರುವ ಟಕ್ಕೆಯದ... ಮದವೊಗುವ ಕರಿಗಳ ಮಧ್ಯದಲಿ ಜೂಜಿನ ಜಾಣನು ಅವನು... ತಾನು ಅಗಡು **ದುರಿಯೋಧನನು;**

ಅವನ ಬಲವಂಕದಲಿ ನಿಂದವನು...ಅವನು **ಭೂರಿಶ್ರವನು;** ಮತ್ತೆ ಆ ಭುವನಪತಿಯ ಎಡವಂಕದಲಿ ನಿಂದವ... **ಜಯದ್ರಥನು;** ತವತವಗೆ ಬಲುಗೈಗಳು ಎನಿಸುವ ಶಿವನ ನೊಸಲ ಅಂದದಲಿ ಮೆರೆವವರು ನೋಡು... **ಅವನಿಪಾಲಕನ ಅನುಜರನು;** ಹೊಗಳಲು ಅನುಪಮ ಈ ಸೈನ್ಯವು ಇಂತು ಇದು ಅಂಧಾಸುರನ ಸೇನೆಗೆ ದ್ವಿಗುಣವು... ರಾವಣನ ಮೋಹರಕೆ ಇದು ತ್ರಿಗುಣವು.

(ಎನುತ ಫಲುಗುಣನು ಹಗೆಯ ಭುಜದ ಅಗ್ಗಳಿಕೆಯನು ಹೊಗಳಲು ನಾಲಗೆ ದಣಿಯೆ ಕೈವಾರಿಸುತ, ಗಾಂಡಿವವ ಝೇವಡೆದು ಮಿಗೆ ನಿಗುರಿಚಿದನು. ಉತ್ತರನು **'ಅರರೆ, ಪೊತುರೆ ಹಯ'** ಎನುತೆ ಚಪ್ಪರಿಸಲೊಡೆ ನಿಗುರಿದವು... ಖುರಪುಟದಲಿ ಆಕಾಶ ಭಿತ್ತಿಯ ಬರೆವವೋಲ್...

ಸೂರಿಯನ ತುರಗವ ಕರೆವವೋಲ್ ಕೈಗಟ್ಟಿ ಆಹವಕೆ ದುವ್ವಾಳಿಸುವಡೆ... ಕೆಂದೂಳು ಇರದೆ ನಭಕೆ ಉಪ್ಪರಿಸಿ ರವಿ ಮಂಡಲವನು ಅಂಡಲೆಯೆ, ತುರಗ ಗರ್ಜನೆ... ರಥದ ಚೀತ್ಕೃತಿ...ವರ ಧನುಷ್ಟಂಕಾರ... ಕಪಿಯ ಅಬ್ಬರಣೆ... ಪಾರ್ಥನ ಬೊಬ್ಬೆ... ನಿಷ್ಠುರ ದೇವದತ್ತ ರವ.... ಅರರೆ, ಹೊದರೆದ್ದವು. ಗಿರಿವ್ರಜ ಬಿರಿಯೆ... ಜಲನಿಧಿ ಜರಿಯೆ... ತಾರಕಿ ಸುರಿಯೆ... ಸುರಕುಲ ಸರಿಯೆ... ಭೀತಿಯಲಿ ಅಹಿತ ಬಲ ಹರಿಯೆ... ಶಿರವ ಸಿಡಿಲು ಎರಗಿದವೊಲು ಉತ್ತರ ಮೂರ್ಛೆಯಲಿ ತಿರುಗಿ ಬಿದ್ದನು. ಹೊಡೆ ಮರಳಿದವು... ಕಣ್ಣಾಲಿ ಅರುಣ ವಾರಿಗಳ ಕಾರಿದವು... ಹೊರಳುತ ಇರಲು...)

**ಅರ್ಜುನ** : ಎಲೆ ಪಾಪಿ ಸೈರಿಸಲು ಅರಿಯನು... ಇನ್ನೇನು...

(ಎನುತ ಫಲುಗುಣ ರಥದೊಳಗೆ ಕುಳ್ಳಿರಿಸಿದನು... ಸೆರಗಿನಲಿ ಬೀಸಿದನು.)

ಏನು ಮತ್ಸ್ಯಕುಮಾರ, ಬವಣಿ ಇದೇನು ನಿನಗೆ...

**ಉತ್ತರಕುಮಾರ** : ಜಗದ ಅವಸಾನದ ಅಂದದಿ ಸಿಡಿಲು ಸುಳಿದುದು. ಎನ್ನ ಒಡಲು ಬಿರಿದುದು. ನಿನ್ನ ಬಹಳ ಧ್ವಾನವನು ಆನಲಾಪನೆ. ಸಾಕು ಎನ್ನ ಕಳುಹು. ಮಹಾ ನಿನಾದವ ಮಾಣು ಮಾಣು.

**ಅರ್ಜುನ** : ಖೇಡನಾಗದಿರು. ಅದುಭುತ ಧ್ವನಿ ಮಾಡೆನು. ಅಂಜದಿರು. ಧೃತಿ ಮಾಡಿಕೊಂಡು ಈ ರಥವ ಜೋಡಿಸು.

(ಎಂದು ಸಮಾಧಾನ ಮಾಡಿ, ಉತ್ತರ ಕುಮಾರನ ಮನದಲ್ಲಿ ಕೆಚ್ಚನ್ನು ತುಂಬಿ, ಅವನನ್ನು ಸಾರಥಿಯನ್ನಾಗಿ ಮಾಡಿ ಕೊಂಡು, ದುರ್ಯೋಧನನ ಸೇನೆಯತ್ತ ಮುನ್ನುಗ್ಗಿ ಬರುತ್ತಾನೆ. ದುರ್ಯೋಧನನ ಸೇನೆಯ ಮುಂಚೂಣಿ ಯಲ್ಲಿದ್ದ ಭೀಷ್ಮಾಚಾರ್ಯರು ತಮ್ಮ ಮೇಲೆ ಯುದ್ಧವನ್ನು ಮಾಡಲು ಬರುತ್ತಿರುವವನು ಅರ್ಜುನ ಎಂಬುದನ್ನು ಗುರುತಿಸಿ, ಕೂಡಲೇ ದುರ್ಯೋಧನನಿಗೆ ಅಪಹರಿಸಿದ ಗೋವು ಗಳೊಡನೆ ಹಸ್ತಿನಾವತಿಗೆ ಹಿಂತಿರುವಂತೆ ಸೂಚನೆ ನೀಡಿ, ತಾವು ಉಳಿದ ವೀರರೊಡನೆ ಅರ್ಜುನನ್ನು ಎದುರಿಸಲು ಸಿದ್ಧರಾಗುತ್ತಾರೆ.

ಇದನ್ನು ಗಮನಿಸಿದ ಅರ್ಜುನನು ಗೋವುಗಳೊಡನೆ ಹಸ್ತಿನಾವತಿಯತ್ತ ತೆರಳತೊಡಗಿದ್ದ ದುರ್ಯೋಧನನನ್ನು ಮಾರ್ಗ ಮಧ್ಯದಲ್ಲಿಯೇ ಅಡ್ಡಗಟ್ಟಿ, ಅವನನ್ನು ಸದೆಬಡಿದು, ಅಪಹರಿಸಿದ್ದ ಗೋವುಗಳನ್ನು ಸೆರೆಯಿಂದ ಬಿಡಿಸಿ, ವಿರಾಟನಗರಿಯತ್ತ ಗೋಪಾಲಕರೊಡನೆ ಸುರಕ್ಷಿತವಾಗಿ ಕಳುಹಿಸುತ್ತಾನೆ. ಅಷ್ಟರಲ್ಲಿ ಆಪತ್ತಿಗೆ ಸಿಲುಕಿರುವ ದುರ್ಯೋಧನನನ್ನು ಕಾಪಾಡಿಕೊಂಡು ಭೀಷ್ಮಾದಿಗಳು ಅರ್ಜುನನೊಡನೆ ಕಾದಾಡಲು ಮುನ್ನುಗ್ಗುತ್ತಾರೆ.

ಗುರುಹಿರಿಯರಾದ ಭೀಷ್ಮ ಮತ್ತು ದ್ರೋಣರಿಗೆ ಅರ್ಜುನನು ತನ್ನ ವಿನಯದ ನುಡಿಗಳಿಂದಲೇ ತನ್ನ ಒಲುಮೆಯನ್ನು ತೋರಿಸಿ, ನಂತರ ವೀರಾವೇಶದಿಂದ ಹೋರಾಡಿ, ಅವರು ಕಸುವನ್ನು ಕುಗ್ಗಿಸುತ್ತಾನೆ. ನಂತರ ಎದುರಾಗಿ ಬಂದ ಕರ್ಣ, ಅಶ್ವತ್ಥಾಮ, ಕೃಪ ಮುಂತಾದವರೆಲ್ಲಾ ಅರ್ಜುನನ ಮುಂದೆ ಸೆಣಸಲಾಗದೆ ಹಿಂಜರಿಯುತ್ತಾರೆ.

ಮತ್ತೊಮ್ಮೆ ದುರ್ಯೋಧನನ ಜತೆಯಲ್ಲಿ ಎಲ್ಲರೂ ಒಗ್ಗೂಡಿ ಅರ್ಜುನನೊಡನೆ ಹೋರಾಡಲು ಮುನ್ನುಗ್ಗಿ ಬಂದಾಗ ಅರ್ಜುನನು ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ, ದುರ್ಯೋಧನನ ಚತುರಂಗ ಸೇನೆಯಲ್ಲಿದ್ದ ಭೀಷ್ಮರನ್ನು ಹೊರತುಪಡಿಸಿ ಇನ್ನುಳಿದವರೆಲ್ಲರೂ ಮಯ್ ಮರೆತು ಮೂರ್ಛಿತರಾಗುವಂತೆ ಮಾಡುತ್ತಾನೆ.

ಉತ್ತರಕುಮಾರಿಯ ಕೋರಿಕೆಯನ್ನು ಈಡೇರಿಸುವುದಕ್ಕಾಗಿ ದುರ್ಯೋಧನ ಮತ್ತು ಕರ್ಣನ ಮಯ್ ಮೇಲಣ ಒಡವೆ ಮತ್ತು ರೇಷ್ಮೆಯ ಬಟ್ಟೆಯನ್ನು ಉತ್ತರಕುಮಾರನಿಂದ ತರಿಸಿಕೊಂಡು ಕಾಳೆಗದ ಕಣದಿಂದ ವಿಜಯಶಾಲಿಯಾಗಿ ಹಿಂತಿರುಗುತ್ತಾನೆ;

ಕಾಳೆಗದ ಕಣದಲ್ಲಿ ನಡೆದ ದುರ್ಯೋಧನನ ಚತುರಂಗ ಬಲ ಮತ್ತು ಅರ್ಜುನನ ನಡುವೆ ನಡೆದ ಹೋರಾಟವನ್ನು ವಿರಾಟಪರ್ವದ ಏಳನೆಯ ಸಂಧಿಯ ೫೨ ಮತ್ತು ಎಂಟನೆಯ ಸಂಧಿಯ ೯೩ ಪದ್ಯಗಳನ್ನು ಒಳಗೊಂಡಂತೆ ಒಟ್ಟು ೧೪೫ ಪದ್ಯಗಳಲ್ಲಿ ಚಿತ್ರಿಸಲಾಗಿದೆ.

ಅಖಿಳ ಕೌರವಜಾಲ ದುಗುಡದಲಿ ಗಜಪುರಕೆ ನಡೆತಂದು ಭಂಗದಲಿ ತಿರುಗಿತು. ಅಖಿಲ ನೃಪರು ಮೇಲು ಮುಸುಕಿನ ಮೊಗದ, ವಾದ್ಯದ ಮೇಳ ಮೋನದಲಿ, ಹೊತ್ತ ದುಗುಡದಲಿ ನಿಜಾಲಯಂಗಳ ಬಂದು ಹೊಕ್ಕರು. ಬಳಿಕ ಫಲುಗುಣನು ಅತ್ತಲಾ ಮರದೊಳಗೆ ಕೈದುವನಿರಿಸಿ, ಮುನ್ನಿನ ಹುಲುರಥವ ಮೇಳೈಸಿ ಸಾರಥಿತನವನು ಅಳವಡಿಸೆ, ಕಪಿ ಕುಲಲಲಾಮನು ಇಳಿದು ಪಾರ್ಥನ ಮೈದಡವಿ ವನಕೆ ಹಾಯ್ದನು. ಫಲುಗುಣನು ಹೊಳಲ ಹೊರೆಯಲಿ ನಿಂದು ನಗುತ ಉತ್ತರನೊಳು ಇಂತು ಎಂದ.)

**ಅರ್ಜುನ** : ಕರೆದು ದೂತರಿಗೆ ಅರುಹು. ನೀನೇ ಧುರವ ಜಯಿಸಿದೆನು ಎನ್ನು. ನಾವು ಇದ್ದ ಇರವನು ಅರುಹದಿರು. ಇಂದು ನಿನ್ನ ವಿಕ್ರಮವ ಪಸರಿಸು. ಅರಸ ನಿನ್ನನೆ ಮನ್ನಿಸಲಿ. ಪುರ ಪರಿಜನಂಗಳು ನಿನ್ನ ವಿಜಯದ ಹರುಷದಲಿ ಹೆಚ್ಚಿರಲಿ. ನೇಮಿಸಿದಂತೆ ಮಾಡು.

(ಎನಲು...)

**ಉತ್ತರಕುಮಾರ** : ಕರ ಲೇಸು. ನೀನೇ ಬಲ್ಲೆ.

(ಎನುತ ದೂತರ ಕರೆದು)

ಜನಕನಲ್ಲಿಗೆ ಪೋಗಿ **'ಮತ್ಸ್ಯತನಯ ಕೌರವ ಬಲವ ಜಯಿಸಿದನು'** ಎಂದು ಪೇಳುವುದು.

(ಎಂದು ಆತನು ನಿಯಾಮಿಸುತಿರ್ದನು.)



## ನೋಟ–೭

ಅತ್ತಲು ಜನಪ ಕುಂತೀಸುತನ ಸಹಿತ ಅರಮನೆಗೆ ಐತಂದನು. ಅರಮನೆಯ ಹೊಕ್ಕು ಅವನಿಪತಿಯು ಉತ್ತರನ ಕಾಣದೆ..)

**ವಿರಾಟರಾಯ** : ಕಂದನು ಎತ್ತಲು ಸರಿದನು...

(ಎನೆ ರಾಣಿಯರು ಭೂಪತಿಗೆ ಬಿನ್ನವಿಸಿದರು.)

**ರಾಣಿ** : ಉತ್ತರೆಯ ಗುರು ಸಾರಥಿತನವನು ಅಂಗೈಸೆ, ಕುರುಬಲವನು ಅನುಕರಿಸಿದನು. ಕೆಲಬಲನ ಹಾರದೆ ಮಿಗೆ ಕದನಕೆ ಐದಿದನು.

(ಎಂದರೆ ಒಡಲೊಳು ಕೂರಲಗು ಮುರಿದ ಅಂದದಲಿ ಕಳವಳಿಸಿದನು. ಮನ ನೊಂದನು.)

**ವಿರಾಟರಾಯ** : ಅಕಟ, ಕುಮಾರನು ಎತ್ತಲು...ರಾಯದಳವು ಎತ್ತ. ಬಂದವರು ಭೀಷ್ಮಾದಿಗಳು. ತಾನು ಇಂದು ತರಹರಿಸುವೊಡೆ ತಾನೇನು ಇಂದುಧರನೇ. ಮರುಳಲಾ ಮಗನು.

(ಎನುತ ಚಿಂತಿಸಿದ. ಮಗಗೆ ಪಡಿಬಲವಾಗಿ ಬಲು ಮಂತ್ರಿಗಳನು ಅವನಿಪ ಬೀಳುಗೊಟ್ಟನು. ದುಗುಡದಿಂದ ಇರೆ, ಹೊಳಲ ಕೈಸೂರೆಗಳ ಕಳಕಳದ ಮೊಗದ ಹರುಷದಲಿ ಅಖಿಲ ದೂತಾಳಿಗಳು ಬಂದುದು...)

**ದೂತರು** : ಜೀಯ ಬಿನ್ನಹ, ನಗರಿಯಲಿ ಗುಡಿಯ ಕಟ್ಟಿಸು. ಕುಮಾರಕನನು ಇದಿರುಗೊಳಿಸು ಕಳುಹು. ರಾಯ ಕುವರ ಪಿತಾಮಹನು...ರಿಪುರಾಯ ಕುವರ ಕುಠಾರ... ಕೌರವ ರಾಯ ಥಟ್ಟು ವಿಭಾಡ...ಕುರುಕುಲ ಗಜಕೆ ಪಂಚಾಸ್ಯ...ಕರ್ಣ

ಗುರು ಗಾಂಗೇಯ ಮೊದಲಾದ ಅಖಿಳ ಕೌರವರಾಯ ದಳವನು ಗೆಲಿದನು. ಉತ್ತರ ತುರುವ ಮರಳಿಚಿದ.

(ಕೇಳಿ ಮಿಗೆ ಹಿಗ್ಗಿದನು. ತನು ಪುಳಕಾಳಿ ತಳಿತುದು. ಬಹಳ ಹರುಷದ ದಾಳಿಯಲಿ ಮನ ಮುಂದುಗೆಟ್ಟುದು. ಕಂಗಳು ಅರಳಿದವು. ಲಾಲಿಸುತ ಸರ್ವಾಂಗ ಹರುಷದೊಳಾಳೆ ಜನಪ ದೂತಾಳಿಗೆ ಪಸಾಯಿತವ ಇತ್ತನು. ಅವದಿರು ರಾಯನ ಓಲಗವ ಸುಲಿದರು. **'ಇದಿರುಗೊಳ ಹೇಳು'** ಎನಲು ಸರ್ವಾಂಗದಲಿ ಮಣಿ ಮೌಕ್ತಿಕದ ಸಿಂಗಾರದ, ಸುರೇಖೆಯ ಲಲಿತ ಚಿತ್ರಾವಳಿಯ ಮುಸುಕುಗಳ ಸುದತಿಯರು ಹೊರವಂಟರು. ಒಗ್ಗಿನ ಮೃದು ಮೃದಂಗದ ಕಹಳೆಗಳು ಸಂಪದದ ಸೊಂಪಿನಲಿ ಎಸೆಯೆ ರಾಜಾಂಗನೆಯರ ಅನುವಾಯ್ತು.)

**ವಿರಾಟರಾಯ** : ಕಂಕ, ಕವಿದು ನೂಕುವ ಹರುಷವನು ಸಂತವಿಸಲು ಅರಿಯೆನು. ನಿನ್ನೊಡನೆ ಎವಗೆ ವಿಮಳ ದ್ಯೂತಕೇಳಿಗೆ ಚಿತ್ತವಾಯ್ತು.

**ಕಂಕ** : ಅವನಿಪತಿ ಕೇಳ್, ಜೂಜಿನಲಿ ಪಾಂಡವರು ಸಿಲುಕಿದರು. ಅವರ ವಿಧಿಯನು ಭುವನದಲಿ ಬಲ್ಲವರು ಅದಾರು.

**ವಿರಾಟರಾಯ** : ಅವರು ರಾಜ್ಯವನೊಡ್ಡಿ ಸೋತವೊಲು ಎವಗೆ ಪಣ ಬೇರಿಲ್ಲ. ಕುಮಾರ ಅಭ್ಯುದಯ ವಿಜಯ ಶ್ರವಣ ಸುಖ ಮಿಗಲು ಹರ್ಷೋತ್ಸವ...ಎವಗೆ ಮನವಾಯ್ತು. ಒಡ್ಡು ಸಾರಿಯ ನಿವಹವನು ಹೂಡು.

(ಎನಲು ಹೂಡಿದನು ಅವನಿಪತಿ ನಸುನಗುತ ಹಾಸಂಗಿಯನು ಹಾಯ್ಕಿದನು. ಕೇಳಿ ಸಮತಳಿಸಿತ್ತು.)

**ವಿರಾಟರಾಯ** : ಕಂಕ, ನೋಡೈ ರಾಯ ಥಟ್ಟಿನಲಿ ಕಾಳಗವನು ಉತ್ತರನು ಗೆಲಿದನು. ಶೂಲಪಾಣಿಗೆ ಸೆಡೆಯದ ಅಹಿತ ಭಟಾಳಿ ಸೋತುದು. ಏನ ಹೇಳು, ದಿವಿಜ ನರರೊಳು ಕುಮಾರನನು ಹೋಲುವವರು ಉಂಟೇ.

**ಕಂಕ** : ಅರಿ ಸೇನೆ ಸೋತುದು ಉಂಟು. ಸುರಭಿವ್ರಾತ ಮರಳಿದುದು ಉಂಟು. ಗೆಲವು ಇದು ಕೌತುಕವಲೇ. ಎಮ್ಮ ಚಿತ್ತದಲಿ

ಬಗೆಯಲು ಅದ್ಭುತವು. ಮಾತು ಹೋಲುವೆ ಅಹುದು, ತಪ್ಪೇನು. ಜಗದ ವಿಖ್ಯಾತ ಸಾರಥಿಯಿರೆ ಬಳಿಕ ಕುಮಾರಗೆ ಭೀತಿ ಎಲ್ಲಿಯದು.

**ವಿರಾಟರಾಯ** : ಎಲೆ ಮರುಳೆ ಸನ್ಯಾಸಿ, ನಿನ್ನದು ಮತ್ಸರದೊಳಗೆ ಮುಳುಗಿದ ಚಿತ್ತ. ಹೇಳು, ಆವುದು ಅದ್ಭುತವು. ಸಂದೇಹವೇ ಗೆಲವಿನಲಿ. ಸುಕುಮಾರ ಅಳುಕವನೆ. ಸಾರಥಿ ಬಲುಹನು ಉಳ್ಳವನೇ.

(ಎಂದು ವಿರಾಟ ಖತಿಗೊಂಡ)

ನಾರಿಯರ ಮೈಗುರುಹು, ಪುರುಷರ ಚಾರು ಚಿಹ್ನವ ಕೂಡಿಕೊಂಡಿಹ ಸಾರಥಿಯ ದೆಸೆಯಿಂದ ಕುವರನು ಗೆಲಿದನು ಎಂಬುದನು ನಾನು ಇನ್ನೆವರ ಸೈರಿಸಿದೆ. ಮತ್ತಾರೊಡನೆ ಮಾತಾಡದಿರು. ಕಂಕ, ನೀ ನಿಸ್ಸಾರ ಹೃದಯನು. ನಪುಂಸಕನಲಿ ನಿರಂತರ ಪಕ್ಷ. ದುಷ್ಟಾತ್ಮ ಹೋಗು.

**ಕಂಕ** : ಅರಸ, ಖತಿಯ ಹಿಡಿಯದಿರು. ದಿಟ, ನೀನು ಅತಿಶಯವ ಬಯಸುವರೆ ಜನ ಸಮ್ಮತವು. ಸಾರಥಿ ಗೆಲಿದನು ಎಂದೇ ಡಂಗುರವ ಹೊಯಿಸು. ಸುತನು ಸಾರಥಿಯೆಂದು ಸಾರಿಸು. ಇದು ವಿತಥವಲ್ಲ. ತನಗೆ ಕವಲು ನಾಲಗೆಯಿಲ್ಲ. ಪಕ್ಷಪಾತ ಸ್ಥಿತಿಯನು ಆಡೆವು. ನಿನ್ನ ಮೋಹದ ಕಂಗಳಿಗೆ ಮಗನು ಉನ್ನತೋನ್ನತ ಸತ್ವನೆಂದೇ ಮುನ್ನ ತೋರಿತು. ಸಂಸಾರಕ ಭ್ರಮೆಗೆ ಹೊಲ್ಲೆಹವೆ. ಆ ಬೃಹನ್ನಳೆ ಗೆಲಿದವನು. ಇನ್ನು ಭೀಷ್ಮನು ಕರ್ಣ ಕೃಪ ಗುರು ಗುರುತನೂಭವರು ನಿನ್ನ ಮಗಗೆ ಅಳುಕವರೆ.

(ಎನಲು ಖತಿ ಬಿಗುಹೇರಿ, ಹಲು ಹಲುದಿನುತೆ, ಕಂಗಳಲಿ ಉರಿಯನು ಉಗುಳುತ, ಬಿಗಿದು ಔಡೊತ್ತಿ ಕನಲಿ ಕನಕದ ಸಾರಿಯನು ನೆಗಹಿ ಜನಪತಿಯ ಹಣೆ ಒಡೆಯಲಿಡೆ... ಭೋಂಕೆನಲು ಜಾಜಿನ ಗಿರಿಯ ನಿರ್ಜರದವೊಲು ಶಿರದ ಸೆಲೆಯೊಡೆದು ರುಧಿರದ ಧಾರೆ ಸಿಡಿದುದು. ಅತಿಧೀರನು ಕೈಯೊಡ್ಡಿ ರಕುತದ ಧಾರೆಯನು ಕೈತುಂಬ ಹಿಡಿದು ಸೈರಿಸುತ, ಓರೆಯ ನೋಟದಲಿ ಸೈರಂಧ್ರಿಯನು ಕರೆಯೆ, ನಾರಿ ಹರಿತಂದು...

**ಸೈರಂಧ್ರಿ** : ಅಕಟ, ನೊಂದನು ಕಾರುಣಿಕ ಸನ್ಯಾಸಿ.

(ಎನುತ ವಿಕಾರಿಸದೆ ಬಹಳ ಶೋಣಿತವ ಸೆರಗಿನಲಿ ತೋದಳು. ಮಡದಿ ಕರಪಲ್ಲವದಲಿ ಒರೆಸಿದಳು. ಅಡಿಗಡಿಗೆ ಹಣೆಯನು ಕಪೋಲವ ತೊಡೆದು ಮುಖವನು ತೊಳೆದಳು. ಅದನು ಅವ ಕಂಡು ಬೆರಗಾಗಿ...)

**ವಿರಾಟರಾಯ** : ಏಕೆ ಕಾಮಿನಿ, ರಕುತವನು ಹಿಡಿದೆ. ನಿಧಾನವನು ನುಡಿ. ಇವರು ನೊಂದರೆ ಮಿಡುಕಲೇತಕೆ ನೀನು...

(ಎನುತ ದುರುಪದಿಯ ಬೆಸಗೊಂಡ.)

**ಸೈರಂಧ್ರಿ** : ಅರಸ ಕೇಳು, ಬದುಕಿದೆ. ಈ ಮುನಿಯ ನೆತ್ತರು ಧರೆಯೊಳು ಒಕ್ಕೊಡೆ, ಒಂದು ಕಣೆಯಕೆ ಆ ಪ್ರದೇಶವನು ಒರೆಸಿ ಕಳೆವುದು ದಿಟ. ನಿನ್ನ ರಾಜ್ಯದ ಸಿರಿಯು ಉರಿದು ಹೋಹುದು. ಬೃಹನ್ನಳೆಗೆ ಏರಿಸಿದ ಬಿರುದು. ಕೈಯಲಿ ತುಂಬಿ ಶೋಣಿತವ ಪರಮ ಯತಿ ಕಾಯಿದನು.

**ವಿರಾಟರಾಯ** : (ತನ್ನಲ್ಲಿಯೇ)

ಈಕೆ ಯಾರು. ಇವರಾರು. ನಾಟ್ಯ ವ್ಯಾಕರಣ ಪಂಡಿತ ಬೃಹನ್ನಳೆಯು ಈಕೆಗೆ ಏನ್ ಅಹನು. ಕಾಳು ಕೀಲುಗಳ ಅರಿಯಬಾರದು. ನನಗೆ ಏಕೆ ಅದರ ಅರಿತ.

(ಎಂದು ಅವಿವೇಕಿಯಿರೆ...)



## ನೋಟ–೮

ಇತ್ತ ಪುರದಲಿ ಉತ್ತರನ ನೋಡುವ ನೆರವಿಯು ನೂಕು ನೂಕಾಯಿತ್ತು. ಮಂತ್ರಿಗಳು ಇದಿರು ಬಂದರು. ಉದಿತ ಮಂಗಳ ಘೋಷ ವಾದ್ಯ ವಿತಾನ ರಭಸದಲಿ ವರ ಸುದತಿಯರು ಸೇಸೆಯನು ಸೂಸಿದರು. ವರಕೋವಿದರು ಕೂಡೆ ತಮ್ಮೊಳಗೆ ಗುಜುಗುಜಿಸಿ ಆಡುತಿರ್ದರು.

**ಕೋವಿದರು–೧ :** ವದನವಿದೆ ಕಳೆಗುಂದಿ...ಜಯದ ಅಭ್ಯುದಯ ತಾನೆಂತು!.

**ಕೋವಿದರು–೨ :** ಉತ್ತರನು ಎಂದಿನವನು. ಗಂಗಾನಂದನನು ಈ ಹೂಹೆ ಗೆಲಿದನು. ಸಂದ ಸುಭಟ ದ್ರೋಣ ಕರ್ಣಾದಿಗಳನು ಓಡಿಸಿದ.

**ಕೋವಿದರು–೩ :** ಇವ ಗೆಲಿದ ಅಂದವಾಗಿರದು...ಈ ಬೃಹನ್ನಳೆಯಿಂದ ಸಂಭಾವಿಸುವುದು.

(ಎಂದುದು ಮಂದಿ ತಮತಮಗೆ. ಪುರಜನ ಜಾಲ 'ಜೀಯ' ಎನಲು, ಇದಿರು ಬಂದ ನಿವಾಳಿಗಳ ಉತ್ತರನು ನೂಕಿದನು. ಲೀಲೆ ಮಿಗಿಲು ಕೈವಾರಿಗಳ ಕೋಪಿಸುತ, ಆಲಿಯು ಅವನಿಯ ಬರೆಯೆ, ಮುಸುಕಿನ ಮೇಲು ದುಗುಡದ ಭಾರದಲಿ ರಾಜಾಲಯಕೆ ಬರಲು, ವಿರಾಟರಾಯ ಇದಿರು ಬಂದು ನಂದನನ ಅಪ್ಪಿದನು.)

**ವಿರಾಟರಾಯ :** ಬಾ ಮಗನೆ, ವಸುಕುಲದ ನೃಪ ಚಿಂತಾಮಣಿಯೆ... ಕುರುರಾಯ ಮೋಹರ ಧೂಮಕೇತುವೆ...ಕಂದ ಬಾ.

(ಎಂದು ಅಪ್ಪಿ ಕುಳ್ಳಿರಿಸೆ, ಕಾಮಿನಿಯರ ಉಪ್ಪಾರತಿಗಳ ಅಭಿರಾಮ ವಸ್ತ್ರ ನಿವಾಳಿ ರತ್ನಸ್ತೋಮ ಬಣ್ಣದ ಸೊಡರು ಹರುಷದ ಒಗ್ಗಿನಲಿ ಸುಳಿದವು.)

**ಉತ್ತರಕುಮಾರ** : ಬೊಪ್ಪ ಸಾಕು, ಈ ಬಯಲ ಡೊಂಬು ಎನಗೆ ಒಪ್ಪುವುದೆ. ವೀರೋಪಚಾರವು ಇದು ಒಪ್ಪುವರಿಗೆ ಒಪ್ಪುವುದು. ತೆಗೆಸು.

(ಎನಲು, ಅರಸ ನಸುನಗತ...)

**ವಿರಾಟರಾಯ** : ದರ್ಪವುಳ್ಳಂಗೆ ಈಸು ಮಂಗಳವು ಒಪ್ಪದೇನೈ. ಜಗದೊಳು ಆವಂಗೆ ಅಪ್ಪುದು ಈ ಬಲವು... ಈ ನಿಗರ್ವತೆ. ಮಗನೆ, ಕರ್ಣ ದ್ರೋಣ ಭೀಷ್ಮಾದಿಗಳನು ಒಬ್ಬನೆ ಗೆಲಿದೆ. ಈ ಕಾಳಗದ ಕಡುಗಲಿತನಗಳು ಪೂರ್ವ ಪುರುಷರಲಿ ಉಂಟೇ. ಎನ್ನಾಣೆ ದುಗುಡವೇಕೆ. ಹೆತ್ತರ ಮೊಗಕೆ ಹರುಷವ ತಂದೆಲಾ... ನೀ ಹಂಗಿಗನೆ... ತಲೆಗುತ್ತಲೇಕೆ.

(ಎಂದು ಮುಖವ ಎತ್ತಿದನು.)

**ಉತ್ತರಕುಮಾರ** : ನಿಮ್ಮಡಿ ಆದರಿಸಲು ಕಾದಿ ಗೆಲಿದವ ಬೇರೆ... ಸಾರಥಿಯಾದ ತನಗೆ ಈಸೇಕೆ...ಒಡೆಮುರಿಚ ಬಲ್ಲೆನೆ...ನಾಚಿಸದಿರಿ.

**ವಿರಾಟರಾಯ** : ಕಾದಿದಾತನು ನೀನು. ಸಾರಥಿಯಾದವನು ತಂಗಿಯ ಬೃಹನ್ನಳೆ. ವಾದ ಬೇಡಲೆ ಮಗನೆ. ನಿನ್ನ ವಿಕ್ರಮವ ಬಲ್ಲೆನು.

**ಉತ್ತರಕುಮಾರ** : ಅದಟುತನವು ಎನಗುಂಟೆ. ಬೆಂದುದ ಬೆದಕಿ ನೋಯಿಸಬೇಡ. ಬೊಪ್ಪ ನುಡಿಯದಿರು. ಹಗಲಿನ ಕದನವನು ಗೆಲಿದಾತ ಬೇರೆ ಇಹ. ಉದಯದಲಿ ಗೆಲಿದಾತನನು ನಿಮ್ಮ ಇದಿರಿನಲಿ ತೋರುವೆನು. ಸದನಕೆ ಬೀಳ್ಕೊಡಿ.

(ಎಂದು ಕುಮಾರ ಅರಮನೆಗೆ ಕಳುಹಿಸಿಕೊಂಡನು.)



## ನೋಟ–೯

ಇತ್ತಲು ಅರ್ಜುನ ದೇವ ಉತ್ತರೆಯ ಭವನವನು ಸಾರಿದನು. ತಾ ತಂದ ಉತ್ತಮ ಅಂಬರ ವಿವಿಧ ರತ್ನಾಭರಣ ವಸ್ತುಗಳ ಆ ಕನ್ನಿಕೆಗೆ ಇತ್ತನು. ಮುದ ಮಿಗಲು ಉತ್ತರೆಯ ಮನೆಯಿಂದ ಶಶಿಕುಲ ಮತ್ತವಾರಣ ಆ ಭೀಮಾಗ್ರಜನ ಹೊರೆಗೆ ಬಂದನು. ಬಳಿಕ ಕಲಿಭೀಮ ಸಂಕೇತದಲಿ ಭೂಪನ ನಿಳಯವನು ಹೊಕ್ಕನು. ಆ ಕ್ಷಣಕೆ ನಳಿನಮುಖಿ ಸಹದೇವ ನಕುಲರು ಬಂದರು. ಫಲುಗುಣನು ಇಬ್ಬರಿಗೆ ಹೊಡವಂಟನು. ಉಳಿದವರು ಪಾರ್ಥಂಗೆ ವಂದಿಸಲು ಪರಿತೋಷದಲಿ ಸಮಬಲರ ಒಲಿದು ಬಿಗಿಯಪ್ಪಿದನು. ಕಲಿ ತ್ರಿಗರ್ತರ ಗೆಲಿದ ಪರಿಯನು, ಪಾರ್ಥ ಕೌರವ ಬಲವ ಭಂಗಕೆ ತಂದ ಪರಿಯನು ಉಳಿದ ನಾಲ್ವರು ಹೇಳುತಿರುತಿರಲು... ಬಳಿಕ ರಾಯನ ಹಣೆಯ ಗಾಯವ ಪಾರ್ಥ ನಿಲುಕಿ ಕಂಡನು.

**ಅರ್ಜುನ** : ಇದೇನು ನೊಸಲಿಂದ ನಸು ರಕ್ತ ಬಿಂದುಗಳು ಇಳಿವುತಿದೆ.

**ಧರ್ಮರಾಯ** : ಅನವಧಾನದೊಳು ಆಯ್ತು. ಸಾಕು ಅದ ನೆನೆಯಲೇತಕೆ ಮಾಣು.

(ಎನಲು ಮಿಗೆ ಕನಲುತ ಅರ್ಜುನನು ಆ ದ್ರೌಪದಿಯ ಸೂರುಳಿಸಿ ಅರಿದನು. ಮನದಲಿ ಉರಿದೆದ್ದನು.)

**ಅರ್ಜುನ** : ವಿರಾಟನ ತನುವ ಹೊಳ್ಳಿಸಿ ರಕುತವನು ಶಾಕಿನಿಯರಿಗೆ ಹೊಯಿಸುವೆನು. ಹೊಲ್ಲೆಹವೇನು ಹೇಳು.

**ಭೀಮ** : ಶಿವ ಶಿವ ಮಹಾದೇವ...ವಿರಾಟನ ತಲೆಯ ಕೀಚಕೇಂದ್ರನ ಬಳಗವು ಇದ್ದಲ್ಲಿಗೆ ಕಳುಹಬೇಕೇ... ಋಣ ಸಾಲಿಗನಲೇ... ರಕ್ತವು ನೆಲದೊಳು ಒಕ್ಕುದೆ. ಅವದಿರ ಕುಲವ ಸವರುವೆನು. ಇವನ ಸೀಳಿದು ಭೂತಗಣಕೆ ಬಲಿಯ ಕೊಡುವೆನು.

(ಎನುತ ಎದ್ದನು ಆ ಭೀಮ.)

**ಧರ್ಮರಾಯ** : ಹೋ ಹೋ ಸಾಕು ಸಾಕೈ ತಮ್ಮ. ಕಾಕ ಬಳಸಲು ಬೇಡ. ಉದ್ರೇಕವನು ಮಾಣು. ನೆಲ ರಕ್ತ ಕಂಡರೆ ನನ್ನ ಮೇಲಾಣೆ. ಈ ಕಮಲಲೋಚನೆಯ ಸೆರಗಿಗೆ ರಕುತವು ಸೇಕವಾಯಿತು. ಅತಿ ಸವ್ಯಾಕುಲತೆ ಬೇಡ.

(ಎಂದು ಅನಿಲಜನ ಗಲ್ಲವ ಹಿಡಿದನು.)

**ಭೀಮ** : ಆತನ ಜೀವವನು ಕೊಂಬೆನು. ಪತಿ ಎಂಬ ಗರ್ವವನು ಅವನ ನೆತ್ತಿಯ ತುಂಬಿ ಬಿಡಲು ಎರಗುವೆನು. ಮತ್ಸ್ಯ ಸಂತತಿಯ ತರಿವೆನು. ಕೀಚಕನ ಅಂಬುಜಾಕ್ಷಿಯ ಬೇಳಂಬವು ಈತನ ಕೂಟ. ಭೂತ ಕದಂಬ ತುಷ್ಟಿಯ ಮಾಡಬೇಹುದು, ಸೆರಗ ಬಿಡಿ.

**ಧರ್ಮರಾಯ** : ಇವನ ನಾವು ಓಲೈಸಿ ಕೈಯೊಡನೆ ಇವಗೆ ಮುನಿದೊಡೆ ಭುವನ ಜನವು ಏನನು ಎಂಬುದು. ಭ್ರಮಿಸದಿರು, ಸೈರಣೆಗೆ ಮನ ಮಾಡು. ಎವಗೆ ನೋವಿನ ಹೊತ್ತು. ದುಷ್ಕೃತ ವಿವರಣದ ಫಲವು. ಇದಕೆ ಲೋಗರನು ಅವಗಡಿಸಿದೊಡೆ ಎಮಗೆ ಹಾನಿಯು.

**ಭೀಮ** : ಬರಿಯ ಧರ್ಮದ ಜಾಡ್ಯದಲಿ ಮೈಮರೆದು ವನದಲಿ ಬೇವು ಬಿಕ್ಕೆಯನು ಅರಸಿ ತೊಳಲಿದು ಸಾಲದೇ. ಹದಿಮೂರು ವತ್ಸರದಿ ಉರುಕುಗೊಂಡೊಡೆ, ರಾಜ ತೇಜವ ಮೆರೆವ ದಿನವು ಎಂದು ಇಹುದು. ನೀವು ಇನ್ನು ಅರಿಯಿರಿ. ಎಮ್ಮನು ಹರಿಯ ಬಿಡಿ ಸಾಕು.

**ಧರ್ಮರಾಯ** : ಉದಯದಲಿ ನಾವು ಇನಿಬರು ಆತನ ಸದನದಲಿ ನೃಪಪೀಠವನು ಗರ್ವದಲಿ ನೆಮ್ಮುವೆವು. ಆತ ನಮ್ಮಲಿ ಖೋಡಿಯನು ಹಿಡಿಯೆ ಮದಮುಖನನು ಒರಸುವೆವು. ಹರುಷದಲಿ ಇದಿರುಗೊಂಡೊಡೆ ಮನ್ನಿಸುವ ಮಾತು. ಇದುವೆ ಸನ್ಮತವು.

(ಎಂದು ಸಂತೈಸಿದನು ಪವನಜನ.)



## ನೋಟ–೧೦

ಕೇಳು ಜನಮೇಜಯ ಧರಿತ್ರೀಪಾಲ. ಚರಿತ ಅಜ್ಞಾತವಾಸವ ಬೀಳುಕೊಟ್ಟರು. ಬಹಳ ಹರುಷದಲಿ ಇರುಳ ನೂಕಿದರು.

ಮೇಲಣ ಅವರ ಅಭ್ಯುದಯವನು ಕೈಮೇಳವಿಸಿ ಕೊಡುವಂತೆ ಮೂಡಣ ಶೈಲಮುಖದಲಿ ಭಾನುಮಂಡಲದ ಕೆಂಪು ಸುಳಿದುದು. ಏಳು ಕುದುರೆಯ ಖುರಪುಟದ ಕೆಂದೂಳಿಯೋ... ಕುಂತೀ ಕುಮಾರಕರ ಏಳಿಗೆಯ ತನಿರಾಗರಸ ಉಬ್ಬರಿಸಿ ಪಸರಿಸಿತೊ... ಹೇಳಲೇನು... ಮಹೇಂದ್ರ ವರ ದಿಗ್ಪಾಲಕಿಯ ಬೈತಲೆಯ ಕುಂಕುಮಜಾಲವೋ... ಹೇಳೆನಲು... ದಿನಪನ ಚೂಣಿ ರಂಜಿಸಿತು. ಮೂಡಣಾದ್ರಿ ಯೊಳು ರವಿ ಓಲಗವ ಇತ್ತನು. ಸರಸಿಜದ ಪರಿಮಳಕೆ ತುಂಬಿಯ ಬರವ ಕೊಟ್ಟನು... ಚಂದ್ರಕಾಂತಕೆ ಬೆರಗನಿತ್ತನು... ಜಕ್ಕವಕ್ಕಿಯ ಸೆರೆಯ ಬಿಡಿಸಿದನು... ಕೆರಳಿ ನೈದಿಲ ಸಿರಿಯ ಸೂರೆಯ ತರಿಸಿದನು... ರಿಪುರಾಯ ರಾಜ್ಯವನು ಒರಸಿದನು.

'ಹರಹರ... ಶ್ರೀಕಾಂತನು' ಎನುತ ಐವರು ಕುಮಾರಕರು ಉಪ್ಪವಡಿಸಿದರು. ಅರಿವಿದಾರರು ಮಾಂಗಲ್ಯ ಮಜ್ಜನವ ಮಾಡಿದರು. ವರ ವಿಭೂಷಣ ಗಂಧ ಮಾಲ್ಯ ಅಂಬರದಿ ಪರಿವೃತರಾದರು. ಅವನೀ ಸುರರಿಗೆ ಧೇನು ಮಣಿ ಕನಕಾದಿ ವಸ್ತುಗಳ ಇತ್ತರು. ತಮದ ಗಂಟಲನು ಒಡೆದ ಹರುಷ ದ್ಯುಮಣಿಮಂಡಲದಂತೆ ಜೀವಭ್ರಮೆಯ ಕವಚವ ಕಳೆದು ಹೊಳೆ ಹೊಳೆವ ಆತ್ಮನ ಅಂದದಲಿ ವಿಮಲ ಬಹಳ ಕ್ಷತ್ರರಶ್ಮಿಗಳು ಅಮರಿ ದೆಸೆಗಳ ಬೆಳಗೆ, ರಾಜೋತ್ತಮ ಯುಧಿಷ್ಠಿರ ದೇವನು ರಾಜ ತೇಜದಲಿ ಎಸೆದನು. ಪರಮ ಸತ್ಯವ್ರತ ಮಹಾಕ್ರತು ವರದಲಿ ಅವಭೃತ ಮಜ್ಜನವ ವಿಸ್ತರಿಸಿ ಭೀಮಾದಿಗಳು ಸಹಿತ ವಿರಾಟನ ಅರಮನೆಗೆ ಅರಸ ಬಂದನು. ಮಣಿಖಚಿತ ಕೇಸರಿಯ ಪೀಠವನು ಅಡರಿದನು. ಒಡಹುಟ್ಟಿದರು ಪರುಟವಿಸಿ ನಿಜ ಚರಣ ಸೇವೆಯಲಿ ಎಸೆದರು. ಕಂಚುಕಿಗಳು ಐತಂದು ಇವರನು ಈಕ್ಷಿಸಿ...

**ಕಂಚುಕಿಗಳು** : ಅವನಿಪನ ಸಿಂಹಾಸನವನು ಏರುವ ಸಗರ್ವಿತರು ಆರು. ನೋಡಿದಡೆ ಎವೆಗಳು ಉರಿವುದು ಹಾಯ್...

(ಎನುತ ಕ್ಷಾತ್ರ ತೇಜವನು ಅವಗಡಿಸಲು ಅಂಜಿದರು. ಅವದಿರು ಹರಿತಂದು ಎಬ್ಬಿಸಿ ಮತ್ಸ್ಯಭೂಪತಿಗೆ ಬಿನ್ನವಿಸಿದರು.)

**ಕಂಚುಕಿ** : ಜೀಯ, ಸಿಂಹಾಸನಕೆ ದಿವಿಜರ ರಾಯನೋ...ಶಂಕರನೊ ಮೇಣ್ ನಾರಾಯಣನೊ...ನರರಲ್ಲ. ದೇವರು ಬಂದು ನೋಡುವುದು. ಎಮಗೆ ಕಾಯಲು ಅಸದಳವು.

**ವಿರಾಟರಾಯ** : ನಿರ್ದಾಯದಲಿ ನೆಲೆಗೊಂಡ ನಿರ್ಜರರಾಯನು ಆರು...

(ಎಂದೆನುತಲು ಆಗ ವಿರಾಟ ಚಿಂತಿಸಿದ. ಉತ್ತರನನು, ಅಖಿಲ ಮಹಾ ಪ್ರಧಾನರನು, ಪುರೋಹಿತನನು ಕರೆಸಿಕೊಂಡು ಅರಮನೆಯ ಹೊರವಂಟು ಓಲಗಶಾಲೆಗೆ ನೃಪತಿ ಐತರುತ... ದೂರದಲಿ ಚಂದ್ರ ಬಿಂಬದ ಕಿರಣ ಕರಗಿ ಸೂಸಿದ ಲಹರಿಗಳು ಎನಲು ವಿವಿಧ ಆಭರಣ ಮುಕ್ತ ಪ್ರಭೆಯ ಕಂಡನು. ಹರನ ನಾಲುಕು ಮುಖದ ಮಧ್ಯ ಸ್ಫುರಿತದ ಈಶಾನದವೊಲು ಆ ಸೋದರ ಚತುಷ್ಟಯ ಮಧ್ಯದಲಿ ಯುಧಿಷ್ಠಿರನ ಕಂಡನು. ವಾಮದಲಿ ಅರಸಿಯನು ವಿವಿಧ ಆಭರಣ ಮಣಿ ರಶ್ಮಿಗಳ ಹೊದರಿನ ಹೊರಳಿಯಲಿ ಕಂಡನು. ನಿಮಿಷದಲಿ ಕಣ್ಣಾಲಿ ಕೋರೈಸಿದವು.)

**ವಿರಾಟರಾಯ** : ಮೇಳವೇ ಘಡ, ಮನದ ಮತ್ಸರ ಕಾಲಿಡಲು ತೆರಹಿಲ್ಲ. ಮನುಜರ ಹೋಲುವೆಯ ನಾಟಕದ ನಿರ್ಜರ ಮಂಡಲೇಶ್ವರರು. ಆಲಿಗಳು ಮೇಲಿಕ್ಕಲಮ್ಮವು. ಶೂಲಪಾಣಿಯ ಪರಮ ತೇಜದ ಚೂಳಿಯೋ...ಶಿವ ಶಿವ...

(ಎನುತ್ತ ವಿರಾಟ ಬೆರಗಾದ)

**ಕೆಲಬರು–೧** : ವಲಲ...ಕಂಕ...ಬೃಹನ್ನಳೆಯ ಮೈಸುಳಿವ ಹೋಲುವರು.

**ಕೆಲಬರು–೨** : ಇದೆತ್ತಣ ನರರು ತೆಗೆ. ಸುರಲೋಕ ಪಾಲಕರು. ಎಮಗೆ ತಿಳಿಯಲು ಅರಿದು.

(ಎಂದು ಕೆಲಬರು ತಳವೆಳಗುಗೊಳುತಿರಲು, ಉತ್ತರನು ಮಂದಿಯ ಕೆಲಕೆ ನೂಕಿಯೆ ತಂದೆಗೆ ನಗುತ ಕೈಮುಗಿದ.)

**ಉತ್ತರಕುಮಾರ :** ತಾತ ಬಿನ್ನಹ. ಈ ತೋರ್ಪಾತನು ನಿನ್ನೆ ವೈರಿವ್ರಾತವನು ಗೆಲಿದಾತನು. ಈತನ ಮುಂದೆ ಮೆರೆವವ ಕೀಚಕಾಂತಕನು. ಈತ ನಕುಲನು. ವಾಮದಲಿ ನಿಂದಾತ ಸಹದೇವಾಂಕನು. ಅನಿಬರಿಗೆ ಈತ ಹಿರಿಯನು ಧರ್ಮನಂದನನು.

(ಎಂದು ತೋರಿಸಿದ.)

ಕೆಲದಲಿ ಕಮಲಮುಖಿಯನು ನೋಡು...ಈಕೆ ಐವರಿಗೆ ರಮಣಿ. ತಾವು ಇವರು ಪಾಂಡುನಂದನರು. ಅಮಳ ಗುಣ ಗಂಭೀರ ರಾಯರು. ನಮಗೆ ಭಾರಿಯ ಭಾಗ್ಯಲಕ್ಷ್ಮಿಯ ಮಮತೆಯಾಯ್ತು. ಇನ್ನೇನು ನಡೆ ನಡೆ ನೃಪಪದ ಕಮಲದಲಿ ಬೀಳುವೆವು. ಧನ್ಯರು ಅಹೆವು.

**ವಿರಾಟರಾಯ :** ಈತನೇ ಧರ್ಮಜನು ದಿಟ. ತಾನೀತನೆ ಪವನಜನು ನಿಶ್ಚಯ. ಈತನೇ ಫಲುಗುಣನು. ಇವರು ಮಾದ್ರೀ ತನುಜರೇ. ದ್ರುಪದ ಸುತೆಯೇ ಈ ತಳೋದರಿ. ಕೌತುಕವಲೇ ಭುವನಜನ ವಿಖ್ಯಾತರು ಎಲ್ಲಿಂದೆಲ್ಲಿ ಮೂಡಿದರು.

(ಎನುತ ಬೆರಗಾದ.)

**ಉತ್ತರಕುಮಾರ :** ವರುಷವೊಂದು ಅಜ್ಞಾತ ವಾಸವನು ಇರದೆ ಇಲ್ಲಿ ನೂಕಿದರು. ಬಳಕೆಯ ಹೊರೆಯ ಹೆಸರು ಅವು ಬೇರೆ, ನಡವಳಿಯ ಅಂಗವದು ಬೇರೆ. ಮರುಳನಂತಿರೆ ಜಗಕೆ ತೋರನೆ ಪರಮ ತತ್ವಜ್ಞಾನಿ. ನಮ್ಮ ಈ ಅರಸುತನ ಫಲವಾಯ್ತು ನಡೆ.

(ಎಂದನು ಕುಮಾರಕನು. ದರುಶನಕೆ ಮಣಿ ರತುನ ಕನಕವ ತರಿಸಿ, ಮುದದಲಿ ಮುಳುಗಿ, ನಿಜ ಪರಿಕರ ಸಹಿತ ಮೈಯಿಕ್ಕಿದನು... ಕಾಣಿಕೆಯನು ಒಪ್ಪಿಸಿದ.)

**ವಿರಾಟರಾಯ :** ವರನೃಪಾಲ ತ್ರಾಹಿ ಭುವನೇಶ್ವರ ಪರಿತ್ರಾಯಸ್ವ ಕರುಣಿಸು... ಕರುಣಿಸು.

(ಎಂದು ಮತ್ಸ್ಯ ಭೂಪಾಲ ಅಂಘ್ರಿಗಳ ಹಿಡಿದನು.)

ಅಪರಾಧವನು ಬಗೆದೆನು. ನೀನು ಕರುಣಾಳುಗಳ ಬಲ್ಲಹ. ನಿನ್ನ ಅಂಘ್ರಿಗಳಿಗೆ ಈ ತಲೆ ಬಂಟ. ನೀನು ಇದ ಕಾಯಬೇಕು.

(ಎನುತ ಮಿಗೆ ಭಕುತಿ ಭಾವದಲಿ ನಿಜ ಮಂತ್ರಿಗಳು ಮಕ್ಕಳು

ಸಹಿತ ಮಹೀಶರ ಇದಿರಿನಲಿ ಮತ್ಸ್ಯಭೂಪ ಮನ ನಂಬುಗೆಯ ಮೆರೆದನು. ಆ ಸುದೇಷ್ಣೆ ಕುಮಾರಿಯೊಡನೆ ವಿಳಾಸಿನೀಜನ ಸಹಿತ ರಾಣೀವಾಸದಲ್ಲಿಗೆ ಬಂದು ಕಾಣಿಕೆ ಕೊಟ್ಟು ಪೊಡವಂಟು, ಆ ಸಕಲ ಪರಿವಾರ ಪುರಜನ ದೇಶಜನ ಬಹಳ ಹರುಷದಲಿ ಮಹೀಶನಿಗೆ ಮೈಯಿಕ್ಕಿ ಕಾಣಿಕೆಯನು ಇತ್ತು ಕಂಡುದು. ಅವನಿಪತಿ ಮುಗುಳು ನಗೆಯಲಿ ಭೀಮ ಪಾರ್ಥರ ಮೊಗವ ನೋಡಿದನು. ತಮ್ಮಂದಿರು ಕೈಮುಗಿದು ತಲೆವಾಗಿದರು. ಮಹೀಪತಿಗೆ ಕಾಣಿಕೆಯನು ತೆಗೆಸಿದರು. ಆ ಮಂತ್ರಿಗಳನು... ಆ ಪರಿವಾರವನು ದೃಗುಯುಗದ ಕರುಣಾರಸದಲಿ ಅನಿಬರ ಹೊರೆದು ಮನ್ನಿಸಿದ. ಶಿರವನು ಎತ್ತಿ ವಿರಾಟ ಭೂಪನ ಕರೆದು ಹತ್ತಿರ ಪೀಠದಲಿ ಕುಳ್ಳಿರಿಸಲು ವಿರಾಟನೃಪ... ಕೆಲದಲಿ ಗದ್ದುಗೆಯ ಸರಿದು ಒಡೆಮುರಿಚಿದನು.)

**ವಿರಾಟರಾಯ** : ಪರಮ ಸುಕೃತವಲಾ, ಧರಾಧೀಶ್ವರನ ದರುಶನವಾಯ್ತು. ಧರೆಯೊಳು ಧನ್ಯರು ಎಮಗೆ ಇನ್ನಾರು ಸರಿ. ದೇಶ ನಿಮ್ಮದು. ನಗರ ಹೆಚ್ಚಿದ ಕೋಶ ನಿಮ್ಮದು. ನನ್ನ ಜೀವ ವಿಳಾಸ ನಿಮ್ಮದು. ಸಲಹಬೇಹುದು ಬಿನ್ನಹದ ಹದನ. ಚಿತ್ತೈಸು, ಈ ಸಮಂಜಸ ದಿವಸದಲಿ ಸಿಂಹಾಸನದಲಿ ಅಭಿಷೇಕವನು ಭೂಮೀಶ ವಿಸ್ತರಿಸುವೆನು.

(ಎಂದನಾ ಭೂಪ. ಎನಲು ಧರ್ಮರಾಯನು ನಗುತ...)

**ಧರ್ಮರಾಯ** : ಮಹೀಪತಿ ವಿನಯ ಮಧುರ ರಸಾಭಿಷೇಕವನು ಎನಗೆ ಮಾಡಿದೆ. ಧರಿತ್ರಿಯಿದು ಎಮ್ಮದು ಎಂಬ ಈ ನೆನಹು ತಾನು ಸಾಕು. ಪುನರುಕ್ತಾಭಿಷೇಕವದು. ಜನವಿದು ಎಮ್ಮದು. ನೀನು ನಮ್ಮಾತನು. ನಮಗೇಕೆ ಉಪಚಾರ. ಭೀಮಾರ್ಜುನರು ನೊಂದವರು. ಹಗೆಯಿಂದ ಹಳುವವ ಹೊಕ್ಕು ಮನಸಿನ ಕಂದು ಕಸರಿಕೆ ಹೋಗದು. ಆ ದುರ್ಯೋಧನಾದಿಗಳ ಕಳದಲಿ ಕೊಂದು, ಮತ್ತೆ ಗಜಪುರಿಗೆ ಎಂದು ಗಮಿಸುವೆವು ಎಂಬ ತವಕಿಗರು. ಇಂದು ತಾನೇ ಬಲ್ಲರು.

(ಎಂದನು ಧರ್ಮನಂದನನು.)

**ಉತ್ತರಕುಮಾರ** : (ಅರಸನ ಅಂಘ್ರಿಯೊಳು ಅಂದು ಮಕುಟವ ಚಾಚಿ)

ಬಿನ್ನಹವು ಇಂದು. ನೇಮವ ಕೊಡಿ. ಅರ್ಜುನಗೆ ಕುಮಾರಿಯನು ಈವೆನು.

(ಎಂದಡೆ...)

**ಯುಧಿಷ್ಠಿರ** : ಏಳು ಏಳು

(ಎಂದು ನಸುನಗೆಯಿಂದ ಯುಧಿಷ್ಠಿರನು ಪಾರ್ಥನ ನೋಡೆ, ಆತನು ಯುಧಿಷ್ಠಿರಗೆ ಕೈಮುಗಿದು ಮನದ ನಿಶ್ಚಯವನು ಎಂದನು.)

**ಅರ್ಜುನ** : ಇವಳಲಿ ವರುಷವು ನಾಟ್ಯ ವಿದ್ಯೆಯ ಪರುಟವಿಸಿದೆನು. ಆ ಪ್ರಕಾರ ರಹಸ್ಯ ದೇಶದಲಿ ಈ ತರುಣಿ ತಂದೆಯಂತೆ ಭಜಿಸಿದಳು. ಗುರುತನದ ಗರುವಾಯಿ ಎತ್ತಲು... ಅರಸಿಯೆಂಬುದು ಇದಾವ ಮತವು. ಈ ವರ ಕುಮಾರಿಯನು ಈವಡೆ ಅಭಿಮನ್ಯುವಿಗೆ ಕೊಡಲಿ.

**ವಿರಾಟ ರಾಯ** : ಎವಗೆ ನೀವೇನು ಆತನೇನು. ಉತ್ಸವದೊಳು ಆಗಲಿ.

(ಎನೆ ವಿರಾಟನನ್ ಅವನಿಪತಿ ಮನ್ನಿಸಿದನು. ವೀಳೆಯವ ನಗುತ ಇತ್ತನು.)

**ಯುಧಿಷ್ಠಿರ** : ಎವಗೆ ಪರಮಸ್ವಾಮಿ. ಎಮ್ಮ ಉತ್ಸವದ ನೆಲೆ. ಎಮ್ಮೈವರಸು ಯಾದವ ಶಿರೋಮಣಿ ಕೃಷ್ಣನ ಅಭಿಮತವು ಎಮ್ಮ ಮತ. ಎಮಗೆ ಪೊಡವಿಯೊಡೆತನ. ಕೃಷ್ಣನು ಮಿಗೆ ಕಟ್ಟೊಡೆಯ. ಕೃಷ್ಣನು ಒಡಬಟ್ಟೊಡೆ ವಿವಾಹ ನಿರಂತರಾಯವು. ಚಿಂತೆ ಬೇಡ.

(ಎನಲು...)

**ವಿರಾಟರಾಯ** : ಒಡಬಡಲಿ ಮೇಣ್ ಇರಲಿ... ಗುರು ನಿಮ್ಮಡಿ ಮುರಾರಿಯ ತೋರಿಸುವಿರಾದೊಡೆ ಕೃತಾರ್ಥನು ತಾನು.

(ಎನುತ ಮತ್ಸ್ಯನೃಪ ಹಿಗ್ಗಿದನು. ಅನಂತರ ದ್ವಾರಕಾವತಿ ಯಲ್ಲಿದ್ದ ಕೃಷ್ಣನನ್ನು ಪಾಂಡವರು ವಿರಾಟನಗರಿಗೆ ಕರೆಸಿಕೊಂಡು, ಮದುವೆಗೆ ಕೃಷ್ಣನ ಒಪ್ಪಿಗೆಯನ್ನು ಪಡೆದು ಪಾಂಡವರು, ಯಾದವರು ಮತ್ತು ವಿರಾಟರಾಯನ ಕಡೆಯವರೆಲ್ಲರೂ ಜತೆಗೂಡಿ ಸಡಗರದಿಂದ ಅಭಿಮನ್ಯು ಮತ್ತು ಉತ್ತರೆಯ ಮದುವೆಯನ್ನು ಮಾಡುತ್ತಾರೆ.)



# ಉತ್ತರ ಕುಮಾರನ ಪ್ರಸಂಗ

## ಪದ ವಿಂಗಡಣೆ ಮತ್ತು ತಿರುಳು

### ನೋಟ–೧

**ಜನಮೇಜಯ**=ಈಗ ಹಸ್ತಿನಾವತಿಯನ್ನು ಆಳುತ್ತಿರುವ ಪಾಂಡುವಂಶದ ರಾಜ. ಅಭಿಮನ್ಯುವಿನ ಮೊಮ್ಮಗ.

ಅರ್ಜುನ ಮತ್ತು ಸುಭದ್ರೆಯ ಮಗ ಅಭಿಮನ್ಯು. ಉತ್ತರೆ ಮತ್ತು ಅಭಿಮನ್ಯುವಿನ ಮಗ ಪರೀಕ್ಷಿತ. ಮದ್ರಾವತಿ ಮತ್ತು ಪರೀಕ್ಷಿತ ದಂಪತಿಯ ಮಗ ಜನಮೇಜಯ;

**ಕೇಳು ಜನಮೇಜಯ**=ವೈಶಂಪಾಯನ ಮುನಿಯು ವ್ಯಾಸರು ರಚಿಸಿದ ಮಹಾಭಾರತದ ಕತೆಯನ್ನು ಮತ್ತೊಮ್ಮೆ ಪಾಂಡುವಂಶದ ಅರಸನಾದ ಜನಮೇಜಯನಿಗೆ ಹೇಳತೊಡಗಿದ್ದಾನೆ;

ಸುಯೋಧನ=ದುರ್ಯೋಧನನಿಗೆ ಇದ್ದ ಮತ್ತೊಂದು ಹೆಸರು; ಆಳು=ಸೈನಿಕರು; ತುರು=ದನ/ಗೋವು; ಮುತ್ತು=ಸುತ್ತುವರಿ/ಲಗ್ಗೆಹಾಕು;

**ಸುಯೋಧನನ ಆಳು ತುರುಗಳನು ಮುತ್ತಿತು**=ದುರ್ಯೋಧನನ ಸೇನೆಯು ಮತ್ಸ್ಯರಾಜ್ಯದ ರಾಜಧಾನಿಯಾದ ವಿರಾಟನಗರದ ಹೊರವಲಯದಲ್ಲಿದ್ದ ವಿರಾಟರಾಯನ ಗೋಸಂಪತ್ತನ್ನು ವಶಪಡಿಸಿಕೊಳ್ಳಲೆಂದು ಮುತ್ತಿಗೆಯನ್ನು ಹಾಕಿತು; ಈಗ ದುರ್ಯೋಧನನಿಗೆ ಬೇಕಾಗಿರುವುದು ಗೋವುಗಳಲ್ಲ. ಗೋವುಗಳ ನೆಪದಲ್ಲಿ ವಿರಾಟರಾಯನ ಮೇಲೆ ಕಾಳೆಗವನ್ನು ಹೂಡಿ, ವಿರಾಟನಗರಿಯಲ್ಲಿ ಪಾಂಡವರು ಏನಾದರೂ ಮಾರುವೇಷದಲ್ಲಿ ಅಡಗಿಕೊಂಡು ಅಜ್ಞಾತವಾಸದ ಒಂದು ವರುಶವನ್ನು ಕಳೆಯುತ್ತಿದ್ದಾರೆಯೇ ಎಂಬುದನ್ನು ಕಂಡು ಹಿಡಿಯಬೇಕೆಂದು ದುರ್ಯೋಧನನು ಸೇನೆಯೊಡನೆ ಬಂದಿದ್ದಾನೆ. ಏಕೆಂದರೆ

ಹನ್ನೆರಡು ವರುಶ ವನವಾಸದ ನಂತರ ಒಂದು ವರುಶ ಯಾರಿಗೂ ತಿಳಿಯದಂತೆ ಅಜ್ಞಾತವಾಸದಲ್ಲಿರಬೇಕು. ಒಂದು ವೇಳೆ ವರುಶ ಮುಗಿಯುವುದರ ಒಳಗೆ ಗುಟ್ಟು ರಟ್ಟಾದರೆ, ಮತ್ತೆ ಹನ್ನೆರಡು ವರುಶ ವನವಾಸ ಮತ್ತು ಒಂದು ವರುಶ ಅಜ್ಞಾತವಾಸವನ್ನು ಸೋತವರು ಅನುಭವಿಸಬೇಕು ಎಂಬುದು ದುರ್ಯೋಧನ ಮತ್ತು ಧರ್ಮರಾಯನ ನಡುವೆ ನಡೆದಿದ್ದ ಜೂಜಾಟದ ನಿಯಮವಾಗಿತ್ತು;

ಮೇಲ್+ಆಳು; ಮೇಲು=ಉತ್ತಮ; ಮೇಲಾಳು=ವೀರರು/ಪರಾಕ್ರಮಿಗಳು; ಕವಿ=ಎರಗು/ಆಕ್ರಮಣ;

**ಭೀಷ್ಮ ಕರ್ಣ ದ್ರೋಣ ಮೊದಲಾಗಿ ಮೇಲಾಳು ಕವಿದುದು**=ಭೀಷ್ಮ, ಕರ್ಣ, ದ್ರೋಣ ಮೊದಲಾದ ವೀರರು ದನಗಳ ಗುಂಪಿನ ಮೇಲೆ ಆಕ್ರಮಣ ಮಾಡಿದರು; ಕೋಲು=ಬಾಣ; ಸೂಟಿ=ವೇಗ/ರಭಸ; ಸರಿವಳೆ=ಎಡೆಬಿಡದೆ ಒಂದೇ ಸಮನೆ ಹುಯ್ಯುತ್ತಿರುವ ಮಳೆ; ಗೋಪಾಲ=ದನಗಳನ್ನು ಮೇಯಿಸುವವನು ಮತ್ತು ಕಾಪಾಡುವವನು/ಗೊಲ್ಲ; ಪಡೆ=ಗುಂಪು; ಮುಗ್ಗು=ಮಣಿ/ಕುಗ್ಗು/ಕುಸಿ;

**ಕೋಲ ಸೂಟಿಯ ಸರಿವಳೆಗೆ ಗೋಪಾಲ ಪಡೆ ಮುಗ್ಗಿದುದು**=ಒಂದೇ ಸಮನೆ ತಮ್ಮ ಮೇಲೆ ಪ್ರಯೋಗಗೊಳ್ಳುತ್ತಿರುವ ಬಾಣಗಳ ಸುರಿಮಳೆಗೆ ವಿರಾಟರಾಯನ ಗೋಪಾಲಕರ ಪಡೆಯು ತತ್ತರಿಸಿಹೋಯಿತು; ಗೋವರು=ಗೋಪಾಲಕರು; ಸಾಲು=ಗುಂಪು; ಹೊಯ್=ಹೊಡೆ/ಕತ್ತರಿಸು;

**ಕರ್ಣ ದುಶ್ಶಾಸನ ಜಯದ್ರಥರು ಗೋವರ ಸಾಲ ಹೊಯ್ದರು**=ಕರ್ಣ, ದುಶ್ಶಾಸನ, ಜಯದ್ರಥರು ಗೋಪಾಲಕರ ಪಡೆಯನ್ನು ಹತಾರಗಳಿಂದ ಹೊಡೆದರು; ಚೂಣಿ=ಮುಂದಿನ ಸಾಲು/ಕಾಳೆಗದ ಕಣದಲ್ಲಿ ಸೇನೆಯ ಮುಂದಿರುವ ಪಡೆ; ಚಾತುರಂಗ=ಕಾಳಗದಲ್ಲಿ ಹೋರಾಡುವ ನಾಲ್ಕು ಬಗೆಯ ಯೋಧರ ಪಡೆ. ಆನೆಯ ಮೇಲೆ, ಕುದುರೆಯ ಮೇಲೆ ಹಾಗೂ ತೇರಿನಲ್ಲಿ ಕುಳಿತು ಯುದ್ಧಮಾಡುವ ಪಡೆ ಮತ್ತು ನೆಲದಲ್ಲಿ ಮುನ್ನಡೆಯುತ್ತ ಹೋರಾಡುವ ಕಾಲ್ದಳ; ಸಮರ+ಉಪಾಯದಲಿ; ಸಮರ=ಯುದ್ಧ/ಕಾಳೆಗ; ಉಪಾಯ=ಯುಕ್ತಿ/ಯೋಜನೆ; ಮೇಳವಿಸು=ಒಟ್ಟುಗೂಡು;

**ರಾಯ ಚೂಣಿಯ ಚಾತುರಂಗದ ನಾಯಕರು ಸಮರೋಪಾಯದಲಿ ಮೇಳವಿಸಿ ಕವಿದರು**=ದುರ್ಯೋಧನನ ಸೇನೆಯ ಮುಂಚೂಣಿಯಲ್ಲಿದ್ದ ಚತುರಂಗ ಬಲದ ನಾಯಕರು ದೊಡ್ಡ ಯುದ್ಧದಲ್ಲಿ ಹೋರಾಡುವಂತೆಯೆ ಜತೆಗೂಡಿ ವ್ಯೂಹವನ್ನು ರಚಿಸಿಕೊಂಡು ಗೋವುಗಳ ಮೇಲೆ ಲಗ್ಗೆಹಾಕಿದರು;

ಗರುವ=ಬಲಶಾಲಿ/ಶೂರ; ಹುಯ್ಯಲು=ಕದನ; ಹರಿಹರಿದು=ಮುನ್ನುಗ್ಗಿ;

ಕೆಡೆದರು=ಕೆಳಕ್ಕೆ ಉರುಳಿದರು;

**ಗರುವ ಗೋವರು ಹುಯ್ಯಲಿಗೆ ಹರಿಹರಿದು ಕೆಡೆದರು**=ಪರಾಕ್ರಮಿಗಳಾದ ಗೋಪಾಲಕರು ರಣರಂಗಕ್ಕೆ ಮುನ್ನುಗ್ಗಿ ಹೋರಾಡಿ ಕೆಳಕ್ಕೆ ಉರುಳಿದರು; ಅಮರ=ದೇವತೆ; ಅಮರರ ರಾಜಧಾನಿ=ದೇವೇಂದ್ರನ ಅಮರಾವತಿ ಪಟ್ಟಣ; ಧೂಳಿಗೋಟೆ=ಮುರಿದುಬಿದ್ದ ಕೋಟೆ/ನಾಶಗೊಂಡ ಕೋಟೆ; ಧೂಳಿಗೋಟೆಯ ಗೊಂಡರು=ಹಾಳಾದರು/ಸಾವನ್ನಪ್ಪಿದರು; **ಅಮರರ ರಾಜಧಾನಿಗಳ ಧೂಳಿಗೋಟೆಯಗೊಂಡರು** =ಇದೊಂದು ರೂಪಕದ ನುಡಿಗಟ್ಟು. ಕಾಳೆಗದಲ್ಲಿ ಹೋರಾಡಿದ ಗೋಪಾಲಕರಲ್ಲಿ ಕೆಲವರು ಸತ್ತು ದೇವಲೋಕವನ್ನು ಸೇರಿದರು ; ಕಾಳೆಗದಲ್ಲಿ ಹೋರಾಡುತ್ತ ಮಡಿದವರು ದೇವಲೋಕದಲ್ಲಿ ವೀರಸ್ವರ್ಗವನ್ನು ಪಡೆಯುತ್ತಾರೆ ಎಂಬುದು ಜನಮನದಲ್ಲಿರುವ ಒಂದು ನಂಬಿಕೆ;

ಅಲಸು=ದಣಿ/ಆಯಾಸಗೊಳ್ಳು; ಗೋವರು=ಗೋಪಾಲಕರು; ಕೋಡಕ್ಕೈ=ಕಾಳಗದಲ್ಲಿ ಬಳಸುವ ಒಂದು ಬಗೆಯ ಹತಾರದ ಹೆಸರು; ಕೋಡುಕ್ಕೈಯವರು=ಆಯುಧಗಳನ್ನು ಹಿಡಿದ ದುರ್ಯೋಧನನ ಸೇನಾಪಡೆಯವರು; ಕಯ್+ಕಾಯ್; ಕೈಗಾಯ್=ಕಾಪಾಡು; ಎಸು=ಬಾಣ ಪ್ರಯೋಗ ಮಾಡು; ಸೆರೆ=ಬಂದನ/ಕಟ್ಟು;

**ಸಾಯಲು ಅಲಸದ ಗೋವರನು ಕೋಡಕ್ಕೈಯವರು ಕೈಗಾಯದೆ, ಹಿಂದಿಕ್ಕಿ ಎಸುತವೆ ಸೆರೆಯಕೊಂಡರು**=ಸಾಯಲು ಅಂಜದೆ ಮುನ್ನುಗ್ಗಿ ಬಂದ ಗೋಪಾಲಕರನ್ನು ದುರ್ಯೋಧನನ ಸೇನೆಯವರು ಕಾಪಾಡದೆ ಆಯುಧಗಳನ್ನು ಪ್ರಯೋಗಿಸಿ ಅವರನ್ನು ಹಿಮ್ಮೆಟ್ಟಿಸುತ್ತ ಗೋಪಡೆಯನ್ನು ವಶಪಡಿಸಿಕೊಂಡರು; ತುರುಹರ=ದನಗಳನ್ನು ಅಪಹರಿಸುವುದು; ಮೇಲುದಳ=ಸೇನಾಬಲದಲ್ಲಿ ದೊಡ್ಡದಾಗಿರುವ ಪಡೆ; ಒಡೆಮುರಿ=ಹೋಳಾಗಿ ಸೀಳು/ಚೂರಾಗುವುಂತೆ ಮುರಿ; ಸಾಲ್+ಅರಿದು; ಸಾಲು=ಗುಂಪು/ಸಮೂಹ/ಹಿಂಡು; ಅರಿ=ಕತ್ತರಿಸು/ ಕಡಿದುಹಾಕು; ಸಾಲರಿದು=ಗುಂಪು ಚದುರಿಹೋಗಿ; ಕೆಟ್ಟು+ಓಡಿದರು;

**ತುರುಹರ ಕಾಳಗದೊಳು ಮೇಲುದಳಕೆ ಇದಿರಾಗಿ ಗೋವರು ಒಡೆಮುರಿದು ಸಾಲರಿದು ಕೆಟ್ಟೋಡಿದರು**=ಗೋವುಗಳ ಅಪಹರಣಕ್ಕಾಗಿ ನಡೆದ ಕಾಳಗದಲ್ಲಿ ದುರ್ಯೋಧನನ ಸೇನೆಗೆ ಎದುರಾಗಿ ಹೋರಾಡಿದ ಗೋಪಾಲಕರ ಗುಂಪು ಚದುರಿಹೋಗಿ ಸಾವುನೋವಿಗೆ ಗುರಿಯಾಗಿ, ಗೋವುಗಳನ್ನು ಬಿಟ್ಟು ಓಡಿದರು ;

ಹರಿಬ=ಪಾಲನೆ/ಹೊಣೆಗಾರಿಕೆ; ಹರಿಬಕಾರರು=ದನಗಳನ್ನು ಕಾಪಾಡುವ ಹೊಣೆಯನ್ನು ಹೊತ್ತವರು; ಮಾಯ=ಕಾಣದಾಗುವಿಕೆ/ಮರೆಯಾಗುವಿಕೆ;

**ರಣದೊಳಗೆ ಹರಿಬಕಾರರ ಸೇನೆ ಮಾಯವಾಯಿತು**=ದನಗಳನ್ನು ಕಾಪಾಡುವ ಹೊಣೆಹೊತ್ತಿದ್ದ ಗೋಪಾಲಕರ ಪಡೆಯು ಯುದ್ಧರಂಗದಲ್ಲಿ ಕಾಣದಂತಾಯಿತು. ಗೋಪಾಲಕರೆಲ್ಲರೂ ಅಲ್ಲಿಂದ ಪಲಾಯನಮಾಡಿದರು; ಮೋಹರ=ಸೇನೆ/ದಂಡು; **ರಾಯ ಮೋಹರ ತೆರಳಿ ತುರುಗಳ ಹಿಡಿದು ಹಿಂದಿಕ್ಕಿದರು**=ದುರ್ಯೋಧನನ ಸೇನೆಯು ಮುನ್ನುಗ್ಗಿ ಗೋವುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು;

**ಮೂಗಿನ ಮೇಲೆ ಸುಣ್ಣವನ್ನು ಬರೆಯುವುದು**=ಎದುರಾಳಿಯನ್ನು ಸದೆಬಡಿದು ಕೊಲ್ಲದೆ, ಅವನಿಗೆ ಅಪಮಾನಮಾಡಲೆಂದು ಮೂಗಿನ ಮೇಲೆ ಸುಣ್ಣವನ್ನು ಬಳಿಯುವ ಒಂದು ಪದ್ಧತಿಯು ಆಚರಣೆಯಲ್ಲಿತ್ತು. ಎದುರಾಳಿಯ ತಲೆಗೂದಲನ್ನು ತೆಗೆಸುವ / ಮೀಸೆಯನ್ನು ಬೋಳಿಸುವ /ಹಣೆಗೆ ನಾಮಗಳನ್ನು ಬಳಿಯುವ ಆಚರಣೆಗಳೆಲ್ಲವೂ ಅಪಮಾನದ ಸಂಕೇತಗಳಾಗಿದ್ದವು;

ಹಗೆ=ಶತ್ರು; ಹಗೆಯ ಪಟ್ಟಣ=ವಿರಾಟನಗರ; **ಗೋಪಾಲನೊಬ್ಬನ ಹಿಡಿದು ಮೂಗಿನ ಮೇಲೆ ಸುಣ್ಣವ ಬರೆದು ಹಗೆಯ ಪಟ್ಟಣಕೆ ಬಿಟ್ಟರು**=ಸೆರೆ ಹಿಡಿದ ಒಬ್ಬ ಗೋಪಾಲಕನ ಮೂಗಿನ ಮೇಲೆ ಸುಣ್ಣವನ್ನು ಬರೆದು ಹಗೆಯಾಗಿದ್ದ ವಿರಾಟರಾಯನ ಬಳಿಗೆ ಹೋಗೆಂದು ದುರ್ಯೋಧನನ ಸೇನಾಪಡೆಯವರು ಕಳುಹಿಸಿದರು;

ಬಿರುದರು=ಹೆಸರಾಂತ ಶೂರರು/ಮಹಾಪರಾಕ್ರಮಿಗಳು;

**ಕಾಳಗಕೆ ಬಿರುದರನು ಬರಹೇಳು ಹೋಗು ಎನೆ**=ನಮ್ಮೊಡನೆ ಹೋರಾಡಲು ವಿರಾಟರಾಜನ ಚತುರಂಗಬಲದ ಹೆಸರಾಂತ ಶೂರರು ಯುದ್ಧರಂಗಕ್ಕೆ ಬರಬೇಕು ಎಂಬ ಸುದ್ದಿಯನ್ನು ನಿಮ್ಮ ರಾಜನಿಗೆ ತಿಳಿಸು ಎನ್ನಲು;

ಕರ=ಕಯ್/ಹಸ್ತಿ; ಶಿರ=ತಲೆ; ತಡವು=ಮುಟ್ಟಿಮುಟ್ಟಿ ಸವರಿಕೊಳ್ಳುವುದು; ಹರಿತಂದ=ಓಡೋಡಿ ಬಂದ;

**ಕರದ ಬಿಲ್ಲನು ಬಿಸುಟು ಬದುಕಿದ ಶಿರವ ತಡವುತ ಗೋವನೊಬ್ಬನು ಪುರಕೆ ಹರಿತಂದ**=ಒಬ್ಬ ಗೋಪಾಲಕನು ತನ್ನ ಕಯ್ಯಲ್ಲಿದ್ದ ಬಿಲ್ಲನ್ನು ಎಸೆದು, ತಾನು ಸಾಯದೆ ಉಳಿದುಕೊಂಡಿದ್ದೇನೆ ಎಂಬುದನ್ನು ಖಚಿತಪಡಿಸಿಕೊಳ್ಳುವಂತೆ ತನ್ನ ತಲೆಯನ್ನು ಮತ್ತೆಮತ್ತೆ ಮುಟ್ಟಿಮುಟ್ಟಿ ಸವರಿಕೊಳ್ಳುತ್ತ ವಿರಾಟನಗರದತ್ತ ಓಡೋಡಿ ಬಂದ;



## ನೋಟ–೨

ಎಲವೋ=ವ್ಯಕ್ತಿಯನ್ನು ಉದ್ದೇಶಿಸಿ ಮಾತನಾಡುವಾಗ ಬಳಸುವ ಪದ; ರಣ=ಯುದ್ಧರಂಗ/ಕಾಳೆಗ; ವಾರ್ತೆ=ಸುದ್ದಿ/ಸಮಾಚಾರ; ಅದು+ಏನದು; ಗಜಬಜಿಸು=ಕೋಲಾಹಲ/ಗದ್ದಲ;

**ಎಲವೋ ರಣದ ವಾರ್ತೆಯು ಅದೇನದು ಎನುತ ಜನವೆಲ್ಲ ಗಜಬಜಿಸೆ**= ದುರ್ಯೋಧನನ ಸೇನೆಯಿಂದ ಮೂಗಿನ ಮೇಲೆ ಸುಣ್ಣವನ್ನು ಬಳಿಸಿಕೊಂಡು ಅಪಮಾನಿತನಾಗಿ ವಿರಾಟನಗರದೊಳಕ್ಕೆ ಬರುತ್ತಿರುವ ಗೋಪಾಲಕನನ್ನು ಜನರು ಸುತ್ತುವರಿದು… "ಎಲವೋ ರಣರಂಗದ ಸುದ್ದಿಯೇನು…" ಎಂದು ಆತಂಕದ ದನಿಯಲ್ಲಿ ಕೇಳತೊಡಗಿದಾಗ ದೊಡ್ಡ ಗದ್ದಲವೇ ಉಂಟಾಯಿತು;

ರಣವು ಕಿರಿದಲ್ಲ=ಯುದ್ಧರಂಗದಲ್ಲಿ ನಡೆದ ಹೋರಾಟ ಚಿಕ್ಕದಲ್ಲ; ಗಣನೆಯಿಲ್ಲ+ಅದು; ಗಣನೆ=ಎಣಿಕೆ/ಲೆಕ್ಕ; ಗಣನೆಯಿಲ್ಲದು=ಎಣಿಕೆ ಮಾಡಲಾರದಷ್ಟು ದೊಡ್ಡ ಸಂಕೆಯಲ್ಲಿ ಶತ್ರುವಿನ ಸೇನೆಯಿದೆ; ಮೇಲಂಕಣ= ತೀವ್ರವಾದ ಹೋರಾಟದಿಂದ ನಡೆದ ಯುದ್ಧ; ಭಾರಣೆ=ಹೆಚ್ಚಳ/ಅತಿಶಯ; ನೂಕು=ತಳ್ಳುವಿಕೆ; ಐತರು=ಸಮೀಪಿಸು/ಬರು;

**ಮತ್ತೆ ಮೇಲಂಕಣದ ಭಾರಣೆ ನೂಕಿತು ಎನುತ ಐತಂದು**= ದೊಡ್ಡ ಸೇನೆ ಮಾತ್ರವಲ್ಲ ದೊಡ್ಡದಾಗಿ ನಡೆದ ಯುದ್ಧದಿಂದಾಗಿ ಗೋಪಾಲಕರ ಪಡೆಯು ಹಿಮ್ಮೆಟ್ಟಿತು… ಎಂದು ಜನರಿಗೆ ಹೇಳುತ್ತ ಅರಮನೆಯತ್ತ ಬಂದು; ಮೇಳ= ಸಂಗೀತ/ನಾಟ್ಯ/ವಾದ್ಯ ಮೊದಲಾದ ಕಲಾವಿದರ ಗುಂಪು; ಗಣಿಕೆ=ಕಲಾವಿದೆ; ಮೆರೆ=ಎದ್ದುತೋರು/ಬೀಗು/ಉತ್ಸಾಹಗೊಳ್ಳು; **ಮೇಳದ ಗಣಿಕೆಯರ ಮಧ್ಯದಲಿ ಮೆರೆದಿರೆ ಉತ್ತರನ ಕಂಡನು**=ಕಲಾವಿದೆಯರ ಗುಂಪಿನ ನಡುವೆ ಉತ್ಸಾಹ ಆನಂದ ಸಡಗರದಿಂದ ಬೀಗುತ್ತಿರುವ ಉತ್ತರಕುಮಾರನನ್ನು ಗೋಪಾಲಕನು ನೋಡಿದನು;

ಬೆಗಡು=ಬೆರಗು/ದೊಡ್ಡದನ್ನು ಇಲ್ಲವೇ ವಿಚಿತ್ರವಾದುದನ್ನು ಕಂಡಾಗ ಮನದಲ್ಲಿ ಉಂಟಾಗುವ ತಲ್ಲಣ; ಮುಸುಕು=ಆವರಿಸು/ಕವಿ; ಭೀತಿ=ಹೆದರಿಕೆ/ಅಂಜಿಕೆ; **ಬೆಗಡು ಮುಸುಕಿದ ಭೀತಿಯ ಮುಖದ**=ಆತಂಕ, ತಲ್ಲಣ ಮತ್ತು ಹೆದರಿಕೆಯ ಭಾವಗಳು ಕವಿದಿರುವ ಮೊಗ; ಢಗೆ=ತಳಮಳ/ಕಳವಳ; ಹೊಯ್ಲು=ಹೊಡೆತ/ಪೆಟ್ಟು;

**ಢಗೆಯ ಹೊಯ್ಲಿನ ಹೃದಯ**=ಕಳವಳದಿಂದ ಬಡಿದುಕೊಳ್ಳುತ್ತಿರುವ ಹೃದಯ; ತೊದಲು=ಮಾತನಾಡುವಾಗ ಸರಿಯಾಗಿ ಪದಗಳನ್ನು ಉಚ್ಚರಿಸ ಲಾಗದೆ ತಡವರಿಸುವುದು; **ತುದಿ ನಾಲಗೆಯ ತೊದಳಿನ**=ಹೇಳಬೇಕೆಂದಿರುವ ಸಂಗತಿ ಯನ್ನು ಸರಿಯಾಗಿ ಹೇಳಲಾಗದೆ ತಡವರಿಸುತ್ತಿರುವ; ಬೆರಗು=ಆತಂಕ ಮತ್ತು ಹೆದರಿಕೆಯ ತೀವ್ರತೆಯಿಂದ ದೇಹವು ಸೆಟೆದುಕೊಳ್ಳುವುದು; ಬರತ=ಕಡಲಿನ ಅಲೆಗಳ ಉಬ್ಬರವಿಳಿತ. **ಬೆರಗಿನ ಬರತ**=ಈ ನುಡಿಗಟ್ಟು ಒಂದು ರೂಪಕವಾಗಿ ಬಂದಿದೆ. ಆತಂಕ, ತಲ್ಲಣ, ಹೆದರಿಕೆಯಿಂದ ಕಂಪಿಸುತ್ತಿರುವ; ತಾಳಿಗೆ=ಅಂಗುಳು; ಅಗಿ=ಕುಗ್ಗು; ತಾಳಿಗೆ ಅಗಿ=ಅಂಜಿಕೆಯಿಂದ ಗಂಟಲು ಒಣಗಿಹೋಗಿರುವುದು; ಹುಯ್ಯಲು=ದೂರು/ಅಹವಾಲು/ಮನವಿ; ಹುಯ್ಯಲುಗಾರ= ಮೊರೆಯಿಡು ವವನು/ಮನವಿಯನ್ನು ಸಲ್ಲಿಸುವವನು; ಬಹಳ+ಓಲಗ; ಬಹಳ=ವಿಸ್ತಾರವಾದ/ದೊಡ್ಡದಾದ; ಓಲಗ=ದರ್ಬಾರು; ಬಹಳೋಲಗ=ಯುವರಾಜನಾದ ಉತ್ತರ ಕುಮಾರನು ಭಾಗವಹಿಸಿದ್ದ ಗೋಷ್ಠಿ; **ತಾಳಿಗೆಯ ಅಗಿವ ಹುಯ್ಯಲುಗಾರ ಬಹಳೋಲಗಕೆ ಬಂದನು**=ಅಂಜಿಕೆಯಿಂದ ಗಂಟಲು ಬತ್ತಿಹೋಗಿರುವ ಗೋಪಾಲಕನು ಯುದ್ಧರಂಗದ ವಾರ್ತೆಯನ್ನು ಹೇಳಿ, ಗೋವುಗಳನ್ನು ಕಾಪಾಡುವಂತೆ ಮೊರೆಯಿಡಲೆಂದು ಯುವರಾಜನಿದ್ದ ಓಲಗಕ್ಕೆ ಬಂದನು; ಎರಗು=ನಮಸ್ಕರಿಸು;

**ನೃಪ ವಿರಾಟನ ಮಗನ ಕಾಲಿಂಗೆ ಎರಗಿದನು**=ರಾಜ ವಿರಾಟರಾಯನ ಮಗ ಉತ್ತರಕುಮಾರನ ಕಾಲುಗಳಿಗೆ ನಮಿಸಿದನು; ಕಳಕಳ=ಸಂಕಟ/ಚಿಂತೆ/ಗದ್ದಲ; ದೂರು=ಸುದ್ದಿಮುಟ್ಟಿಸು/ಹೇಳು; **ಕಳಕಳವ ದೂರಿದನು**=ದುರ್ಯೋಧನನ ಸೇನೆಯಿಂದಾದ ಹಾನಿಯೆಲ್ಲವನ್ನು ಹೇಳಿದನು;

ಏಳು=ದಂಡೆತ್ತಿಹೋಗು/ಸಿದ್ಧನಾಗು/ಎಚ್ಚರಗೊಳ್ಳು; ಮನ್ನೆಯ=ನಾಯಕ/ಮನ್ನಣೆಗೆ ಯೋಗ್ಯನಾದವನು; ಗಂಡ=ಶೂರ/ವೀರ/ಪರಾಕ್ರಮಿ; **ಏಳು ಮನ್ನೆಯ ಗಂಡನಾಗು**=ಯುವರಾಜನೇ ಯುದ್ಧಕ್ಕೆ ಸಿದ್ಧನಾಗಿ ನಿನ್ನ ಪರಾಕ್ರಮವನ್ನು ತೋರಿಸು; ನೃಪಾಲ=ರಾಜ; ತುರು=ದನ/ಗೋವು; ಕೋಳ್=ವಶಪಡಿಸುವುದು/ಕಯ್ ಸೆರೆ/ಬಂದನ; ಕೋಳ್ಗೊಳ್=ಅಪಹರಿಸು; **ನೃಪಾಲ ಕೌರವ ರಾಯ**

**ತುರುಗಳ ಕೋಳಹಿಡಿದನು**=ರಾಜನಾದ ದುರ್ಯೋಧನನು ನಮ್ಮ ದನಗಳನ್ನು ವಶಪಡಿಸಿಕೊಂಡನು; ಧರಣಿ+ಅಗಲದಲಿ; ಧರಣಿ=ಭೂಮಿ; **ಧರಣಿಯಗಲ**= ಇದೊಂದು ನುಡಿಗಟ್ಟು. ಭೂಮಿಯ ಅಗಲಕ್ಕೂ ಎಂದರೆ ಎಲ್ಲೆಡೆಯಲ್ಲಿಯೂ; **ಧರಣಿಯಗಲದಲಿ ಸೇನೆ ಬಂದುದು**=ಭೂಮಿಯ ಉದ್ದಗಲಕ್ಕೂ ಸೇನೆ ಬಂದಿತು. ಬಲುದೊಡ್ಡ ಸೇನೆಯು ಬಂದಿದೆ; ದಾಳಿ=ಲಗ್ಗೆ/ಮುತ್ತಿಗೆ/ಆಕ್ರಮಣ; **ದಾಳಿ ಬರುತಿದೆ**=ವಿರಾಟರಾಜನ ಗೋಸಂಪತ್ತನ್ನು ಅಪಹರಿಸಲೆಂದು ಸೇನೆಯು ಲಗ್ಗೆ ಹಾಕುತ್ತಿದೆ; ಆಳು=ಸೈನಿಕ;

**ನಿನ್ನಾಳು ಕುದುರೆಯ ಕರೆಸಿಕೋ**=ನಿನ್ನ ಸೈನಿಕರನ್ನು ಮತ್ತು ಕುದುರೆಯ ಪಡೆಯವರನ್ನು ಕರೆಸಿಕೊಂಡು ರಣರಂಗಕ್ಕೆ ಅಣಿಯಾಗು; ರಾಣಿವಾಸ= ಅರಮನೆಯಲ್ಲಿ ರಾಜನ ಮನೆತನದ ಹೆಂಗಸರು ಮತ್ತು ಇನ್ನಿತರ ದಾಸಿಯರು ವಾಸ ಮಾಡುವ ಕೊಟಡಿ; ಗೂಳೆಯ=ಗುಂಪು; **ಗೂಳೆಯವ ತೆಗೆಸು**= ಗಂಟುಮೂಟೆ ಕಟ್ಟಿಕೊಂಡು ಹೊರಡುವುದು; ಬಿನ್ನಹ=ಮನವಿ/ಬೇಡಿಕೆ; ಬಿರುಬು=ಬಿರುಸು/ಉಗ್ರತೆ; ಬಿರುಬು ನುಡಿ=ಒರಟು ಮಾತು/ಚುಚ್ಚು ಮಾತು/ ಕಟಕಿ; **ರಾಣಿವಾಸದ ಗೂಳೆಯವ ತೆಗೆಸು ಎಂದು ಬಿನ್ನಹದ ಬಿರುಬ ನುಡಿದನು**= ರಾಣಿವಾಸದ ಹೆಂಗಸರ ಗುಂಪಿನ ನಡುವೆ ಮೆರೆಯುತ್ತಿರುವ ನೀನು ಈ ಕೂಡಲೇ ಇವರೆಲ್ಲರನ್ನೂ ಕಳುಹಿಸಿ, ರಣರಂಗಕ್ಕೆ ತೆರಳಲು ಸಿದ್ಧನಾಗು ಎಂದು ಒರಟಾದ ಹಾಗೂ ವ್ಯಂಗ್ಯದ ದನಿಯಲ್ಲಿ ಹೇಳಿದನು;

**ಏನೆಲವೊ... ತುದಿ ಮೂಗಿನಲಿ ಬಿಳುಪೇನು**=ಏನೆಲವೊ... ನಿನ್ನ ಮೂಗಿನ ತುದಿಯಲ್ಲಿ ಬಿಳಿಯ ಗೆರೆಗಳು ಕಾಣುತ್ತಿವೆಯಲ್ಲ...ಇದೇನಿದು; ಢಗೆ=ಕಳವಳ/ ತಳಮಳ; ಹೊಯ್ದು+ಏಕೆ; ಹೊಯ್=ದಡಬಡಿಸು/ಬಡಿದುಕೊಳ್ಳು;

**ಇದೇನು... ಢಗೆ ಹೊಯ್ದೇಕೆ ಬಂದೆ**=ನಿನ್ನ ವಿಕಾರವಾದ ರೂಪಕ್ಕೆ ಕಾರಣವೇನು... ಏಕೆ ತಳಮಳದಿಂದ ದಡಬಡಿಸುತ್ತ ನನ್ನ ಬಳಿಗೆ ಬಂದೆ; ರಣ=ಯುದ್ಧ/ಕಾಳೆಗ; ಅಯ್ಯ=ತಂದೆ; ಗೆಲಿದುದು+ಏನಾಯ್ತು; **ನಿನ್ನಿನ ರಣವನು ಅಯ್ಯನು ಗೆಲಿದುದೇನಾಯ್ತು**=ನಿನ್ನೆಯ ದಿನ ವಿರಾಟನಗರದ ದಕ್ಷಿಣ ದಿಕ್ಕಿನಲ್ಲಿದ್ದ ಗೋಸಂಪತ್ತನ್ನು ಅಪಹರಿಸಲು ಬಂದಿದ್ದ ದುರ್ಯೋಧನನ ಸೇನೆಯನ್ನು ನಮ್ಮ ತಂದೆಯಾದ ವಿರಾಟರಾಯನು ಸದೆಬಡಿದು ಗೆದ್ದು ಬಂದಿದ್ದನಲ್ಲವೇ... ಈಗ ಏನಾಯಿತು;

ಪಾಂಡವರ ಅಜ್ಞಾತವಾಸದ ಗುಟ್ಟನ್ನು ರಟ್ಟುಮಾಡಬೇಕೆಂಬ ಉದ್ದೇಶದಿಂದ ದುರ್ಯೋಧನನು ಮೊದಲು ವಿರಾಟನಗರದ ದಕ್ಷಿಣ ದಿಕ್ಕಿನಲ್ಲಿದ್ದ ಗೋವುಗಳನ್ನು ಅಪಹರಿಸಲು ಸುಶರ್ಮನೆಂಬ ತನ್ನ ಕಡೆಯ ರಾಜನ ಪಡೆಯನ್ನು

ಕಳುಹಿಸುತ್ತಾನೆ. ಗೋವುಗಳ ಸೆರೆಯ ಸುದ್ದಿಯನ್ನು ಕೇಳಿದ ವಿರಾಟರಾಜನು ಕಾಳೆಗದ ಕಣಕ್ಕೆ ಹೊರಟಾಗ ರಾಣಿವಾಸದಲ್ಲಿ ಬೃಹನ್ನಳೆಯಾಗಿದ್ದ ಅರ್ಜುನನನ್ನು ಹೊರತುಪಡಿಸಿ, ಇನ್ನುಳಿದ ನಾಲ್ಕು ಮಂದಿ ಪಾಂಡವರು ವಿರಾಟರಾಯನ ಜತೆಯಲ್ಲಿ ರಣರಂಗಕ್ಕೆ ಹೋಗುತ್ತಾರೆ.

ಯುದ್ಧದಲ್ಲಿ ಸುಶರ್ಮನು ವಿರಾಟರಾಯನನ್ನು ಸೆರೆಹಿಡಿದು ಎಳೆದೊಯ್ಯುತ್ತಿರುವಾಗ, ಧರ್ಮರಾಯನ ಸೂಚನೆಯಂತೆ ಭೀಮನು ಮುನ್ನುಗ್ಗಿ ದುರ್ಯೋಧನನ ಪರವಾಗಿ ಬಂದಿದ್ದ ಸೇನೆಯನ್ನು ಸದೆಬಡಿದು, ಸುಶರ್ಮನ ಸೆರೆಯಲ್ಲಿದ್ದ ವಿರಾಟರಾಯನನ್ನು ಬಿಡಿಸಿಕೊಂಡು, ವಿರಾಟರಾಯನ ಸೇನೆಗೆ ಗೆಲುವನ್ನು ತಂದುಕೊಡುತ್ತಾನೆ. ಭೀಮನ ಸೆರೆಗೆ ಸಿಲುಕಿದ್ದ ಸುಶರ್ಮ ರಾಜನು ಧರ್ಮರಾಯನ ಕರುಣೆಯಿಂದ ಬಿಡುಗಡೆಯನ್ನು ಪಡೆದು ಹಿಂತಿರುಗುತ್ತಾನೆ;

ಈ ರೀತಿ ಭೀಮನ ಸಾಹಸದಿಂದಾಗಿ ನಿನ್ನೆ ನಡೆದ ರಣರಂಗದಲ್ಲಿ ವಿರಾಟರಾಯನಿಗೆ ಗೆಲುವು ದೊರಕಿತ್ತು; ಮಾರನೆಯ ದಿನ ದುರ್ಯೋಧನನು ಭೀಷ್ಮ, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ ಮೊದಲಾದ ವೀರರ ಜತೆಗೂಡಿ ಚತುರಂಗ ಬಲದೊಡನೆ ವಿರಾಟನಗರದ ಉತ್ತರದ ಭಾಗದಲ್ಲಿದ್ದ ಗೋವುಗಳನ್ನು ಅಪಹರಿಸಲೆಂದು ಬಂದಿದ್ದಾನೆ;

ಕಲಹ=ಕಾಳೆಗ/ಯುದ್ಧ; ನಿಧಾನ=ನೆಲೆ; ವಾರ್ತೆ=ಸುದ್ದಿ/ಸಮಾಚಾರ; **ಇನ್ನು ಏನು ಭಯ ಬೇಡ. ಅದೇನು ಕಲಹ ನಿಧಾನ ವಾರ್ತೆ**=ಇನ್ನೇನು ಹೆದರಿಕೆ ಬೇಡ. ರಣರಂಗದಲ್ಲಿ ಏನಾಯಿತು ಎಂಬುದನ್ನು ಹೇಳು;

ಜೀಯ=ಒಡೆಯ/ಸ್ವಾಮಿ; ಬಿನ್ನಹ=ಮನವಿ/ಅರಿಕೆ; **ಜೀಯ ಬಿನ್ನಹ**= ಒಡೆಯನೇ... ರಣರಂಗದ ಸುದ್ದಿಯನ್ನು ನಿನ್ನಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ; **ಕುರುಸೇನೆ ಬಂದುದು**=ದುರ್ಯೋಧನನ ಸೇನೆಯು ನಮ್ಮ ಗೋಪಡೆಯನ್ನು ವಶಪಡಿಸಿಕೊಳ್ಳಲೆಂದು ಬಂದಿತು; ಐತರು=ಆಗಮಿಸು/ಬರು; **ರಾಯ ತಾನು ಐತಂದನು**=ರಾಜನಾದ ದುರ್ಯೋಧನನು ಸೇನೆಯೊಡನೆ ಬಂದನು; ನಾಯಕ=ದಳಪತಿ; ಗುರುಸುತ=ದ್ರೋಣಾಚಾರ್ಯರ ಮಗನಾದ ಅಶ್ವತ್ಥಾಮ; ಗುರು=ದ್ರೋಣಾಚಾರ್ಯ; ಗಾಂಗೇಯ=ಭೀಷ್ಮ; ಜಯದ್ರಥ+ಆದಿಗಳು; ಆದಿಗಳು=ಮೊದಲಾದವರು;

**ಆತನ ನಾಯಕರು ಗುರುಸುತನು, ಗುರು, ಗಾಂಗೇಯ, ಶಕುನಿ, ವಿಕರ್ಣ, ಕರ್ಣ ಜಯದ್ರಥಾದಿಗಳು**=ದುರ್ಯೋಧನನ ದಳಪತಿಗಳಾದ ಅಶ್ವತ್ಥಾಮ, ದ್ರೋಣಾಚಾರ್ಯ, ಗಾಂಗೇಯ, ಶಕುನಿ, ವಿಕರ್ಣ, ಕರ್ಣ, ಜಯದ್ರಥ ಮೊದಲಾದವರು; ಬಡಗ=ಉತ್ತರ; **ಬಡಗ ದಿಕ್ಕಿನಲಿ ತುರುವ ಹಿಡಿದರು**=

ವಿರಾಟನಗರದ ಉತ್ತರ ದಿಕ್ಕಿನ ವಲಯದಲ್ಲಿದ್ದ ದನಗಳನ್ನು ಸೆರೆಹಿಡಿದರು; ತಾಯಿಮಳಲು=ತಳದಲ್ಲಿರುವ ಮರಳು/ಅಡಿಮಳಲು; ಅಂಬುಧಿ=ಕಡಲು/ಸಮುದ್ರ; ತೆರಳಿಕೆ=ಹರಡುವಿಕೆ/ವ್ಯಾಪಿಸುವಿಕೆ; **ತಾಯಿಮಳಲ ಅಂಬುಧಿಗೆ ದಳದ ತೆರಳಿಕೆ**=ಸಮುದ್ರದ ದಂಡೆಯಲ್ಲಿರುವ ಮರಳರಾಶಿಯಂತೆ ಅಗಣಿತ ಪ್ರಮಾಣದಲ್ಲಿ ಶತ್ರುವಿನ ಸೇನೆಯು ಹರಡಿಕೊಂಡಿದೆ; ಮೋಹರ=ಸೇನೆ/ದಂಡು; ಆಯತ=ಹೆಚ್ಚಳ; ನಾನು+ಎತ್ತ; ಎತ್ತ=ಯಾವ ರೀತಿ; ಹೊಕ್ಕು=ಒಳನುಗ್ಗಿ; ಹೊಗಳು=ಬಣ್ಣಿಸು/ವಿವರವಾಗಿ ಹೇಳು;

**ಮೋಹರದ ಆಯತವ ಹೊಕ್ಕು ಹೊಗಳುವರೆ ನಾನೆತ್ತ ಬಲ್ಲೆನು**=ಸೇನೆಯು ಎಷ್ಟು ದೊಡ್ಡದಾಗಿದೆ ಎಂಬುದನ್ನು ಒಳಹೊಕ್ಕು ನೋಡಿ ವಿವರಿಸಿ ಹೇಳಲು ನಾನು ಹೇಗೆ ತಾನೆ ಶಕ್ತನು; ಎತ್ತ=ಯಾವ ಕಡೆ; ಆಲಿ=ಕಣ್ಣು;

ದುವ್ವಾಳಿಸು=ಪ್ರಸರಿಸು/ಹಬ್ಬಿಸು/ಹರಡು; **ಎತ್ತ ಆಲಿಗಳ ದುವ್ವಾಳಿಸುವಡೆ**=ಯಾವ ಕಡೆ ಕಣ್ಣಾಡಿಸಿದರೂ/ಎತ್ತ ತಿರುಗಿ ನೋಡಿದರೂ; ಥಟ್ಟು=ಪಡೆ; **ಅತ್ತಲು ಆನೆಯ ಥಟ್ಟು**=ಆ ಕಡೆ ಆನೆಯ ಪಡೆ; ಕಾಲಾಳ್+ಒತ್ತರದ; **ಕಾಲಾಳು**=ನೆಲದ ಮೇಲೆ ನಿಂತು ಯುದ್ಧ ಮಾಡುವ ಸೈನಿಕರು; ಒತ್ತರ=ವೇಗ; ರಣ=ಯುದ್ಧ; ವಾಜಿ=ಕುದುರೆ; **ಒತ್ತರದ ರಣವಾಜಿ**=ವೇಗವಾಗಿ ಮುನ್ನುಗ್ಗುತ್ತಿರುವ ಕುದುರೆಗಳ ಪಡೆ; ರೂಢಿ=ಕೀರ್ತಿ/ಒಳ್ಳೆಯ ಹೆಸರನ್ನು ಪಡೆದಿರುವುದು; ರಾಯ=ರಾಜ; ರಾವುತ=ಕುದುರೆ ಸವಾರ; **ರೂಢಿಯ ರಾಯ ರಾವುತರು**=ಹೆಸರಾಂತ ವೀರರಾದ ಕುದುರೆ ಸವಾರರು; **ಸುತ್ತ ಬಳಸಿಹುದು**=ವಿರಾಟರಾಯನ ದನಗಳನ್ನು ಮತ್ತು ಗೋಪಾಲಕರನ್ನು ಅತ್ತಿತ್ತ ಹೋಗದಂತೆ ಸುತ್ತುಗಟ್ಟಿದೆ; ಮೋಹರ=ಸೇನೆ; **ಎತ್ತ ಮನ ಹರಿವತ್ತ ಮೋಹರವಲ್ಲದೆ ಅನ್ಯವ ಮತ್ತೆ ಕಾಣೆನು**=ಯಾವ ಕಡೆ ಮನಸ್ಸು ಹರಿದರೂ ಅತ್ತ ಕಡೆಯಲ್ಲೆಲ್ಲಾ ಶತ್ರುವಾದ ದುರ್ಯೋಧನನ ಸೇನೆಯಲ್ಲದೆ ಮತ್ತಾವುದು ಕಣ್ಣಿಗೆ ಬೀಳುತ್ತಿಲ್ಲ; ವೈರಿ=ಹಗೆ/ಶತ್ರು; ವಾಹಿನಿ=ಸೇನೆ/ದಳ; ಹದನ=ಇರುವಿಕೆ; ಜೀಯ, **ಇದು ವೈರಿ ವಾಹಿನಿಯ ಹದನ**=ಒಡೆಯ, ಹಗೆಯ ಸೇನಾಬಲದ ಇರುವಿಕೆಯು ಇಷ್ಟು ದೊಡ್ಡಪ್ರಮಾಣದಲ್ಲಿದೆ;

ಪಡಿ=ಸಮಾನವಾದುದು/ಪ್ರತಿಯಾದುದು/ಬದಲು; ಪಡಿನೆಲ=ಇನ್ನೊಂದು ಭೂಮಿ; ಒಡ್ಡು=ವ್ಯೂಹ ರಚನೆ ಮಾಡು/ಮುಂದಿಡು; **ಪಡಿನೆಲನನು ಒಡ್ಡಿದರೊ**=ಈ ಭೂಮಿಯ ಉದ್ದಗಲದಲ್ಲಿ ಮತ್ತೊಂದು ಭೂಮಿಯನ್ನೇ ಮುಂದಿಟ್ಟರೋ; ಅಂದರೆ ನೆಲವೇ ಕಾಣದಂತೆ ಸೇನೆಯು ಎಲ್ಲಾ ಕಡೆ ಆವರಿಸಿಕೊಂಡಿದೆ; ಮೇಣ್=ಇಲ್ಲವೇ; ಅವನಿ=ಭೂಮಿ; ದಡ್ಡಿ=ಹೊದಿಕೆ; **ಅವನಿಯ ದಡ್ಡಿಯೋ ಎನಲು**=ಭೂಮಂಡಲದ ಮೇಲೆ ಹೊದಿಸಿರುವ ಹೊದಿಕೆಯೋ ಎನ್ನುವಂತೆ;

ಚಮರ=ಚಮರವೆಂಬ ಪ್ರಾಣಿಯ ಉದ್ದನೆಯ ಕೂದಲುಗಳಿಂದ ಮಾಡಿರುವ ಬೀಸಣಿಗೆ; ಸೀಗುರಿ=ಒಂದು ಬಗೆಯ ಕೊಡೆ–ದೇವರ ಉತ್ಸವ ಮತ್ತು ರಾಜರ ಮೆರವಣಿಗೆಯಲ್ಲಿ ಹಿಡಿದುಕೊಂಡು ಹೋಗುವ ದೊಡ್ಡ ಕೊಡೆ; ಪತಾಕೆ=ಬಾವುಟ; ಝಲ್ಲರಿ+ಒಡ್ಡು; ಝಲ್ಲರಿ=ಉತ್ಸವಗಳಲ್ಲಿ ಎತ್ತಿಹಿಡಿಯುವ ಮೀನು ಮೊಸಳೆ ಮುಂತಾದ ಪ್ರಾಣಿಗಳ ಚಿತ್ರಗಳಿಂದ ಕೂಡಿರುವ ತೋರಣ; ಒಡ್ಡು=ಗುಂಪು; ತಳಿತು=ಅರಳು/ವಿಕಸಿಸು;

**ಚಮರ ಸೀಗುರಿಗಳ ಪತಾಕೆಯಲಿ ಝಲ್ಲರಿಯೊಡ್ಡು ತಳಿತುದು**=ದೊಡ್ಡ ಆಕಾರದಲ್ಲಿರುವ ಬೀಸಣಿಗೆಗಳು, ಕೊಡೆಗಳು, ಬಾವುಟಗಳು ಮತ್ತು ಜಲ್ಲರಿ ಗಳೆಲ್ಲವೂ ಸೇನೆಯ ಉದ್ದಗಲದಲ್ಲಿ ಹರಡಿಕೊಂಡಿದ್ದವು; ಅಡ್ಡಹಾಯ್ದು=ನಡುವೆ ಸುಳಿದು ಬರುವುದು; ಇನ=ಸೂರ್ಯ; ಕಿರಣ=ಕಾಂತಿ; ಇನಕಿರಣ=ಸೂರ್ಯನ ಬೆಳಕಿನ ಕಿರಣ; ಪವನ=ಗಾಳಿ/ವಾಯು; ಖಡ್ಡತನ=ದಿಟ್ಟತನ; **ಅಡ್ಡ ಹಾಯ್ದು ಇನಕಿರಣ ಪವನನ ಖಡ್ಡತನ ನಗೆಯಾಯ್ತು**=ಈ ನುಡಿಗಳು ಅತಿಶಯೋಕ್ತಿಯಾಗಿ ಬಳಕೆಗೊಂಡಿವೆ. ಸೇನೆಯಲ್ಲಿ ಹಿಡಿದಿದ್ದ ದೊಡ್ಡ ದೊಡ್ಡ ಚಾಮರ, ಕೊಡೆ, ಬಾವುಟ, ಜಲ್ಲರಿಗಳ ನಡುವೆ ಸೂರ್ಯಕಿರಣವಾಗಲಿ ಇಲ್ಲವೇ ಗಾಳಿಯಾಗಲಿ ಸುಳಿದಾಡುವುದಕ್ಕೂ ಎಡೆಯಿರಲಿಲ್ಲ ಎಂಬ ತಿರುಳಿನಲ್ಲಿ ಬಳಕೆಯಾಗಿವೆ; ಒಡ್ಡು=ಸೇನೆ/ಪಡೆ; ಅಭಿವರ್ಣಿಸು=ಸಮಗ್ರವಾಗಿ ವಿವರಿಸು; ಅರಿ=ತಿಳಿ;

**ಕೌರವನ ಒಡ್ಡನು ಅಭಿವರ್ಣಿಸುವಡೆ ಅರಿಯೆನು**=ದುರ್ಯೋಧನನ ಸೇನೆಯ ಪ್ರಮಾಣವನ್ನಾಗಲಿ ಇಲ್ಲವೇ ಸೇನಾಬಲವನ್ನಾಗಲಿ ಸಮಗ್ರವಾಗಿ ವಿವರಿಸಲು ನನಗೆ ತಿಳಿಯದಾಗಿದೆ; ದುರ್ಗ=ಕೋಟೆ; ಬಲಿಸು=ಭದ್ರಪಡಿಸು; **ಜೀಯ ಕೇಳು... ಒಳಗೆ ನೀ ಕಾದುವೊಡೆ ದುರ್ಗವ ಬಲಿಸು**=ಒಡೆಯನೇ ಕೇಳು... ಈಗ ನೀನು ರಣರಂಗಕ್ಕೆ ತೆರಳದೆ, ವಿರಾಟನಗರವನ್ನು ಹಗೆಯ ಆಕ್ರಮಣದಿಂದ ಕಾಪಾಡಬೇಕೆಂದಿದ್ದರೆ ಕೋಟೆಯ ಹೆಬ್ಬಾಗಿಲನ್ನು ಮುಚ್ಚಿಸಿ, ಕಾವಲು ಪಡೆಯನ್ನು ಬಲಗೊಳಿಸು; ಬವರ=ಕಾಳಗ/ಯುದ್ಧ; ಹಿಂದುಗಳೆ=ಹಿಂಜರಿ/ಅಂಜು; ನಿನಗೆ+ ಈಗಲು; **ಬವರಕೆ ಹಿಂದುಗಳೆಯದೆ ನಿಲುವ ಮನ ನಿನಗೀಗಲು ಉಂಟೇ ನಡೆಯ ಬೇಕು ಎನಲು**=ಯುದ್ಧ ಮಾಡಲು ಹಿಂಜರಿಯದೆ ಹಗೆಯನ್ನು ರಣರಂಗ ದಲ್ಲಿಯೇ ಎದುರಿಸಿ ಹೋರಾಡಬೇಕೆಂಬ ಮನಸ್ಸು ಈಗ ನಿನಗಿದ್ದರೆ, ರಣರಂಗದ ಕಡೆಗೆ ಮುನ್ನುಗ್ಗಬೇಕು ಎಂದು ಗೋಪಾಲಕನು ಹೇಳಲು; ಕೆಲಬಲ=ಅಕ್ಕಪಕ್ಕ;

**ಉತ್ತರ ಕೆಲಬಲನ ನೋಡಿದನು**=ಉತ್ತರಕುಮಾರನು ತಾನು ಮಹಾಶೂರ ನೆಂಬುದನ್ನು ತೋರಿಸಿಕೊಳ್ಳುವಂತೆ ಅಕ್ಕಪಕ್ಕದಲ್ಲಿದ್ದ ಹೆಂಗಸರ ಕಡೆಗೆ ನೋಟವನ್ನು ಬೀರಿದನು; ಅಲುಗು=ತಿರುಗಿಸು; **ಮೀಸೆಯನು ಅಲುಗಿದನು**=

ಪರಾಕ್ರಮದ ಸಂಕೇತವಾಗಿ ಮೀಸೆಯನ್ನು ಕಯ್ ಬೆರಳುಗಳಿಂದ ತಿರುಗಿಸಿದನು; ತನ್ನ+ಇದಿರ; ಇದಿರು=ಮುಂದೆ ಇರುವ; ಲಲನೆ=ಹೆಂಗಸು; ಬಿರುದು=ಪ್ರಶಸ್ತಿ/ಯಾವುದೇ ರಂಗದಲ್ಲಿ ದೊಡ್ಡ ಸಾಧನೆಯನ್ನು ಮಾಡಿದವರನ್ನು ಗುರುತಿಸಿ ನೀಡುವ ಮನ್ನಣೆ; ಕೆದರು=ಹರಡು;

**ತನ್ನಿದಿರ ಮೇಳದ ಲಲನೆಯರ ಮೊಗ ನೋಡುತ ಬಿರುದ ಕೆದರಿದನು**=ತನ್ನ ಮುಂದಿದ್ದ ಮೇಳದ ಹೆಂಗಸರ ಮೊಗವನ್ನು ನೋಡುತ್ತ ತನ್ನ ಪರಾಕ್ರಮದ ಕೀರ್ತಿಯನ್ನು ತಾನೇ ಹೇಳಿಕೊಳ್ಳತೊಡಗಿದ; ಕುನ್ನಿ=ನಾಯಿ ಮರಿ/ವ್ಯಕ್ತಿಯ ಬಗ್ಗೆ ತಿರಸ್ಕಾರ ಮತ್ತು ನಿಂದನೆಯನ್ನು ಸೂಚಿಸುವ ಬಯ್ಗುಳದ ಪದವಾಗಿ ಬಳಕೆಗೊಂಡಿದೆ;

**ಕುನ್ನಿಯನು ನೂಕು**=ಈ ನಾಯಿಮರಿಯನ್ನು ಹೊರಕ್ಕೆ ಹಾಕು. ಈ ರಣಹೇಡಿಯನ್ನು ಹೊರತಳ್ಳಿ; ತಾನ್+ಈಗ; ತಾನ್=ಈತನು; ಆಹವ=ಯುದ್ಧ/ಕಾಳೆಗ; ಭೀತ+ಆಕುಳನು; ಭೀತಿ=ಹೆದರಿಕೆ/ಅಂಜಿಕೆ; ಆಕುಳ=ತುಂಬಿದ/ಆವರಿಸಿದ; ಭೀತಾಕುಳ=ಹೆದರಿಕೆಯಿಂದ ಕೂಡಿದವನು; **ತಾನೀಗ ಆಹವದ ಭೀತಾಕುಳನು**=ಈಗ ಈತನು ಕಾಳೆಗದ ಹೆದರಿಕೆಯಿಂದ ನಡುಗುತ್ತಿದ್ದಾನೆ; ಲೌಲ್ಯತೆ=ಅತಿಯಾಸೆ/ಗೀಳು; ಒಟ್ಟೈಸು=ಮುತ್ತು/ಕವಿ; ಕಾಕು=ಸುಳ್ಳು/ಕೆಲಸಕ್ಕೆ ಬಾರದ ಮಾತು;

**ಇವನು ಹೆಂಡಿರ ಸಾಕಿ ಬದುಕುವ ಲೌಲ್ಯತೆಯಲಿ ಒಟ್ಟೈಸಿ ಬಂದು, ಎನಗೆ ಕಾಕ ಬಳಸುವನು**=ಇವನು ಜೀವವನ್ನು ಉಳಿಸಿಕೊಂಡು ತನ್ನ ಹೆಂಡಿರೊಡನೆ ಬಾಳಬೇಕೆಂಬ ದುರಾಸೆಯಿಂದ ಕೂಡಿದವನಾಗಿ ರಣರಂಗದಿಂದ ಓಡಿಬಂದು ನನ್ನ ಮುಂದೆ ಕೆಲಸಕ್ಕೆ ಬಾರದ ಮಾತುಗಳನ್ನಾಡುತ್ತಿದ್ದಾನೆ; ಉದ್ರೇಕಿಸು=ಕೆರಳು/ಆವೇಶಗೊಳ್ಳು; ಸಮರ=ಕಾಳೆಗ/ಯುದ್ದ; ಪಿನಾಕಧರ=ಶಿವ; ನೂಕು=ಶಕ್ಯವಾಗು/ಸಾಧ್ಯವಾಗು; **ತಾನು ಉದ್ರೇಕಿಸಿಯೆ ಸಮರದಲಿ ನಿಲಲು ಪಿನಾಕಧರನಿಗೆ ನೂಕದು ಎಂದನು ಸತಿಯರ ಇದಿರಿನಲಿ**=ನಾನು ಕೆರಳಿ ನಿಂತರೆ ರಣರಂಗದಲ್ಲಿ ನನ್ನನ್ನು ಎದುರಿಸಲು ಶಿವನಿಗೆ ಸಾಧ್ಯವಾಗದು ಎಂದು ರಾಣಿವಾಸದ ಹೆಂಗಸರ ಮುಂದೆ ಉತ್ತರಕುಮಾರನು ನುಡಿದನು;

ಎನಿತು=ಎಷ್ಟು; ಬಲ=ಸೇನೆ; ಘನ+ಆದೊಡೆ+ಏನು; ಘನ=ದೊಡ್ಡದು; ಆದೊಡೆ=ಆದರೆ/ಆಗಿದ್ದರೆ; **ಜೀಯ, ಎನಿತು ಬಲ ಘನವಾದೊಡೇನು**=ಒಡೆಯನೇ... ದುರ್ಯೋಧನನ ಸೇನೆಯು ಎಷ್ಟು ದೊಡ್ಡದಾಗಿದ್ದರೆ ತಾನೆ ಏನು; ಗಹನ=ಕಷ್ಟವಾದ/ಸುಲಭವಲ್ಲದ; **ಅದು ನಿನಗೆ ಗಹನವೆ**=ಅದನ್ನು ಸದೆಬಡೆದು ಗೆಲ್ಲುವುದು ಕಷ್ಟವೇನಲ್ಲ; ದಿನಪ=ಸೂರ್ಯ; ತಮ=ಕತ್ತಲೆ; ಗಾವಳಿ=ಗುಂಪು/

ರಾಶಿ; ದಿಟ್ಟತನ=ಕೆಚ್ಚು/ಶಕ್ತಿ; **ಜಗದಲಿ ದಿನಪನ ಇದಿರಲಿ ತಮದ ಗಾವಳಿಗೆ ದಿಟ್ಟತನವೇ**=ಜಗತ್ತಿನಲ್ಲಿ ಬೆಳಗುತ್ತಿರುವ ಒಬ್ಬ ಸೂರ್ಯನ ಮುಂದೆ ನಿಲ್ಲುವ ಶಕ್ತಿಯಾಗಲಿ ಇಲ್ಲವೇ ದಿಟ್ಟತನವಾಗಲಿ ಕತ್ತಲೆಯ ರಾಶಿಗೆ ಇರುವುದೆ; ಬಿನುಗು= ಹೀನ ವ್ಯಕ್ತಿ; ರಾಯ=ರಾಜ; ಬಿಂಕ=ಗರ್ವ/ಸೊಕ್ಕು/ಸಾಹಸ/ ಗೋವರ= ಗೋಪಾಲಕರ; ಮೊನೆ=ಪಡೆ/ದಳ; ಮೆರೆ=ಎದ್ದು ತೋರು/ಬೀಗು;

**ಬಿನುಗು ರಾಯರ ಬಿಂಕ ಗೋವರ ಮೊನೆಗೆ ಮೆರೆದೊಡೆ ಸಾಕು**= ಹೀನವ್ಯಕ್ತಿಗಳಾದ ದುರ್ಯೋಧನನ ಕಡೆಯ ರಾಜರ ಪರಾಕ್ರಮ ಗೋಪಾಲಕರ ಪಡೆಯ ಮುಂದೆ ನಡೆದಂತೆ ನಿನ್ನ ಮುಂದೆ ನಡೆಯಲಾರದು; ಜನಪ=ರಾಜ; **ಜನಪ ನಿಂದಿರು**=ಯುವರಾಜನೇ, ಹಗೆಗಳನ್ನು ಸದೆಬಡಿಯಲು ಸಿದ್ಧನಾಗು; ಥಟ್ಟು=ಸೇನೆ/ಪಡೆ; ಕೈಗುಣ=ವ್ಯಕ್ತಿಯು ಕಯ್ಗೊಂಡ ಕೆಲಸವನ್ನು ಚೆನ್ನಾಗಿ ಮಾಡುವ ಗುಣ/ವ್ಯಕ್ತಿಯ ಶಕ್ತಿ; **ಕೌರವನ ಥಟ್ಟಿನಲಿ ಕೈಗುಣವ ತೋರಿಸು ಎಂದಡೆ**= ದುರ್ಯೋಧನನ ಸೇನೆಯ ಮುಂದೆ ನಿನ್ನ ಪರಾಕ್ರಮ ಎಂತಹುದು ಎಂಬುದನ್ನು ತೋರಿಸು ಎಂದು ಗೋಪಾಲಕನು ಹೇಳಲು; ಉಬ್ಬರಿಸಿದನು=ಹಿಗ್ಗಿದನು; ಬಗೆ=ಕಲ್ಪನೆ/ಊಹೆ; **ತಾ ಕಲಿಯೆಂದು ಬಗೆದನು**=ತಾನೊಬ್ಬ ಮಹಾಪರಾಕ್ರಮಿ ಯೆಂದು ಮನದಲ್ಲಿಯೇ ಕಲ್ಪಿಸಿಕೊಂಡನು; **ಮೀಸೆಯನು ಬೆರಳಿಂದ ತಿರುಹುತ ಮುಗುಳುನಗೆ ಹರುಷದಲಿ ಮೈಮರೆದ**=ಮೀಸೆಯನ್ನು ಬೆರಳುಗಳಿಂದ ತಿರುಗಿಸುತ್ತ, ಮುಗುಳನಗೆಯನ್ನು ಬೀರುತ್ತ, ಆನಂದದಲ್ಲಿ ತನ್ನ ಶಕ್ತಿಯ ಇತಿಮಿತಿಗಳೇನೆಂಬುದನ್ನೇ ಮರೆತ;

ರೋಮಾಂಚ=ಮಯ್ ನವಿರೇಳುವುದು; ಸಂದಣಿಸು=ಒತ್ತಾಗಿಬಂದು/ ತುಂಬಿಬಂದು; ಇಂದು=ಚಂದ್ರ; ಇಂದುಮುಖಿ=ಚಂದಿರನ ಕಾಂತಿಯ ಮೊಗದವಳು/ಸುಂದರಿ; **ರೋಮಾಂಚ ಸಂದಣಿಸಿ ಕೆಲಬಲದ ಇಂದುಮುಖಿಯರ ನೋಡಿದನು**=ರೋಮಾಂಚನಗೊಂಡು ತನ್ನ ಅಕ್ಕಪಕ್ಕದಲ್ಲಿದ್ದ ಸುಂದರಿಯರತ್ತ ಕಣ್ಣೋಟವನ್ನು ಬೀರಿದನು; ಪೌರುಷತನ=ಶೂರತನ/ವೀರತನ/ಪರಾಕ್ರಮ; ಪರಿಣತೆ=ನಿಪುಣತೆ/ಕುಶಲತೆ; ನಲವು=ಹಿಗ್ಗು/ಆನಂದ; **ತನ್ನ ಪೌರುಷತನದ ಪರಿಣತೆಯ ನಲವಿಂದ ನುಡಿದನು**=ತನ್ನ ಶೂರತನದ ನಿಪುಣತೆಯನ್ನು ಹಿಗ್ಗಿನಿಂದ ಹೇಳಿಕೊಳ್ಳತೊಡಗಿದನು; ಅಹುದಹುದು ತಪ್ಪೇನು=ಗೋಪಾಲಕನು "ದುರ್ಯೋಧನನ ಸೇನೆ ಎಷ್ಟು ದೊಡ್ಡದಾಗಿದ್ದರೇನು. ನಿನಗದು ಲೆಕ್ಕವೇ" ಎಂದು ತನ್ನ ಪರಾಕ್ರಮವನ್ನು ಹಾಡಿಹೊಗಳಿದ್ದನ್ನು ಉತ್ತರಕುಮಾರನು ಮೆಚ್ಚಿಕೊಂಡು, ಅಹುದು ಅಹುದು ನೀನು ಹೇಳಿದ ಮಾತುಗಳಲ್ಲಿ ತಪ್ಪೇನಿಲ್ಲ. ನೀನು ಹೇಳಿದಂತೆ ನಾನು ಮಹಾವೀರನೇ ಆಗಿದ್ದೇನೆ;

ಕುಹಕ=ಮೋಸ/ವಂಚನೆ; ಮಹಿ=ಭೂಮಿ/ರಾಜ್ಯ; ಕೊಳ್=ಕಿತ್ತುಕೊಳ್ಳು/ವಶಪಡಿಸಿಕೊಳ್ಳು; ಕೆಣಕು=ರೇಗಿಸು/ಕೆರಳಿಸು;

**ಸುಯೋಧನನು ಜೂಜಿನ ಕುಹಕದಲಿ ಪಾಂಡವರ ಸೋಲಿಸಿ ಮಹಿಯ ಕೊಂಡಂತೆ ಎನ್ನ ಕೆಣಕಿದನೇ**=ದುರ್ಯೋಧನನು ಜೂಜಾಟದಲ್ಲಿ ಮೋಸದಿಂದ ಪಾಂಡವರನ್ನು ಸೋಲಿಸಿ, ಅವರ ರಾಜ್ಯವನ್ನು ಕಿತ್ತುಕೊಂಡಂತೆ, ಬಹು ಸುಲಭವಾಗಿ ಮತ್ಸ್ಯದೇಶವನ್ನು ವಶಪಡಿಸಿಕೊಳ್ಳಬಹುದೆಂದು ತಿಳಿದು ನಮ್ಮ ದೇಶದ ಮೇಲೆ ಆಕ್ರಮಣಮಾಡಿ ನನ್ನನ್ನು ಕೆಣಕಿದ್ದಾನೆ; ಸಹಸ=ಸಾಹಸ/ಕಸುವು; ಮರಳಿಚು=ಹಿಂತಿರುಗಿಸು; ತಹೆನು=ತರುತ್ತೇನೆ;

**ಸಹಸದಿಂದವೆ ತುರುವ ಮರಳಿಚಿ ತಹೆನು**=ನನ್ನ ಶಕ್ತಿ ಏನೆಂಬುದನ್ನು ತೋರಿಸಿಯೇ ದುರ್ಯೋಧನನ ಸೇನೆಯನ್ನು ಸದೆಬಡಿದು, ಅವನು ಅಪಹರಿಸಿ ಕೊಂಡಿರುವ ಗೋವುಗಳನ್ನು ಬಿಡಿಸಿಕೊಂಡು ತರುತ್ತೇನೆ; ನಿರ್ವಹಿಸು=ಬದುಕು/ಉಳಿ; ಈ=ಕೊಡು/ಅವಕಾಶವನ್ನು ನೀಡು; **ಬಳಿಕ ಆ ಕೌರವನ ನಿರ್ವಹಿಸಲು ಈವೆನೆ**=ಗೋವುಗಳನ್ನು ಸೆರೆಯಿಂದ ಬಿಡಿಸಿದ ನಂತರ ಆ ದುರ್ಯೋಧನನ್ನು ಬದುಕಲು ಬಿಡುತ್ತೇನೆಯೇ; ಸೂರೆ=ಕೊಳ್ಳೆ/ಲೂಟಿ;

**ಹಸ್ತಿನಾಪುರವ ಸೂರೆಗೊಂಬೆನು**=ಹಸ್ತಿನಾಪುರದ ಮೇಲೆ ದಂಡೆತ್ತಿಹೋಗಿ, ದುರ್ಯೋಧನನ ಹುಟ್ಟಡಗಿಸಿ, ಹಸ್ತಿನಾಪುರವನ್ನು ಕೊಳ್ಳೆಹೊಡೆಯುತ್ತೇನೆ; ಹಿಡಿ=ಹೊಂಚು/ತಂತ್ರ ರೂಪಿಸಿ; ಬಡಿ=ಹೊಡೆ; ಹೊರವಡು=ಬೇರೆ ಜಾಗಕ್ಕೆ ಹೋಗು; ಕೊಬ್ಬು=ಸೊಕ್ಕು/ಅಹಂಕಾರ; ಭುಜಬಲ=ತೋಳ್ಬಲ;

**ಹಿಡಿದು ರಾಜ್ಯವ ಕೊಂಡು, ಹೆಂಗುಸ ಬಡಿದು ಪಾಂಡವ ರಾಯರನು ಹೊರವಡಿಸಿ ಕೊಬ್ಬಿದ ಭುಜಬಲವನು ಎನ್ನೊಡನೆ ತೋರಿದನೆ**=ಜೂಜಾಟದ ತಂತ್ರವನ್ನು ಹೆಣೆದು ಪಾಂಡವರ ರಾಜ್ಯವನ್ನು ಕಿತ್ತುಕೊಂಡು, ದ್ರೌಪದಿಯನ್ನು ಒಡ್ಡೋಲಗದಲ್ಲಿ ಅಪಮಾನಪಡಿಸಿ, ಪಾಂಡವರನ್ನು ಹಸ್ತಿನಾವತಿಯಿಂದ ಹೊರದಬ್ಬಿ ಸೊಕ್ಕಿನಿಂದ ಮೆರೆಯುತ್ತಿರುವ ಆ ದುರ್ಯೋಧನನು ತನ್ನ ತೋಳ್ಬಲವನ್ನು ಈಗ ನನ್ನ ಮುಂದೆ ತೋರಿಸಲು ಬಂದಿದ್ದಾನೆಯೇ;

ಬಡ=ಅಲ್ಪ ಶಕ್ತಿಯ/ಸೊರಗಿದ. ಯುಧಿಷ್ಠಿರ=ಧರ್ಮರಾಯ; **ಬಡಯುಧಿಷ್ಠಿರನೆಂದು ಬಗೆದನೆ**=ಏನೇ ಅನ್ಯಾಯ ನಡೆದರೂ ಹೋರಾಡಲು ಮುನ್ನುಗ್ಗದ ಬಡಪಾಯಿ ಧರ್ಮರಾಯನೆಂದು ನನ್ನನ್ನು ಭಾವಿಸಿದನೆ; ಅರಿಯನಲಾ=ದುರ್ಯೋಧನನಿಗೆ ನನ್ನ ಶಕ್ತಿ ಪ್ರತಾಪ ಏನೆಂದು ತಿಳಿಯದು;

ಕಡುಗು=ಮಸಗು/ಕೆರಳು/ಮೇಲೆ ಬೀಳು; ತೊಡೆ=ಅಳಿಸು/ಗುಡಿಸು;

ಖತಿ=ಕೋಪ; **ಕಡುಗಿದೊಡೆ ಕೌರವನ ಕೀರ್ತಿಯ ತೊಡೆವೆನು ಎನುತ ಸುಕುಮಾರ ಖತಿಗೊಂಡ**=ನಾನು ಕೆರಳಿ ಹಗೆಯ ಸೇನೆಯ ಮೇಲೆ ಆಕ್ರಮಣಮಾಡಿದರೆ ದುರ್ಯೋಧನನ ಹೆಸರನ್ನೇ ಅಳಿಸುತ್ತೇನೆ ಎನ್ನುತ್ತ ಉತ್ತರಕುಮಾರನು ಕೋಪಗೊಂಡನು; ತನಗೆ=ಆ ದುರ್ಯೋಧನನಿಗೆ; ಬಡ=ದುರ್ಬಲ/ಶಕ್ತಿಹೀನ; ತೆವರು=ಓಡಿಸು/ನಿವಾರಿಸು; ಕೊಬ್ಬು=ಸೊಕ್ಕು; ಕಾಲ=ಯಮ; ಮನೆಯನ್+ಆಳ್ವಿಪುದು; ಆಳ್=ಒಳಸೇರು; **ತನಗೆ ಬಡ ಪಾಂಡವರ ತೆವರಿದ ಮನದ ಗರ್ವದ ಕೊಬ್ಬು ಕಾಲನ ಮನೆಯನಾಳ್ವಿಪುದು**=ಬಲಹೀನರಾಗಿದ್ದ ಪಾಂಡವರನ್ನು ಜೂಜಿನ ನೆಪದಲ್ಲಿ ವಂಚಿಸಿ ಹಸ್ತಿನಾವತಿಯಿಂದ ಓಡಿಸಿದ ದುರ್ಯೋಧನನ ಮನದ ಸೊಕ್ಕಿನ ಅಹಂಕಾರವನ್ನು ಅಡಗಿಸಿ ನಾನು ಅವನನ್ನು ಯಮನ ಮನೆಗೆ ಕಳುಹಿಸುತ್ತೇನೆ; **ಅಲ್ಲದಿದ್ದೊಡೆ**=ಅಲ್ಲದಿದ್ದರೆ ಅಂದರೆ ದುರ್ಯೋಧನನಿಗೆ ಸಾವು ಸಮೀಪಿಸಿದೆ. ಆದ್ದರಿಂದಲೇ ಅವನು ಈಗ ನನ್ನನ್ನು ಕೆಣಕಿದ್ದಾನೆ; ವೈರ=ಹಗೆತನ; ತನ್ನ ವೈರ=ನನ್ನನ್ನು ಹಗೆಮಾಡಿಕೊಂಡು; ಮೇದಿನಿ=ಭೂಮಂಡಲ/ರಾಜ್ಯ;

**ತನ್ನ ವೈರವನು ನೆನೆದು ದುರ್ಯೋಧನನು ತಾ ಮೇದಿನಿಯನು ಆಳ್ವನೆ**= ನನ್ನೊಡನೆ ಹಗೆತನವನ್ನು ಕಟ್ಟಿಕೊಂಡು ದುರ್ಯೋಧನನು ರಾಜ್ಯವನ್ನು ಆಳುವುದಕ್ಕೆ ಆಗುತ್ತದೆಯೇ; ಹಾ=ಅಚ್ಚರಿ ಇಲ್ಲವೇ ಆತಂಕವನ್ನು ಸೂಚಿಸುವಾಗ ಬಳಸುವ ದನಿ; ಮಹಾದೇವ=ಶಿವ; ಹಾ ಮಹಾದೇವ=ಓ ದೇವರೇ; **ಹಾ ಮಹಾದೇವ ಎನುತಲು ಹೆಂಗಳಿದಿರಿನಲಿ ಉತ್ತರ ಬಿರುದ ನುಡಿದನು**=ಹಾ... ಮಹದೇವ ದುರ್ಯೋಧನನು ನನ್ನನ್ನು ಕೆಣಕಿ ಎಂತಹ ಆಪತ್ತಿಗೆ ಒಳಗಾದ ಎಂದು ನುಡಿಯುತ್ತ ತನ್ನ ಸುತ್ತಲೂ ಇದ್ದ ಹೆಂಗಸರ ಮುಂದೆ ತನ್ನ ಪ್ರತಾಪವನ್ನು ಉತ್ತರಕುಮಾರನು ಕೊಚ್ಚಿಕೊಳ್ಳತೊಡಗಿದನು;

ಜವ=ಯಮ; ಮುರಿ=ತಿರುಗಿಸು/ಕೆಳಕ್ಕೆ ಬಾಗಿಸು; **ಜವನ ಮೀಸೆಯ ಮುರಿದನೋ**=ಸಾವಿನ ದೇವತೆಯಾದ ಯಮನ ಮೀಸೆಗೆ ಕಯ್ಯಿಕ್ಕಿ ತಿರುಗಿಸಿದನೊ; ಭೈರವ=ಉಗ್ರರೂಪದಲ್ಲಿರುವ ಶಿವ; ದಾಡೆ=ದವಡೆ/ಕೋರೆ ಹಲ್ಲು; ಅಲುಗು=ಅಲ್ಲಾಡಿಸು; **ಭೈರವನ ದಾಡೆಯನು ಅಲುಗಿದನೊ**=ಕೇಡಿಗಳನ್ನು ನಾಶಮಾಡಲೆಂದು ಉಗ್ರರೂಪವನ್ನು ತಳೆದು ಬಂದಿರುವ ಭೈರವನ ದಾಡೆಗೆ ಕಯ್ಯಿಕ್ಕಿ ಅಲ್ಲಾಡಿಸಿದನೊ; ಮೃತ್ಯು=ಸಾವಿನ ದೇವತೆಯಾದ ಮಾರಿ; ಮೇಲುದ=ಸೆರಗು/ಹೆಂಗಸರು ತಮ್ಮ ಎದೆಯ ಮೇಲೆ ಹಾಕಿಕೊಳ್ಳುವ ಸೀರೆಯ ಹೊದಿಕೆ; ಸೆಳೆ=ಎಳೆ/ಕೀಳು/ಜಗ್ಗು;

**ಮೃತ್ಯುವಿನ ಮೇಲುದ ಸೆಳೆದನೋ**=ಸಾವಿನ ದೇವತೆಯಾದ ಮಾರಿಯ

ಸೆರಗಿಗೆ ಕಯ್ಯಿಕ್ಕಿ ಎಳೆದನೊ; ಕೇಸರಿ=ಸಿಂಹ; **ಕೇಸರಿಯ ಕೆಣಕಿದನೋ**= ಸಿಂಹವನ್ನು ಕೆರಳಿಸಿದನೊ; ಯಮ, ಭೈರವ, ಮಾರಿ, ಸಿಂಹದ ರೂಪಕಗಳೆಲ್ಲವೂ ಸಾವಿನ ಸಂಕೇತವಾಗಿ ಬಂದಿವೆ; ಬವರ= ಕಾಳೆಗ/ಯುದ್ಧ; ತೊಡಗು=ಮೊದಲು ಮಾಡು; **ಬವರವನು ತೊಡಗಿದನಲಾ**=ನನ್ನೊಡನೆ ಕಾಳೆಗಕ್ಕೆ ಮೊದಲು ಮಾಡಿದನಲ್ಲಾ; ಅಕಟ=ಅಯ್ಯೋ; ಮರುಳು=ಹುಚ್ಚು/ತಿಳಿಗೇಡಿತನ; **ಅಕಟ, ಕೌರವನು ಮರುಳಾದನು ಎಂದು ಆ ಯುವತಿಯರ ಮೊಗ ನೋಡುತ ಉತ್ತರ ಬಿರುದ ಕೆದರಿದನು**= ಅಯ್ಯೋ... ದುರ್ಯೋಧನನು ನನ್ನನ್ನು ಕೆಣಕಿ ತನಗೆ ತಾನೆ ಸಾವನ್ನು ತಂದುಕೊಳ್ಳುವ ತಿಳಿಗೇಡಿಯಾದನು ಎಂದು ಅಲ್ಲಿದ್ದ ಯುವತಿಯರ ಮೊಗವನ್ನು ನೋಡುತ್ತ ಉತ್ತರಕುಮಾರನು ತನ್ನ ಪ್ರತಾಪವನ್ನು ತಾನೇ ಹೊಗಳಿಕೊಂಡನು; ಆರ್+ಒಡನೆ; ಆರ್=ಯಾರು; ಒಡನೆ=ಜತೆಯಲ್ಲಿ/ಸಂಗಡ; ಕಾದು=ಹೋರಾಡು/ಕದನಮಾಡು;

**ಆರೊಡನೆ ಕಾದುವೆನು**=ದುರ್ಯೋಧನನ ಸೇನೆಯನ್ನು ಸದೆಬಡಿಯಲೆಂದು ನಾನು ರಣರಂಗಕ್ಕೆ ದಂಡೆತ್ತಿಹೋದಾಗ ಅಲ್ಲಿ ಯಾರೊಡನೆ ಹೋರಾಡಲಿ; ಕೆಲಬರು=ಕೆಲವರು; ಹಾರುವ=ಬ್ರಾಹ್ಮಣ; **ಕೆಲಬರು ಹಾರುವರು**=ಕೆಲವರು ಬ್ರಾಹ್ಮಣರು. ಪಾಂಡವರ ಗುರುವಾದ ದ್ರೋಣಾಚಾರ್ಯ, ಕೃಪಾಚಾರ್ಯ, ದ್ರೋಣಾಚಾರ್ಯರ ಮಗ ಅಶ್ವತ್ಥಾಮ; ಅಂತಕ=ಯಮ; ನೆರೆ+ಊರವರು; ನೆರೆ=ಪಕ್ಕ/ಹತ್ತಿರ; ಊರವರು=ಊರಿನವರು; **ಕೆಲರು ಅಂತಕನ ನೆರೆಯೂರವರು**= ಕೆಲವರು ಯಮನ ಊರಿಗೆ ಬಹುಹತ್ತಿರದಲ್ಲಿ ಇರುವವರು. ಅಂದರೆ ಮುಪ್ಪು ಕವಿದು ದೇಹ ಸವೆದು ಇನ್ನೇನು ಸಾಯಲಿರುವವರು. ವಯಸ್ಸಾಗಿರುವ ಭೀಷ್ಮಾಚಾರ್ಯ/ದ್ರೋಣಾಚಾರ್ಯ/ಕೃಪಾಚಾರ್ಯರಂತಹ ವ್ಯಕ್ತಿಗಳು; ಅಧಮ=ಕೀಳು; ಕುಲ=ಜಾತಿ; ಸಂದು ಬಂದವರು=ಹುಟ್ಟಿದವರು; **ಕೆಲರು ಅಧಮ ಕುಲದಲಿ ಸಂದು ಬಂದವರು**=ಕೆಲವರು ಕೀಳು ಜಾತಿಯಲ್ಲಿ ಹುಟ್ಟಿ ಬಂದಿರುವವರು; ಸೂತಪುತ್ರನೆಂದು ಕರೆಯಲಾಗುತ್ತಿರುವ ಕರ್ಣ;

**ವೀರರು ಎಂಬವರು ಇವರು**=ದುರ್ಯೋಧನನ ಸೇನೆಯಲ್ಲಿರುವ ವೀರರು ಎಂದರೆ ಇಂತಹವರು. ಕಾಳೆಗದಲ್ಲಿ ಹೋರಾಡಲು ತೋಳ್ಬಲವಾಗಲಿ ಇಲ್ಲವೇ ಕೆಚ್ಚಾಗಲಿ ಇಲ್ಲದ ಹಾರುವರು, ಮುದುಕರು ಮತ್ತು ಹೀನಜಾತಿಯಲ್ಲಿ ಹುಟ್ಟಿ ಬಂದವರೇ ದುರ್ಯೋಧನನ ಸೇನೆಯ ಮಹಾವೀರರು; ಮೇಲೆ=ಇವರನ್ನು ಹೊರತುಪಡಿಸಿದರೆ; ನೆಣಗೊಬ್ಬು=ಅತಿಯಾದ ಸೊಕ್ಕು/ಹೆಮ್ಮೆ; **ಮೇಲೆ ಇನ್ನು ಆರ ಹೆಸರುಂಟು ಅವರೊಳು ಎಂದು ಕುಮಾರ ಹೆಂಗಳ ಇದಿರಿನಲಿ ನೆಣಗೊಬ್ಬಿನಲಿ ನುಡಿದನು**=ಇವರನ್ನು ಹೊರತುಪಡಿಸಿ ನೋಡಿದರೆ ಇನ್ನು ಯಾರು ತಾನೆ

ಹೆಸರಾಂತ ಕಲಿಗಳು ದುರ್ಯೋಧನನ ಸೇನೆಯಲ್ಲಿದ್ದಾರೆ ಎಂದು ಉತ್ತರಕುಮಾರನು ಅತಿಯಾದ ಸೊಕ್ಕಿನಿಂದ ರಾಣಿವಾಸದ ಹೆಂಗಸರ ಮುಂದೆ ತನ್ನ ಪರಾಕ್ರಮವನ್ನು ಬಣ್ಣಿಸಿಕೊಂಡನು;

ಪೊಡವಿ=ಭೂಮಿ; ಪತಿ=ಒಡೆಯ; ಪೊಡವಿಪತಿ=ರಾಜ; **ಪೊಡವಿಪತಿಗಳು ಬಂದು ತುರುಗಳ ಹಿಡಿವರೇ**=ರಾಜರಾದವರು ದಂಡೆತ್ತಿ ಬಂದು ದನಗಳನ್ನು ಹಿಡಿಯುತ್ತಾರೆಯೇ. ಅಂದರೆ ದುರ್ಯೋಧನನು ತಾನು ರಾಜನೆಂಬುದನ್ನು ಮರೆತು, ತನ್ನ ಅಂತಸ್ತಿಗೆ ತಕ್ಕುದಲ್ಲದ ರೀತಿಯಲ್ಲಿ ಗೋವುಗಳನ್ನು ಕದಿಯಲು ಬಂದಿದ್ದಾನೆ; ಅಧಮ=ನೀಚ; ಬಡಮನ=ಹೇಡಿ/ಸಣ್ಣಬುದ್ಧಿ; ಮನ್ನೆಯ= ಮಾಂಡಲಿಕ/ಚಿಕ್ಕ ಪ್ರಾಂತ್ಯಕ್ಕೆ ಒಡೆಯನಾದವನು; ಮೈಸಿರಿ=ಶಕ್ತಿ/ಕಸುವು;

**ಲೋಕದಲಿ ಅಧಮರ ಬಡಮನದ ಮನ್ನೆಯರ ಮೈಸಿರಿ ಕೌರವನೊಳು ಆಯ್ತು**= ಲೋಕದಲ್ಲಿ ಅತ್ಯಂತ ನೀಚರೂ ಹೇಡಿಗಳೂ ಆದ ಮಾಂಡಲಿಕರು ದನಗಳ್ಳರಾಗಿದ್ದಾರೆ. ಅವರಂತೆಯೇ ಈಗ ಗೋವುಗಳನ್ನು ಕದಿಯಲು ಬಂದಿದ್ದರಿಂದ ರಾಜನಾಗಿರುವ ದುರ್ಯೋಧನನ ವ್ಯಕ್ತಿತ್ವದಲ್ಲಿ ಕೀಳುತನ ಉಂಟಾಗಿದೆ; ದುರ್ಯಶ>ದುರಿಯಶ=ಕೆಟ್ಟ ಹೆಸರು/ಅಪಕೀರ್ತಿ; **ಕಡೆಗೆ ದುರಿಯಶವು ಉಳಿವುದು**=ಗೋವುಗಳ್ಳನೆಂಬ ಕೆಟ್ಟಹೆಸರು ದುರ್ಯೋಧನನಿಗೆ ಶಾಶ್ವತವಾಗಿ ಉಳಿದುಕೊಳ್ಳುತ್ತದೆ; **ಅಲ್ಲದೆ ಗೋಧನವನು ಬಿಡುವೆನೇ**= ದುರ್ಯೋಧನನು ಈಗ ಸೆರೆಹಿಡಿದಿರುವ ಗೋಸಂಪತ್ತನ್ನು ಅವನು ಕೊಂಡೊಯ್ಯಲೆಂದು ಬಿಟ್ಟುಬಿಡುವುದಿಲ್ಲ; ತೊಡಕು=ಸೆಣಸು/ಹೋರಾಡು; ಆವನು=ಯಾವನು; ಖಂಡೆಯ=ಕತ್ತಿ; ಜಡಿ=ಹೊರಸೆಳೆದು ಜಳಪಿಸುತ್ತ; **ಎನ್ನೊಳು ತೊಡಕಿ ಬದುಕುವನು ಆವನು ಎಂದು ಖಂಡೆಯವ ಜಡಿದು**=ನನ್ನ ಎದುರಾಗಿ ಹೋರಾಡಿ ಬದುಕಿ ಉಳಿವವನು ಯಾರಿದ್ದಾನೆ ಎಂದು ಅಬ್ಬರಿಸುತ್ತ ಒರೆಯಿಂದ ಕತ್ತಿಯನ್ನು ಹೊರಸೆಳೆದು ಜಳಪಿಸುತ್ತ;

ಖಳ=ನೀಚ/ಕೇಡಿ; ಮುರಿ=ತುಂಡುಮಾಡು; **ಖಳನ ಮುರಿವೆನು**= ಕೇಡಿಯಾದ ದುರ್ಯೋಧನನನ್ನು ತುಂಡರಿಸುತ್ತೇನೆ; ಠಾಣಾಂತರ=ಪಾಳೆಯ/ ಬೀಡು; **ಹಸ್ತಿನಾಪುರದೊಳಗೆ ಠಾಣಾಂತರವನು ಇಕ್ಕುವೆ**=ಹಸ್ತಿನಾಪುರವನ್ನು ವಶಪಡಿಸಿಕೊಂಡು ಅಲ್ಲಿ ನನ್ನ ಪಾಳೆಯವನ್ನು ಹೂಡುತ್ತೇನೆ; ಧೂಳಿಪಟ= ಹಾಳಾಗುವಿಕೆ/ನಾಶವಾಗುವಿಕೆ; ಧೂಳಿಪಟಮಾಡು=ಸಂಪೂರ್ಣವಾಗಿ ನಾಶ ಮಾಡುವುದು; ತೊಲಗು=ದೂಡು/ಹಿಮ್ಮೆಟ್ಟು; **ಕೌರವನ ಸೇನೆಯ ಧೂಳಿಪಟ ಮಾಡಿ ತೊಲಗಿಸುವೆ**=ದುರ್ಯೋಧನನ ಸೇನೆಯನ್ನು ಚಿದ್ರಚಿದ್ರಗೊಳಿಸಿ ಸಂಪೂರ್ಣವಾಗಿ ನಾಶಮಾಡಿ, ಅವನನ್ನು ಹಿಮ್ಮೆಟ್ಟಿಸುವೆ; ಗಳಹು=ಹರಟು/

ಸುಮ್ಮನೆ ಮಾತನಾಡು/ಸುಳ್ಳಾಡು; **ಗೆಲವ ತಹೆನು ಎಂದು ಕೋಮಲೆಯರ ಇದಿರಲಿ ಉತ್ತರನು ಬಾಯ್ಗೆ ಬಂದುದ ಗಳಹುತಿದ್ದನು**=ವಿರಾಟರಾಯನಿಗೆ ಗೆಲುವನ್ನು ತರುತ್ತೇನೆ ಎಂದು ಸುಂದರಿಯರ ಮುಂದೆ ಉತ್ತರಕುಮಾರನು ಬಾಯಿಗೆ ಬಂದಂತೆ ಹರಟುತ್ತಿದ್ದನು;

**ಬೇಕು ಬೇಡ ಎಂಬವರ ನಾ ಕಾಣೆ**=ಉತ್ತರಕುಮಾರನು ಆಡುತ್ತಿರುವ ಮಾತಿನಲ್ಲಿ ಇದು ಸರಿ–ಇದು ತಪ್ಪು; ಇದನ್ನು ಆಡಬೇಕು–ಇದನ್ನು ಆಡಬಾರದು ಎಂದು ಎಚ್ಚರಿಸುವ ಯಾವೊಬ್ಬ ವ್ಯಕ್ತಿಯನ್ನು ಆ ಹೆಂಗಸರ ಓಲಗದಲ್ಲಿ ನಾನು ಕಾಣಲಿಲ್ಲ.–ಈ ನುಡಿಗಳನ್ನು ಮಹಾಭಾರತದ ಕತೆಯನ್ನು ಜನಮೇಜಯ ರಾಜನಿಗೆ ಹೇಳುತ್ತಿರುವ ವೈಶಂಪಾಯನ ಮುನಿಯು ಉತ್ತರಕುಮಾರನ ಪೊಳ್ಳುಮಾತುಗಳ ಬಗ್ಗೆ ತನ್ನ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾನೆ;

**ಅರಿಯೆನೇ ಗಾಂಗೇಯನನ್ನು**=ಆ ಮುದುಕ ಗಾಂಗೇಯನನ್ನು ನಾನು ಕಾಣೆನೇ; **ತಾನು ಅರಿಯದವನೇ ದ್ರೋಣ**=ನನಗೆ ಗೊತ್ತಿಲ್ಲದವನೇ ಆ ದ್ರೋಣ; ಕುಲ=ಜಾತಿ; ಕೊರತೆ=ಕಡಿಮೆ; ಕುಲದಲಿ ಕೊರತೆ=ಜಾತಿಯಲ್ಲಿ ಕೀಳು; **ಕುಲದಲಿ ಕೊರತೆ ಎನಿಸುವ ಕರ್ಣನ್ ಎಂಬವನು ಎನಗೆ ಸಮಬಲನೆ**=ಕೀಳುಜಾತಿಯವನಾದ ಆ ಕರ್ಣನು ನನಗೆ ಸಮಾನವಾದ ಬಲವುಳ್ಳವನೆ; ಬರಿದು=ಪೊಳ್ಳು/ಏನೂ ಇಲ್ಲದಿರುವುದು; ಬಯಲ್+ಆಡಂಬರ; ಬಯಲು=ಶೂನ್ಯವಾದುದು; ಆಡಂಬರ=ತೋರಿಕೆ; ಬಯಲಾಡಂಬರ=ಇದೊಂದು ನುಡಿಗಟ್ಟು. ಬೂಟಾಟಿಕೆಯ/ಸೋಗಿನ ನಡೆನುಡಿ; ಬರಿ=ಕೇವಲ/ಮಾತ್ರ; ತನ್ನ=ಹಗೆಯಾದ ದುರ್ಯೋಧನನ; ಸೆರೆ=ಕಟ್ಟು/ಬಂಧನ; ತಾರದೆ=ತರದೆ; ಸೆರೆಯ ತಾರದೆ=ಬಂಧಿಸಿಕೊಂಡು ತರದೆ; ಮಾಣೆನು=ಬಿಡೆನು;

**ಬರಿಯ ಬಯಲಾಡಂಬರದಿ ಬರಿ ತುರುವ ಹಿಡಿದೊಡೆ ತನ್ನ ಹೆಂಡಿರ ಸೆರೆಯ ತಾರದೆ ಮಾಣೆನು ಎಂದನು ನಾರಿಯರ ಮುಂದೆ**=ದುರ್ಯೋಧನನು ಪೊಳ್ಳು ಪರಾಕ್ರಮವನ್ನು ತೋರಿಸಿ ಕೇವಲ ನಮ್ಮ ಗೋವುಗಳನ್ನು ಹಿಡಿದರೆ, ನಾನು ನನ್ನ ನಿಜವಾದ ಪರಾಕ್ರಮವನ್ನು ತೋರಿಸಿ ಅವನ ಹೆಂಡರನ್ನೇ ಸೆರೆಹಿಡಿದು ತರದೆ ಬಿಡೆನು; **ಇನ್ನು ನುಡಿದು ಫಲವೇನು**=ಇನ್ನು ಕೇವಲ ಮಾತನಾಡುತ್ತಿರುವುದರಿಂದ ಪ್ರಯೋಜನವೇನು; ಬವರ=ಕಾಳೆಗ/ಯುದ್ಧ; ಸಾರಥಿ=ತೇರನ್ನು ನಡೆಸುವ ವ್ಯಕ್ತಿ; ಮಡಿ=ಮರಣ ಹೊಂದು/ಸಾಯು; **ನಿನ್ನಿನ ಬವರದಲಿ ಸಾರಥಿ ಮಡಿದ**=ನಿನ್ನೆಯ ದಿನ ದುರ್ಯೋಧನನ ಸೇನೆಯು ಸುಶರ್ಮನ ಮುಂದಾಳುತನದಲ್ಲಿ ವಿರಾಟನಗರದ ಹೊರವಲಯದಲ್ಲಿ ದಕ್ಷಿಣ ದಿಕ್ಕಿನಲ್ಲಿದ್ದ ಗೋವುಗಳನ್ನು ಅಪಹರಿಸಿದಾಗ ನಡೆದ ಕಾಳೆಗದಲ್ಲಿ ನನ್ನ ಸಾರಥಿಯು ಸಾವನ್ನಪ್ಪಿದ; ಶಿವ=ಈಶ್ವರ;

ಶಿವ ಶಿವ=ಸಂಕಟ ಇಲ್ಲವೇ ಆಪತ್ತಿನ ಸಮಯದಲ್ಲಿ ವ್ಯಕ್ತಿಯು ಅಸಹಾಯಕನಾದಾಗ ದೇವರಲ್ಲಿ ಮೊರೆಯಿಡುತ್ತ ಹೇಳುವ ಪದಗಳು; ಉಡುಹನ್+ಆದೆನು; ಉಡುಹ=ಅಂಗಹೀನ/ಶಕ್ತಿಗುಂದಿದವನು; **ಶಿವ ಶಿವಾ ತಾನು ಉಡುಹನಾದೆನು**= ರಣರಂಗದಲ್ಲಿ ನನ್ನ ತೇರನ್ನು ಮುನ್ನಡೆಸುವ ಸಾರಥಿಯಿಲ್ಲದೆ ನನ್ನ ಕಯ್ ಮುರಿದಂತಾಗಿದೆ; ಇಂದು=ಈ ದಿನ; ಎನ್ನ=ನನ್ನ; ಕೈಮನ=ದೇಹ ಮತ್ತು ಮನಸ್ಸು; ತೋಳ್ಬಲ ಮತ್ತು ಪರಾಕ್ರಮ; ಗಡಣಿಸು=ಜತೆಗೂಡು; ಪಡೆದನ್+ಆದಡೆ; ಪಡೆ=ಹೊಂದು/ದೊರಕಿಸು; ಆದಡೆ=ಆದರೆ;

**ಇಂದು ಎನ್ನ ಕೈಮನಕೆ ಗಡಣಿಸುವ ಸಾರಥಿಯನು ಒಬ್ಬನ ಪಡೆದೆನಾದಡೆ**= ಈ ದಿನ ನನ್ನ ತೋಳ್ಬಲ ಮತ್ತು ಪರಾಕ್ರಮಕ್ಕೆ ಹೊಂದಿಕೊಳ್ಳುವಂತಹ ಒಬ್ಬ ಸಾರಥಿಯನ್ನು ನಾನು ಪಡೆಯುವಂತಾದರೆ; ಹಬ್ಬಮಾಡು=ಇದೊಂದು ನುಡಿಗಟ್ಟು. ತಕ್ಕ ದಂಡನೆಯನ್ನು ಮಾಡುವುದು; **ಕೌರವೇಂದ್ರನ ಪಡೆಗೆ ಹಬ್ಬವ ಮಾಡುವೆನು**=ದುರ್ಯೋಧನನ ಸೇನೆಗೆ ತಕ್ಕ ದಂಡನೆಯನ್ನು ಮಾಡುತ್ತೇನೆ; ಕೈಗುಣ=ವ್ಯಕ್ತಿಯು ಹೊಂದಿರುವ ಅಸಾಧಾರಣವಾದ ಕಸುವು; **ಕೈಗುಣವ ತೋರುವೆನು**=ನಾನು ಎಂತಹ ಬಲಶಾಲಿ ಮತ್ತು ವೀರನೆಂಬುದನ್ನು ರಣರಂಗದಲ್ಲಿ ಹಗೆಗಳಿಗೆ ತೋರಿಸುತ್ತೇನೆ; ಉಬ್ಬಸ=ಮೇಲುಸಿರುಬಿಡುವುದು; **ಮಾರಿಗೆ ಉಬ್ಬಸವಾಗುವುದು**=ಇದೊಂದು ನುಡಿಗಟ್ಟು. ಸಾವಿನ ದೇವತೆಯಾದ ಮಾರಿಯೇ ತನ್ನ ಮುಂದೆ ನಡೆಯುತ್ತಿರುವ ಸೈನಿಕರ ಸಾವಿನ ಸರಣಿಯನ್ನು ಕಂಡು ಅಚ್ಚರಿ ಮತ್ತು ಗಾಸಿಗೆ ಒಳಗಾಗುತ್ತಾಳೆ;

**ಸಾರಥಿಯ ಶಿವ ಕೊಟ್ಟನಾದಡೆ ಮಾರಿಗೆ ಉಬ್ಬಸವಾಗದೆ**=ಶಿವನು ಒಬ್ಬ ಸಾರಥಿಯನ್ನು ನನಗೆ ಅನುಗ್ರಹಿಸಿದರೆ, ಇಂದು ರಣರಂಗದಲ್ಲಿ ನನ್ನಿಂದ ಹತರಾಗುವ ಹಗೆಗಳ ಹೆಣಗಳನ್ನು ನೋಡಿ ಮಾರಿಯೇ ಏದುಸಿರನ್ನು ಬಿಡದೆ ಇರುತ್ತಾಳೆಯೇ; **ಅಂತಕನ ಊರು ತುಂಬದೆ**=ಯಮನ ಊರು ಸತ್ತ ವ್ಯಕ್ತಿಗಳ ಜೀವದಿಂದ ತುಂಬಿಹೋಗದೆ ಇರುವುದೆ;

ಪಿಶಾಚ=ದೆವ್ವ; ರಣಪಿಶಾಚ=ರಣರಂಗದಲ್ಲಿ ಸತ್ತುಬಿದ್ದಿರುವ ಹೆಣಗಳ ರಕ್ತವನ್ನು ಹೀರಿ, ಮಾಂಸವನ್ನು ತಿನ್ನುವ ಪಿಶಾಚಿಗಳು; ದೋರೆ+ಕರುಳು; ದೋರೆ=ಕಾಯಿ ಹಣ್ಣಾಗುವ ಮುನ್ನ ತಳೆಯುವ ಕೆಂಪನೆಯ ಬಣ್ಣ; ದೋರೆಗರುಳು=ದೋರೆಗಾಯಿಯಂತೆ ಕೆಂಪಗಿರುವ ಕರುಳು; ದೊಳ್ಳು=ಬೊಜ್ಜು; ನೂಕು=ಉಂಟಾಗು; **ರಣಪಿಶಾಚರಿಗೆ ದೋರೆಗರುಳಲಿ ದೊಳ್ಳು ನೂಕದೆ**= ಹೆಣಗಳ ಹೊಟ್ಟೆಯಿಂದ ರಕ್ತಸಿಕ್ತವಾದ ಕರುಳನ್ನು ಬಗೆಬಗೆದು ತೆಗೆದು ತಿನ್ನುವ ರಣಪಿಶಾಚಿಗಳಿಗೆ ಬೊಜ್ಜು ಉಂಟಾಗದಿಲ್ಲವೇ; ದಾನವಿ=ರಕ್ಕಸಿ; ಒಡಲು=ಹೊಟ್ಟೆ;

ಏರುಹತ್ತು=ಉಬ್ಬಿಕೊಳ್ಳುವುದು; **ದಾನವಿಯರ ಒಡಲು ಏರು ಹತ್ತದೆ**=ಹೆಣಗಳ ಮೂಳೆ ಮಾಂಸವನ್ನು ತಿಂದು ತಿಂದು ರಕ್ಕಸಿಯರ ಹೊಟ್ಟೆಯು ಉಬ್ಬರಿಸಿಕೊಳ್ಳು ವುದಿಲ್ಲವೇ; ಭೂರಿ=ಹೆಚ್ಚು; ಬೇತಾಳ=ಪಿಶಾಚಿ/ದೆವ್ವ; ಹಬ್ಬ=ರುಚಿಕರವಾದ ಊಟ ದೊರಕಿ ಆನಂದವುಂಟಾಗುವುದು;

**ಭೂರಿಬೇತಾಳರಿಗೆ ಹಬ್ಬವಾಗದೆ**=ರಣರಂಗದಲ್ಲಿ ಹೆಚ್ಚಿನ ಸಂಕೆಯಲ್ಲಿ ಸೇರಿರುವ ದೆವ್ವಗಳಿಗೆ ಹೆಣಗಳ ರಕ್ತಮಾಂಸದ ಊಟದಿಂದ ಆನಂದವುಂಟಾಗು ವುದಿಲ್ಲವೇ; ಬರಿದೆ=ಏನೂ ಇಲ್ಲದೆ; ಹೋಹುದೆ=ಹೋಗುವುದೆ; **ರಣ ಬರಿದೆ ಹೋಹುದೆ ಎಂದ**=ಕಾಳೆಗವು ಸುಮ್ಮನೆ ನಡೆಯುವುದೇ ಎಂದನು. ಅಂದರೆ ನನ್ನ ಪರಾಕ್ರಮದ ಹೊಡೆತ ಸಿಲುಕಿ ದುರ್ಯೋಧನನ ಸೇನೆಯಲ್ಲಿ ಅಪಾರ ಪ್ರಮಾಣದಲ್ಲಿ ಸಾವು ನೋವು ಉಂಟಾಗುತ್ತದೆ; ಕಲಿಪಾರ್ಥ=ಶೂರನಾದ ಅರ್ಜುನ; ಈತನ=ಉತ್ತರಕುಮಾರನ; ಬಾಲಭಾಷೆ=ಮಕ್ಕಳ ಮಾತು/ ತಿಳುವಳಿಕೆಯಿಲ್ಲದ ಮಾತು/ವಿವೇಚನೆಯಿಲ್ಲದ ನುಡಿ; **ಕಲಿಪಾರ್ಥನು ಈತನ ಬಾಲಭಾಷೆಗಳೆಲ್ಲವನು ಕೇಳಿದನು**=ರಾಣಿವಾಸದ ಮತ್ತೊಂದು ಕೊಟಡಿಯಲ್ಲಿದ್ದ ಬೃಹನ್ನಳೆಯ ಮಾರುವೇಶದಲ್ಲಿರುವ ಅರ್ಜುನನು ಉತ್ತರಕುಮಾರನ ಪೊಳ್ಳುಮಾತುಗಳನ್ನು ಕೇಳಿಸಿಕೊಂಡನು; ಪಾಂಚಾಲೆ=ಪಾಂಚಾಲ ರಾಜ್ಯದ ದ್ರುಪದನ ಮಗಳಾದ ದ್ರೌಪದಿ/ಸೈರಂಧ್ರಿ; ಎಕ್ಕಟಿ=ಏಕಾಂತ; **ಪಾಂಚಾಲೆಗೆ ಎಕ್ಕಟಿ ನುಡಿದ**=ಸೈರಂಧ್ರಿಯನ್ನು ಏಕಾಂತಕ್ಕೆ ಕರೆದು ಹೇಳಿದನು;

ಮತ=ಉದ್ದೇಶ/ಗುರಿ; **ನಾವು ಇನ್ನು ಇಹುದು ಮತವಲ್ಲ**=ನಾವು ಇನ್ನು ಮುಂದೆ ಅಜ್ಞಾತವಾಸದಲ್ಲಿರಬೇಕಾದ ಅಗತ್ಯವಿಲ್ಲ. ಇಂದಿನಿಂದ ನಮ್ಮ ಉದ್ದೇಶ ಕಳೆದುಹೋಗಿರುವ ರಾಜ್ಯವನ್ನು ಮತ್ತೆ ಪಡೆಯುವುದು; ಸವೆ=ಮುಗಿ/ತೀರು; **ಕಾಲ ಸವೆದುದು**=ಅಜ್ಞಾತವಾಸದ ಒಂದು ವರುಶದ ಅವಧಿಯು ಮುಗಿದಿದೆ; ನಿಲುಕು=ದೊರಕಿಸಿಕೊಳ್ಳು/ಪಡೆದುಕೊಳ್ಳು;

**ನಮ್ಮ ರಾಜ್ಯದ ಮೇಲೆ ನಿಲುಕಲು ಬೇಕು**=ನಮ್ಮ ಪಾಲಿನ ರಾಜ್ಯವನ್ನು ಮತ್ತೆ ಪಡೆದುಕೊಳ್ಳಬೇಕು; ಆಳು=ಸೇನೆಯ ಪಡೆ; ನವಗೆ+ಓಸುಗವೆ; ನವಗೆ=ನಮಗೆ; ಓಸುಗ=ಸಲುವಾಗಿ; **ಕೌರವರ ಆಳು ನವಗೋಸುಗವೆ ಬಂದುದು**=ಅಜ್ಞಾತವಾಸ ದಲ್ಲಿರುವ ನಮ್ಮ ಗುಟ್ಟನ್ನು ರಟ್ಟುಮಾಡುವುದಕ್ಕಾಗಿಯೇ ಗೋವುಗಳನ್ನು ಸೆರೆಹಿಡಿಯುವ ನೆಪದಲ್ಲಿ ವಿರಾಟನಗರದ ಮೇಲೆ ದುರ್ಯೋಧನನ ಸೇನೆಯು ದಂಡೆತ್ತಿ ಬಂದಿದೆ; ಕಾಂತೆ=ಹೆಂಡತಿ; ನರ=ಅರ್ಜುನ; **ಕಾಂತೆ ಕೇಳು, ನರನ ಸಾರಥಿಯೆಂದು ನೀನು ಉತ್ತರೆಗೆ ಸೂಚಿಸಿ ತನ್ನನು ಈಗಳೆ ಕರೆಸು ಎನಲು**=ಕಾಂತೆ ಕೇಳು "ಬೃಹನ್ನಳೆಯಾಗಿರುವ ನನ್ನನ್ನು ಅರ್ಜುನನಿಗೆ ಸಾರಥಿಯಾಗಿದ್ದನು"

ಎಂದು ನೀನು ಉತ್ತರೆಗೆ ಹೇಳಿ, ತನ್ನನ್ನು ಈಗಲೇ ಉತ್ತರಕುಮಾರನ ಬಳಿಗೆ ಕರೆಸುವುದಕ್ಕೆ ಏರ್ಪಾಡನ್ನು ಮಾಡು ಎಂದು ಹೇಳಲು; ಕೈಕೊಂಡು=ಕೆಲಸವನ್ನು ಮಾಡಲು ಒಪ್ಪಿಕೊಂಡು; ಒಲವು=ಪ್ರೀತಿ; **ಕೈಕೊಂಡು ದುರುಪದಿ ಒಲವಿನಲಿ ಬಂದಳು**=ದ್ರೌಪದಿಯು ಅರ್ಜುನನು ಹೇಳಿದ ಕೆಲಸವನ್ನು ಮಾಡಲು ಪ್ರೀತಿಯಿಂದ ಒಪ್ಪಿಕೊಂಡು, ರಾಣಿವಾಸದ ಮೇಳದಲ್ಲಿದ್ದ ಉತ್ತರೆಯ ಬಳಿಗೆ ಬಂದಳು;

ವರ=ಉತ್ತಮನಾದ; ಇವ=ಇವನು; ಖಾಂಡವ=ದೇವೇಂದ್ರನ ಒಡೆತನಕ್ಕೆ ಸೇರಿದ ಒಂದು ಕಾಡಿನ ಪ್ರದೇಶ. ಅಗ್ನಿದೇವನು ತನ್ನ ಹಸಿವನ್ನು ನೀಗಿಸಿಕೊಳ್ಳಲು ಈ ಕಾಡಿನ ಮರಗಿಡಬಳ್ಳಿ ಮತ್ತು ಪ್ರಾಣಿಪಕ್ಷಿಗಳೆಲ್ಲವನ್ನು ಸುಡುವಾಗ ಕೃಷ್ಣನ ಸಾರಥ್ಯದಲ್ಲಿ ಅರ್ಜುನನು ಅಗ್ನಿದೇವನಿಗೆ ನೆರವಾಗಿದ್ದನು ಎಂಬ ಕಾವ್ಯ ಪ್ರಸಂಗವಿದೆ; ಅಗ್ನಿ=ಬೆಂಕಿಯನ್ನು ಒಂದು ದೇವತೆಯನ್ನಾಗಿ ಜನಮನದಲ್ಲಿ ಕಲ್ಪಿಸಿಕೊಳ್ಳಲಾಗಿದೆ; ಹೊರೆ=ಕಾಪಾಡು/ಸಲಹು; **ತರುಣಿ ಕೇಳು. ವರ ಬೃಹನ್ನಳೆ ಅರ್ಜುನನ ಸಾರಥಿ. ಇವ ತಾನು ಖಾಂಡವ ಅಗ್ನಿಯ ಹೊರೆದನು**=ಉತ್ತರೆಯೇ ಕೇಳು... ರಾಣಿವಾಸದಲ್ಲಿರುವ ಬೃಹನ್ನಳೆಯು ಇಲ್ಲಿಗೆ ಬರುವ ಮೊದಲು ಅರ್ಜುನನಿಗೆ ಸಾರಥಿಯಾಗಿದ್ದಳು. ಅರ್ಜುನನು ಅಗ್ನಿದೇವನಿಗೆ ನೆರವನ್ನು ನೀಡುವಾಗ ತೇರನ್ನು ಮುನ್ನಡೆಸಿದ್ದಳು;

**ಉತ್ತರೆ ಕೇಳಿ ಹರುಷಿತೆಯಾದಳು**=ಈ ಸುದ್ದಿಯನ್ನು ಕೇಳಿ ಉತ್ತರೆಯು ಹಿಗ್ಗಿದಳು; ಲೋಲ=ಹೊಳೆ/ಪ್ರಕಾಶಿಸು; ಲೋಚನ=ಕಣ್ಣು; ಲೋಲಲೋಚನೆ= ಹೊಳೆಯುವಂತಹ ಕಣ್ಣುಗಳುಳ್ಳವಳು/ಸುಂದರಿ; ಅಂಘ್ರಿ=ಪಾದ; ಎರಗಿ= ನಮಸ್ಕರಿಸಿ; ಹದನ=ಸುದ್ದಿ/ವರ್ತಮಾನ; **ಲೋಲಲೋಚನೆಯು ಓಲಗಕೆ ಬಂದು ಅಣ್ಣನ ಅಂಘ್ರಿಗೆ ಎರಗಿ ಕೈಮುಗಿದು ಈ ಹದನ ಎಂದಳು**=ಉತ್ತರೆಯು ರಾಣಿವಾಸದಲ್ಲಿ ನಡೆಯುತ್ತಿದ್ದ ಉತ್ತರಕುಮಾರನ ಓಲಗಕ್ಕೆ ಬಂದು, ಅಣ್ಣನ ಪಾದಗಳಿಗೆ ನಮಸ್ಕರಿಸಿ, ಸಾರಥಿಯು ದೊರೆಯುವ ಸುದ್ದಿಯನ್ನು ತಿಳಿಸಿದಳು; ನೆಲೆ=ಜಾಗ/ನಿವಾಸ;

**ಸಾರಥಿಯ ನೆಲೆಯನು ಕೇಳಿದೆನು**=ಸಾರಥಿಯು ಇರುವ ಜಾಗದ ಸಂಗತಿಯನ್ನು ಸೈರಂಧ್ರಿಯಿಂದ ಕೇಳಿದೆನು; ನೃಪಾಲ=ರಾಜ; **ಅಣ್ಣದೇವ ಕಾಳಗಕೆ ನಡೆ. ನೃಪಾಲಕರ ಜಯಿಸು ಎಂದಡೆ**=ಅಣ್ಣದೇವನೇ... ಕಾಳಗಕ್ಕೆ ತೆರಳು. ಹಗೆಗಳಾದ ರಾಜರನ್ನು ಜಯಿಸು ಎಂದು ಹೇಳಲು; ಬೆಸಗೊಳ್=ವಿಚಾರಿಸು/ ಕೇಳು; **ಉತ್ತರ ನಗುತ ಬೆಸಗೊಂಡ**=ಉತ್ತರಕುಮಾರನು ನಗುತ್ತ ಸಾರಥಿಯ ಬಗ್ಗೆ ವಿಚಾರಿಸತೊಡಗಿದನು; **ತಂಗಿ ಹೇಳೌ ತಾಯೆ. ನಿನಗೆ ಈ ಸಂಗತಿಯನು ಆರು ಎಂದರು**=ತಂಗಿ... ನಿನಗೆ ಈ ಸಾರಥಿಯು ದೊರೆಯುವ ಸಂಗತಿಯನ್ನು ಯಾರು

ಹೇಳಿದರು; ಸಾರಥಿತನ=ತೇರನ್ನು ಮುನ್ನಡೆಸುವುದು; ಆವ=ಯಾವ; ಆವ ಅವನು=ನೀನು ಹೇಳುತ್ತಿರುವ ವ್ಯಕ್ತಿಯು; ಕೈಮೆ=ನಿಪುಣತೆ/ಪರಿಣತಿ; ಅಂಗವಣೆ+ ಉಳ್ಳವನೆ; ಅಂಗವಣೆ=ಸಾಹಸ/ಪರಾಕ್ರಮ; ಉಳ್ಳುವನು=ಹೊಂದಿರುವವನು;

**ಆವ ಅವನು ಸಾರಥಿತನದ ಕೈಮೆಯಲಿ ಅಂಗವಣೆಯುಳ್ಳವನೆ**=ನೀನು ಹೇಳುತ್ತಿರುವ ವ್ಯಕ್ತಿಯು ತೇರನ್ನು ಮುನ್ನಡೆಸುವ ನಿಪುಣತೆಯ ಜತೆಜತೆಗೆ ಸಾಹಸಿಯು ಆಗಿದ್ದಾನೆಯೇ. ಏಕೆಂದರೆ ರಣರಂಗದಲ್ಲಿ ತೇರನ್ನು ನಡೆಸುವವನು ಕೆಚ್ಚೆದೆಯುಳ್ಳವನಾಗಿರಬೇಕು; ಮಂಗಳ=ಕಲ್ಯಾಣ/ಶ್ರೇಯಸ್ಸು/ಒಳಿತನ್ನುಂಟು ಮಾಡುವುದು; ಅಭಂಗನ್+ಅಹೆ; ಅಭಂಗನ್=ಸೋಲಿಲ್ಲದವನು; ಅಹೆ= ಆಗುವೆನು; **ಮಂಗಳವಲೇ...ಬಳಿಕ ನಿನ್ನಾಣೆ ರಣದೊಳು ಅಭಂಗನಹೆ**=ಸಾರಥಿಯು ದೊರೆಯುವಂತಾದುದರಿಂದ ಒಳ್ಳೆಯದಾಯಿತು. ಈ ಬಳಿಕ ನಿನ್ನಾಣೆ ಯಾಗಿಯೂ ಹೇಳುತ್ತೇನೆ ಕೇಳು... ರಣರಂಗದಲ್ಲಿ ನಾನು ಗೆಲುವನ್ನು ಪಡೆಯುತ್ತೇನೆ; ತುಂಗ=ಉನ್ನತವಾದ/ಅತಿಶಯವಾದ; ವಿಕ್ರಮತನ=ಪರಾಕ್ರಮ/ವೀರತನ;

**ತನ್ನಯ ತುಂಗ ವಿಕ್ರಮತನವನು ಉಳುಹಿದೆ**=ಸಾರಥಿಯನ್ನು ಹುಡುಕಿಕೊಟ್ಟು ನನ್ನ ಪರಾಕ್ರಮವನ್ನು ಉಳಿಸಿದೆ; **ಹೇಳು ಹೇಳು**=ಈಗ ಸಾರಥಿಯು ಎಲ್ಲಿದ್ದಾನೆ ಎಂಬುದನ್ನು ಬೇಗ ಹೇಳು; **ಈ ಹದನ ನಾವು ಅರಿಯೆವು**=ಸಾರಥಿಯು ಯಾರು ಮತ್ತು ಎಲ್ಲಿದ್ದಾನೆ ಎಂಬ ಸಂಗತಿಯು ನನಗೆ ತಿಳಿಯದು; **ಈ ಸೈರಂಧ್ರಿ ಎಂದಳು**= ಸಾರಥಿಯ ಸುದ್ದಿಯನ್ನು ನನ್ನೊಡನೆ ಸೈರಂಧ್ರಿಯು ಹೇಳಿದಳು; ಸುರಪ= ದೇವೇಂದ್ರ; ನಂದನ=ತೋಟ/ಉದ್ಯಾನ; ಸುಡು=ಬೆಂಕಿಯಲ್ಲಿ ಬೇಯಿಸು; ಗಡ=ಕಂಡೆಯಾ; ಅಚ್ಚರಿ, ಆನಂದ ಮುಂತಾದ ಮನದ ಒಳಮಿಡಿತಗಳನ್ನು ಮಾತಿನಲ್ಲಿ ಹೇಳುವಾಗ ಬಳಸುವ ಉದ್ಗಾರದ ಪದ;

**ಸುರಪನ ನಂದನವ ಸುಡುವಂದು ಪಾರ್ಥನ ಮುಂದೆ ಸಾರಥಿಯಾದ ಗಡ**= ದೇವೇಂದ್ರನ ಒಡೆತನದ ತೋಟವನ್ನು ಅರ್ಜುನನು ಬೆಂಕಿಗೆ ಆಹುತಿಯನ್ನಾಗಿ ನೀಡುವಾಗ, ಅರ್ಜುನನ ತೇರನ್ನು ಈತನೆ ಸಾರಥಿಯಾಗಿ ನಡೆಸಿದನಂತೆ... ಕಂಡೆಯಾ; ಹಿಂದುಗಳೆ=ನಿರಾಕರಿಸು; **ಹಿಂದುಗಳೆಯದೆ ನಮ್ಮ ಬೃಹನ್ನಳೆಯನು ಕರೆಸು ಎನೆ**=ಈ ನನ್ನ ಸಲಹೆಯನ್ನು ನಿರಾಕರಿಸಿದೆ ಬೃಹನ್ನಳೆಯನ್ನು ಕರೆಸಿ, ಸಾರಥಿಯ ಬಗ್ಗೆ ವಿಚಾರಿಸು ಎಂದು ಉತ್ತರೆಯು ಹೇಳಲು; ಲೇಸು+ಆಯ್ತು; ಲೇಸು=ಒಳ್ಳೆಯದು; ಪರಮ=ಹೆಚ್ಚಾದ; ಇಂತು+ಎಂದ; **ನಗುತ 'ಲೇಸಾಯ್ತು' ಎಂದು ಪರಮ ಉತ್ಸಾಹದಲಿ ಸೈರಂಧ್ರಿಗೆ ಇಂತೆಂದ**=ಉತ್ತರೆಯ ಮಾತುಗಳಿಗೆ ನಗುತ್ತ "ನೀನು ಸಾರಥಿಯ ಸುದ್ದಿಯನ್ನು ಹೇಳಿದ್ದು ನನಗೆ ಒಳ್ಳೆಯದೇ ಆಯಿತು" ಎಂದು ಹೆಚ್ಚಿನ ಸಡಗರದಿಂದ ಉತ್ತರಕುಮಾರನು ಸೈರಂಧ್ರಿಯನ್ನು ಕುರಿತು ಈ

ರೀತಿ ಹೇಳಿದ;

**ಸಾರಥಿಯ ಕೊಟ್ಟು ಎನ್ನನು ಉಳುಹಿದೆ**=ಸಾರಥಿಯನ್ನು ಒದಗಿಸಿ ನನ್ನನ್ನು ಉಳಿಸಿದೆ; ವಾರಿಜ+ಆನನೆ; ವಾರಿಜ=ತಾವರೆಯ ಹೂವು; ಆನನ=ಮೊಗ; ವಾರಿಜಾನನೆ=ತಾವರೆಯ ಮೊಗದವಳು/ಸುಂದರಿ; **ವಾರಿಜಾನನೆ ಲೇಸು ಮಾಡಿದೆ**=ಸೈರಂಧ್ರಿಯೇ ಒಳಿತನ್ನು ಮಾಡಿದೆ; ತನಿ+ಕರುಳು; ತನಿ=ಚೆನ್ನಾಗಿ ಬೆಳೆದ; ತನಿಗರುಳು=ಚೆನ್ನಾಗಿ ಬೆಳೆದ ಕರುಳು; ಬಗಿ=ಸೀಳು;

**ಕೌರವನ ತನಿಗರುಳ ಬಗಿವೆನು**=ದುರ್ಯೋಧನನ ಹೊಟ್ಟೆಯನ್ನು ಸೀಳಿ ತನಿಗರುಳನ್ನು ಹೊರತೆಗೆಯುತ್ತೇನೆ; **ತಡವ ಮಾಡಿಸದೆ ನಾರಿ ನೀನೇ ಹೋಗಿ ಪಾರ್ಥನ ಸಾರಥಿಯ ತಾ**=ಸೈರಂಧ್ರಿಯೇ, ಇನ್ನು ತಡಮಾಡದೇ ನೀನೇ ಹೋಗಿ ಅರ್ಜುನನ ಸಾರಥಿಯನ್ನು ಕರೆದುಕೊಂಡು ಬಾ; ಬಗೆ=ಗಣಿಸು/ಲೆಕ್ಕಿಸು; **ನಮ್ಮನು ವೀರ ಬಗೆಯನು**=ನಮ್ಮ ಮಾತನ್ನು ಬೃಹನ್ನಳೆಯು ಲೆಕ್ಕಿಸುವುದಿಲ್ಲ. ನಾನು ಕರೆದರೆ ಬರುವುದಿಲ್ಲ; **ನಿಮ್ಮ ತಂಗಿಯ ಕಳುಹಿ ಕರೆಸುವುದು**=ನಿಮ್ಮ ತಂಗಿಯನ್ನು ಕಳುಹಿಸಿ ಕರೆಸುವುದು; ಸೂತ=ಸಾರಥಿ; ತಾಯಿ=ಹೆಣ್ಣುಮಕ್ಕಳನ್ನು ಒಲವು ನಲಿವಿನಿಂದ ಕರೆಯುವಾಗ ಬಳಸುವ ಪದ;

**ತಾಯೆ, ನೀನೇ ಹೋಗಿ ಸೂತನ ತಾ ಎನಲು**=ತಾಯೆ, ನೀನೇ ಹೋಗಿ ಸಾರಥಿಯನ್ನು ಕರೆದುಕೊಂಡು ಬಾ ಎಂದು ಉತ್ತರಕುಮಾರನು ತಂಗಿ ಉತ್ತರೆಗೆ ಹೇಳಲು; ಕೈಕೊಂಡು=ಆ ಕೆಲಸವನ್ನು ಮಾಡಲು ಒಪ್ಪಿಕೊಂಡು; ಕಮಲ+ದಳ+ ಆಯತ+ಅಕ್ಷಿ; ದಳ=ಎಸಳು; ಆಯತ=ನೀಳವಾದ/ವಿಶಾಲವಾದ; ಅಕ್ಷಿ=ಕಣ್ಣು; ಕಮಲದಳಾಯತಾಕ್ಷಿ=ಕಮಳದ ದಳದಂತೆ ವಿಶಾಲವಾದ ಕಣ್ಣುಳ್ಳವಳು/ಸುಂದರಿ; ಮನೋಭವ=ಮನ್ಮಥ; ಮರಿಯಾನೆ=ಚಿಕ್ಕ ಆನೆ; ಅಂದ=ರೀತಿ; ಮನೋಭವನ ಮರಿಯಾನೆ=ತಾರುಣ್ಯದ ಚೆಲುವಿನಿಂದ ಕಂಗೊಳಿಸುತ್ತಿರುವ ಉತ್ತರೆಯನ್ನು ಮನ್ಮಥನ ಮರಿಯಾನೆ ಎಂದು ಬಣ್ಣಿಸಲಾಗಿದೆ; ರಾಯಕುವರಿ=ವಿರಾಟರಾಜನ ಮಗಳು; ನವಾಯಿ=ವೇಗ; ಗತಿ=ನಡಗೆ; ಗರುವಾಯಿ=ಬೆಡಗು/ಸೊಗಸು/ಟೀವಿ;

**ಕೈಕೊಂಡು ಕಮಲದಳಾಯತಾಕ್ಷಿ ಮನೋಭವನ ಮರಿಯಾನೆಯ ಅಂದದಲಿ ರಾಯಕುವರಿ ನವಾಯಿ ಗತಿ ಗರುವಾಯಿಯಲಿ ಬರೆ**=ಮನ್ಮಥನ ಮರಿಯಾನೆಯೋ ಎನ್ನುವಂತೆ ತಾರುಣ್ಯದ ಚೆಲುವಿನಿಂದ ಕಂಗೊಳಿಸುತ್ತಿರುವ ಉತ್ತರೆಯು ಅಣ್ಣನ ಮಾತಿನಂತೆ ಸಾರಥಿಯನ್ನು ಕರೆತರುವುದಕ್ಕಾಗಿ ವೇಗವಾಗಿ ಒಯ್ಯಾರದಿಂದ ಬೃಹನ್ನಳೆಯ ಬಳಿಗೆ ಬಂದಳು; **ಪಾರ್ಥನು ಬರವ ಕಂಡನು**=ಉತ್ತರೆಯ ಬರುವಿಕೆಯನ್ನು ಅರ್ಜುನನು ನೋಡಿದನು;

ಕಠೋರ=ಬಿರುಸಾದ; ಕಠೋರ ಗತಿ=ವೇಗವಾದ ನಡಗೆ; **ಏನು ಉತ್ತರ ಕುಮಾರಿ, ಕಠೋರ ಗತಿಯಲಿ ಬರವು ಭಾರಿಯ ಕಾರಿಯವ ಸೂಚಿಸುವುದು ಎನಲು**=ಏನು ಉತ್ತರಕುಮಾರಿ, ಬಿರುಸಾದ ಹೆಜ್ಜೆಗಳನ್ನಿಡುತ್ತ ವೇಗವಾಗಿ ಬರುತ್ತಿರುವ ನಿನ್ನ ನಡಗೆಯೇ ದೊಡ್ಡ ಕಾರ್ಯದ ಕಾರಣಕ್ಕಾಗಿ ಬರುತ್ತಿರುವುದನ್ನು ಸೂಚಿಸುತ್ತಿದೆ ಎಂದು ಬೃಹನ್ನಳೆಯು ನುಡಿಯಲು; ಹುರುಳು=ಆಶಯ/ಸತ್ತ್ವ; ಸಲಿಸು=ಈಡೇರಿಸು/ನೆರವೇರಿಸು; ಅರುಹು=ಹೇಳು/ತಿಳಿಸು; **ನಗುತ ಬರವು ಬೇರೆ ಇಲ್ಲ**=ಉತ್ತರೆಯು ನಗುತ್ತ ನನ್ನ ಬರುವಿಕೆಗೆ ಮತ್ತೇನು ಕಾರಣವಿಲ್ಲ;

ಎನ್ನ **ಮಾತನು ಹುರುಳು ಕೆಡಿಸದೆ ಸಲಿಸುವೊಡೆ ನಿಮಗೆ ಅರುಹಿದಪೆನು**= ನನ್ನ ಮಾತಿನ ಸಂಗತಿಯನ್ನು ನಿರಾಕರಿಸಿದೆ ಈಡೇರಿಸುತ್ತೇನೆ ಎಂದು ಹೇಳಿದರೆ ಮಾತ್ರ ನಿಮಗೆ ನಾನು ಬಂದ ಕೆಲಸವನ್ನು ಹೇಳುತ್ತೇನೆ; **ಮೀರಬಲ್ಲನೆ ಮಗಳೆ ಹೇಳು**= ಅದೇನೆಂದು ಹೇಳು ಮಗಳೇ... ನಿನ್ನ ಮಾತನ್ನು ತೆಗೆದುಹಾಕುತ್ತೇನೆಯೇ; **ಹಸ್ತಿನಾಪುರದ ಅರಸುಗಳು ಪುರಕೆ ಹಾಯ್ದರು**=ಹಸ್ತಿನಾಪುರದ ರಾಜರು ವಿರಾಟನಗರದ ಮೇಲೆ ದಂಡೆತ್ತಿ ಬಂದರು; ಹೊಲ=ನಗರದ ಹೊರವಲಯ; ಶತ=ನೂರು;

**ಹೊಲನೊಳಗೆ ಶತ ಸಾವಿರದ ತುರುಗಳ ಹಿಡಿದರು**=ನಗರದ ಹೊರವಲಯದಲ್ಲಿದ್ದ ನಮ್ಮ ನೂರು ಸಾವಿರ ದನಗಳನ್ನು ಸೆರೆಹಿಡಿದರು; ಅಳಿ= ನಾಶವಾಗು; **ಗೋಪ ಪಡೆ ಅಳಿದುದು**=ಗೋಪಾಲಕರ ಪಡೆಯು ನಾಶವಾಯಿತು; ಕಾದಿ=ಯುದ್ಧವನ್ನು ಮಾಡಿ; ಮರಳಿಚು=ಹಿಂತಿರುಗಿಸು; **ಕಾದಿ ಮರಳಿಚುವೊಡೆ**= ಹಸ್ತಿನಾಪುರದ ಅರಸುಗಳ ಸೇನೆಯೊಡನೆ ಯುದ್ಧ ಮಾಡಿ, ಅಪಹರಣ ಗೊಂಡಿರುವ ದನಗಳನ್ನು ಮತ್ತೆ ವಿರಾಟನಗರಕ್ಕೆ ಹಿಂತಿರುಗಿ ಕರೆತರಬೇಕಾದರೆ; ಧುರ=ಯುದ್ಧ/ಕಾಳೆಗ;

**ಎಮ್ಮಣ್ಣ ದೇವನ ಧುರಕೆ ಸಾರಥಿ ಇಲ್ಲ**= ಕಾಳೆಗದಲ್ಲಿ ಹೋರಾಡಲು ನಮ್ಮ ಅಣ್ಣದೇವನಿಗೆ ಸಾರಥಿಯು ಇಲ್ಲ; **ನೀವು ಆ ನರನ ಸಾರಥಿಯೆಂದು ಕೇಳಿದೆವು**= ನೀವು ಈ ಮೊದಲು ಅರ್ಜುನನಿಗೆ ಸಾರಥಿಯಾಗಿದ್ದಿರಿ ಎಂಬುದನ್ನು ಕೇಳಿ ತಿಳಿದೆವು; **ಇನ್ನು ನೀವೇ ಬಲ್ಲಿರಿ**=ಇಂತಹ ಸಮಯದಲ್ಲಿ ಏನು ಮಾಡಬೇಕೆಂಬುದು ನಿಮಗೆ ಗೊತ್ತಿದೆ; **ನಿನ್ನ ಮಾತನು ಮೀರಬಲ್ಲನೆ**=ನಿನ್ನ ಮಾತನ್ನು ಮೀರುತ್ತೇನೆಯೇ. ನೀನು ಹೇಳಿದಂತೆಯೇ ಆಗಲಿ; **ಮುನ್ನ ಸಾರಥಿ ಅಹೆನು, ನೋಡುವೆನು ಎನುತ**= ಮೊದಲು ನಿನ್ನ ಅಣ್ಣನಿಗೆ ಸಾರಥಿಯಾಗುತ್ತೇನೆ. ಅನಂತರ ರಣರಂಗದಲ್ಲಿ ಏನು ನಡೆಯುತ್ತದೆಯೊ ನೋಡುತ್ತೇನೆ ಎಂದು ಹೇಳಿ; ವಹಿಲ=ವೇಗ; ಅಬಲೆ=ಹೆಂಗಸು; ಬೆನ್ನಲಿ ಐದಲು=ಹಿಂಬಾಲಿಸಿ ಬರಲು;

**ವಹಿಲದಲಿ ಅಬಲೆಯನು ಬೆನ್ನಲಿ ಐದಲು**=ವೇಗವಾಗಿ ಉತ್ತರೆಯನ್ನು ಹಿಂಬಾಲಿಸುತ್ತ ಬರಲು; ಸಂಪನ್ನ=ಉತ್ತಮ/ಸಜ್ಜನ; ಬಲ=ಶಕ್ತಿ; ಸಂಪನ್ನಬಲ= ಒಳ್ಳೆಯ ವ್ಯಕ್ತಿತ್ವವುಳ್ಳವನು/ಮಹಾಬಲಶಾಲಿ; **ಆ ಸಂಪನ್ನಬಲನು ಓಲಗಕೆ ಬರೆ**= ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಉತ್ತರಕುಮಾರನ ಓಲಗಕ್ಕೆ ಬರಲು; ಹರುಷ+ಉನ್ನತಿಯಲಿ; ಮನ್ನಿಸು=ಮರ್ಯಾದೆಯನ್ನು ತೋರಿಸು; **ಹರುಷೋನ್ನತಿಯಲಿ ಉತ್ತರ ಕುಮಾರನು ಕರೆದು ಮನ್ನಿಸಿದ**=ಹೆಚ್ಚಿನ ಆನಂದದಿಂದ ಉತ್ತರಕುಮಾರನು ಬೃಹನ್ನಳೆಯನ್ನು ಹತ್ತಿರಕ್ಕೆ ಕರೆದು ಆದರದಿಂದ ಬರಮಾಡಿಕೊಂಡನು; ಅಗ್ಗಳೆಯರ+ಒಳ್; ಅಗ್ಗಳೆ=ಹೆಚ್ಚಿನ; ಅಗ್ಗಳೆಯರು=ದೊಡ್ಡವರು/ದೊಡ್ಡಸ್ತಿಕೆಯುಳ್ಳವರು; ವಿಗ್ರಹ=ಕಾಳೆಗ/ಯುದ್ದ; ತೆತ್ತುದು=ಏರ್ಪಟ್ಟಿದೆ/ಆರಂಭವಾಗಿದೆ; **ಎಲೆ ಬೃಹನ್ನಳೆ, ಎನಗೆ ಅಗ್ಗಳೆಯರೊಳು ವಿಗ್ರಹವು ತೆತ್ತುದು**=ಎಲೆ ಬೃಹನ್ನಳೆ... ನನಗೆ ಮಹಾಬಲಶಾಲಿಗಳೊಡನೆ ಕಾಳೆಗವು ಆರಂಭಗೊಂಡಿದೆ; ಎನ್ನವ=ನನ್ನ; ಅಳಿ=ಸಾಯಿ/ಮರಣಹೊಂದು; **ಎನ್ನವ ಸಾರಥಿ ಅಳಿದನು**=ನನ್ನ ಸಾರಥಿಯು ಮರಣಹೊಂದಿದನು; ಸಮರ=ಕಾಳೆಗ; ಉಳುಹು=ಕಾಪಾಡು; ಬೇಹುದು=ಬೇಕಾಗಿರುವುದು;

**ಸಮರದಲಿ ನೀನು ಸಾರಥಿಯಾಗಿ ಉಳುಹ ಬೇಹುದು**=ಈಗ ಆರಂಭ ಗೊಂಡಿರುವ ಕಾಳೆಗದಲ್ಲಿ ನೀನು ನನ್ನ ಸಾರಥಿಯಾಗಿ ನನ್ನ ವೀರತನವನ್ನು ಕಾಪಾಡಬೇಕು/ಮಹಾವೀರನೆಂಬ ನನ್ನ ಹೆಸರನ್ನು ಉಳಿಸಬೇಕು; ಫಲುಗುಣ=ಅರ್ಜುನ; **ಫಲುಗುಣನ ಸಾರಥಿಯಲೈ**=ನೀನು ಅರ್ಜುನನಿಗೆ ಸಾರಥಿಯಾಗಿದ್ದವನಲ್ಲವೇ; ಸಮರ್ಥ=ಬಲಶಾಲಿ/ಗಟ್ಟಿಗ; **ನೀ ಸಮರ್ಥನು**=ನೀನು ಬಲಶಾಲಿ. ಸಾರಥ್ಯವನ್ನು ಚೆನ್ನಾಗಿ ಬಲ್ಲವನು; ಒಲ್=ಒಪ್ಪು/ಸಮ್ಮತಿಸು; **ನೀನು ಒಲಿದು ಮೆಚ್ಚಲು ಸೇನೆಯಲಿ ಕಾದಿ ತೋರುವೆನು**=ನೀನು ಪ್ರೀತಿಯಿಂದ ಒಪ್ಪಿಕೊಂಡು ನನ್ನ ಸಾರಥಿಯಾದರೆ ರಣರಂಗದಲ್ಲಿ ವೀರಾವೇಶದಿಂದ ಹೋರಾಡಿ ನಾನು ಎಂತಹ ಪರಾಕ್ರಮಿ ಎಂಬುದನ್ನು ತೋರಿಸುತ್ತೇನೆ;

ಭರತ=ನಾಟ್ಯಶಾಸ್ತ್ರವನ್ನು ರಚಿಸಿದ ಮುನಿ; ಭರತ ವಿದ್ಯೆ=ನಟನೆ ಮತ್ತು ನಾಟ್ಯ ಕಲೆಯ ಬಗೆಗಿನ ಜ್ಞಾನ ಮತ್ತು ಪರಿಣತಿ; ವಿಷಯ=ಸಂಗತಿ; ಪರಿಚಯ= ಮಾಹಿತಿ; **ನಮಗೆ ಭರತ ವಿದ್ಯಾ ವಿಷಯದಲಿ ಪರಿಚಯತನ**=ನನಗೆ ನಟನೆ ಮತ್ತು ನಾಟ್ಯಕಲೆಯ ಸಂಗತಿಗಳಲ್ಲಿ ಪರಿಚಯ ಮತ್ತು ಪರಿಣತಿ ಇದೆಯೇ ಹೊರತು ಮತ್ತಾವುದರಲ್ಲೂ ಇಲ್ಲ; ಸಂಗರ=ಯುದ್ಧ/ಕಾಳೆಗ; **ಅಲ್ಲದೆ ಹಲವು ಕಾಲದಲಿ ಈ ಸಂಗರದ ಸಾರಥಿತನವ ಮರೆದೆವು**=ಹಲವು ವರುಶಗಳಿಂದ ರಣರಂಗದಲ್ಲಿ ತೇರನ್ನು ಮುನ್ನಡೆಸುವುದನ್ನೇ ಮರೆತಿದ್ದೇನೆ; ಅರಿ=ಹಗೆ/ಶತ್ರು; ಭಟ=ಕಾಳೆಗ

ಮಾಡುವ ಸೈನಿಕ; ಅರಿಭಟರು=ಕಾಳೆಗದ ಹೋರಾಡುವ ಕಲಿಗಳು; ಭೀಷ್ಮ+ ಆದಿಗಳು; ಆದಿಗಳು=ಮೊದಲಾದವರು; ನಿಲಲ್=ನಿಲ್ಲಲು; ಅರಿದು=ಬಹಳ ಕಷ್ಟಕರವಾದುದು/ಅಸಾಧ್ಯವಾದುದು;

**ಅರಿಭಟರು ಭೀಷ್ಮಾದಿಗಳು. ನಿಲಲು ಅರಿದು**=ಈಗ ರಣರಂಗದಲ್ಲಿ ನಮ್ಮ ಹಗೆಗಳಾಗಿರುವವರು ಭೀಷ್ಮ, ದ್ರೋಣ ಮುಂತಾದ ಮಹಾವೀರರು. ಅವರ ಎದುರಾಗಿ ಹೋರಾಡಲು ಬಹಳ ಕಷ್ಟ; ಸಾರಥಿತನ=ತೇರನ್ನು ಮುನ್ನಡೆಸುವ ವಿದ್ಯೆ; ಕೈಮನ=ದೇಹ ಮತ್ತು ಮನಸ್ಸು/ಮಯ್ ಮನವನ್ನು ಒಗ್ಗೂಡಿಸಿ ಕಲಿಯುವ ವಿದ್ಯೆ; **ಸಾರಥಿತನದ ಕೈಮನ**=ಸಾರಥಿಯಾಗಿ ತೇರನ್ನು ಮುನ್ನಡೆಸುವ ವಿದ್ಯೆಯಲ್ಲಿ ಪರಿಣತಿ; ಸೂರೆ=ಲೂಟಿ/ಕೊಳ್ಳೆ; ರಣಸೂರೆ=ರಣರಂಗದಲ್ಲಿ ಹಗೆಗಳನ್ನು ಕಡಿದಿಕ್ಕಿ ಮಾಡುವ ಆಕ್ರಮಣಕಾರಿತನ; ಬರಡು=ಪೊಳ್ಳು/ದುರ್ಬಲ; ದೊರೆಕೊಳ್=ಸಿಗುವಂತೆ ಮಾಡು/ಲಬಿಸುವಂತೆ ಮಾಡು;

**ಸಾರಥಿತನದ ಕೈಮನ ರಣ ಸೂರೆಯಲ್ಲಿ ಬರಡರಿಗೆ ದೊರೆಕೊಂಬುದೇ**= ಸಾರಥಿತನದಲ್ಲಿ ಪರಿಣತಿಯನ್ನು ಪಡೆಯದಿರುವ ನನ್ನಂತಹ ಬಲಹೀನರಿಗೆ ರಣರಂಗದಲ್ಲಿ ಹಗೆಗಳನ್ನು ಕಡಿದಿಕ್ಕಿ, ಹಗೆಗಳ ಸಂಪತ್ತನ್ನು ಲೂಟಿಮಾಡುವ ಶಕ್ತಿಯು ದೊರಕುತ್ತದೆಯೇ; ಆನು=ನಾನು; **ಆನು ಇರಲು ಭೀಷ್ಮಾದಿಗಳು ನಿನಗೆ ಏನ ಮಾಡಲು ಬಲ್ಲರು**=ನಾನು ನಿನ್ನೊಡನೆ ಇರುವಾಗ ಭೀಷ್ಮ, ದ್ರೋಣ ಮುಂತಾದವರು ನಿನಗೆ ಏನನ್ನು ತಾನೆ ಮಾಡಲು ಶಕ್ತರು. ನನ್ನ ಮುಂದೆ ಅವರ ಆಟ ನಡೆಯುವುದಿಲ್ಲ; **ಅಳುಕದೆ ನೀನು ನಿಲು ಸಾಕು**=ರಣರಂಗದಲ್ಲಿ ಹೆದರಿ ಕೊಳ್ಳದೆ ತೇರನ್ನು ನಡೆಸು. ಅಷ್ಟು ಸಾಕು; **ಅವರುಗಳ ಒಂದು ನಿಮಿಷಕೆ ಗೆಲುವೆನು**= ದುರ್ಯೋಧನನ ಕಡೆಯ ಸೇನಾನಿಗಳನ್ನು ಒಂದು ಗಳಿಗೆಯಲ್ಲಿ ಸದೆಬಡಿದು ಗೆಲ್ಲುತ್ತೇನೆ;

**ತಾನು ಅದು ಆರೆಂದು ಅರಿಯಲಾ**=ನಾನು ಎಂತಹ ಗಂಡುಗಲಿ ಎಂಬುದು ನಿನಗೆ ಗೊತ್ತಿಲ್ಲವೇ; ಗುರುಸೂನು=ಗುರುಪುತ್ರನಾದ ಅಶ್ವತ್ಥಾಮ; ಆನು=ನಾನು; ಅರಿಯದವರಲ್ಲ=ತಿಳಿಯದವರೇನಲ್ಲ; **ಗುರುಸೂನು, ಕರ್ಣ, ದ್ರೋಣರು ಎಂಬವರು ಆನು ಅರಿಯದವರಲ್ಲ**=ದುರ್ಯೋಧನನ ಪಡೆಯ ಅಶ್ವತ್ಥಾಮ, ಕರ್ಣ, ದ್ರೋಣ ಎಂಬ ವ್ಯಕ್ತಿಗಳು ನನಗೆ ಗೊತ್ತಿಲ್ಲದವರಲ್ಲ. ಅವರೆಲ್ಲರ ಶಕ್ತಿಸಾಹಸಗಳ ಇತಿಮಿತಿಯನ್ನು ನಾನು ಬಲ್ಲವನಾಗಿದ್ದೇನೆ; **ಸಾರಥಿಯಾಗು ಸಾಕು**=ನೀನು ಹಗೆಗಳ ಶಕ್ತಿಸಾಹಸದ ಬಗ್ಗೆ ಚಿಂತಿಸಿ ಆತಂಕಗೊಳ್ಳಬೇಡ : ಸುಮ್ಮನೆ ಸಾರಥಿಯಾಗಿ ತೇರನ್ನು ನಡೆಸು. ಅಷ್ಟನ್ನು ಮಾತ್ರ ನಿನ್ನಿಂದ ನಾನು ಬಯಸುತ್ತೇನೆ;

ವೀರನ್+ಅಹೆ; ಅಹೆ=ಆಗಿರುವೆ; **ವೀರನಹೆ ಬಳಿಕ ಏನು**=ನೀನು ವೀರನಾಗಿರುವುದರಿಂದ ಸಾರಥಿಯಾದ ನನಗೆ ಯಾವ ಆಪತ್ತು ಬರುವುದಿಲ್ಲ; ಇರಿ=ಕೊಲ್ಲು/ಕತ್ತರಿಸು; ಹರೆಯ=ಯವ್ವನ; **ರಾಜಕುಮಾರನು ಇರಿವೊಡೆ ಹರೆಯವಲ್ಲಾ**=ರಣರಂಗದಲ್ಲಿ ಹಗೆಗಳನ್ನು ಕೊಲ್ಲಲು ಕಸುವುಳ್ಳ ನೀನು ಹರೆಯದ ರಾಜಕುಮಾರನಲ್ಲವೇ; **ಸಾರಥಿತ್ವವ ಮಾಡಿ ನೋಡುವೆ**=ರಣರಂಗದಲ್ಲಿ ತೇರನ್ನು ಮುನ್ನಡೆಸಿ ನಿನ್ನ ಪರಾಕ್ರಮವನ್ನು ನೋಡುವೆನು; **ರಥವ ತರಿಸು**=ತೇರನ್ನು ತರಿಸು ಎಂದು ಬೃಹನ್ನಳೆಯು ಉತ್ತರಕುಮಾರನಿಗೆ ಹೇಳಿದಳು; ವಾರುವ=ಕುದುರೆ; ಮಂದಿರ=ವಾಸದ ಜಾಗ; ವಾರುವ ಮಂದಿರ=ಕುದುರೆ ಲಾಯ; ಆಯ್=ಆರಿಸು/ಆಯ್ಕೆ ಮಾಡು; ಚಾರು=ಉತ್ತಮವಾದ; ತುರಗ+ಆವಳಿಯ; ತುರಗ=ಕುದುರೆ; ಆವಳಿ=ಗುಂಪು/ಸಾಲು; ಬಿಗಿ=ಕಟ್ಟು/ರಚಿಸು;

**ಕಲಿಪಾರ್ಥ ವಾರುವದ ಮಂದಿರದಲಿ ಆಯಿದು ಚಾರು ತುರಗಾವಳಿಯ ಬಿಗಿದನು**=ಅರ್ಜುನನು ತಾನೇ ಕುದುರೆಯ ಲಾಯಕ್ಕೆ ಹೋಗಿ, ಕುದುರೆಗಳ ಗುಂಪಿನಲ್ಲಿ ಉತ್ತಮವಾದ ಕುದುರೆಗಳನ್ನು ಆಯ್ಕೆಮಾಡಿಕೊಂಡು ತೇರಿಗೆ ಕಟ್ಟಿದನು; ಸಂವರಿಸು=ಸಜ್ಜುಮಾಡು/ಸಿದ್ದಗೊಳಿಸು; **ತೇರ ಸಂವರಿಸಿದನು**= ರಣರಂಗಕ್ಕೆ ಹೋಗಲು ಅನುವಾಗುವಂತೆ ತೇರನ್ನು ಸಜ್ಜುಗೊಳಿಸಿದನು; **ರಥವ ಏರಿದನು**=ತೇರನ್ನೇರಿ ಕುಳಿತನು; ನಿಖಿಲ+ಅಂಗನೆಯರು; ನಿಖಿಲ=ಎಲ್ಲ/ಸಮಸ್ತ; ಅಂಗನೆ=ಹೆಂಗಸು; **ನಿಖಿಳಾಂಗನೆಯರು ಉತ್ತರಗೆ ಮಂಗಳಾರತಿಯ ಎತ್ತಿದರು**= ರಾಣಿವಾಸದ ಹೆಂಗಸರೆಲ್ಲರೂ ಉತ್ತರಕುಮಾರನಿಗೆ ರಣರಂಗದಲ್ಲಿ ಜಯವಾಗಲಿ ಎಂಬ ಆಶಯದಿಂದ ಮಂಗಳಾರತಿಯನ್ನು ಎತ್ತಿದರು; ನಿಜ=ತನ್ನ/ ಉತ್ತರಕುಮಾರನ; ಸರ್ವಾಂಗ=ಇಡೀ ದೇಹ; ಶೃಂಗಾರ=ಅಲಂಕಾರ;

**ನಿಜ ಸರ್ವಾಂಗ ಶೃಂಗಾರದಲಿ ಹೊಳೆವುತ ಬಂದು ರಥವೇರಿ**=ಉತ್ತರ ಕುಮಾರನು ತನ್ನ ದೇಹವನ್ನು ಅಲಂಕರಿಸಿಕೊಂಡು ತೇಜೋರೂಪಿಯಾಗಿ ತೇರನ್ನು ಏರಿ; ಹೊನ್+ಕೆಲಸ+ಮಯ; ಹೊನ್=ಹೊನ್ನು/ಚಿನ್ನ; ಮಯ= ಕೂಡಿದ/ತುಂಬಿದ; ಕವಚ=ರಣರಂಗದ ಅಪಾಯಗಳಿಂದ ಪಾರಾಗಲೆಂದು ದೇಹಕ್ಕೆ ಹಾಕಿಕೊಳ್ಳುವ ಲೋಹದ ಅಂಗಿ; **ಹೊಂಗೆಲಸಮಯ ಕವಚ**=ಚಿನ್ನದ ಹಾಳೆಗಳಿಂದಲೇ ಮಾಡಿರುವ ಕವಚ; ಹೊಂಗೆಲಸಮಯ ಕವಚವನು ಪಾರ್ಥಂಗೆ ಕೊಟ್ಟನು=ಚಿನ್ನದ ತಗಡುಗಳಿಂದಲೇ ಮಾಡಿದ್ದ ಯುದ್ಧದ ಅಂಗಿಯನ್ನು ಅರ್ಜುನನಿಗೆ ಕೊಟ್ಟನು;

ಜೋಡು=ಜೊತೆ/ಎರಡು; ಸೀಸಕ=ಒಂದು ಬಗೆಯ ಲೋಹ; ಸೀಸಕದ ಅಂಗಿ=ಲೋಹದ ಕವಚ; ಜೋಡು ಸೀಸಕದ ಅಂಗಿಗಳು=ತಲೆಗೆ ಹಾಕಿಕೊಳ್ಳುವ

ಕವಚ ಮತ್ತು ಎದೆಯ ಮೇಲೆ ತೊಡುವ ಕವಚಗಳು; ಅಳವಡಿಸು=ಹಾಕಿಕೊಳ್ಳುವುದು; ಅನು=ಸಿದ್ದತೆ/ಸಜ್ಜು; **ರಾಜಕುಮಾರನು ಜೋಡು ಸೀಸಕದ ಅಂಗಿಗಳನು ಅಳವಡಿಸಿ ಅನುವಾದ**=ಉತ್ತರಕುಮಾರನು ಒಂದು ಜೊತೆ ಲೋಹದ ಕವಚಗಳನ್ನು ತೊಟ್ಟುಕೊಂಡು ರಣರಂಗಕ್ಕೆ ತೆರಳಲು ಸಿದ್ಧನಾದನು; ನರ=ಬೃಹನ್ನಳೆ; ಸರಿ=ಒಳಸೇರಿಸು/ತುರುಕು; ಇರೆ=ಇರಲು; ಘೊಳ್+ಎಂದು; ಘೊಳ್=ಇದು ಒಂದು ಅನುಕರಣ ಪದ. ಹೆಂಗಸರೆಲ್ಲರೂ ಒಮ್ಮೆಲೆಯೇ ಜೋರಾಗಿ ಚಪ್ಪಾಳೆಯನ್ನ ತಟ್ಟಿದಾಗ ಹೊರಹೊಮ್ಮಿದ ದನಿ; ಕೈಹೊಯ್ದು=ಚಪ್ಪಾಳೆಯನ್ನು ತಟ್ಟಿ;

**ನರನು ತಲೆ ಕೆಳಗಾಗಿ ಕವಚವ ಸರಿವುತ ಇರೆ ಘೊಳ್ಳೆಂದು ಕೈ ಹೊಯ್ದು ಅರಸಿಯರು ನಗೆ**=ಸಾರಥಿಗೆ ತೊಡಲೆಂದು ಕೊಟ್ಟಿದ್ದ ಅಂಗಕವಚವನ್ನು ಬೃಹನ್ನಳೆಯು ತೊಡಲು ಅರಿಯದವಳಂತೆ ತಲೆಕೆಳಗಾಗಿ ತೊಟ್ಟುಕೊಳ್ಳ ತೊಡಗಿದಾಗ ರಾಣಿವಾಸದ ಹೆಂಗಸರೆಲ್ಲರೂ ಒಮ್ಮೆಲೆ ಚಪ್ಪಾಳೆಯನ್ನು ತಟ್ಟುತ್ತ ಜೋರಾಗಿ ನಗಲು; ಮೇಲ್ಮುಖ=ಮೇಲುಗಡೆಯಿಂದ; **ನಾಚಿದಂತಿರೆ ಪಾರ್ಥ... ತಲೆವಾಗಿ ತಿರುಗಿ ಮೇಲ್ಮುಖನಾಗಿ ತೊಡಲು**=ನಾಚಿಕೊಂಡ ಬೃಹನ್ನಳೆಯು ತಲೆಬಗ್ಗಿಸಿಕೊಂಡು, ಮತ್ತೆ ಅಂಗಕವಚವನ್ನು ಸರಿಯಾಗಿ ತೊಟ್ಟುಕೊಳ್ಳಲು ಪ್ರಯತ್ನಿಸುತ್ತಿರಲು; ನಸುನಗು=ಮುಗುಳುನಗೆ/ಮಂದಹಾಸ;

**ಉತ್ತರೆ ಬಳಿಕ ನಸುನಗಲು**=ಬೃಹನ್ನಳೆಯ ಪಾಡನ್ನು ಕಂಡು ಉತ್ತರೆಯು ಮುಗುಳುನಗುತ್ತಿರಲು; **ಸಾರಥಿ ಅರಿಯ ತಪ್ಪೇನು ಎನುತಲು ಉತ್ತರ ತಾನೆ ತೊಡಿಸಿದನು**=ಸಾರಥಿಗೆ ಅಂಗಕವಚವನ್ನು ಹೇಗೆ ತೊಟ್ಟುಕೊಳ್ಳಬೇಕು ಎಂಬುದು ಗೊತ್ತಿಲ್ಲ. ಇದರಲ್ಲಿ ತಪ್ಪೇನು ಎಂದು ಹೇಳುತ್ತ ಉತ್ತರಕುಮಾರನು ತಾನೇ ಬೃಹನ್ನಳೆಗೆ ಅಂಗಕವಚವನ್ನು ತೊಡಿಸಿದನು; ಆಹವ=ಕಾಳೆಗ/ಯುದ್ದ; ಹವಣು=ನಿಪುಣತೆ/ಶಕ್ತಿ; ತಾನ್+ಎಂತು; ತಾನೆಂತು=ಅದು ಹೇಗೆ ಇರುತ್ತದೆ;

**ಕವಚವನು ತೊಡಲು ಅರಿಯದವನು ಆಹವಕೆ ಸಾರಥಿತನವ ಮಾಡುವ ಹವಣು ತಾನೆಂತು**=ಕವಚವನ್ನೇ ತೊಡಲು ತಿಳಿಯದ ಬೃಹನ್ನಳೆಯು ಇನ್ನು ರಣರಂಗದಲ್ಲಿ ತೇರನ್ನು ಹೇಗೆ ತಾನೆ ಕುಶಲತೆಯಿಂದ ಮುನ್ನಡೆಸಲು ಆಗುತ್ತದೆ ಎಂಬ ಅನುಮಾನವನ್ನು ಅಲ್ಲಿದ್ದ ಹೆಂಗಸರು ವ್ಯಕ್ತಪಡಿಸಿದರು; ಬವರ=ಕಾಳೆಗ/ಯುದ್ಧ; ಅವರ=ದುರ್ಯೋದನನ ಪಡೆಯ ಸೈನಿಕರ; ಮಣಿ=ಬೆಲೆಬಾಳುವ ಮುತ್ತು, ರತ್ನ, ವಜ್ರದ ಹರಳುಗಳು; ಪರಿಧಾನ=ಉಡುಪು; ಆಭರಣ=ಒಡವೆ; ಸರೋಜ=ತಾವರೆಯ ಹೂವು; ಸರೋಜಮುಖಿ=ತಾವರೆಯ ಮೊಗದವಳು/ಸುಂದರಿ;

**ಬವರವನು ನಮ್ಮಣ್ಣ ಗೆಲಿದಪನು. ಅವರ ಮಣಿ ಪರಿಧಾನ ಆಭರಣವನು ಸಾರಥಿ ಕೊಂಡು ಬಾ ಎಂದಳು ಸರೋಜಮುಖಿ**=ಯುದ್ಧವನ್ನು ನಮ್ಮಣ್ಣ

ಗೆಲ್ಲುತ್ತಾನೆ. ನಮ್ಮಣ್ಣನ ಪರಾಕ್ರಮದ ಹೋರಾಟಕ್ಕೆ ಬಲಿಯಾಗಿ ರಣರಂಗದಲ್ಲಿ ಸತ್ತುಬಿದ್ದಿರುವ ದುರ್ಯೋಧನನ ಕಡೆಯ ಸೈನಿಕರ ಅಂಗಕವಚದಲ್ಲಿರುವ ಮುತ್ತು ರತ್ನ ವಜ್ರದ ಒಡವೆಗಳನ್ನು ತೆಗೆದುಕೊಂಡು ಬಾ ಎಂದು ಉತ್ತರೆಯು ಬೃಹನ್ನಳೆಗೆ ಆದೇಶವನ್ನು ನೀಡಿದಳು;

ಕೈಕೊಳ್=ಹಿಡಿ/ತೊಡಗು; ಎಸಗು=ತೇರನ್ನು ನಡೆಸು; **ಅರ್ಜುನನು ನಸು ನಗುತ ರಥವನು ಕೈಕೊಂಡನು, ಎಸಗಿದನು**=ಬೃಹನ್ನಳಾ ವೇಷಧಾರಿಯಾದ ಅರ್ಜುನನು ಮುಗುಳು ನಗುತ್ತ ತೇರಿಗೆ ಕಟ್ಟಿದ್ದ ಕುದುರೆಗಳ ಕಡಿವಾಣದ ಹಗ್ಗವನ್ನು ಹಿಡಿದುಕೊಂಡು ತೇರನ್ನು ರಣರಂಗದ ಕಡೆಗೆ ಮುನ್ನಡೆಸಿದನು; ವಿಗಡ=ಬಲವುಳ್ಳ; ವಾಜಿ=ಕುದುರೆ; ಸಮೀರ=ಗಾಳಿ/ವಾಯು; ಮಿಸುಕು= ಅಲ್ಲಾಡು/ಚಲಿಸು/ಕದಲು; ಈ=ಕೊಡು/ಅವಕಾಶವನ್ನು ನೀಡು; ಮಿಗು=ದಾಟು/ ಅತಿಕ್ರಮಿಸು; ಮುಂದೆ ಮಿಕ್ಕವು=ಮುಂದೆ ನುಗ್ಗಿದವು;

**ವಿಗಡ ವಾಜಿಗಳು ಸಮೀರನ ಮಿಸುಕಲು ಈಯದೆ ಮುಂದೆ ಮಿಕ್ಕವು**= ಬಲವುಳ್ಳ ಕುದುರೆಗಳು ಬೀಸುತ್ತಿರುವ ಗಾಳಿಯು ತಮ್ಮನ್ನು ದಾಟಿಹೋಗಲು ಅವಕಾಶವನ್ನು ನೀಡದೆ, ಗಾಳಿಗಿಂತಲೂ ವೇಗವಾಗಿ ಮುನ್ನಡೆದವು; ಪರಿ=ರೀತಿ; ಸಂಗಾತ=ಸಂಗಡ/ಜೊತೆಯಲ್ಲಿ; ಅಸದಳ=ಅಸಾದ್ಯ/ಆಗವುದಿಲ್ಲ; ಚಾತುರಂಗ ಬಲ=ಆನೆ/ಕುದುರೆ/ತೇರು/ಕಾಲ್ದಳ ಎಂಬ ನಾಲ್ಕು ಬಗೆಯ ಪಡೆ; ಪುರ=ವಿರಾಟನಗರ; ಉಸುರು=ಮಾತನಾಡು/ಹೇಳು; **ಹೊಸ ಪರಿಯ ಸಾರಥಿಯಲಾ. ನಮಗೆ ಸಂಗಾತ ಬರಲು ಅಸದಳವು ಎಂದು ಚಾತುರಂಗ ಬಲ ಪುರದಲಿ ಹಿಂದೆ ಉಸುರದೆ ಉಳಿದುದು**=ವಾಯುವೇಗವನ್ನು ಮೀರಿಸುವಂತೆ ಬೃಹನ್ನಳೆಯು ಉತ್ತರಕುಮಾರನು ಕುಳಿತಿದ್ದ ತೇರನ್ನು ಮುನ್ನಡೆಸುತ್ತ ರಣರಂಗದತ್ತ ಹೊರಟಾಗ, ಉತ್ತರಕುಮಾರನ ಹಿಂದೆ ಹೊರಟ ಚತುರಂಗಬಲದ ಸೈನಿಕರು ಆ ತೇರಿನ ವೇಗಕ್ಕೆ ಸರಿಸಮನಾಗಿ ಹೋಗಲು ಆಗಲಿಲ್ಲ. ಆಗ ಸೈನಿಕರು **“ಇವನಾರು ಹೊಸಬಗೆಯ ಸಾರಥಿ. ನಮಗೆ ಯುವರಾಜನ ಜೊತೆಯಲ್ಲಿಯೇ ಸಾಗಲು ಆಗುತ್ತಿಲ್ಲ”** ಎಂದು ಗೊಣಗಿಕೊಳ್ಳುತ್ತ, ಉಸುರುಗಟ್ಟಿದಂತಾಗಿ ಅಂದರೆ ಏನನ್ನೂ ಮಾಡಲು ತೋಚದೆ ವಿರಾಟನಗರದಲ್ಲಿಯೇ ಉಳಿದುಬಿಟ್ಟರು;



# ನೋಟ–೩

ಪರೀಕ್ಷಿತ=ಸುಭದ್ರೆ ಮತ್ತು ಅಭಿಮನ್ಯುವಿನ ಮಗ; ತನಯ=ಮಗ; ಪರೀಕ್ಷಿತ ತನಯ=ಜನಮೇಜಯ; ಈಗ ಹಸ್ತಿನಾವತಿಯ ರಾಜ; **ಎಲೆ ಪರೀಕ್ಷಿತ ತನಯ ಕೇಳ್**=ಜನಮೇಜಯ ರಾಜನಿಗೆ ವ್ಯಾಸರು ರಚಿಸಿದ ಮಹಾಭಾರತದ ಕತೆಯನ್ನು ಮತ್ತೊಮ್ಮೆ ವೈಶಂಪಾಯನ ಮುನಿಯು ಹೇಳುತ್ತಿದ್ದಾನೆ; ನೃಪ=ರಾಜ; ತಿಲಕ=ಉತ್ತಮನಾದವನು; ನೃಪತಿಲಕ=ಬೃಹನ್ನಳೆಯ ಮಾರುವೇಶದಲ್ಲಿರುವ ಅರ್ಜುನ; ಕೊಳುಗುಳ=ರಣರಂಗ/ಕಾಳೆಗದ ಭೂಮಿ; ತರೆ=ತರಲು;

**ನೃಪತಿಲಕನು ಅತಿ ವೇಗದಲಿ ರಥವನು ಕೊಳುಗುಳಕೆ ತರೆ**=ಸಾರಥಿಯಾದ ಬೃಹನ್ನಳೆಯು ಅತಿವೇಗದಿಂದ ಕುದುರೆಗಳನ್ನು ಮುನ್ನಡೆಸುತ್ತ ವಿರಾಟನಗರದಿಂದ ದುರ್ಯೋಧನನ ಸೇನೆಯು ಬೀಡುಬಿಟ್ಟಿದ್ದ ರಣರಂಗದ ಕಡೆಗೆ ತೇರನ್ನು ತರುತ್ತಿದ್ದಂತೆಯೇ; **ಉತ್ತರ ಮುಂದೆ ದೂರದಲಿ**=ಉತ್ತರಕುಮಾರನು ತನ್ನ ಮುಂದೆ ಸ್ವಲ್ಪ ದೂರದಲ್ಲಿ ನೆರೆದಿದ್ದ ಸೇನೆಯತ್ತ ನೋಡಿದನು;

ತಳಿತ=ಹರಡು/ಕವಿ/ಆವರಿಸು; ಕುಂತ=ಈಟಿ;/ಒಂದು ಬಗೆಯ ಆಯುಧ; ಬಾಯಿಧಾರೆ=ಆಯುಧಗಳ ಹರಿತವಾದ ಅಂಚು; ಹೊಳವು=ಕಾಂತಿ; **ತಳಿತ ಕುಂತದ ಬಾಯಿ ಧಾರೆಯ ಹೊಳವುಗಳ**=ಸೇನೆಯ ಉದ್ದಗಲದಲ್ಲಿ ಎದ್ದು ಕಾಣುವಂತೆ ಹರಡಿಕೊಂಡಿರುವ ಕತ್ತಿ ಈಟಿ ಮುಂತಾದ ಹತಾರಗಳ ಹರಿತವಾದ ಅಂಚಿನಿಂದ ಹೊಳೆಯುತ್ತಿರುವ ಕಾಂತಿ; ಹೊದರು=ಹೆಚ್ಚಾಗು; **ಹೊದರೆದ್ದ=ದಟ್ಟವಾಗು/ಹೇರಳವಾಗು; ಸಿಂಧ**=ಬಾವುಟ; ಸೆಳೆ=ಬಳುಕು/ಅಲ್ಲಾಡು; ಸೀಗುರಿ=ಚಾಮರ/ಬೀಸಣಿಗೆ; **ಹೊದರೆದ್ದ ಸಿಂಧದ ಸೆಳೆಯ ಸೀಗುರಿಗಳ**=ಸೇನಾಪಡೆಯ ತೇರುಗಳ ಮೇಲೆ ಕಟ್ಟಿರುವ ಬಾವುಟಗಳ ಸಂಕೆಯು ಹೇರಳವಾಗಿದ್ದು, ಬಾವುಟಗಳು ಚಾಮರಗಳಂತೆ ಅತ್ತಿತ್ತ ಬೀಸುತ್ತಿವೆ; ವಿಡಂಬ=ಆಡಂಬರ/ಕಾಳೆಗದಲ್ಲಿ ಬಾರಿಸುವ ರಣವಾದ್ಯ; ಸಕಲ=ಸಮಸ್ತ/ಎಲ್ಲ; ಮೋಹರ=ಸೇನೆ/

ದಂಡು; **ವಿಡಂಬದ ಸಕಲ ಮೋಹರವ ಕಂಡನು**=ರಣರಂಗದಲ್ಲಿ ನುಡಿಸುವ ವಾದ್ಯಗಳಾದ ಡೋಲು/ನಗಾರಿ/ತಮ್ಮಟೆಯ ವಾದ್ಯಗಳಿಂದ ಮೆರೆಯುತ್ತಿದ್ದ ದುರ್ಯೋಧನನ ಸಮಸ್ತ ಸೇನೆಯನ್ನು ಕಂಡನು;

ಕರಿ=ಆನೆ; ಘಟಾ=ಗುಂಪು; ಆವಳಿ=ಸಾಲು; ಒಡ್ಡುಗಲ್ಲು=ಚಾಚಿಕೊಂಡಿರುವ ಕಲ್ಲು/ವಿಸ್ತಾರವಾದ ಬಂಡೆ; **ಕರಿಘಟಾವಳಿಯ ಒಡ್ಡುಗಲ್ಲಿನ**=ಆನೆಗಳ ಗುಂಪಿನ ಸಾಲು ಕಡಲಿನಲ್ಲಿ ವಿಸ್ತಾರವಾದ ಜಾಗದಲ್ಲಿ ಚಾಚಿಕೊಂಡಿರುವ ಬಂಡೆಗಲ್ಲಿನಂತೆಯೂ; ತುರಗ=ಕುದುರೆ; ನಿಕರ=ಗುಂಪು; ತೆರೆ=ಅಲೆ/ತರಂಗ; **ತುರಗ ನಿಕರದ ತೆರೆಯ**=ಕುದುರೆಗಳ ಗುಂಪು ಕಡಲಿನ ಉಬ್ಬರವಿಳಿತದ ಅಲೆಗಳಂತೆಯೂ; ತೇರು=ರಥ; ಹೊರಳಿ=ಗುಂಪು; ಸುಳಿ=ನೀರು ಗುಂಡಾಗಿ ಸುತ್ತುವ ಎಡೆ/ಮಡು; **ತೇರಿನ ಹೊರಳಿಗಳ ಸುಳಿಯ**=ತೇರುಗಳ ಸಮೂಹವು ಆಳವಾದ ನೀರಿನ ಮಡುಗಳಂತೆಯೂ; ಆತಪತ್ರ=ಕೊಡೆ/ಸತ್ತಿಗೆ/ರಾಜತನದ ಸಂಕೇತವಾದ ಬೆಳ್ಗೊಡೆ; ಬಹಳ=ಹೆಚ್ಚು/ಅಪಾರವಾದ; ಬುದ್ಬುದ=ನೀರ ಮೇಲಣ ಗುಳ್ಳೆ/ಬೆಳ್ಳನೆಯ ನೊರೆ;

**ಆತಪತ್ರದ ಬಹಳ ಬುದ್ಬುದದ**=ಬೆಳ್ಗೊಡೆಗಳು ಅಲೆಗಳ ಬಡಿತದಿಂದ ಉಂಟಾಗುವ ಬೆಳ್ನೊರೆಗಳಂತೆಯೂ; ನರ=ಮಾನವ; ನಿಕಾಯ=ಗುಂಪು; ಜಲಚರ=ನೀರಿನಲ್ಲಿ ವಾಸಿಸುವ ಮೀನು ಮೊಸಳೆ ಮುಂತಾದ ಜೀವಿಗಳು; ಓಘ=ಗುಂಪು; **ನರನಿಕಾಯದ ಜಲಚರ ಓಘದ**=ಚತುರಂಗ ಬಲದ ಕಾದಾಳುಗಳು ಕಡಲಿನ ಜೀವಿಗಳಂತೆಯೂ; ತರ=ರೀತಿ; ರವದ+ಉಬ್ಬರ+ಒಳು; ರವ=ಶಬ್ದ/ದನಿ; ಉಬ್ಬರ=ಆವೇಗ/ಸಡಗರ/ಹೆಚ್ಚುಗೆ; ಬಹಳ=ಅನಂತವಾದ/ದೊಡ್ಡದಾದ; ಜಲನಿಧಿ+ಅಂತೆ; ಜಲನಿಧಿ=ಕಡಲು/ಸಮುದ್ರ; ಅಂತೆ=ಹಾಗೆ; **ತರದ ವಾದ್ಯ ಧ್ವನಿಯ ರವದುಬ್ಬರದೊಳು ಕುರುಸೇನೆ ಬಹಳ ಜಲನಿಧಿಯಂತೆ ಇದ್ದುದು**=ಬಹುಬಗೆಯ ರಣವಾದ್ಯಗಳ ಶಬ್ದದಿಂದ ಮೊರೆಯುತ್ತ ಕುರುಸೇನೆಯು ಅನಂತವಾದ ಕಡಲಿನಂತಿತ್ತು;

ಖಡ್ಗ=ಕತ್ತಿ; ಜಡಿ=ಜಳಪಿಸು/ಬೀಸು; ಕಿಡಿ=ಬೆಂಕಿಯ ಕಣ; **ಖಡ್ಗದ ಜಡಿವ ಕಿಡಿಯ**=ದುರ್ಯೋಧನನ ಸೇನೆಯ ಕಾದಾಳುಗಳು ಜಳಪಿಸುತ್ತಿರುವ ಕತ್ತಿಗಳ ಕಾಂತಿಯು ಬೆಂಕಿಯ ಕಣಗಳಂತೆಯೂ; ಕಡುಹು=ಉಗ್ರತೆ/ಆವೇಶ/ಬಿರುಸು; ಕೇಸುರಿ=ಕೆಂಪು ಜ್ವಾಲೆ/ಬೆಂಕಿ; **ಸೇನೆಯ ಕಡುಹುಗಳ ಕೇಸುರಿಯ**=ಕಾದಾಳುಗಳ ಉಗ್ರತೆಯೇ ಬೆಂಕಿಯ ಜ್ವಾಲೆಯಂತೆಯೂ; ರಭಸ=ತೀವ್ರ ವೇಗ; ರೌದ್ರ=ಭಯಂಕರ/ಭೀಕರ; ರವ=ಶಬ್ದ; ಛಟಛಟ=ದನಿಯನ್ನು ಸೂಚಿಸುವ ಅನುಕರಣದ ಪದ; ನಿಸ್ವನ=ದನಿ/ಶಬ್ದ; **ರಭಸದ ರೌದ್ರರವ ಛಟಛಟಿತ ನಿಸ್ವನದ=**

ವೇಗವಾಗಿ ಮುನ್ನುಗ್ಗಲು ಹಾತೊರೆಯುತ್ತಿರುವ ಸೇನೆಯ ಕೋಲಾಹಲವು ದೊಡ್ಡ ದನಿಯಾಗಿ ಅನುರಣಿಸುತ್ತಿರುವಂತೆಯೂ; ಧೂಳು=ಮಣ್ಣಿನ ಹುಡಿ; ಇಡಿದ=ತುಂಬಿರುವ; ಧೂಮರಾಶಿ=ಹೊಗೆ; ಪಡೆ=ಸೇನೆ;

**ಧೂಳಿಯ ಇಡಿದ ಧೂಮರಾಶಿಯ ಪಡೆ**=ಚತುರಂಗಬಲದ ಕಾಲ್ತುಳಿತದಿಂದ ಮೇಲೆದ್ದ ದೂಳಿನ ರಾಶಿಯೇ ಹೊಗೆ ಕವಿದಂತೆಯೂ; ಒಡನೆ+ಒಡನೆ; ಒಡನೊಡನೆ=ಜತೆಜತೆಯಲ್ಲಿ; **ಒಡನೊಡನೆ ಇದಿರಿನಲಿ**=ದುರ್ಯೋಧನನ ಸೇನೆಯ ಇರುವಿಕೆಯು ಬೆಂಕಿಯ ಕಣಗಳಂತೆ, ಜ್ವಾಲೆಗಳಂತೆ, ಅನುರಣಿಸುವ ಶಬ್ದದಂತೆ, ದಟ್ಟವಾಗಿ ಕವಿದ ಹೊಗೆಯಂತೆ ಎಲ್ಲವೂ ಜತೆಗೂಡಿ ಎದುರುಗಡೆಯಲ್ಲಿ ಕಂಡುಬರಲು; ಕಣ್+ಗಳು=ಕಂಗಳು; ದಾವಾಗ್ನಿ+ಅಂತಿರೆ; ದಾವಾಗ್ನಿ=ಕಾಳ್ಗಿಚ್ಚು/ಅರಣ್ಯದಲ್ಲಿ ಹತ್ತಿ ಉರಿಯುವ ಬೆಂಕಿ; ಅಂತಿರೆ=ಅಂತಿರಲು; ತೋರಿತು=ಕಂಡುಬಂದಿತು; **ವಿರಾಟನ ಮಗನ ಕಂಗಳಿಗೆ ದಾವಾಗ್ನಿಯಂತಿರೆ ತೋರಿತು**=ಉತ್ತರಕುಮಾರನ ಕಣ್ಣುಗಳಿಗೆ ದುರ್ಯೋಧನನ ಸೇನೆಯು ಕಾಳ್ಗಿಚ್ಚಿನಂತೆ ಕಂಡುಬಂದಿತು;

ಪ್ರಳಯ=ಇಡೀ ಜಗತ್ತು ಸರ್ವನಾಶವಾಗುವುದು; ಮೇಘ=ಮೋಡ; ಮಾತೃಕೆ=ನೆಲೆ/ಮೂಲ/ಆಗರ; **ಪ್ರಳಯ ಮೇಘದ ಮಾತೃಕೆಯೊ**=ಇಡೀ ಜಗತ್ತನ್ನೇ ನಾಶಮಾಡಲು ಬಂದಿರುವ ಕಾರ್ಮೋಡಗಳ ನೆಲೆಯೋ; ಕರಿ=ಆನೆ; ಕುಲ=ಗುಂಪು/ಹಿಂಡು; **ಕರಿಕುಲವೊ**=ಆನೆಗಳ ಹಿಂಡೋ; ಸಿಡಿಲು=ಮೋಡಗಳ ತಿಕ್ಕಾಟದಿಂದ ಹೊರಹೊಮ್ಮುವ ವಿದ್ಯುತ್ ಪ್ರವಾಹ. ಇದು ಬಡಿದ ಕಡೆ ಎಲ್ಲವೂ ಸುಟ್ಟು ಕರಿಕಲಾಗುತ್ತದೆ; ಗರುಡಿ=ನೆಲೆ; **ಸಿಡಿಲಿನ ಗರುಡಿಯೋ**=ಸಿಡಿಲಿನ ನೆಲೆಯೋ; ಕಳಕಳ=ಗಜಿಬಿಜಿ/ಗದ್ದಲ/ಗೊಂದಲ; **ಕಳಕಳವೋ**=ಚತುರಂಗಬಲದ ಅಬ್ಬರದ ದನಿಯೋ; ಕಲ್ಪ+ಅನಲನ; ಕಲ್ಪ=ಪ್ರಳಯ; ಅನಲ=ಬೆಂಕಿ; ಧೂಮ+ಆವಳಿ; ಧೂಮ=ಹೊಗೆ; ಆವಳಿ=ಸಮೂಹ; **ಕಲ್ಪಾನಲನ ಧೂಮಾವಳಿಯೊ**= ಪ್ರಳಯ ಕಾಲದ ಬೆಂಕಿಯಲ್ಲಿ ದಟ್ಟವಾಗಿ ಕವಿದಿರುವ ಕಪ್ಪನೆಯ ಹೊಗೆಯೋ; ಕೈದು=ಆಯುಧ/ಹತಾರ;

**ಕೈದುಗಳೊ**=ತೇರು ಆನೆ ಕುದುರೆ ಕಾದಾಳುಗಳೆಲ್ಲವೂ ಆಯುಧಗಳೋ; ದಡ್ಡಿ=ಹೊದಿಕೆ/ಮುಸುಕು; ಬೆಟ್ಟದ+ಅಡವಿಯೊ; ಅಡವಿ=ಕಾಡು; **ನೆಲನ ದಡ್ಡಿಯ ಬೆಟ್ಟದಡವಿಯೊ**=ನೆಲದ ಮೇಲೆ ಹಬ್ಬಿಕೊಂಡಿರುವ ಬೆಟ್ಟಗುಡ್ಡಕಾಡುಗಳೋ; ತಳಿತ=ಹರಡಿಕೊಂಡಿರುವ; ಟೆಕ್ಕೆ/ಟೆಕ್ಕೆಯ=ಬಾವುಟ; **ತಳಿತ ಟೆಕ್ಕೆಯವೋ**=ಎಲ್ಲೆಡೆ ಹರಡಿಕೊಂಡಿರುವ ಬಾವುಟಗಳೋ; ಅಳಿ=ನಾಶಪಡಿಸು; ಜಲಧಿ=ಕಡಲು/ ಸಮುದ್ರ; **ಜಗಂಗಳನು ಅಳಿವ ಜಲಧಿಯೊ ಸೇನೆಯೋ**=ಜಗತ್ತೆಲ್ಲವನ್ನೂ

ನಾಶಪಡಿಸುವ ಉಕ್ಕೆದ್ದ ಸಾಗರವೋ ಇಲ್ಲವೇ ಸೇನೆಯೋ; ಇದನು=ಇದನ್ನು; ಅರಿ=ತಿಳಿ; **ಇದನು ನಾವು ಅರಿಯೆವು**=ಈ ಸೇನೆಯ ಪ್ರಮಾಣ ಮತ್ತು ಬಲ ಎಷ್ಟಿದೆ ಎಂಬುದು ನನಗೆ ತಿಳಿಯದು;

ಕಾಲಕೂಟ=ಉಗ್ರವಾದ ವಿಷ/ನಂಜು; ತೊರೆ=ನದಿ; **ಕಾಲಕೂಟದ ತೊರೆಯೊ**=ಉಗ್ರವಾದ ನಂಜಿನ ತೊರೆಯೊ; ಮಾರಿ=ಒಬ್ಬ ದೇವತೆ. ಒಲಿದವರಿಗೆ ಒಳಿತನ್ನು ಮಾಡುವ ಮತ್ತು ಮುನಿದವರಿಗೆ ಸಾವನ್ನು ತರುವ ದೇವತೆ ಎಂಬ ನಂಬಿಕೆ ಜನಮನದಲ್ಲಿದೆ; ಗೂಳೆಯ=ಬಿಡಾರ; **ಮಾರಿಯ ಗೂಳೆಯವೊ**=ಸಾವಿನ ದೇವತೆಯು ರಣರಂಗವನ್ನೇ ಬಿಡಾರ ಮಾಡಿಕೊಂಡಿದ್ದಾಳೆಯೊ; ಮೃತ್ಯು=ಸಾವು; ತಾಳಿಗೆ=ಅಂಗುಳು; **ಮೃತ್ಯುವಿನ ಗಂಟಲ ತಾಳಿಗೆಯೊ**=ಸಾವಿನ ಗಂಟಲಲ್ಲಿರುವ ಅಂಗುಳೊ; ಅಂದರೆ ಸಾವು ಬಹುಸಮೀಪದಲ್ಲಿಯೇ ಇದೆಯೋ; ಭೈರವ=ಶಿವ. ಕೆಟ್ಟದ್ದನ್ನು ನಾಶಮಾಡುವಾಗ ಶಿವನು ತಳೆಯುವ ಉಗ್ರವಾದ ರೂಪ;

ಥಟ್ಟು=ಗುಂಪು; **ಭೈರವನ ಥಟ್ಟೋ**=ಎಲ್ಲವನ್ನೂ ನಾಶಪಡಿಸಬಲ್ಲ ಶಕ್ತಿಯಿರುವ ಭೈರವನ ಗುಂಪೋ; ಜವ=ಯಮ; ಜಂಗುಳಿ=ಗುಂಪು; **ಜವನ ಜಂಗುಳಿಯೊ**= ಜೀವಿಗಳ ಪ್ರಾಣವನ್ನು ಕೊಂಡೊಯ್ಯುವ ಯಮದೂತರ ಗುಂಪೊ; ಕಾಲರುದ್ರ=ಶಿವ. ಪ್ರಳಯಕಾಲದಲ್ಲಿ ಶಿವನು ತಳೆಯುವ ಉಗ್ರವಾದ ರೂಪ; ನೊಸಲು=ಹಣೆ; ವಹ್ನಿ=ಬೆಂಕಿ; ಜ್ವಾಲೆ=ದಗದಗಿಸಿ ಉರಿಯುವ ಬೆಂಕಿಯ ಕೆನ್ನಾಲಿಗೆ; **ಕಾಲರುದ್ರನ ನೊಸಲ ವಹ್ನಿಜ್ವಾಲೆಯೋ**=ಕಾಲರುದ್ರನ ಹಣೆಯಿಂದ ಹೊರಹೊಮ್ಮುವ ಬೆಂಕಿಯ ಜ್ವಾಲೆಯೋ; ಶಿವನಿಗೆ ಮೂರು ಕಣ್ಣುಗಳಿವೆ ಎಂಬ ನಂಬಿಕೆಯು ಜನಮನದಲ್ಲಿದೆ; ಜಾಲ=ಗುಂಪು; **ಕೌರವನ ಸೇನಾಜಾಲವೋ...ಶಿವ ಎನುತ ಸುಕುಮಾರ ಅಂದು ಹೆದರಿದನು**=ಉತ್ತರಕುಮಾರನು ಸೇನೆಯನ್ನು ನೋಡನೋಡುತ್ತಿದ್ದಂತೆಯೇ 'ಶಿವ... ಶಿವ' ದುರ್ಯೋಧನನ ಸೇನಾಬಲವು ಎಷ್ಟು ಭಯಂಕರವಾಗಿದೆ ಎನ್ನುತ್ತ ಹೆದರಿದನು;

ಕಣ್+ಗಳು; ಕಡೆ=ಪಕ್ಕ/ಕೊನೆ; ಹಾಯ್=ತಿರುಗಿಸು; **ಕಂಗಳು ಕಡೆಗೆ ಹಾಯವು**=ಉತ್ತರಕುಮಾರನ ಕಣ್ಣುಗಳು ಸೇನೆಯ ಕಡೆಗೆ ತಿರುಗುತ್ತಿಲ್ಲ; ಸೇನೆಯತ್ತ ನೋಡಲು ಹೆದರುತ್ತಿದ್ದಾನೆ; ಬಲ+ಕಡಲು=ಶಕ್ತಿಯ ಸಾಗರ; **ಮನವು ಈ ಬಲಗಡಲ ಈಸಾಡಲಾರದು**=ಉತ್ತರಕುಮಾರನ ಮನಸ್ಸು ಈ ಶಕ್ತಿಸಾಗರದಲ್ಲಿ ಈಜಾಡಲಾರದು. ಇದೊಂದು ರೂಪಕ. ದುರ್ಯೋಧನನ ಚತುರಂಗಸೇನೆಯ ದೊಡ್ಡಬಲವನ್ನು ಎದುರಿಸಿ ಗೆಲ್ಲುವ ಶಕ್ತಿಯಾಗಲಿ ಇಲ್ಲವೇ ಪರಾಕ್ರಮವಾಗಲಿ ಉತ್ತರಕುಮಾರನಲ್ಲಿಲ್ಲ; ಒಡಲು+ಪಿಡಿದು+ಇರಲು; ಒಡಲು=ದೇಹ/ಶರೀರ; ಪಿಡಿ=ಹಿಡಿ/ಸಲಹು/ಕಾಪಾಡು; **ಒಡಲುವಿಡಿದಿರಲು**=ಜೀವವನ್ನು ಉಳಿಸಿಕೊಂಡು

ದೇಹವನ್ನು ಕಾಪಾಡಿಕೊಂಡಿರಲು; ಅದ್ಭುತ=ಅಚ್ಚರಿಯನ್ನುಂಟುಮಾಡುವ ದೊಡ್ಡ ಸಂಗತಿ; ಏನ=ಯಾವದನ್ನಾದರೂ; ಬಾರದು=ಬರದೇ ಇರುವುದು/ಬಂದೇ ಬರುತ್ತದೆ; ಏನ ಕಾಣಲುಬಾರದು=ಏನನ್ನು ಬೇಕಾದರೂ ನೋಡಬಹುದು;

**ಒಡಲುವಿಡಿದಿರಲು ಅದ್ಭುತವ ಏನ ಕಾಣಲುಬಾರದು**=ಪ್ರಾಣ ಒಂದಿದ್ದರೆ ಜೀವನದಲ್ಲಿ ಮಹತ್ತರವಾದುದನ್ನು ಎಂದಾದರೊಂದು ದಿನ ಪಡೆಯಬಹುದು/ ಒಳ್ಳೆಯದನ್ನು ಕಾಣಬಹುದು. ಆದ್ದರಿಂದ ಮೊದಲು ಜೀವವನ್ನು ಉಳಿಸಿಕೊಂಡು ದೇಹವನ್ನು ಕಾಪಾಡಿಕೊಳ್ಳಬೇಕು; ಪೊಡವಿ=ಭೂಮಿ; ಈಯ್=ಮರಿಹಾಕು/ ಹೆರುವುದು; ಮೋಹರ=ಸೇನೆ/ಪಡೆ; **ಪೊಡವಿ ಈದುದೊ ಮೋಹರವನು**= ಭೂಮಿಯೇ ಸೇನೆಯನ್ನು ಹೆತ್ತಿತೊ ಎನ್ನುವಂತೆ ಭೂಮಿಯ ಉದ್ದಗಲಕ್ಕೂ ಸೇನೆ ಹರಡಿಕೊಂಡಿದೆ; ಕಾದು=ಯುದ್ಧ ಮಾಡು; ಆವನು=ಯಾರು; ಮೃಡ=ಶಿವ;

**ಇದರೊಡನೆ ಕಾದುವನು ಆವನು ಆತನೆ ಮೃಡನು**=ದುರ್ಯೋಧನನ ಮಹಾಸೇನೆಯೊಡನೆ ಯಾರು ಯುದ್ಧ ಮಾಡುತ್ತಾನೆಯೋ ನಿಜಕ್ಕೂ ಆತನೇ ದೇವರಾದ ಶಿವನಾಗುತ್ತಾನೆ; ಶಿವ ಶಿವ=ಆತಂಕ ಇಲ್ಲವೇ ಸಂಕಟಕ್ಕೆ ಒಳಗಾಗಿ ಅಸಹಾಯಕ ಸನ್ನಿವೇಶದಲ್ಲಿ ವ್ಯಕ್ತಿಯ ಬಾಯಿಂದ ಬರುವ ದೇವರ ಹೆಸರಿನ ಉಚ್ಚಾರಣೆ; **ಶಿವ ಶಿವ ಕಾದಿ ಗೆಲಿದೆವು**=ಶಿವ ಶಿವ... ಇಂತಹ ಮಹಾಸೇನೆಯನ್ನು ನಾವು ಜಯಿಸಿದಂತೆಯೇ ಸರಿ. ಅಂದರೆ ಹುಲುಮಾನವರಾದ ನಮ್ಮಿಂದ ಗೆಲುವು ಸಾಧ್ಯವೇ ಇಲ್ಲ; **ಬಲಕೆ ನಮೊ ಎಂದ**=ದುರ್ಯೋಧನನ ಮಹಾಸೇನೆಗೆ ಒಂದು ದೊಡ್ಡ ನಮಸ್ಕಾರ ಎಂದನು;

ಮಂದೆ=ಗುಂಪು; ನುಸುಳು=ಒಳಸೇರು; ಬೃಹನ್ನಳೆ, **ಹಸಿದ ಮಾರಿಯ ಮಂದೆಯಲಿ ಕುರಿ ನುಸುಳಿದಂತಾದೆನು**=ಬೃಹನ್ನಳೆಯೇ, ಈಗ ನನ್ನ ಸ್ಥಿತಿಯು ಹೇಗಿದೆಯೆಂದರೆ ಹಸಿವಿನಿಂದ ಕಂಗಾಲಾಗಿರುವ ಮಾರಿಯ ಮಂದೆಯೊಳಕ್ಕೆ ಕುರಿಯು ತಾನಾಗಿಯೇ ಒಳನುಗ್ಗಿ ಬಂದಂತಾಗಿದೆ; ಅಂದರೆ ಮಹಾಸೇನೆಯೊಡನೆ ಹೋರಾಡಲು ನಾನು ಹೋದರೆ ನನಗೆ ಸಾವು ನಿಶ್ಚಿತ; ತೇಜಿ=ಕುದುರೆ; ಎಸಗು=ತೇರನ್ನು ನಡೆಸು; ತಡೆ=ನಿಲ್ಲಿಸು; **ತೇಜಿಗಳ ಎಸಗದಿರು ತಡೆ**=ತೇರಿಗೆ ಕಟ್ಟಿರುವ ಕುದುರೆಗಳನ್ನು ಮುನ್ನಡೆಸಬೇಡ. ತೇರನ್ನು ನಿಲ್ಲಿಸು; ಚಮ್ಮಟಿಗೆ=ಚಾವಟಿ/ಬಾರುಕೋಲು; **ಚಮ್ಮಟಿಗೆಯನು ಬಿಸುಡು**=ಚಾವಟಿಯನ್ನು ಬಿಸಾಡು; ಮಿಸುಕು=ನಡೆ/ಚಲಿಸು;

ಮಿಸುಕಬಾರದು=ತೇರನ್ನು ಇನ್ನು ಮುಂದಕ್ಕೆ ಬಿಡಬೇಡ; ಕಾಲ=ಯಮ; ಮುಸುಕು=ಹೊದಿಕೆ; ಉಗಿವವನು+ಆರು; ಉಗಿ=ಸೆಳೆ/ಕಳಚು; ಆರು=ಯಾರು; **ಪ್ರಳಯ ಕಾಲನ ಮುಸುಕನು ಉಗಿವವನಾರು**=ಎಲ್ಲ ಜೀವಿಗಳನ್ನು ಸಾವಿನ ಮನೆಗೆ

ಕೊಂಡೊಯ್ಯುವ ಯಮನ ಮಯ್ ಮೇಲಣ ಹೊದಿಕೆಯನ್ನು ಕಿತ್ತು ಎಸೆಯುವವನು ಯಾರು; ಅಂದರೆ ಯಮನ ಸಹವಾಸಕ್ಕೆ ಹೋದರೆ ಹೇಗೆ ಸಾವು ನಿಶ್ಚಿತವೋ ಅಂತೆಯೇ ಯಮರೂಪದಂತಿರುವ ಸೇನೆಯನ್ನು ಕೆಣಕಿದರೆ ನನಗೆ ಸಾವು ಉಂಟಾಗುತ್ತದೆ; ಅಸಮ=ಸರಿಸಾಟಿಯಿಲ್ಲದ/ಸಮಾನವಿಲ್ಲದ; **ಕೌರವನು ಅಸಮ ಬಲನೈ**=ದುರ್ಯೋಧನನು ಯಾರಿಗೂ ಸರಿಸಾಟಿಯಿಲ್ಲದ ಬಲವನ್ನು ಹೊಂದಿದ್ದಾನೆ. ಅವನಿಗೆ ಸಮಾನರಾದ ಬಲಶಾಲಿಗಳೇ ಯಾರೂ ಇಲ್ಲ; ಮರಳಿಚು=ಹಿಂತಿರುಗಿಸು; ಜಾಳಿಸು=ಹೋಗು; **ರಥವ ಮರಳಿಚು ಜಾಳಿಸುವೆನು**= ತೇರನ್ನು ಹಿಂತಿರುಗಿಸು. ನಾನು ಇಲ್ಲಿಂದ ವಿರಾಟನಗರಿಯತ್ತ ಹೋಗುತ್ತೇನೆ;

ಎಲೆ=ಮತ್ತೊಬ್ಬ ವ್ಯಕ್ತಿಯ ಜತೆ ಮಾತನ್ನಾಡುವಾಗ ಬಳಸುವ ಪದ; ಚುಂಬನ=ಒಲವು ನಲಿವಿನಿಂದ ಮತ್ತೊಬ್ಬರ ದೇಹವನ್ನು ತಬ್ಬಿಕೊಂಡು ತುಟಿಗಳ ಮೂಲಕ ಮುತ್ತನ್ನು ಇಡುವುದು; ಹಲು=ಹಲ್ಲು; **ಮೊದಲ ಚುಂಬನದೊಳಗೆ ಹಲು ಬಿದ್ದಂತೆ**=ಗಂಡು ಹೆಣ್ಣು ಕಾಮದಿಂದಲೋ ಪ್ರೇಮದಿಂದಲೋ ಪರಸ್ಪರ ತಬ್ಬಿಕೊಂಡು ರಮಿಸುವಾಗ ಮೊದಲ ಮುತ್ತನ್ನು ಇಡುವಾಗಲೇ ಹಲ್ಲು ಕಳಚಿ ಬಿದ್ದರೆ, ಪ್ರೇಮಿಗಳು ಹತಾಶರಾಗುವಂತೆ; ಬೆರೆ=ಕೂಡು/ಸೇರು; ಮುನ್ನ= ಮೊದಲೇ; ಸಮರ=ಯುದ್ಧ/ಕಾಳೆಗ; ಭೀತಿ=ಹೆದರಿಕೆ/ಪುಕ್ಕಲುತನ; ಭೀತಿ ಹಿಡಿದೈ=ಹೆದರಿಕೆಗೆ ಒಳಗಾದೆಯಲ್ಲಾ;

**ಎಲೆ ಕುಮಾರಕ, ಮೊದಲ ಚುಂಬನದೊಳಗೆ ಹಲು ಬಿದ್ದಂತೆ ಕಾಳಗದೊಳಗೆ ಬೆರೆಯದ ಮುನ್ನ ಸಮರ ಭೀತಿಯನು ಹಿಡಿದೈ**=ಎಲೆ ಉತ್ತರಕುಮಾರನೇ, ಮೊದಲ ಚುಂಬನದಲ್ಲಿಯೇ ಹಲ್ಲು ಕಳಚಿಬಿದ್ದಂತೆ ರಣರಂಗದಲ್ಲಿ ಹಗೆಯೊಡನೆ ಹೋರಾಡುವ ಮುನ್ನವೇ ಕಾಳೆಗದಲ್ಲಿ ಏನಾಗುವುದೋ ಎಂಬ ಪುಕ್ಕಲುತನದಿಂದ ಕಂಗಾಲಾಗಿರುವೆಲ್ಲಾ; ಅಳುಕು=ಅಂಜಿಕೆ/ಹೆದರಿಕೆ; **ಅಳುಕಲಾಗದು**= ರಾಜಕುವರನಾದ ನೀನು ಈ ರೀತಿ ಹೆದರಬಾರದು; ಕುಲ=ವಂಶ/ಮನೆತನ; ಕುಂದು=ಕಳಂಕ/ಕೆಟ್ಟ ಹೆಸರು;

**ನಿಮ್ಮ ತಂದೆಯ ಕುಲಕೆ ಕುಂದನು ತಾರದಿರು**=ರಣರಂಗದಲ್ಲಿ ಕಾದುವ ಮುನ್ನವೇ ಹೇಡಿಯಾಗಿ ಓಡಿಹೋದನು ಎಂಬ ಕಳಂಕವನ್ನು ನಿಮ್ಮ ತಂದೆಯಾದ ವಿರಾಟರಾಯನ ರಾಜಮನೆತನಕ್ಕೆ ತರಬೇಡ; ಮನ=ಮನಸ್ಸು; ಗೆಲವು=ಆನಂದ/ ಉತ್ಸಾಹ/ಹುಮ್ಮಸ್ಸು/ಜಯಿಸುವುದು; ಕಾದು=ಹೋರಾಡು; ಮನಗೆಲುವು= ಇದೊಂದು ನುಡಿಗಟ್ಟು. ಮನದಲ್ಲಿ ಕೆಚ್ಚು, ಉತ್ಸಾಹ ಮತ್ತು ಆತ್ಮವಿಶ್ವಾಸದ ಒಳಮಿಡಿತಗಳನ್ನು ಹೊಂದಿರುವುದು; **ಮನ ಗೆಲವಿನಲಿ ಕಾದು ಎನುತ ರಥವನು ಬೇಗ ಹರಿಸಿದನು**=ಮನಸ್ಸಿನಲ್ಲಿ ಕೆಚ್ಚು ಮತ್ತು ಉತ್ಸಾಹದಿಂದ ಕೂಡಿ ಹಗೆಗಳನ್ನು

ಸದೆಬಡಿದು ಗೆದ್ದೇ ಗೆಲ್ಲುತ್ತೇನೆ ಎಂಬ ಆತ್ಮವಿಶ್ವಾಸದಿಂದ ಹೋರಾಡಲು ಅಣಿಯಾಗು ಎಂದು ಹೇಳುತ್ತ, ಅರ್ಜುನನು ತೇರನ್ನು ವೇಗವಾಗಿ ರಣರಂಗದತ್ತ ಮುನ್ನಡೆಸಿದನು;

ಸಾರು=ಸಮೀಪಿಸು/ಹತ್ತಿರಕ್ಕೆ ಬರು; ತನು=ಮಯ್; ಮಿಗೆ=ಅತಿಶಯವಾಗಿ/ಹೆಚ್ಚಾಗಿ; ಭಾರಿಸು=ಜಡವಾಗು/ಮರಗಟ್ಟು; **ಸಾರಿ ಬರಬರಲು ಅವನ ತನು ಮಿಗೆ ಭಾರಿಸಿತು**=ತೇರು ರಣರಂಗಕ್ಕೆ ಹತ್ತಿರವಾದಂತೆಲ್ಲಾ ಉತ್ತರಕುಮಾರನ ಮಯ್ ಹೆದರಿಕೆಯಿಂದ ಶಕ್ತಿಯುಡುಗಿ ಜಡವಾಗತೊಡಗಿತು; ಮೈಮುರಿ=ಹೆದರಿಕೆಯು ಹೆಚ್ಚಾದಾಗ ಕಯ್ ಕಾಲುಗಳು ಶಕ್ತಿಗುಂದಿ ಸೆಟೆದುಕೊಳ್ಳುವುದು; ರೋಮ=ಮಯ್ ಮೇಲಣ ಕೂದಲು; ವಿಕಾರ=ವ್ಯತ್ಯಾಸ; ಘನ=ದೊಡ್ಡದು; ಕಾಹು+ಏರಿತು; ಕಾಹು=ಬಿಸಿ; ಏರಿತು=ಹೆಚ್ಚಾಯಿತು;

**ಮೈಮುರಿದು ರೋಮ ವಿಕಾರ ಘನ ಕಾಹೇರಿತು**=ಜೀವಭಯದಿಂದ ತತ್ತರಿಸುತ್ತಿರುವ ಉತ್ತರಕುಮಾರನ ಕಯ್ ಕಾಲುಗಳು ಶಕ್ತಿಯುಡುಗಿ ಸೆಟೆದುಕೊಂಡವು; ಹೆದರಿಕೆಯಿಂದ ಮಯ್ ನವಿರೆದ್ದು ದೇಹದ ಬಿಸಿಯು ಹೆಚ್ಚಾಯಿತು; ಅವಯವ=ಅಂಗ/ದೇಹ; ಡೆಂಡಣಿಸು=ಕಂಪಿಸು; ಭೂರಿ=ಹೆಚ್ಚು; ತಾಪ=ಬಿಸಿ; ತಾಳಿಗೆ=ಅಂಗುಳು; **ಅವಯವ ನಡುಗಿ ಡೆಂಡಣಿಸಿ ಭೂರಿಭಯ ತಾಪದಲಿ ತಾಳಿಗೆ ನೀರು ತೆಗೆದುದು**=ದೇಹವೆಲ್ಲವೂ ನಡನಡುಗಿ ಕಂಪಿಸುತ್ತ, ಅತಿಹೆಚ್ಚಿನ ಅಂಜಿಕೆಯ ತಾಪದಿಂದಾಗಿ ಅಂಗುಳಿನಲ್ಲಿ ನೀರಿಲ್ಲದಂತಾಯಿತು;

ಸುಕುಮಾರ=ಕೋಮಲವಾದ ಶರೀರವುಳ್ಳವನು; ಕಣ್+ಎವೆ; ಎವೆ=ರೆಪ್ಪೆ; ಸೀಯು=ಹೆಚ್ಚಾಗಿ ಸುಡು/ಅತಿಯಾದ ಬಿಸಿಯಿಂದ ಕಾಯು; ಕರ=ಕಯ್/ಹಸ್ತ; **ತುಟಿ ಒಣಗಿ, ಸುಕುಮಾರ ಕಣ್ಣೆವೆ ಸೀಯೆ ಕರದಲಿ ಮುಖವ ಮುಚ್ಚಿದನು**=ಪ್ರಾಣಭಯದಿಂದ ಹೆದರಿ ಹೆಪ್ಪಳಿಸಿಹೋಗಿರುವ ಉತ್ತರಕುಮಾರನ ದೇಹದಲ್ಲಿ ಅನೇಕ ಬಗೆಯ ಪರಿಣಾಮಗಳು ಕಂಡುಬರುತ್ತಿವೆ. ತುಟಿಗಳು ಒಣಗಿ, ಕಣ್ಣಿನ ರೆಪ್ಪೆಗಳು ಸುಡುವಂತಾದುದರಿಂದ ಸೇನೆಯನ್ನಾಗಲಿ ಇಲ್ಲವೇ ಬೃಹನ್ನಳೆಯನ್ನಾಗಲಿ ನೋಡಲಾಗದೆ ತನ್ನ ಕಯ್ಗಳಿಂದ ಮೊಗವನ್ನು ಮುಚ್ಚಿಕೊಂಡನು;

**ಏಕೆ ಸಾರಥಿ, ರಥವ ಮುಂದಕೆ ನೂಕಿ ಗಂಟಲ ಕೊಯ್ವೆ**=ಏಕೆ ಸಾರಥಿ, ತೇರನ್ನು ರಣರಂಗದತ್ತ ಮುನ್ನಡೆಸುತ್ತ ನನ್ನ ಗಂಟಲನ್ನು ಕುಯ್ಯುತ್ತೀಯೆ; ಸುಡುಸುಡು=ಇದು ಒಂದು ನುಡಿಗಟ್ಟು. ವ್ಯಕ್ತಿಯ ನಡೆನುಡಿಗಳನ್ನು ತಿರಸ್ಕರಿಸುವಾಗ 'ನಿನ್ನ ಮಾತಿಗಷ್ಟು ಬೆಂಕಿ ಹಾಕ/ನಿನ್ನ ಕೆಲಸಕ್ಕಷ್ಟು ಬೆಂಕಿ ಹಾಕ' ಎಂಬ ತಿರುಳಿನಲ್ಲಿ ಈ ನುಡಿಗಟ್ಟು ಬಳಕೆಗೊಂಡಿದೆ; ಕಾಕು=ವ್ಯಂಗ್ಯ/ಕೊಂಕುನುಡಿ; ಒಡೆ=ಸೀಳು/ಬಿರಿ; **ಸುಡು ಸುಡು ಕಾಕಲಾ, ಕಣ್ಣು ಒಡೆದವೇ**=ತೇರನ್ನು ಹಗೆಯ ಮುಂದಕ್ಕೆ ತಳ್ಳುತ್ತಿರುವ

ನಿನ್ನ ಕೆಲಸಕ್ಕೆ ಬೆಂಕಿಹಾಕ. ಯುದ್ಧವೆಂದರೆ ನಗೆಚಾಟಿಕೆಯೆಂದು ತಿಳಿದಿರುವೆಯಾ. ನಿನ್ನ ಕಣ್ಣು ಗುಡ್ಡೆಗಳು ಒಡೆದುಹೋಗಿವೆಯೇ;

**ಆ ಮಹಾಬಲವ ಕಾಣು**=ಆ ದೊಡ್ಡ ಸೇನೆಯನ್ನು ನೋಡು; ನಾಕ=ಸ್ವರ್ಗ; ನಿಲಯ=ಮನೆ; ನಾಕನಿಲಯರು=ದೇವತೆಗಳು; ಅರಿದು=ಸಾಧ್ಯವಿಲ್ಲ/ ಆಗುವುದಿಲ್ಲ; **ನಾಕನಿಲಯರಿಗೆ ಅರಿದು**=ದೇವತೆಗಳಿಂದಲೂ ದುರ್ಯೋಧನನ ಚತುರಂಗಬಲವನ್ನು ಗೆಲ್ಲಲು ಆಗುವುದಿಲ್ಲ; ವಿವೇಕ=ಯಾವುದನ್ನು ಮಾಡಬೇಕು–ಯಾವುದನ್ನು ಮಾಡಬಾರದು ಎಂಬ ತಿಳುವಳಿಕೆ; ಎಳ್+ಅನಿತು; ಎಳ್=ಜಿಡ್ಡಿನ ಅಂಶವನ್ನು ಒಳಗೊಂಡ ಧಾನ್ಯದ ಸಣ್ಣ ಕಾಳು; ಅನಿತು=ಅಷ್ಟು; ಎಳ್ಳನಿತು=ಇದೊಂದು ನುಡಿಗಟ್ಟು. ತುಸುವಾದರೂ/ಸ್ವಲ್ಪವಾದರೂ ಎಂಬ ತಿರುಳಿನಲ್ಲಿ ಬಳಕೆಯಾಗುತ್ತದೆ; **ನಿನಗೆ ವಿವೇಕವು ಎಳ್ಳನಿತಿಲ್ಲ**=ನಿನಗೆ ವಿವೇಕವೆಂಬುದು ಕಿಂಚಿತ್ತಾದರೂ ಇಲ್ಲ;

**ತೆಗೆ ತೆಗೆ ಸಾಕು**=ತೇರನ್ನು ಮುನ್ನಡೆಸಬೇಡ. ಸಾಕು... ನಿಲ್ಲಿಸು; ವಾಘೆ= ಕುದುರೆಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಅದರ ಬಾಯಲ್ಲಿ ಸಿಕ್ಕಿಸುವ ಕಬ್ಬಿಣದ ತುಂಡು ಮತ್ತು ಅದಕ್ಕೆ ಕಟ್ಟುವ ತೊಗಲಿನ ಪಟ್ಟಿ/ಲಗಾಮು; ಮರಳು=ಹಿಂತಿರುಗು; ತೇಜಿ=ಕುದುರೆ; **ವಾಘೆಯ ಮರಳಿ ಹಿಡಿ ತೇಜಿಗಳ ತಿರುಹು**=ಲಗಾಮನ್ನು ಹಿಂದಕ್ಕೆ ಎಳೆದು ಹಿಡಿದುಕೊ... ಕುದುರೆಗಳನ್ನು ಹಿಂದಕ್ಕೆ ತಿರುಗಿಸು; ಬಿಲ್+ಅಂಬುಗಳು; ಅಂಬು=ಬಾಣ; **ನುಡಿಯ ಕೇಳದೆ ಅರ್ಜುನ ರಥವ ಹತ್ತೆಂಟು ಅಡಿಯನು ಮುಂದೆ ಹರಿಸಲು, ಹಿಡಿದ ಬಿಲ್ಲಂಬುಗಳು ಬಿದ್ದವು**=ಉತ್ತರಕುಮಾರನ ಮಾತುಗಳಿಗೆ ಬೆಲೆಕೊಡದೆ ಅರ್ಜುನನು ತೇರನ್ನು ಹತ್ತೆಂಟು ಅಡಿಗಳಷ್ಟು ಮುಂದೆ ನಡೆಸುತ್ತಿದ್ದಂತೆಯೇ, ಉತ್ತರಕುಮಾರನು ತನ್ನ ಕಯ್ಯಲ್ಲಿದ್ದ ಬಿಲ್ಲು ಬಾಣಗಳನ್ನು ಕೆಳಕ್ಕೆ ಎಸೆದನು;

**ಕೈಯನು ಅರೆತೆಗೆದು**=ಕಯ್ಯನ್ನು ಸ್ವಲ್ಪ ಅಗಲಿಸಿ ಬೃಹನ್ನಳೆಯ ಮೊಗದತ್ತ ಕಯ್ಯನ್ನು ತೋರಿಸುತ್ತಾ; ಇರಿ=ಕೊಲ್ಲು/ಸಂಹರಿಸು; ಇರಿಗಾರ=ಕೊಲೆಗಾರ; ಹಯ=ಕುದುರೆ; **ಇರಿಗಾರ ಸಾರಥಿ ಹಯವನು ಹಿಡಿ**=ಕೊಲೆಗಾರ ಸಾರಥಿಯೇ... ಕುದುರೆಗಳನ್ನು ಮುನ್ನಡೆಸಬೇಡ. ಹಿಡಿದು ನಿಲ್ಲಿಸು; **ನುಡಿವವರು ನಾವ್ ಹಗೆಗಳೇ**=ನಿನ್ನೊಡನೆ ಮಾತನಾಡುತ್ತಿರುವ ನಾವು ನಿನಗೆ ಹಗೆಗಳೇ; ಒಡೆಯ=ಯಜಮಾನ/ಸ್ವಾಮಿ; **ನಿನ್ನ ಒಡೆಯರಲ್ಲಾ**=ನಿನಗೆ ಆಶ್ರಯವನ್ನು ಕೊಟ್ಟು ಸಲಹುತ್ತಿರುವ ಯಜಮಾನವರಲ್ಲವೇ; ಸ್ವಾಮಿ=ಒಡೆಯ/ಯಜಮಾನ; ದುರುಹಿಕೆ=ದ್ರೋಹ/ಮೋಸ; ಲೇಸು=ಒಳ್ಳೆಯದು; ಲೇಸುಲೇಸು=ಇದು ಒಂದು ನುಡಿಗಟ್ಟು. ಬಹಳ ಬಹಳ ಒಳ್ಳೆಯದನ್ನು ಮಾಡುತ್ತಿರುವೆ ಅಂದರೆ ಒಳಿತಿನ

ನೆಪದಲ್ಲಿ ಕೇಡನ್ನು ಬಗೆಯುತ್ತಿರುವೆ ಎಂಬ ವ್ಯಂಗ್ಯದ ತಿರುಳಿನಲ್ಲಿ ಬಳಕೆಯಾಗಿದೆ;

**ಸ್ವಾಮಿ ದುರುಹಿಕೆ ಲೇಸು ಲೇಸು ಎಂದ**=ಈ ಬಗೆಯ ಸ್ವಾಮಿ ದ್ರೋಹ... ತುಂಬಾ ಒಳ್ಳೆಯದು ಎಂದು ಉತ್ತರಕುಮಾರನು ಅಣಕದ ನುಡಿಗಳ ಮೂಲಕ ಬೃಹನ್ನಳೆಯನ್ನು ನಿಂದಿಸಿದ; ಎಂದೊಡೆ=ಎಂದು ಉತ್ತರಕುಮಾರನು ತನ್ನನ್ನು ನಿಂದಿಸಲು; **ಅರ್ಜುನ ನಗುತ ರಥವನು ಮುಂದೆ ನಾಲ್ಕೆಂಟು ಅಡಿಯ ನೂಕಲು**= ಅರ್ಜುನನು ಅವನ ಮಾತುಗಳನ್ನು ಕೇಳಿ ನಗುತ್ತ ತೇರನ್ನು ಮತ್ತೆ ನಾಲ್ಕೆಂಟು ಅಡಿಗಳಷ್ಟು ಮುನ್ನಡೆಸಲು; ಮುಂದಿನ+ಸೆರಗು; ಸೆರಗು=ಎದೆಯ ಮೇಲೆ ಹೊದೆಯುವ ಬಟ್ಟೆಯ ತುಂಡು; ಸಂವರಿಸಿ=ಸರಿಹೊಂದಿಸಿಕೊಂಡು/ ಸರಿಪಡಿಸಿಕೊಂಡು; **ಈ ಸಾರಥಿ ಕೊಂದನು ಎನುತ ಮುಂಜೆರಗ ಸಂವರಿಸಿ**=ಈ ಸಾರಥಿಯು ನನ್ನನ್ನು ಕೊಂದನು ಎನ್ನುತ್ತ, ಮಯ್ ಮೇಲೆ ಹಾಕಿದ್ದ ಸೆರಗನ್ನು ಜಾರಿಬೀಳದಂತೆ ಬಿಗಿಯಾಗಿ ಕಟ್ಟಿಕೊಂಡು; ದುಮ್ಮಿಕ್ಕು=ಕೆಳಕ್ಕೆ ಹಾರು/ನೆಗೆ;

**ಮೆಲ್ಲನೆ ರಥದ ಹಿಂದಕೆ ಬಂದು ನಿಂದು, ದುಮ್ಮಿಕ್ಕಿದನು**=ಮೆಲ್ಲನೆ ತೇರಿನ ಹಿಂದಕ್ಕೆ ಬಂದು, ಅರೆಗಳಿಗೆ ನಿಂತಿದ್ದು, ಒಮ್ಮೆಲೆ ತೇರಿನಿಂದ ಕೆಳಕ್ಕೆ ನೆಗೆದನು; ಬಿಟ್ಟಮಂಡೆ=ಕೂದಲು ಕೆದರಿದ ತಲೆ/ಉತ್ತರಕುಮಾರನು ತೇರಿನಿಂದ ಕೆಳಕ್ಕೆ ಹಾರಿದ ಸಮಯದಲ್ಲಿ ಅವನು ತಲೆಯಲ್ಲಿ ತೊಟ್ಟಿದ ಅಂಗಕವಚವು ಕಳಚಿಬಿದ್ದಿದೆ; ನಿಡಿದಾದ+ಓಟ; ನಿಡಿದು=ಉದ್ದವಾದುದು; ನಿಟ್ಟೋಟ=ಅತಿವೇಗದ ಓಟ; ಹಾಯ್=ದಾಟಿಹೋಗು; **ಬದುಕಿದೆನು ಎಂದು ಬಿಟ್ಟಮಂಡೆಯಲಿ ನಿಟ್ಟೋಟದಲಿ ಹಾಯ್ದನು**=ಹೇಗೋ ಜೀವವನ್ನು ಉಳಿಸಿಕೊಂಡೆನು ಎಂದುಕೊಂಡು ಕೆದರಿದ ತಲೆಯಲ್ಲಿ ಅತಿವೇಗದಿಂದ ಬಿದ್ದಂಬೀಳ ವಿರಾಟನಗರದತ್ತ ಉತ್ತರಕುಮಾರನು ಪಲಾಯನಮಾಡತೊಡಗಿದನು;

**ಕಲಿಪಾರ್ಥನು ನೋಡಿದನು**=ಶೂರನಾದ ಅರ್ಜುನನು ರಣರಂಗಕ್ಕೆ ಬೆನ್ನನ್ನು ತೋರಿಸಿ ಹಿಮ್ಮುಖನಾಗಿ ಪಲಾಯನಮಾಡುತ್ತಿರುವ ಉತ್ತರಕುಮಾರನನ್ನು ನೋಡಿದನು; ಕೇಡಾಡಿ=ಕೇಡಿಗ/ಕೆಟ್ಟದ್ದನ್ನು ಮಾಡುವವನು; ಕೆದರು=ಹರಡು/ ಗೋಜಲುಗೋಜಲಾಗು; ಕೇಶ=ಕೂದಲು/ತಲೆಗೂದಲು; ಕೆಟ್ಟು+ಓಡುತಿರಲು; ಕೆಟ್ಟು=ಅಳಿ/ನಾಶವಾಗು/ಹಾಳಾಗು; **ಈ ಕೇಡಾಡಿ ಕೆದರಿದ ಕೇಶದಲಿ ಕೆಟ್ಟೋಡುತಿರಲು**=ಈ ಕೆಡುಕನು ಕೆದರಿದ ತಲೆಯಲ್ಲಿ ಜೀವಗಳ್ಳನಾಗಿ ಓಡುತ್ತಿರಲು; ಕೂಡೆ=ಕೂಡಲೇ/ಮರುಗಳಿಗೆಯಲ್ಲಿಯೇ; ಸೂಟಿ+ಒಳು; ಸೂಟಿ=ರಭಸ/ವೇಗ; ಅಟ್ಟು=ಬೆನ್ನುಹತ್ತಿಹೋಗು/ಹಿಂಬಾಲಿಸು; **ಎಲೆಲೆ... ಪಾಪಿ ಹಾಯ್ದನು ಹಿಡಿಯಬೇಕು ಎನುತ ಕೂಡೆ ಸೂಟಿಯೊಳು ಅಟ್ಟಲು**=ಎಲೆ **'ಪಾಪಿಯು ಓಡುತ್ತಿದ್ದಾನೆ'** ಅವನನ್ನು ಹಿಡಿಯಬೇಕು ಎಂದುಕೊಂಡು ಕೂಡಲೇ ಅರ್ಜುನನು ತೇರಿನಿಂದ ನೆಗೆದು

ವೇಗವಾಗಿ ಉತ್ತರಕುಮಾರನನ್ನು ಬೆಂಬತ್ತಿಬಂದನು;

ಇಳೆ=ಭೂಮಿ; **ಇಳೆಯು ಅಲ್ಲಾಡಲು**=ಭೂಮಿಯು ಕಂಪಿಸುತ್ತಿರಲು; ಅಹಿ=ಹಾವು; ಪತಿ=ಒಡೆಯ; ಅಹಿಪತಿ=ಹಾವುಗಳ ಒಡೆಯನಾದ ಆದಿಶೇಷ; ಆದಿಶೇಷನು ಭೂಮಿಯನ್ನು ತನ್ನ ಹೆಡೆಯ ಮೇಲೆ ಹೊತ್ತಿದ್ದಾನೆ ಎಂಬ ಕಲ್ಪನೆಯು ಜನಮನದಲ್ಲಿದೆ; **ಅಹಿಪತಿ ಹೆದರಲು**=ಆದಿಶೇಷನು ಭೂಮಂಡಲಕ್ಕೆ ಏನಾಗುವುದೋ ಎಂದು ಹೆದರಿಕೊಳ್ಳಲು; **ಇಳೆಯು ಅಲ್ಲಾಡಲು... ಅಹಿಪತಿ ಹೆದರಲು**=ಭೂಮಿಯು ಕಂಪಿಸಲು... ಆದಿಶೇಷನು ಹೆದರಲು... ಈ ನುಡಿಗಳು ಅತಿಶಯೋಕ್ತಿಯಾಗಿ ಬಳಕೆಗೊಂಡಿವೆ. ಯಾವುದೇ ಒಂದು ಸಂಗತಿಯನ್ನು ವಾಸ್ತವವಲ್ಲದ ಬಗೆಯಲ್ಲಿ ಬಣ್ಣಿಸುವುದಕ್ಕೆ ಅತಿಶಯೋಕ್ತಿ ಎನ್ನುತ್ತಾರೆ; ಹೇಡಿ ಉತ್ತರಕುಮಾರನನ್ನು ಬೃಹನ್ನಳೆಯು ಬೆನ್ನಟ್ಟಿಬರುತ್ತಿರುವುದು ಒಂದು ಮಹತ್ತರವಾದ ಸಂಗತಿ ಎಂಬುದನ್ನು ಸೂಚಿಸಲು ಈ ರೀತಿ ಬಣ್ಣಿಸಲಾಗಿದೆ; ಇತ್ತಲು=ಈ ಕಡೆ; ಕಡಲು=ಸಾಗರ; ಕೆಡೆ=ಬೀಳು; ನಗೆಯ ಕಡಲು=ಇದೊಂದು ನುಡಿಗಟ್ಟು. ಗಹಗಹಿಸಿ ನಗುತ್ತಿರುವುದು ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ;

**ಇತ್ತಲು ಕೌರವ ಸೇನೆ ನೋಡಿ, ನಗೆಯ ಕಡಲೊಳಗೆ ಕೆಡೆದುದು**=ಈ ಕಡೆ ಜಮಾವಣೆಗೊಂಡಿದ್ದ ದುರ್ಯೋಧನನ ಸೇನೆಯ ಕಾದಾಳುಗಳು ತಮ್ಮ ಎದುರಾಗಿ ಬರುತ್ತಿದ್ದ ತೇರು ಇದ್ದಕ್ಕಿದ್ದಂತೆಯೇ ನಿಂತಿದ್ದನ್ನು, ತೇರಿನಿಂದ ಒಬ್ಬ ವ್ಯಕ್ತಿಯು ಪಲಾಯನ ಮಾಡುತ್ತಿರುವುದನ್ನು, ಅವನನ್ನು ಬೆನ್ನಟ್ಟಿಕೊಂಡು ಇನ್ನೊಬ್ಬ ವ್ಯಕ್ತಿ ಹೋಗುತ್ತಿರುವುದನ್ನು ನೋಡಿ, ಎದ್ದು ಬಿದ್ದು ಗಹಗಹಿಸಿ ನಗತೊಡಗಿದರು; ಎಲೆಲೆ=ಅಚ್ಚರಿಯನ್ನು ಸೂಚಿಸಲು ಬಳಸುವ ಪದ; ಬಲುಹು=ಶಕ್ತಿ/ಪರಾಕ್ರಮ;

**ಎಲೆಲೆ...ಕಾದಲು ಬಂದ ವೀರನ ಬಲುಹ ನೋಡಾ**=ಎಲೆಲೆ...ರಣರಂಗದಲ್ಲಿ ನಮ್ಮೆದುರು ಹೋರಾಡಲೆಂದು ಬಂದಿದ್ದ ವೀರನ ಪರಾಕ್ರಮವನ್ನು ನೋಡಿರೋ; **ಶಿವ ಶಿವಾ**=ರಣರಂಗದತ್ತ ಮುನ್ನುಗ್ಗಿಬಾರದೆ, ಹಿಮ್ಮುಖನಾಗಿ ಓಡುತ್ತಿರುವುದನ್ನು ಕಂಡು ಅಚ್ಚರಿಯಿಂದ ದೇವರಾದ ಶಿವನ ಹೆಸರನ್ನು ಉಚ್ಚರಿಸುತ್ತಿರುವುದು; ಬೆಂಬಳಿ=ಹಿಂಬದಿ/ಬೆನ್ನ ಹಿಂದೆಯೇ ಬರುವುದು; ಅಟ್ಟು=ಬೆಂಬತ್ತು; ಆವನೊ= ಯಾರೊ; ಸುಭಟನ್+ಅಹನು; ಸುಭಟ=ಪರಾಕ್ರಮಿ; ಅಹನು=ಆಗಿದ್ದಾನೆ;

**ಶಿವ ಶಿವಾ ಬೆಂಬಳಿಯಲಿ ಅಟ್ಟುವ ವೀರನು ಆವನೊ ಸುಭಟನಹನು**=ಶಿವ ಶಿವಾ ಪಲಾಯನಮಾಡುತ್ತಿರುವ ವ್ಯಕ್ತಿಯನ್ನು ಬೆನ್ನಟ್ಟಿಕೊಂಡು ಹೋಗುತ್ತಿರುವ ವೀರನು ಯಾರೊ...ನಿಜಕ್ಕೂ ಆತ ಒಬ್ಬ ಪರಾಕ್ರಮಿಯಾಗಿದ್ದಾನೆ;

**ಅವನು ತಿಳಿಯಲು ಅರಿದು**=ಅವನು ಯಾರೆಂಬುದನ್ನು ತಿಳಿಯಲಾಗುತ್ತಿಲ್ಲ; ಇವನ್+ಆವನೋ; ವೆಗ್ಗಳೆಯನ್+ಅಹನು; ವೆಗ್ಗಳೆಯ=ಕಲಿ/ಶೂರ; ಅಹನು= ಆಗಿರುವನು; **ಇವನಾವನೋ ವೆಗ್ಗಳೆಯನಹನು**=ಬೆನ್ನಟ್ಟಿ ಹೋಗುತ್ತಿರುವ ಇವನಾರೋ ಶೂರನೇ ಆಗಿರುವನು; ಆಕಾರ=ರೂಪ; ನೆರೆ=ಪೂರ್ಣವಾಗು/ ಹೆಚ್ಚಾಗು; ಫಲುಗುಣ=ಅರ್ಜುನ; ಅರಿ=ಹಗೆ/ಶತ್ರು; ಗಜಬಜಿಸು=ಗದ್ದಲಮಾಡು; **ಆಕಾರದಲಿ ನೆರೆ ಫಲುಗುಣನ ಹೋಲುವನು ಎನುತ ಅರಿಸೇನೆ ಗಜಬಜಿಸಿತು**= ರೂಪಿನಲ್ಲಿ ಸಂಪೂರ್ಣವಾಗಿ ಅರ್ಜುನನ್ನೇ ಹೋಲುವಂತಿದ್ದಾನೆ ಎಂದು ಹೇಳಿಕೊಳ್ಳುತ್ತ ದುರ್ಯೋಧನನ ಸೇನೆಯ ಕಾದಾಳುಗಳು ದೊಡ್ಡದನಿಯಲ್ಲಿ ಪರಸ್ಪರ ಮಾತನಾಡಿಕೊಂಡರು; ಅಳವು=ಶಕ್ತಿ/ಕಸುವು; ಮಿಗುವ+ಆತನು; ಮಿಗು=ಹಾಯು/ದಾಟು;

**ಸಾರಥಿ ಅಳವಿಯಲಿ ಮಿಗುವಾತನು ಈತ ಉತ್ತರ**=ಸಾರಥಿಯ ಕಯ್ಗೆ ಸಿಗದಂತೆ ಪಲಾಯನಮಾಡುತ್ತಿರುವವನು… ಈತ ವಿರಾಟರಾಯನ ಮಗ ಉತ್ತರಕುಮಾರ; ಸೂತತನ=ತೇರನ್ನು ನಡೆಸುವ ಕಸುಬು; **ಅರ್ಜುನಂಗೆ ಈ ಸೂತತನವು ಎತ್ತಲು**=ನೀವು ಹೇಳುತ್ತಿರುವಂತೆ ಬೆನ್ನಟ್ಟುತ್ತಿರುವವನು ಅರ್ಜುನನಾದರೆ, ಸಾರಥಿಯಾಗುವ ಸನ್ನಿವೇಶ ಅವನಿಗೆ ಹೇಗೆ ಬಂತು; ವೀಕ್ಷಿಸು=ನೋಡು; ನಪುಂಸಕ=ಇತ್ತ ಗಂಡೂ ಅಲ್ಲದ, ಅತ್ತ ಹೆಣ್ಣೂ ಅಲ್ಲದ ಮಾನವಜೀವಿ; **ವೀಕ್ಷಿಸಲು ನಪುಂಸಕ ವೇಷ**=ನೋಡಿದರೆ ನಪುಂಸಕನ ಉಡುಗೆ ತೊಡುಗೆಯಲ್ಲಿದ್ದಾನೆ; ಪುರುಹೂತ=ದೇವೇಂದ್ರ; ರಾಮ=ರಾಮಾಯಣ ಕಾಲದಲ್ಲಿದ್ದ ಅಯೋಧ್ಯೆಯ ರಾಜನಾದ ರಾಮ; ಆತಡೆ=ಎದುರಿಸಿದರೆ/ ರಣರಂಗದಲ್ಲಿ ಎದುರಾದರೆ; ಇರಿ=ಕೊಲ್ಲು; ಖಾತಿ=ಕೋಪ/ಸಿಟ್ಟು; **ಈತ ಅರ್ಜುನನಾಗಲಿ… ಆ ಪುರುಹೂತನಾಗಲಿ… ರಾಮನಾಗಲಿ ಬರಲಿ. ಆತಡೆ ಇರಿವೆನು ಎಂದನು ಕರ್ಣ ಖಾತಿಯಲಿ**=ಬೆನ್ನಟ್ಟಿಹೋಗುತ್ತಿರುವ ವ್ಯಕ್ತಿಯು ಅರ್ಜುನನಾಗಿರಲಿ… ಆ ದೇವೇಂದ್ರನೇ ಆಗಿರಲಿ… ತ್ರೇತಾಯುಗದ ರಾಮನೇ ಆಗಿರಲಿ… ಅವನೇನಾದರೂ ದುರ್ಯೋಧನನ ಸೇನೆಗೆ ಎದುರಾಗಿ ಬಂದರೆ ಅವನನ್ನು ಕೊಲ್ಲುತ್ತೇನೆ ಎಂದು ಕರ್ಣನು ಆಕ್ರೋಶದಿಂದ ನುಡಿದನು;



## ನೋಟ–೪

ಇತ್ತಲು=ಈ ಕಡೆ; ಬೆಂಬತ್ತಿ=ಬೆನ್ನಟ್ಟಿಕೊಂಡು; **ಇತ್ತಲು ಅರ್ಜುನನು ಉತ್ತರನ ಬೆಂಬತ್ತಿ ಬಂದನು**=ತೇರಿನಿಂದ ದುಮ್ಮಿಕ್ಕಿ ಪಲಾಯನ ಮಾಡುತ್ತಿರುವ ದಿಕ್ಕಿನತ್ತ ಅರ್ಜುನನು ಉತ್ತರಕುಮಾರನನ್ನು ಬೆನ್ನಟ್ಟಿಕೊಂಡು ಬಂದನು; **ಹೋದೆಯಾದರೆ ನಿನ್ನ ತಲೆಯನು ಕಿತ್ತು ಬಿಸುಡುವೆ. ನಿಲ್ಲು...ನಿಲ್ಲು**=ಹೀಗೆ ನೀನು ಪಲಾಯನ ಮಾಡುತ್ತಿದ್ದರೆ ನಿನ್ನ ತಲೆಯನ್ನು ಕತ್ತರಿಸಿ ಎಸೆಯುತ್ತಾನೆ. ನಿಲ್ಲು... ನಿಲ್ಲು ಎಂದು ಜೋರಾಗಿ ಕೂಗುತ್ತ ಅರ್ಜುನನು ಉತ್ತರಕುಮಾರನಿಗೆ ಎಚ್ಚರಿಕೆಯನ್ನು ನೀಡಿದನು; **ಮೃತ್ಯುವೋ...ಸಾರಥಿಯೊ**=ಕತ್ತನ್ನೇ ಕತ್ತರಿಸಿ ಬಿಸುಡುತ್ತೇನೆ ಎಂದು ಕೂಗಿ ಹೇಳುತ್ತಿರುವ ಇವನೇನು ನನ್ನ ಪಾಲಿನ ಸಾವಿನ ಕುಣಿಕೆಯೋ ಇಲ್ಲವೇ ಸಾರಥಿಯೋ ಎಂದು ಉತ್ತರಕುಮಾರನು ಕಂಗಾಲಾಗಿ ನುಡಿಯುತ್ತ; ಎತ್ತಣಿಂದ= ಯಾವ ಕಡೆಯಿಂದ;

**ಪಾಪಿಯನು ಎತ್ತಣಿಂದವೆ ಮಾಡಿಕೊಂಡೆನು ಎನುತ್ತ**=ಇಂತಹ ಪಾಪಿಯನ್ನು ಸಾರಥಿಯನ್ನಾಗಿ ಯಾಕಾದರೂ ಮಾಡಿಕೊಂಡೆನೊ ಎನ್ನುತ್ತ; **ಮರಳಿದು ನೋಡಿ**=ಹಿಂತಿರುಗಿ ನೋಡಿ; ಮತ್ತೆ=ಪುನಹ; ಸೈವರಿ=ನೇರವಾಗಿ ಸಾಗು/ ಮುಂದಕ್ಕೆ ಹೋಗು; **ಮರಳಿದು ನೋಡಿ ನಿಲ್ಲದೆ ಮತ್ತೆ ಸೈವರಿದ**=ಓಡಓಡುತ್ತಲೇ ಒಮ್ಮೆ ಹಿಂತಿರುಗಿ ನೋಡಿ, ನಿಲ್ಲದೆ ಮತ್ತೆ ಇನ್ನಷ್ಟು ವೇಗವಾಗಿ ಓಡತೊಡಗಿದ; ಇಟ್ಟಣಿಸು=ದಾಟು/ಮೀರು; ನರ=ಅರ್ಜುನ; ಅಟ್ಟಿಹಿಡಿ=ಬೆನ್ನಟ್ಟಿಕೊಂಡು ಹೋಗಿ ಹಿಡಿಯುವುದು;

**ನರ ನೂರು ಹಜ್ಜೆಯೊಳು ಇಟ್ಟಣಿಸಿ ಅಟ್ಟಿ ಹಿಡಿದನು**=ಅರ್ಜುನನು ವೇಗವಾಗಿ ಬೆನ್ನಟ್ಟಿಹೋಗಿ ನೂರು ಹೆಜ್ಜೆಗಳೊಳಗೆ ಉತ್ತರಕುಮಾರನನ್ನು ಹಿಡಿದನು; **ಇದೇನ ಮಾಡಿದೆ**=ಇದೇನು ಮಾಡುತ್ತಿರುವೆ. ವೀರನಾಗಿ ರಣರಂಗದಲ್ಲಿ ಹೋರಾಡಬೇಕಾದ ನೀನು, ಹೇಡಿಯಾಗಿ ರಣರಂಗದಿಂದ ಪಲಾಯನ

ಮಾಡುತ್ತಿರುವೆಯಲ್ಲ:ಹಾದರ=ಸಮಾಜ ಒಪ್ಪಿತವಲ್ಲದ ಹೆಣ್ಣುಗಂಡಿನ ಕಾಮದ ನಂಟು; **ಹಾದರಕೆ ಹುಟ್ಟಿದೆಯೊ**=ನೀನು ವಿರಾಟರಾಜನಿಗೆ ಹುಟ್ಟಲಿಲ್ಲವೇನೋ; ಕ್ಷತ್ರಿಯ=ನಾಡನ್ನಾಳುವ ಮತ್ತು ಕಾಪಾಡುವ ಹೊಣೆಯನ್ನು ಹೊತ್ತಿರುವ ವರ್ಣದವನು; ಪ್ರಾಚೀನ ಇಂಡಿಯಾದ ಸಾಮಾಜಿಕ ವ್ಯವಸ್ಥೆಯಲ್ಲಿ ಬ್ರಾಹ್ಮಣ/ ಕ್ಷತ್ರಿಯ/ವೈಶ್ಯ/ಶೂದ್ರ ಎಂಬ ನಾಲ್ಕು ವರ್ಣಗಳಿದ್ದವು; ಬೀಜ=ಸಂತತಿ/ವೀರ್ಯ; **ನೀನು ಕ್ಷತ್ರಿಯ ಬೀಜವೋ** =ನೀನು ಕ್ಷತ್ರಿಯ ಬೀಜಕ್ಕೆ ಹುಟ್ಟಿರುವೇನೋ;

ದಿಟ್ಟತನ=ಪರಾಕ್ರಮ/ಶೂರತನ; ಮಿಗೆ=ಬಹಳವಾಗಿ/ಅತಿಯಾಗಿ; ಹೊಟ್ಟು ಗುಟ್ಟು=ಇದೊಂದು ನುಡಿಗಟ್ಟು.ಕೆಲಸಕ್ಕೆ ಬಾರದ ಪೊಳ್ಳುಮಾತುಗಳನ್ನಾಡುವುದು ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; **ಹೆಂಗಳ ಇದಿರಲಿ ದಿಟ್ಟತನ ಮಿಗೆ ಹೊಟ್ಟುಗುಟ್ಟಿದೆ**=ಅಲ್ಲಿ ರಾಣಿವಾಸದ ಹೆಂಗಸರ ಮುಂದೆ ಮಹಾಪರಾಕ್ರಮದ ಮಾತುಗಳನ್ನು ಬಾಯಿಗೆ ಬಂದಂತೆಲ್ಲಾ ಆಡಿದೆ; ಹಗೆ=ಶತ್ರು; **ಹಗೆಗಳ ಇದಿರಲಿ ಬಿಟ್ಟುಕೊಂಡೆ**=ಈಗ ಹಗೆಗಳ ಎದುರಿನಲ್ಲಿ ನಿಲ್ಲಲಾಗದೆ ಕಳಚಿಕೊಂಡು ಪಲಾಯನ ಮಾಡುತ್ತಿರುವೆ; ದುರಾತ್ಮ=ನೀಚ; ಅನ್ವಯ=ವಂಶ; ಮುರಿ=ನಾಶಮಾಡು;

**ದುರಾತ್ಮ, ವಿರಾಟನ ಅನ್ವಯವ ಮುರಿದೆ**=ನೀಚನಾದ ನೀನು ವಿರಾಟರಾಜನ ರಾಜವಂಶಕ್ಕೆ ಕಳಂಕವನ್ನು ತಂದಿರುವೆ; ಅಳುಕು=ಹೆದರು; ಹಲುಗಿರಿ=ವ್ಯಕ್ತಿಯು ತನ್ನೆರಡು ಹಲ್ಲುಗಳ ಸಾಲು ಹೊರಕಾಣುವಂತೆ ಬಿಡುವುದು. ವ್ಯಕ್ತಿಯು ಯಾವುದೇ ಒಂದು ಸನ್ನಿವೇಶದಲ್ಲಿ ತಪ್ಪನ್ನು ಮಾಡಿ ಸಿಕ್ಕಿಬಿದ್ದಾಗ ಇಲ್ಲವೇ ಬೇಜವಾಬ್ದಾರಿತನದಿಂದ ತನ್ನ ಪಾಲಿನ ಕೆಲಸವನ್ನು ಮಾಡಲಾಗದಿದ್ದಾಗ ಇತರರ ಮುಂದೆ ಈ ರೀತಿ ಹಲ್ಲುಗಳನ್ನು ಬಿಡುತ್ತಾನೆ; **ಅಳುಕಿ ಹಲುಗಿರಿದು ಬಾಯೊಳಗೆ ಬೆರಳಿಟ್ಟು ತಲೆವಾಗಿದನು**=ಹೆದರಿಕೆಯಿಂದ ತತ್ತರಿಸುತ್ತ... ಹಲ್ಲುಗಿರಿಯುತ್ತ... ಬಾಯೊಳಕ್ಕೆ ಬೆರಳನ್ನಿಟ್ಟುಕೊಂಡು ತಲೆಬಗ್ಗಿಸಿದನು; ದೇಹದ ಈ ಹಾವಭಾವಗಳು ವ್ಯಕ್ತಿಯ ಅಸಹಾಯಕತೆ/ಹೇಡಿತನ/ಬಲಹೀನತೆಗೆ ಸಂಕೇತಗಳಾಗಿವೆ;

ಕಳೆ=ಬಿಡು; ಸಾರಥಿ, **ಕಳುಹಿ ಕಳೆಯೈ**=ಸಾರಥಿಯೇ... ನನ್ನನ್ನು ಕಳುಹಿಸಿ ಬಿಡು; ಬಸುರು=ಹೊಟ್ಟೆ; ಮರಳಿ=ಪುನಹ; **ನಿನ್ನ ಬಸುರಲಿ ಮರಳಿ ಬಂದವನು**= ನಿನ್ನ ಹೊಟ್ಟೆಯಲ್ಲಿ ಮತ್ತೆ ಹುಟ್ಟಿಬಂದಿದ್ದೇನೆ ಎಂದು ತಿಳಿಯುತ್ತೇನೆ. ನಿನ್ನಿಂದ ನಾನು ಮರುಹುಟ್ಟು ಪಡೆದಂತಾಗುತ್ತದೆ; ಕೊಳುಗುಳ=ಕಾಳೆಗ/ರಣರಂಗ; ಒಡ್ಡು= ಸೇನೆ/ ಪಡೆ; ಮುರಿ=ಸೋಲು/ನಾಶಮಾಡು; ಅಗ್ಗಳೆಯ=ಶೂರ; **ಕೊಳುಗುಳದೊಳು ಈ ಒಡ್ಡ ಮುರಿವ ಅಗ್ಗಳೆಯರು ಉಂಟೇ**=ರಣರಂಗದಲ್ಲಿ ದುರ್ಯೋಧನನ ಈ ಸೇನೆಯನ್ನು ಸೋಲಿಸುವ ಶೂರರು ಇದ್ದಾರೆಯೇ; ಲೋಗರು=ಸಾಮಾನ್ಯ ಜನರು/ಬೇರೆಯವರು; **ಲೋಗರಿಂದವೆ ಕೊಲಿಸದಿರು**=

ರಣರಂಗದಲ್ಲಿ ಬೇರೆಯವರಿಂದ ನನ್ನನ್ನು ಕೊಲ್ಲಿಸಬೇಡ; ಕಠಾರಿ=ಚಿಕ್ಕ ಕತ್ತಿ/ಚೂರಿ;

ಕುತ್ತು=ಹೊಡೆ/ಬಡಿ/ಇರಿ; ಕೆಡಹು=ಕೆಳಕ್ಕೆ ಬೀಳಿಸು/ಉರುಳಿಸು; ಕಠಾರಿಯಿದೆ. **ನೀ ಕುತ್ತಿ ಕೆಡಹು ಎಂದ**=ಇದೋ ನೋಡು… ನನ್ನ ಬಳಿಯಿರುವ ಈ ಕಿರುಗತ್ತಿಯಿಂದ ನನ್ನನ್ನು ಇರಿದು ಬೀಳಿಸಿ ಕೊಲ್ಲು ಎಂದು ಉತ್ತರಕುಮಾರನು ಬೃಹನ್ನಳೆಯಲ್ಲಿ ಬೇಡಿಕೊಂಡ; ಒಡಲು=ಹೊಟ್ಟೆ; ಒಡೆ=ಸೀಳು/ಬಿರಿ; ಒಡಲು ಒಡೆವಂತೆ ನಗುವುದು=ಅತಿ ಹೆಚ್ಚಾಗಿ ನಗುವುದು;

ಗಜರು=ಗದರಿಸು/ಬೆದರಿಸು; **ಅರ್ಜುನನು ಮನದಲಿ ಒಡಲು ಒಡೆವಂತೆ ನಗುತ ಗಜರಿದನು**=ಉತ್ತರಕುಮಾರನ ಮಾತು ಮತ್ತು ಅವನ ಹಾವಭಾವಗಳನ್ನು ಕಂಡು ಅರ್ಜುನನು ಜೋರಾಗಿ ನಗುತ್ತ, ಗದರಿಸಿದನು; ವನಜ=ತಾವರೆ/ಕಮಲ; ವನಜಮುಖಿ=ತಾವರೆಯ ಮೊಗದವಳು/ಸುಂದರಿ; ಸೊರಹು=ಜಂಬ ಕೊಚ್ಚಿಕೊಳ್ಳುವುದು; **ಎಲವೊ…ಸಭೆಯಲಿ ವನಜಮುಖಿಯರ ಮುಂದೆ ಬಾಯ್ಗೆ ಬಂದಂತೆ ಸೊರಹಿದೆ**=ಎಲವೊ… ರಾಣಿವಾಸದ ಸುಂದರಿಯರ ಮುಂದೆ ನೀನೊಬ್ಬ ಮಹಾಶೂರನೆಂದು ಇಲ್ಲಸಲ್ಲದ್ದನ್ನು ಬಾಯಿಗೆ ಬಂದಂತೆ ಹೇಳಿಕೊಂಡು ಜಂಬದಿಂದ ಬೀಗುತ್ತ ಮೆರೆದೆ; ಅನುವರ=ಕಾಳೆಗ/ರಣರಂಗ; **ಅನುವರದೊಳು ಏನಾಯ್ತು**=ಈಗ ರಣರಂಗದಲ್ಲಿ ನಿನಗೆ ಏನಾಯಿತು/ನಿನ್ನ ಪರಾಕ್ರಮ ಎಲ್ಲಿ ಹೋಯಿತು;

ರಿಪು=ಹಗೆ/ಶತ್ರು; ವಾಹಿನಿ=ದಳ/ಪಡೆ; ಇರಿ=ಹೋರಾಡು/ಕಾಳೆಗ ಮಾಡು; ನಾಡು=ರಾಜ್ಯ/ದೇಶ/ಪ್ರಾಂತ್ಯ; ನರಿಯ+ವೊಲು; ನರಿ=ಕಾಡಿನಲ್ಲಿರುವ ಒಂದು ಪ್ರಾಣಿ. ಇದು ಬಹಳ ಬುದ್ಧಿವಂತಿಕೆಯಿಂದ ಎಲ್ಲರನ್ನೂ ವಂಚಿಸಿ ತನ್ನ ಹೊಟ್ಟೆಹೊರೆದುಕೊಳ್ಳುತ್ತದೆ ಎಂಬ ಭಾವನೆ ಜನಮನದಲ್ಲಿದೆ. ಆದ್ದರಿಂದ ನಯವಂಚನೆಯ ನಡೆನುಡಿಗೆ ಒಂದು ಸಂಕೇತವಾಗಿ ಈ ಪ್ರಾಣಿಯ ಹೆಸರನ್ನು ಬಳಸುತ್ತಾರೆ; ವೊಲು=ಅಂತೆ/ಹಾಗೆ; ನಾಡನರಿ=ನಾಡಿನಲ್ಲಿರುವ ನಯವಂಚಕ;

**ರಿಪುವಾಹಿನಿಯನು ಇರಿಯದೆ ನಾಡ ನರಿಯವೊಲು ಎನಗೆ ನೀ ಹಲುಗಿರಿಯೆ ಬಿಡುವೆನೆ**=ಹಗೆಯ ಸೇನೆಯೊಡನೆ ಹೋರಾಡದೆ ನಯವಂಚಕತನದ ನರಿಯಂತೆ ನನ್ನ ಮುಂದೆ ದೀನತೆಯಿಂದ ನುಡಿದು ಹಲ್ಲುಗಳನ್ನು ಬಿಡುತ್ತಿದ್ದರೆ, ನಿನ್ನನ್ನು ಹೋಗಲು ಬಿಟ್ಟುಬಿಡುತ್ತೇನೆಯೇ; **ಕಾದು ನಡೆ**=ಈಗ ಹಗೆಯೊಡನೆ ಕಾದಾಡಲು ಹೊರಡು;

ಹೇವ=ಜುಗುಪ್ಸೆ/ಸಂಕಟ; **ಹೇವ ಬೇಡಾ**=ಸಂಕಟಪಡಬೇಡ; ಪರಿ=ರೀತಿ; ಜೀವ+ಕಳ್ಳ; ಜೀವಗಳ್ಳ=ಜೀವವನ್ನು ಉಳಿಸುಕೊಳ್ಳುವುದಕ್ಕಾಗಿ ಮಾನ

ಮರ್ಯಾದೆಯನ್ನು ಬಿಟ್ಟು ಬಾಳುವವನು; ಪಥ=ದಾರಿ/ಮಾರ್ಗ;

**ವೀರರು ಈ ಪರಿ ಜೀವಗಳ್ಳರ ಪಥವ ಹಿಡಿವರೆ**=ವೀರರಾದವರು ಈ ರೀತಿ ಜೀವಗಳ್ಳರ ದಾರಿಯನ್ನು ಹಿಡಿಯುತ್ತಾರೆಯೇ. ಮಾನಮರ್ಯಾದೆಯನ್ನು ಉಳಿಸಿ ಕೊಳ್ಳುವಂತೆ ಬಾಳಬೇಕು ಎನ್ನುವುದಕ್ಕಿಂತ ಜೀವವೊಂದು ಉಳಿದರೆ ಸಾಕು ಎನ್ನುತ್ತಾರೆಯೇ; ನಪುಂಸಕ=ಇತ್ತ ಗಂಡೂ ಅಲ್ಲದ ಅತ್ತ ಹೆಣ್ಣೂ ಅಲ್ಲದ ಮಾನವ ಜೀವಿ;

**ಎಮ್ಮ ನೋಡು… ನಪುಂಸಕರು… ಸಾವಿಗೆ ಅಂಜಿದೆವೇ**=ನಮ್ಮನ್ನು ನೋಡು… ನಾವು ನಪುಂಸಕರು…ಸಾವಿಗೆ ಹೆದರಿಕೊಂಡಿದ್ದೇವೆಯೇ; ಆವು=ನಾವು; ನೆರೆ= ಸಂಪೂರ್ಣವಾಗಿ; **ನೀವು ವೀರರು. ಆವು ನೆರೆ ನಪುಂಸಕರು ಸಾವವರಲ್ಲ**=ನೀವು ವೀರರು. ನಾವು ದಿಟವಾಗಿ ನಪುಂಸಕರಾಗಿದ್ದೇವೆ. ನಾವು ಸಾಯುವುದಕ್ಕೆ ಬಯಸುವುದಿಲ್ಲ; ನಮಗೆ ಮಾನಕ್ಕಿಂತ ಪ್ರಾಣವೇ ದೊಡ್ಡದು;

**ಲೋಕದ ಜೀವಗಳ್ಳರಿಗೆ ಆವು ಗುರುಗಳು…ಬಿಟ್ಟು ಕಳುಹು**=ಜಗತ್ತಿನಲ್ಲಿರುವ ಜೀವಗಳ್ಳರಿಗೆ ನಾವೇ ಗುರುಗಳು. ನಮ್ಮ ಹೇಡಿತನವನ್ನು ನಾನು ಒಪ್ಪಿಕೊಂಡಿದ್ದೇನೆ. ಕಾಳಗ ರಂಗದಿಂದ ನನ್ನನ್ನು ಬಿಟ್ಟು ಕಳುಹಿಸು; ಹರುಕ=ಕೀಳು ವ್ಯಕ್ತಿ; **ಎಲವೊ ನೀನು ಹರುಕನೇ**=ಎಲವೊ…ಈ ರೀತಿ ಜೀವವನ್ನು ಉಳಿಸಿಕೊಳ್ಳು ವುದಕ್ಕಾಗಿ ಹೆಣಗುತ್ತಿರುವೆಯಲ್ಲಾ… ನೀನು ಕೀಳು ವ್ಯಕ್ತಿಯೇ; ನಿಮ್ಮ+ಅಯ್ಯ; ಅಯ್ಯ=ಅಪ್ಪ/ತಂದೆ; ರಾಯ=ರಾಜ; ಉರುವ=ಉತ್ತಮನಾದ; ನೃಪ=ರಾಜ;

**ನಿಮ್ಮಯ್ಯ ರಾಯರೊಳು ಉರುವ ನೃಪ**=ನಿಮ್ಮ ತಂದೆಯಾದ ವಿರಾಟರಾಯನು ರಾಜರುಗಳ ಸಮೂಹದಲ್ಲಿಯೇ ಉತ್ತಮನಾದ ರಾಜನಾಗಿದ್ದಾನೆ; ಇರಿದು= ಹೋರಾಡಿ; ಮೆರೆ=ಕೀರ್ತಿಯನ್ನು ಹೊಂದು/ಹೆಸರನ್ನು ಪಡೆ; ಅವಸರ= ಸಮಯ/ಕಾಲ; **ಇಂದು ನೀನು ಇರಿದು ಮೆರೆವ ಅವಸರವಲಾ**=ಮತ್ಸ್ಯದೇಶಕ್ಕೆ ಮತ್ತು ವಿರಾಟರಾಯನಿಗೆ ಆಪತ್ತು ಬಂದಿರುವಾಗ ಹಗೆಗಳ ಸೇನೆಯೊಡನೆ ನೀನು ಇಂದು ವೀರಾವೇಶದಿಂದ ಹೋರಾಡುವ ಸಮಯವಿದು;

ಜವ್ವನ=ಪ್ರಾಯ/ತಾರುಣ್ಯ; ಧುರಭರ=ಕದನದ ತೀವ್ರತೆ; **ಜವ್ವನದ ಧುರಭರ**= ಪ್ರಾಯವಿದ್ದಾಗ ರಣರಂಗದಲ್ಲಿ ಹೋರಾಡುವ ಉತ್ಸಾಹ. ಕೆಚ್ಚು ಮತ್ತು ಕಸುವು; ರವಿ=ಸೂರ್ಯ; ಶಶಿ=ಚಂದ್ರ; ಬೀಳ್ವ+ಅನ್ನಬರ; ಅನ್ನಬರ; **ರವಿ ಶಶಿ ಮುರಿದು ಬೀಳ್ವ ಅನ್ನಬರ**=ಈ ಬ್ರಹ್ಮಾಂಡದಲ್ಲಿ ಸೂರ್ಯ ಚಂದ್ರ ಪತನಗೊಳ್ಳುವವರೆಗೂ; ಅಪಕೀರ್ತಿ=ಕೆಟ್ಟಹೆಸರು; ಸರಿಗಳೆಯದೆ=ಸಂಪೂರ್ಣವಾಗಿ ಅಳಿದುಹೋಗುವುದೇ;

**ಜವ್ವನದ ಧುರಭರವ ರವಿ ಶಶಿ ಮುರಿದು ಬೀಳ್ವನ್ನಬರ ಅಪಕೀರ್ತಿ ಸರಿಗಳೆಯದೆ**=ಪ್ರಾಯದ ಈ ವಯಸ್ಸಿನಲ್ಲಿ ರಣರಂಗದಲ್ಲಿ ನೀನು ಹೋರಾಡದೆ ಹೇಡಿಯಾಗಿ ಪಲಾಯನ ಮಾಡಿದರೆ, ಈ ಬ್ರಹ್ಮಾಂಡದಲ್ಲಿ ಸೂರ್ಯ ಚಂದ್ರರು ಪತನಗೊಳ್ಳುವವರೆಗೂ ನಿನಗೆ ಮತ್ತು ವಿರಾಟರಾಜನ ವಂಶಕ್ಕೆ ತಟ್ಟಿದ ಕಳಂಕ ಅಳಿದುಹೋಗುವುದಿಲ್ಲ; ನರ+ಕುರಿ; ನರಗುರಿ=ಇದೊಂದು ಬಯ್ಗುಳದ ನುಡಿಗಟ್ಟು. ದೇಹದಲ್ಲಿ ಶಕ್ತಿಯಾಗಲಿ ಮನದಲ್ಲಿ ಕೆಚ್ಚಾಗಲಿ ಇಲ್ಲದ ಕೀಳು ವ್ಯಕ್ತಿ ಎಂಬ ತಿರುಳಿನಲ್ಲಿ ಬಳಕೆಗೊಂಡಿದೆ; **ಎಲೆ ನರಗುರಿಯೆ ಕಾಳಗಕೆ ನಡೆ..ಎನುತ ಉತ್ತರನ ಹಿಡಿದೆಳೆದನು**=ಎಲೆ... ನರಗುರಿಯೇ ಕಾಳಗದತ್ತ ನಡೆ ಎನ್ನುತ್ತ ಅರ್ಜುನನು ಉತ್ತರಕುಮಾರನನ್ನು ಹಿಡಿದು ಎಳೆದನು; ಹಜ್ಜೆ=ನೆಲದ ಮೇಲೆ ಪಾದವನ್ನು ಊರಿದ ಗುರುತು; ಪಾತಕ=ಕೆಟ್ಟ ಕೆಲಸ; ಫಲ=ಪ್ರಯೋಜನ/ಪರಿಣಾಮ;

**ಕೊಳುಗುಳದೊಳು ಓಡಿದೊಡೆ ಹಜ್ಜೆಗೆ ಮಹಾಪಾತಕವು ಫಲ**=ರಣರಂಗದಲ್ಲಿ ಜೀವಗಳ್ಳನಾಗಿ ಪಲಾಯನ ಮಾಡಿದರೆ ಹಿಮ್ಮುಖನಾಗಿ ಇಡುವ ಒಂದೊಂದು ಹೆಜ್ಜೆಗೂ ದೊಡ್ಡಪಾಪದಿಂದ ಉಂಟಾಗುವ ಕೇಡು ತಟ್ಟುತ್ತದೆ; ಮುಂದಣಿಗೆ= ಮುಂದು ಮುಂದಕ್ಕೆ; ಒಲಿ=ಬಯಸು/ಒಪ್ಪು; ಹಜ್ಜೆಯನು+ಇಡಲು; ಅಶ್ವ= ಕುದುರೆ; ಮೇಧ=ಯಾಗ; ಅಶ್ವಮೇಧ=ರಾಜನು ತನ್ನ ರಾಜ್ಯದ ಪ್ರಾಂತ್ಯವನ್ನು ವಿಸ್ತರಿಸುವುದಕ್ಕಾಗಿ ಮಾಡುತ್ತಿದ್ದ ಒಂದು ಆಚರಣೆ; ರಾಜನಾದ ತನಗೆ ಶರಣಾಗತ ರಾದವರು ಕಪ್ಪಕಾಣಿಕೆಯನ್ನು ಕೊಡಬೇಕೆಂದು ಇಲ್ಲವೇ ಕುದುರೆಯನ್ನು ಹಿಡಿದು ಕಟ್ಟುವವರು ತನ್ನೊಡನೆ ಹೋರಾಡಬೇಕೆಂದು ಬರೆಸಿದ ಹಣೆಪಟ್ಟಿಯನ್ನು ಕುದುರೆಯ ತಲೆಗೆ ಕಟ್ಟಿ, ಅದನ್ನು ತನ್ನ ಸೇನೆಯೊಡನೆ ಹಿಂಬಾಲಿಸಿ ಒಂದು ವರುಶದ ಕಾಲ ಕುದುರೆಯು ಸಂಚರಿಸಿದ ಪ್ರಾಂತ್ಯಗಳನ್ನು ಶರಣಾಗತಿ ಇಲ್ಲವೇ ಹೋರಾಟದಿಂದ ವಶಪಡಿಸಿಕೊಂಡು, ವರುಶದ ನಂತರ ತನ್ನ ರಾಜಧಾನಿಯಲ್ಲಿ ಆ ಕುದುರೆಯನ್ನು ಬಲಿಕೊಟ್ಟು ಮಾಡುತ್ತಿದ್ದ ಯಾಗ;

**ಮುಂದಣಿಗೆ ಒಲಿದು ಹಜ್ಜೆಯನಿಡಲು ಹಜ್ಜೆಯೊಳು ಅಶ್ವಮೇಧ ಫಲ**= ರಣರಂಗದಲ್ಲಿ ತಾನಾಗಿಯೇ ವೀರಾವೇಶದಿಂದ ಮುನ್ನುಗ್ಗಿ ಹಗೆಗಳನ್ನು ಸದೆಬಡಿಯಲು ಇಡುವ ಒಂದೊಂದು ಹೆಜ್ಜೆಗೂ ಅಶ್ವಮೇಧದ ಪಲವು ದೊರೆಯುತ್ತದೆ; ಅಳಿದನ್+ಆದೊಡೆ; ಅಳಿ=ಸಾವು/ಮರಣ; ಆದೊಡೆ=ಆದರೆ; ಲಲನೆ=ಹೆಂಗಸು; ತೊತ್ತು=ಸೇವಕ/ಸೇವಕಿ; ತೊತ್ತಿರು=ಸೇವಕಿಯರು/ ದಾಸಿಯರು; **ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು**=ಕಾಳೆಗದ ಕಣದಲ್ಲಿ ಹೋರಾಡುತ್ತ ಸಾವನ್ನಪ್ಪಿದರೆ ಅಂತಹ ವೀರನಿಗೆ ದೇವಲೋಕದಲ್ಲಿರುವ ಹೆಂಗಸರು ದಾಸಿಯರಾಗುತ್ತಾರೆ;

ನೆಲ=ಕಾಳೆಗದ ಕಣ; ಉಗ್ಗಡಿಸು=ಹೊಗಳು/ಕೊಂಡಾಡು; **ಸುರೇಂದ್ರನು ನೆಲನನು ಉಗ್ಗಡಿಸುವನು**=ದೇವೇಂದ್ರನು ಕಾಳೆಗದ ಕಣದಲ್ಲಿ ಹೋರಾಡಿ ಮಡಿದವರನ್ನು ಹೊಗಳುವನು; ಸ್ವರ್ಗ=ದೇವಲೋಕದಲ್ಲಿರುವ ಸುಖದ ನೆಲೆ. ಈ ಜಗತ್ತಿನಲ್ಲಿ ಒಳ್ಳೆಯದನ್ನು ಮಾಡಿ ಸತ್ತವರು ಸುಖದ ನೆಲೆಯಾದ ಸ್ವರ್ಗಕ್ಕೂ, ಕೆಟ್ಟದ್ದನ್ನು ಮಾಡಿ ಸತ್ತವರು ಸಂಕಟದ ನೆಲೆಯಾದ ನರಕಕ್ಕೂ ಹೋಗುತ್ತಾರೆ ಎಂಬ ಕಲ್ಪನೆಯು ಜನಮನದಲ್ಲಿದೆ; **ವೀರಸ್ವರ್ಗವಹುದು**=ರಣರಂಗದಲ್ಲಿ ಹಗೆಗಳ ಎದುರು ಹೋರಾಡುತ್ತ ಮಡಿದ ವೀರರು ಸ್ವರ್ಗವನ್ನು ಸೇರುತ್ತಾರೆ; ಧುರ=ಕಾಳೆಗ/ಯುದ್ಧ; ಪಾತಕ=ಪಾಪ/ಕೆಟ್ಟ ಕೆಲಸ; ಭೂಸುರ=ಬ್ರಾಹ್ಮಣನನ್ನು ಭೂಮಿಯಲ್ಲಿರುವ ದೇವತೆಯೆಂದು ನಮ್ಮ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಚಿತ್ರಿಸಲಾಗಿದೆ; ಕಳೆ=ನಿವಾರಿಸು/ಪರಿಹರಿಸು; **ಧುರದೊಳು ಓಡಿದ ಪಾತಕವ ಭೂಸುರರು ಕಳೆದಪರು**=ಕಾಳೆಗದ ಕಣದಿಂದ ಪಲಾಯನಮಾಡಿದ್ದರಿಂದ ಬಂದ ಪಾಪವನ್ನು ಬ್ರಾಹ್ಮಣರು ಬಹುಬಗೆಯ ಪೂಜೆಯ ಆಚರಣೆಗಳಿಂದ ಪರಿಹರಿಸುತ್ತಾರೆ;

ಧರಣಿ=ಭೂಮಂಡಲ; ಪ್ರತ್ಯಕ್ಷ=ನೇರವಾಗಿ; **ಅಶ್ವಮೇಧವ ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದು**=ಅಶ್ವಮೇಧವನ್ನು ಭೂಮಂಡಲದಲ್ಲಿ ನಾನೇ ನೇರವಾಗಿ ಆಚರಿಸಬಹುದು; ಎಮಗೆ=ನಮಗೆ; ಸುರ=ದೇವತೆ; ಸತಿ=ಹೆಂಗಸು;

**ಎಮಗೆ ಸುರರ ಸತಿಯರನು ಒಲ್ಲೆವು**=ನಮಗೆ ದೇವಲೋಕದ ಹೆಂಗಸರು ಬೇಕಾಗಿಲ್ಲ; **ಎಮಗೆ ಎಮ್ಮ ಅರಮನೆಯ ನಾರಿಯರೆ ಸಾಕು**=ನಮಗೆ ನಮ್ಮ ಅರಮನೆಯ ರಾಣಿವಾಸದಲ್ಲಿರುವ ಹೆಂಗಸರೇ ಸಾಕು; **ಎಮ್ಮ ಅರಸುತನವೆ ಎಮಗೆ ಇಂದ್ರ ಪದವಿಯು**=ಮತ್ಸ್ಯದೇಶದ ಅರಸುತನವೇ ನಮಗೆ ಇಂದ್ರಪದವಿಗೆ ಸಮಾನವಾದುದು; **ಬಿಟ್ಟು ಕಳುಹು**=ನಿನ್ನ ಮುಷ್ಟಿಯಿಂದ ಹಿಡಿದುಕೊಂಡಿರುವ ನನ್ನನ್ನು ಬಿಟ್ಟು ವಿರಾಟನಗರಿಯತ್ತ ಹೋಗಲು ನನಗೆ ಅವಕಾಶವನ್ನು ನೀಡು;

ಆಳ್+ಒಳು; ಆಳ್=ಗಂಡಸು/ಯೋಧ; ಒಳು=ಅಲ್ಲಿ; ಒಡ್ಡು+ಉಳ್ಳವನು; ಒಡ್ಡು=ಸೇನೆ; **ಆಳೊಳು ಒಡ್ಡುಳ್ಳವನು**=ಚತುರಂಗಬಲದ ಸೇನೆಯುಳ್ಳವನು; **ಭಾರಿಯ ತೋಳುಗಳ ಹೊತ್ತವನು**=ದೊಡ್ಡ ತೋಳ್ಬಲವುಳ್ಳವನು; ಒದರು=ಅಬ್ಬರಿಸಿ/ಜಂಬವನ್ನು ಕೊಚ್ಚಿಕೊಂಡು; ಬಾಷ್ಕಳ+ಕೆಡೆದು; ಬಾಷ್ಕಳ=ಸುಳ್ಳು/ನಡತೆಯಲ್ಲಿ ಮತ್ತು ಮಾತಿನಲ್ಲಿ ಹಿಡಿತವಿಲ್ಲದಿರುವುದು; **ಬಾಷ್ಕಳಗೆಡೆದು**=ಬಾಯಿಗೆ ಬಂದಂತೆ ಮಾತನಾಡಿ;

**ಮನೆಯಲಿ ಸೂಳೆಯರ ಮುಂದೆ ಒದರಿ ಬಾಷ್ಕಳಗೆಡೆದು ಬಂದು**=ಅಲ್ಲಿ ರಾಣಿವಾಸದ ಹೆಂಗಸರ ಮುಂದೆ ಬಾಯಿಗೆ ಬಂದಂತೆ ಇಲ್ಲಸಲ್ಲದ ನಿನ್ನ ಪರಾಕ್ರಮವನ್ನು ಹೊಗಳಿಕೊಂಡು ರಣರಂಗಕ್ಕೆ ಬಂದು; ಕೋಲನ್+ಇಕ್ಕದೆ;

ಕೋಲು=ಬಾಣ; ಇಕ್ಕು=ಪ್ರಯೋಗಿಸು; ಗಾಯ+ಪಡೆಯದೆ; **ಈಗ ಕೋಲನಿಕ್ಕದೆ ಗಾಯವಡೆಯದೆ**=ಈಗ ರಣರಂಗದಲ್ಲಿ ಹಗೆಗಳ ಎದುರು ಬಾಣವನ್ನು ಬಿಡದೆ, ಹೋರಾಟದಲ್ಲಿ ಗಾಯವನ್ನು ಹೊಂದದೆ/ಸಾವುನೋವಿಗೆ ಅಂಜದೆ/ ಮುನ್ನುಗ್ಗಿ ಹೋರಾಡದೆ;

**ಕಾಲು ವೇಗವ ತೋರಿದಡೆ**=ಅತಿವೇಗದಲ್ಲಿ ಬಿದ್ದಂಬೀಳ ಪಲಾಯನ ಮಾಡುತ್ತಿರುವೆಯಲ್ಲಾ; ಓಲಗ=ರಾಜಸಭೆ; ಎಂತು=ಯಾವ ರೀತಿ; ಅಕಟ=ಅಯ್ಯೋ; ನಾಚು=ಲಜ್ಜೆ; ಕುಳ್ಳಿತು+ಇಹೆ; ಇಹೆ=ಇರುವೆ; **ಅಕಟ...ನಿನ್ನ ಓಲಗದೊಳು ಎಂತು ನಾಚದೆ ಕುಳ್ಳಿತಿಹೆ**=ಕಾಳೆಗದ ಕಣದಿಂದ ಹೇಡಿಯಾಗಿ ಪಲಾಯನ ಮಾಡುತ್ತಿರುವ ನೀನು, ನಾಳೆಯ ದಿನ ರಾಜಸಭೆಯಲ್ಲಿ ಯಾವ ರೀತಿ ನಾಚಿಕೊಳ್ಳದೆ ಕುಳಿತುಕೊಳ್ಳುವೆ. ನಾಡನ್ನು ಮತ್ತು ಪ್ರಜೆಗಳನ್ನು ಕಾಪಾಡುವ ಕೆಚ್ಚು ಮತ್ತು ಪರಾಕ್ರಮವಿಲ್ಲದ ಹೇಡಿಯಾದ ನೀನು ರಾಜಪದವಿಯನ್ನು ಹೇಗೆ ಅಲಂಕರಿಸುವೆ;

ಕೆತ್ತು=ಆವರಿಸು/ಮುಸುಕು; ಕೆತ್ತುಕೊಳ್=ಆವರಿಸಿಕೊಂಡಿರು/ಕವಿದು ಕೊಂಡಿರು; ನೆರೆ=ಪೂರ್ಣವಾಗಿ; ಕುತ್ತು=ಚುಚ್ಚು/ಇರಿ/ತಿವಿ; ಹೊದ್ದು= ಹೊಂದಿಕೊಳ್ಳು/ ಜೋಡಿಯಾಗು;

**‘ಕೆತ್ತುಕೊಂಡ ಆ ನಾಚಿಕೆಗೆ ನೆರೆಕುತ್ತಿಕೊಳಬೇಕು’ ಎಂಬ ಗಾದೆಯನು ಇತ್ತ ಹೊದ್ದಿಸಬೇಡ**= ‘ವ್ಯಕ್ತಿಯು ನಾಚಿಕೆಗೆಟ್ಟು ತಾನು ಮಾಡಿದ ಕೆಲಸಕ್ಕೆ ತನ್ನನ್ನು ತಾನೇ ಇರಿದುಕೊಂಡು ಸಾಯಬೇಕು’ ಎಂಬ ಗಾದೆ ಮಾತನ್ನು ನನಗೆ ಅನ್ವಯಿಸಬೇಡ; **ನಾವು ಕಾಳಗಕೆ ಅಂಜುವೆವು**=ನಾವು ಕಾಳೆಗವನ್ನು ಮಾಡಲು ಹೆದರುತ್ತೇವೆ; ತೆತ್ತಿಗ=ಸೇವಕ/ದಾಸ; ಅಹಿತನ್+ಅಂತೆ+ಇರೆ; ಅಹಿತ=ಹಗೆ/ಶತ್ರು; ಇರೆ=ಇರಲು; ಮಿತ್ತು=ಸಾವು/ಮರಣ; ಅಹರೇ=ಆಗುವರೇ;

**ತೆತ್ತಿಗನು ನೀನು. ಅಹಿತನಂತಿರೆ ಮಿತ್ತು ಅಹರೇ**=ನಮ್ಮ ಸೇವಕನಾದ ನೀನು ನಮ್ಮನ್ನು ಕಾಪಾಡದೆ ಹಗೆಯಂತೆ ನಮ್ಮನ್ನು ಸಾವಿನತ್ತ ತಳ್ಳುತ್ತಿರುವುದು ಸರಿಯೇ; ಬೇಡಿದನ್+ಇತ್ತು; ಬೇಡು=ಕೇಳು/ಯಾಚಿಸು/ಬಯಸು; ಇತ್ತು=ನೀಡಿ; ಸಲಹು= ಕಾಪಾಡು/ಸಾಕು; **ನಿನಗೆ ಬೇಡಿದನಿತ್ತು ಸಲಹುವೆನು**=ನೀನು ಕೇಳಿದ್ದೆಲ್ಲವನ್ನೂ ಕೊಟ್ಟು ಸಾಕುತ್ತೇನೆ;

**ಎನ್ನ ಕೊಲ್ಲದೆ ಬಿಟ್ಟು ಕಳುಹು**=ನನ್ನನ್ನು ಸಾವಿಗೆ ಗುರಿಮಾಡದೆ ಕಾಳೆಗದ ಕಣದಿಂದ ಪಾರಾಗಲು ಅವಕಾಶವನ್ನು ನೀಡು; ವಳಿತ=ಭೂಮಿ; ವಾರುವ= ಕುದುರೆ; ಮುಕ್ತಾವಳಿ=ಮುತ್ತಿನ ಸರ; ಅಲಂಕಾರ=ಒಡವೆ/ಆಭರಣ; ರಥ=ತೇರು; ಲಲನೆ=ಹೆಂಗಸು; ಈಸಿಕೊಡು=ಕೊಡಿಸು/ತೆಗೆದುಕೊಡು;

**ರಾಜಭವನದಲಿ ವಳಿತವನು ವಾರುವವ ಮುಕ್ತಾವಳಿಯ ಅಲಂಕಾರವನು ರಥವನು ಲಲನೆಯರ ನಾನು ಈಸಿ ಕೊಡುವೆನು**=ಅರಮನೆಯಲ್ಲಿ ರಾಜನಿಂದ ನಿನಗೆ ಭೂಮಿ, ಕುದುರೆ, ತೇರು, ಮುತ್ತಿನ ಹಾರ, ಒಡವೆ ವಸ್ತ್ರಗಳು ಮತ್ತು ಲಲನೆಯರನ್ನು ಕೊಡಿಸುತ್ತೇನೆ. ಮತ್ಸ್ಯದೇಶದಲ್ಲಿ ಒಂದು ಪ್ರಾಂತ್ಯವನ್ನು ಕೊಟ್ಟು ನಿನ್ನನ್ನು ಮಂಡಲಾಧಿಪತಿಯನ್ನಾಗಿ ಮಾಡುತ್ತೇನೆ; ಬೊಪ್ಪ=ತಂದೆ; ಕೈಯೊಡನೆ ತೋರು=ಇದೊಂದು ನುಡಿಗಟ್ಟು ಇರಬಹುದು. ಉಪಕಾರವನ್ನು ಪಡೆದು ಅಪಕಾರವನ್ನು ಮಾಡುವುದು ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

**ಎಲೆ ಬೃಹನ್ನಳೆ, ನಮ್ಮ ಬೊಪ್ಪನು ಸಲಹಿದಕೆ ಕೈಯೊಡನೆ ತೋರಿದೆ**=ಎಲೆ ಬೃಹನ್ನಳೆ… ರಾಜನಾದ ನನ್ನ ತಂದೆಯು ನಿನ್ನನ್ನು ಸಾಕಿ ಕಾಪಾಡಿದ ಉಪಕಾರಕ್ಕೆ ಬದಲಾಗಿ ನೀನು ರಾಜಪುತ್ರನಾದ ನನ್ನನ್ನೇ ಸಾವಿನತ್ತ ದೂಡುತ್ತಿರುವೆ; ಕಲುಮನ= ಕಲ್ಲಿನಂತಹ ಮನಸ್ಸು. ಪ್ರೀತಿಯಾಗಲಿ ಕರುಣೆಯಾಗಲಿ ಇಲ್ಲದ ಮನಸ್ಸು; **ನಿನ್ನದು ಕಲುಮನವಲಾ ಎಂದಡೆ**=ನಿನ್ನದು ಕಲ್ಲುಮನಸ್ಸು ಎಂದು ಉತ್ತರಕುಮಾರನು ಬಡಬಡಿಸಲು; **ಪಾರ್ಥನು ಇಂತೆಂದ**=ಬೃಹನ್ನಳೆಯ ವೇಷದಲ್ಲಿರುವ ಅರ್ಜುನನು ಈ ರೀತಿ ನುಡಿಯತೊಡಗಿದನು;

ಪೊಡವಿ=ಭೂಮಿ; ಪತಿ=ಒಡೆಯ; ಪೊಡವಿಪತಿ=ರಾಜ; ಬಸುರು=ಹೊಟ್ಟೆ; ಒಡಲು=ದೇಹ; ಕಕ್ಕುಲಿತೆ=ಚಿಂತೆ/ಕಳವಳ; ಕಾಳಗದ+ಎಡೆಗೆ; ಎಡೆ=ಜಾಗ/ನೆಲೆ; ಭೂತ=ಹಿಂದೆ ಆದುದು; ಭವಿಷ್ಯ=ಮುಂದೆ ಬರುವುದು; ಮಾನ=ಎಣಿಕೆ/ಗಣನೆ/ ಕಾಲದ ಅಳತೆ; **ಪೊಡವಿಪತಿಗಳ ಬಸುರ ಬಂದು ಈ ಒಡಲ ಕಕ್ಕುಲಿತೆಯನು ಕಾಳಗದೆಡೆಗೆ ಭೂತ ಭವಿಷ್ಯಮಾನದಲಿ ಮಾಡಿದರಿಲ್ಲ**=ಭೂಮಂಡಲವನ್ನಾಳುವ ರಾಜಮನೆತನದಲ್ಲಿ ಹುಟ್ಟಿಬಂದು ಈ ರೀತಿ ನಿನ್ನ ಹಾಗೆ ಜೀವವನ್ನು ಉಳಿಸಿಕೊಳ್ಳು ವುದಕ್ಕಾಗಿ ಕಳವಳದಿಂದ ಕಂಗಾಲಾದವರು ಈ ಹಿಂದೆಯೂ ಇರಲಿಲ್ಲ ಮುಂದೆಯೂ ಯಾರೂ ಇರುವುದಿಲ್ಲ; ಬಂಜೆ+ಮಾತು; ಬಂಜೆ=ಗೊಡ್ಡು/ ಫಲವಿಲ್ಲದ್ದು/ಹಾಳು; ಬಂಜೆವಾತು=ಇದೊಂದು ನುಡಿಗಟ್ಟು. ಕೆಲಸಕ್ಕೆ ಬಾರದ ಮಾತು/ಪ್ರಯೋಜನವಿಲ್ಲದ ಮಾತು;

**ಬಂಜೆವಾತನು ನುಡಿಯಬಹುದೇ**=ಕೆಲಸಕ್ಕೆ ಬಾರದ ಮಾತುಗಳನ್ನು ಆಡಬಹುದೇ; ಬಾಹಿರ=ಅಯೋಗ್ಯ/ಹೀನ; ರಾಜಬಾಹಿರ=ರಾಜತನಕ್ಕೆ ಅಯೋಗ್ಯನಾದವನು/ಕ್ಷತ್ರಿಯ ಕುಲದಲ್ಲಿ ಹುಟ್ಟಿ ವೀರನಂತೆ ಕೆಚ್ಚೆದೆಯಿಂದ ಬಾಳದೆ ಹೇಡಿಯಾಗಿರುವವನು; **ಸುಡು ಸುಡು**=ಕೋಪ ಮತ್ತು ತಿರಸ್ಕಾರದಿಂದ ವ್ಯಕ್ತಿಯನ್ನು ನಿಂದಿಸುವಾಗ ಬಳಸುವ ನುಡಿಗಟ್ಟು. ನಿನ್ನ ಮೊಕಕ್ಕೆ ಬೆಂಕಿ ಹಾಕ/ನಿನ್ನ ಬಾಳಿಗೆ ಬೆಂಕಿ ಹಾಕ/ನಿನ್ನಂತಹವನು ಇದ್ದರೂ ಒಂದೆ ಸತ್ತರೂ ಒಂದೆ ಎಂಬ

ತಿರುಳಿನಲ್ಲಿ ಬಳಕೆಗೊಳ್ಳುವ ನುಡಿಗಟ್ಟು;

**ಎಲವೋ ರಾಜಬಾಹಿರ ಸುಡು ಸುಡು**=ಎಲವೋ... ರಾಜಮನೆತನದಲ್ಲಿ ಹುಟ್ಟಿ ಹೇಡಿಯಂತೆ ನಡೆದುಕೊಳ್ಳುತ್ತಿರುವ ನಿನ್ನ ಬದುಕನ್ನು ಬೆಂಕಿ ಹಾಕಿ ಸುಡಲಿ; ವರೂಥ=ತೇರು; ಹೊರೆ=ಹತ್ತಿರ/ಬಳಿ; **ವರೂಥದ ಹೊರೆಗೆ ನಡೆ**=ತೇರಿನ ಹತ್ತಿರಕ್ಕೆ ನಡೆ; **ಕಾದಲು ಬೇಡ...ಬಾ. ನೀನು ಎನ್ನಯ ರಥವ ಐದಿಸು**= ರಣರಂಗದಲ್ಲಿ ನೀನು ಯುದ್ಧವನ್ನು ಮಾಡಬೇಡ. ಬಾ...ನನ್ನೊಡನೆ ಬಂದು ತೇರನ್ನೇರಿ ಸಾರಥಿಯಾಗಿ ಮುನ್ನಡೆಸು. ನಾನು ಹಗೆಗಳೊಡನೆ ಕಾದಾಡುತ್ತೇನೆ; ಭೇದತನ=ಕುಗ್ಗುವಿಕೆ/ಬಿರುಕು; **ಮನದಲಿ ಭೇದತನವನು ಬಿಟ್ಟು ಸಾರಥಿಯಾಗು ಸಾಕು**=ನಿನ್ನ ಮನದಲ್ಲಿ ಕಾಡುತ್ತಿರುವ ಸಾವಿನ ಅಂಜಿಕೆಯನ್ನು ಬಿಟ್ಟು, ನನಗೆ ಸಾರಥಿಯಾಗು ಸಾಕು; ಮಾರೊಡ್ಡು=ಶತ್ರುಸೇನೆ; **ಮಾರೊಡ್ಡಿನಲಿ ಕಾದುವೆನು**=ಶತ್ರುಸೇನೆಯೊಡನೆ ನಾನು ಹೋರಾಡುತ್ತೇನೆ;

ಆದಿ=ಮೊದಲು; ನೀನ್+ಆವ; ಆವ=ಯಾವ; **ಆದಿಯಲಿ ನೀನಾವ ರಾಯರ ಕಾದಿ ಗೆಲಿದೈ**=ಈ ಮೊದಲು ನೀನು ಯಾವ ರಾಜನ ಮೇಲೆ ಹೋರಾಡಿ ಜಯಗಳಿಸಿರುವೆ; ಹುಲು=ಅಲ್ಪವಾದುದು/ಕೀಳಾದುದು/ಸಾಮಾನ್ಯವಾದುದು; ಕದನ=ಕಾಳೆಗ/ಯುದ್ಧ; ನಾಟಕ ವಿದ್ಯೆ=ನಟನೆ, ಕುಣಿತ, ಹಾಡುಗಾರಿಕೆ ಮತ್ತು ಮಾತಿನ ಪರಿಣತಿಯ ವಿದ್ಯೆ;

**ಹುಲು ಬೃಹನ್ನಳೆಯಾದ ನಿನಗೆ ಈ ಕದನ ನಾಟಕವಿದ್ಯವಲ್ಲ**=ಯಾವುದೇ ಶಕ್ತಿಯಾಗಲೀ ಯುಕ್ತಿಯಾಗಲೀ ಇಲ್ಲದ ಅತಿಸಾಮಾನ್ಯಳಾಗಿರುವ ನಿನಗೆ ಈ ಕಾಳೆಗವೆಂಬುದು ನಾಟಕದ ವಿದ್ಯೆಯಂತೆ ಸುಲಭವಾದುದಲ್ಲ; ಇನ್ನು=ಹಾಗೆ ನೋಡಿದರೆ; ಎನ್ನವಂದಿಗ=ನನ್ನಂತಹ; ಮೊಗಸು=ಹೋರಾಡು; ಮೊಗಸಲು ಬಾರದು=ಹೋರಾಡಲಾಗದು; **ಇನ್ನು ಎನ್ನವಂದಿಗ ರಾಜ ಪುತ್ರರಿಗೆ ಮೊಗಸಲು ಬಾರದಿದೆ**=ಹಾಗೆ ನೋಡಿದರೆ ನನ್ನಂತಹ ರಾಜಪುತ್ರರಿಗೆ ಇಂತಹ ಹಗೆಗಳೊಡನೆ ಹೋರಾಡಲಾಗುತ್ತಿಲ್ಲ; **ನೀನು ಎನ್ನ ಸಾರಥಿ ಮಾಡಿಕೊಂಡು ಈ ಬಲವ ಜಯಿಸುವೆಯ**=ಕಾಳೆಗದ ಕಣದಲ್ಲಿ ನೀನು ನನ್ನನ್ನು ಸಾರಥಿಯನ್ನಾಗಿ ಮಾಡಿಕೊಂಡು ಇಂತಹ ದೊಡ್ಡ ಸೇನೆಯನ್ನು ಸದೆಬಡಿದು ಜಯಿಸುತ್ತೀಯ; ಅನ್ಯರು=ಇತರರು; ಮನ+ಕಾಂಬರ್+ಅಲ್ಲದೆ; ಕಾಂಬರ್=ಕಾಣ್ಬರ್=ಕಾಣುವರು/ತಿಳಿಯುವರು; ಮನಗಾಂಬರ್=ತಿಳಿದುಕೊಳ್ಳುವರು;

**ಅನ್ಯರನು ಮನಗಾಂಬರಲ್ಲದೆ ತನ್ನ ತಾ ಮನಗಾಂಬರೇ**=ಬೇರೆಯವರ ಶಕ್ತಿ ಸಾಹಸ ಪರಾಕ್ರಮವನ್ನು ಇಲ್ಲವೇ ಗುಣಾವಗುಣವನ್ನು ಜನರು ತಿಳಿಯಬಲ್ಲರೇ ಹೊರತು ತಮ್ಮ ಶಕ್ತಿಯ ಇತಿಮಿತಿಗಳನ್ನು ಇಲ್ಲವೇ ಗುಣಾವಗುಣವನ್ನು

ತಿಳಿಯಲಾರರು. ಅಂತೆಯೇ ನೀನು ನಿನ್ನ ಶಕ್ತಿ ಏನೆಂಬುದನ್ನು ತಿಳಿದಿಲ್ಲ; ಗನ್ನಗತಕ=ಮೋಸ/ನಟನೆ/ಸೋಗು;

**ಈ ಗನ್ನಗತಕವ ನಾವು ಬಲ್ಲೆವು ಬಿಟ್ಟು ಕಳುಹು**=ಮಹಾವೀರನಂತೆ ನೀನು ಸೋಗುಹಾಕುತ್ತಿರುವುದನ್ನು ನಾನು ತಿಳಿದಿದ್ದೇನೆ. ಮೊದಲು ಇಲ್ಲಿಂದ ನನ್ನನ್ನು ಬಿಟ್ಟು ಕಳುಹಿಸು; **ಎಲವೊ...ಸಾರಥಿಯಾಗು ನಡೆ**=ಎಲವೊ...ಈಗ ನೀನು ಸಾರಥಿಯಾಗಿ ತೇರಿನತ್ತ ನಡೆ; ಗಳಹು=ಹರಟು/ಬಾಯಿಗೆ ಬಂದಂತೆ ಮಾತನಾಡು; ಕಟವಾಯಿ=ಬಾಯಿಯ ಅಂಚು; **ನೀ ಗಳಹಿದೊಡೆ ಕಟವಾಯ ಕೊಯ್ವೆನು**=ನೀನು ಹರಟುತ್ತ ನಿಂತರೆ, ನಿನ್ನ ಕಟವಾಯನ್ನು ಸೀಳುತ್ತೇನೆ; ಪ್ರತಿಭಟ=ಶತ್ರುಸೇನೆಯ ಕಾದಾಳು; ನಿಕಾಯ=ಪಡೆ/ಗುಂಪು; ಸಾಕ್ಷಿ= ಮುಂದುಗಡೆ; **ಈ ಪ್ರತಿಭಟ ನಿಕಾಯವ ನಿನ್ನ ಸಾಕ್ಷಿಯಲಿ ಕೊಲುವೆನು**=ಕಾಳೆಗದ ಕಣದಲ್ಲಿರುವ ದುರ್ಯೋಧನನ ಸೇನಾಪಡೆಯನ್ನು ನಿನ್ನ ಕಣ್ಣಮುಂದೆಯೇ ಕೊಲ್ಲುತ್ತೇನೆ; ರಿಪು=ಶತ್ರು; **ಬಳಿಕ ನೀ ನಗು, ನಡೆ ಎನುತ**=ಕಾಳೆಗದಲ್ಲಿ ನನ್ನ ಸಾಹಸವನ್ನು ನೋಡಿ ನೀನು ಆನಂದವನ್ನು ಪಡೆಯುವೆಯಂತೆ...ಈಗ ಮೊದಲು ಇಲ್ಲಿಂದ ತೇರಿನತ್ತ ನಡೆ ಎನ್ನುತ್ತ;

ರಿಪುಬಲಭಯಂಕರ=ಶತ್ರುಗಳ ಬಲವನ್ನು ಅಡಗಿಸುವಂತಹ ಶಕ್ತಿಯುಳ್ಳ ಮಹಾವೀರ ಎಂಬ ತಿರುಳಿನ ನುಡಿಗಟ್ಟು; ಹೆಡತಲೆ=ತಲೆಯ ಹಿಂಭಾಗ; ಹಗರು=ಕವೆಗೋಲಿನಂತೆ ಕಯ್ಯನ್ನು ಅಗಲಿಸಿ, ಹೆಕ್ಕತ್ತನ್ನು ಬಿಗಿಯಾಗಿ ಹಿಡಿದುಕೊಳ್ಳುವುದು; ಔಂಕು=ಅದುಮು/ಒತ್ತಿಹಿಡಿದು; **ರಿಪುಬಲಭಯಂಕರನು ಉತ್ತರನ ಹೆಡತಲೆಯ ಹಗರಿನೊಳು ಔಂಕಿ ತಂದನು**=ಮಹಾವೀರನಾದ ಅರ್ಜುನನು ಉತ್ತರನ ಹೆಡತಲೆಯನ್ನು ತನ್ನ ಕಯ್ಯಿಂದ ಅದುಮಿ ಹಿಡಿದುಕೊಂಡು ತೇರಿನ ಬಳಿಗೆ ದೂಡಿಕೊಂಡು ಬಂದನು;

**ರಥವನು ಏರಿಸಿದ**=ತೇರಿನಲ್ಲಿ ಸಾರತಿಯ ಜಾಗದಲ್ಲಿ ಕುಳ್ಳಿರಿಸಿದನು; ಖೇಡತನ=ಹೆದರಿಕೆ/ಅಂಜಿಕೆ; ಅಹಿತರು=ಶತ್ರುಗಳು/ಹಗೆಗಳು; **ಎಲವೊ, ಖೇಡತನ ಬೇಡ. ರಣದೊಳಗೆ ಅಹಿತರನು ಓಡಿಸುವೆನು**=ಎಲವೊ... ಹೆದರಬೇಡ. ಕಾಳೆಗದ ಕಣದಲ್ಲಿ ಶತ್ರುಗಳನ್ನು ಓಡಿಸುತ್ತೇನೆ; ಅಂತಕ=ಯಮ/ಸಾವಿನ ದೇವತೆ; ಥಟ್ಟು=ಸೇನೆ/ಪಡೆ; ನಡೆ=ಚೆನ್ನಾಗಿ/ಅತಿಶಯವಾಗಿ; ಹೊಯ್=ಹೊಡೆತ/ಬಡಿತ; ನಡೆಹೊಯ್ದು=ಸಂಪೂರ್ಣವಾಗಿ ಸದೆಬಡಿದು; ಹರಣ=ಜೀವ/ಪ್ರಾಣ; ಹೂಡಿಸು=ಸಾಗಿಸು/ರವಾನಿಸು;

**ಥಟ್ಟ ನಡೆಹೊಯ್ದು ಅಂತಕನ ನಗರಿಗೆ ಹರಣವ ಹೂಡಿಸುವೆನು**= ಶತ್ರುಸೇನಾ ಬಲವನ್ನು ಸದೆಬಡಿದು ಯಮನ ಪಟ್ಟಣಕ್ಕೆ ಕಾದಾಳುಗಳ ಜೀವವನ್ನು

ರವಾನಿಸುತ್ತೇನೆ; ಕೋಡು=ಬೆದರು/ಕುಗ್ಗು; ಕೊಂಕು=ಹಿಂದೆಗೆ/ಹಿಂಜರಿ; **ಕೋಡದಿರು...ಕೊಂಕದಿರು. ಧೈರ್ಯವ ಮಾಡಿ ಸಾರಥಿಯಾಗು ಎನುತ**=ಬೆದರಿ ಬೆಚ್ಚಬೇಡ 'ಹಿಂದೆಗೆದು ಕುಗ್ಗಬೇಡ' ಕೆಚ್ಚೆದೆಯಿಂದ ಸಾರಥಿಯಾಗಿ ತೇರನ್ನು ಮುನ್ನಡೆಸು ಎನ್ನುತ್ತ; ಕಲಿ ಮಾಡು=ಶೂರನನ್ನಾಗಿ ಮಾಡು; ಶಮಿ=ಬನ್ನಿಯ ಮರ; ಹೊರೆ=ಹತ್ತಿರ; **ಕಲಿ ಮಾಡಿ ಸಮೀಪದ ಶಮಿಯ ಹೊರೆಗಾಗಿ ಕೊಂಡೊಯ್ದನು**= ಅರ್ಜುನನು ಹೇಡಿಯಾಗಿದ್ದ ಉತ್ತರಕುಮಾರನನ್ನು ಕಲಿಯನ್ನಾಗಿ ಮಾಡಿ ಹತ್ತಿರದಲ್ಲೇ ಇದ್ದ ಬನ್ನಿಯ ಮರದ ಬಳಿಗೆ ಕರೆದುಕೊಂಡು ಬಂದನು;



## ನೋಟ–೫

**ಮರನನು ಏರು**=ಈ ಬನ್ನಿಮರದ ಮೇಲೆ ಹತ್ತು; ಮಿಗೆ=ಅತಿಶಯತೆ/ಹೆಚ್ಚಾಗಿ; ಹರಣ=ಜೀವವನ್ನು ತೆಗೆಯುವುದು; ಭರಣ=ಜೀವವನ್ನು ಕಾಪಾಡುವುದು; ಕ್ಷಮೆ=ಇತರರ ತಪ್ಪನ್ನು ಮನ್ನಿಸಿವುದು; ಕೈದು=ಆಯುಧ/ಹತಾರ; **ಇದರೊಳಗೆ ಪಾಂಡವರು ಮಿಗೆ ಹರಣ ಭರಣ ಕ್ಷಮೆಗಳಲಿ ಕೈದುಗಳ ಇರಿಸಿ ಹೋದರು**= ಪಾಂಡವರು ಈ ಮರದೊಳಗೆ ಜೀವವನ್ನು ತೆಗೆಯುವ, ಜೀವವನ್ನು ಉಳಿಸುವ ಮತ್ತು ತಪ್ಪನ್ನು ಮಾಡಿದವರ ಸೊಕ್ಕನ್ನು ಅಡಗಿಸಿ ಅವರಿಗೆ ಜೀವದಾನ ಮಾಡುವ ಕಸುವುಳ್ಳ ಅತಿಶಯವಾದ ಆಯುಧಗಳನ್ನು ಇಟ್ಟುಹೋಗಿದ್ದಾರೆ;

**ನೀನು ಎನಗೆ ನೀಡು**=ಆ ಆಯುಧಗಳನ್ನು ನೀನು ನನಗೆ ಮರದಿಂದ ಇಳಿಸಿ ನನಗೆ ಕೊಡು; ವರ=ಉತ್ತಮ; ಇದೇನೈ=ಇದೇನಿದು; ಅನುಚಿತ=ಯೋಗ್ಯವಲ್ಲ; ಮತ್ತೆ=ಬೇರೆ/ಇನ್ನೊಂದು; **ವರ ಬೃಹನ್ನಳೆ ಇದೇನೈ, ಮರದ ಮೇಲಣ ಹೆಣನ ಅರಸು ಮಕ್ಕಳು ಮುಟ್ಟಲು ಅನುಚಿತ. ತನಗೆ ಮತ್ತೆ ಕೆಲಸವ ಹೇಳು**=ಎಲೆ ಬೃಹನ್ನಳೆ ಇದೇನು ಹೇಳುತ್ತಿರುವೆ. ಮರದ ಮೇಲೆ ಇರುವ ಮಾನವನ ಹೆಣವನ್ನು ರಾಜರ ಮಕ್ಕಳು ಮುಟ್ಟುವುದು ಯೋಗ್ಯವಲ್ಲ. ನನಗೆ ಈ ಕೆಲಸವನ್ನು ಹೇಳಬೇಡ. ಮತ್ತೇನಾದರೂ ಇದ್ದರೆ ಹೇಳು. ಬೃಹನ್ನಳೆಯ ಮಾತಿನಂತೆ ಆಯುಧಗಳನ್ನು ಮರದಿಂದ ಇಳಿಸುವ ಮುನ್ನ ಮರದ ಕೊಂಬೆಗಳತ್ತ ತಲೆಯೆತ್ತಿ ನೋಡಿದ ಉತ್ತರ ಕುಮಾರನಿಗೆ ಪಾಂಡವರ ಆಯುಧಗಳನ್ನು ಕಟ್ಟಿಟ್ಟಿದ್ದ ಕಂತೆಯು ಮಾನವನ ಹೆಣದಂತೆ ಕಂಡುಬಂದಿತು;

ನಂದನ=ಮಗ; ಕೆಲಬಲನು=ಅಕ್ಕಪಕ್ಕದವರು/ಇತರರು; ಅರಿ=ತಿಳಿ; ಅಂದ=ರೀತಿ; ತೊಗಲು=ಚರ್ಮ; ಉರು=ಉತ್ತಮವಾದ; **ಹೆಣನಲ್ಲ, ತೆಗೆ. ಪಾಂಡು ನಂದನರು ಕೆಲಬಲನು ಅರಿಯದ ಅಂದದಿ ಹೊರಗೆ ತೊಗಲಲಿ ಬಿಗಿದು ಉರುವ ಕೈದುವ ಕಟ್ಟಿದರು ಎನಲು**=ಅದು ಹೆಣವಲ್ಲ. ತೆಗೆದುಕೊಡು.

ಪಾಂಡುಪುತ್ರರು ಬೇರೆಯವರಿಗೆ ಗೊತ್ತಾಗಬಾರದೆಂಬ ಉದ್ದೇಶದಿಂದ ಈ ರೀತಿ ಆಯುಧಗಳ ಕಟ್ಟನ್ನು ಹೆಣದ ಆಕಾರದಲ್ಲಿ ಪ್ರಾಣಿಯ ತೊಗಲಿನಿಂದ ಬಿಗಿದು ಕಟ್ಟಿ, ಮರದ ಮೇಲೆ ಇರಿಸಿದ್ದಾರೆ ಎಂದು ಬೃಹನ್ನಳೆಯು ಉತ್ತರಕುಮಾರನಿಗೆ ಹೇಳಲು;

**ಭೀತಿಯ ತೊರೆದು**=ಹೆದರಿಕೆಯನ್ನು ಬಿಟ್ಟು; ಅಳವಡಿಸು=ಹೊಂದಿಸು; **ಸೆರಗನು ಅಳವಡಿಸಿ ಇಕ್ಕಿ ತುದಿಗೇರಿದನು**=ಮಯ್ ಮೇಲಿನ ಉದ್ದನೆಯ ಶಲ್ಯವನ್ನು ಸೊಂಟಕ್ಕೆ ಬಿಗಿದು ಕಟ್ಟಿಕೊಂಡು ಮರದ ಮೇಲಕ್ಕೆ ಹತ್ತಿದನು; ನೇಣ್=ಹಗ್ಗ/ಹುರಿ; **ನೇಣ್ಗಳ ಹರಿದು**=ಆಯುಧಗಳ ಹೊರೆಯ ಸುತ್ತಲೂ ಬಿಗಿದಿದ್ದ ಹಗ್ಗವನ್ನು ಕಿತ್ತುಹಾಕಿ; ಕೈದು=ಆಯುಧ/ಹತಾರ; **ಕೈದುವ ಬಿಟ್ಟು ಕಂಡು ಅಂಜಿದನು**=ಆಯುಧಗಳನ್ನು ಇಳಿಸುವಾಗ, ಅವನ್ನು ಕಂಡು ಹೆದರಿದನು; **ಭಯ ಹೊಡೆದು**=ಹೆದರಿಕೆಯಿಂದ ತತ್ತರಿಸುತ್ತಾ; ಕಾಲ=ಭಯಂಕರವಾದ/ಉಗ್ರವಾದ; ಭುಜಗ=ಹಾವು; **ಕಾಲ ಭುಜಗನ ನಾಲಿಗೆಯೊ**=ಭಯಂಕರವಾದ ನಂಜನ್ನು ಕಾರುವ ಹಾವಿನ ನಾಲಿಗೆಯೊ; ಶರ=ಬಾಣ; ಜಾಲ=ಬಲೆ; **ಶರ ಜಾಲವೋ**= ಬಾಣಗಳ ಬಲೆಯೋ; ಕಲ್ಪಾಂತ=ಪ್ರಳಯ ಕಾಲ; ವಹ್ನಿ=ಬೆಂಕಿ; ಜ್ವಾಲೆ=ದಗದಗನೆ ಉರಿಯುತ್ತಿರುವ ಬೆಂಕಿ ನಾಲಗೆ; **ಕಲ್ಪಾಂತ ವಹ್ನಿಜ್ವಾಲೆಯೋ**= ಪ್ರಳಯ ಕಾಲದಲ್ಲಿ ಇಡೀ ಜಗತ್ತನ್ನು ಸುಟ್ಟು ಕರಿಕಲುಮಾಡುವ ಬೆಂಕಿಯ ಜ್ವಾಲೆಯೋ; ಕಾಲಾಂತಕ=ಯಮ; ದಾಡೆ=ಕೋರೆಹಲ್ಲು;

**ಕೈದುಗಳೊ...ಕಾಲಾಂತಕನ ದಾಡೆಗಳೊ**=ಇವೇನು ಹತಾರಗಳೊ ಇಲ್ಲವೇ ಸಾವಿನ ದೇವತೆಯಾದ ಯಮನ ಕೋರೆಹಲ್ಲುಗಳೊ; ಧರಿಸು=ಹಿಡಿ/ಹೊರು/ ತಾಳು; **ಎಂತು ತೋಳು ಧರಿಸುವವು**=ಈ ಭಯಂಕರವಾದ ಈ ಆಯುಧಗಳನ್ನು ಹೇಗೆ ಹಿಡಿಯುವುದು/ಇವನ್ನು ಹಿಡಿದು ಹೋರಾಡಲು ತೋಳ್ಬಲ ಎಷ್ಟಿದ್ದರೂ ಸಾಕಾಗುವುದಿಲ್ಲ; ಆಲಿ=ಕಣ್ಣು ಗುಡ್ಡೆ; ಉರೆ=ಬಹಳವಾಗಿ/ಹೆಚ್ಚಾಗಿ; **ನೋಡಿದಡೆ ಆಲಿ ಉರೆ ಬೆಂದವು**=ಇವನ್ನು ನೋಡುತ್ತಿದ್ದರೆ ಕಣ್ಣು ಗುಡ್ಡೆಗಳು ಸಂಪೂರ್ಣವಾಗಿ ಬೆಂದುಹೋಗುತ್ತಿವೆ; ಕಾಳುಮಾಡು=ಇದೊಂದು ನುಡಿಗಟ್ಟು. ಕೇಡು ಮಾಡು ಎಂಬ ತಿರುಳಿನಲ್ಲಿ ಬಳಕೆಯಾಗಿದೆ; ಓರಂತೆ=ಒಂದೇ ಸಮನೆ; ಹಲುಬು= ರೋದಿಸು/ಗೋಳಾಡು; **ಬೃಹನ್ನಳೆ, ಕಾಳು ಮಾಡಿದೆ. ಕೊಂದೆ ಎನುತ ಓರಂತೆ ಹಲುಬಿದನು**=ಬೃಹನ್ನಳೆ 'ನೀನು ನನಗೆ ಕೇಡನ್ನು ಬಗೆದು ನನ್ನನ್ನು ಕೊಲ್ಲುತ್ತಿರುವೆ ಎಂದು ಹೇಳುತ್ತ ಒಂದೇ ಸಮನೆ ಗೋಳಾಡತೊಡಗಿದನು;

ಹೊಗರು=ಹೊಳೆಹೊಳೆಯುವ/ಕಾಂತಿಯನ್ನು ಸೂಸುವ; ಹೊರಳಿ=ಗುಂಪು; ಬಾಯ್ದಾರೆ=ಕತ್ತಿಯ ಹರಿತವಾದ ಅಂಚು/ಅಲಗು; **ಹೊಗರ ಹೊರಳಿಯ ಹೊಳೆವ**

**ಬಾಯ್ದಾರೆಗಳ**=ಹೊಳೆಹೊಳೆಯುತ್ತಿರುವ ಅಂಚಿನಿಂದ ಕೂಡಿದ ಕತ್ತಿಗಳ; ತಳಪ=ಹೊಳಪು/ಕಾಂತಿ/ಪ್ರಕಾಶ; ಹೊನ್ನಾಯುಗ=ಕತ್ತಿಯ ಚಿನ್ನದ ಹಿಡಿಕೆ; **ತಳಪದ ಕಾಂತಿ ಹೊನ್ನಾಯುಗದ**=ಹೊಳೆಯುತ್ತಿರುವ ಚಿನ್ನದ ಹಿಡಿಕೆಯುಳ್ಳ ಕತ್ತಿಗಳ; ಬಹಳ=ಅತಿ ಹೆಚ್ಚಿನ; ಪ್ರಭೆ=ಕಿರಣ/ರಶ್ಮಿ; ಶರ=ಬಾಣ; ಓಘ=ಸಮೂಹ/ಗುಂಪು; ಅನಲ=ಬೆಂಕಿ; ಗಹಗಹಿಸಿ=ಹೊಳೆಹೊಳೆಯುವುದು; ಝುಗಝುಗಿಸಿ=ಪ್ರಕಾಶಮಾನವಾಗಿ ಬೆಳಗುತ್ತಿರುವುದು; **ಬಹಳ ಪ್ರಭೆ ಶರ ಓಘ**=ಅಪಾರವಾದ ಕಿರಣಗಳ ಕಾಂತಿಯ ಸಮೂಹದಿಂದ ಬೆಳಗುತ್ತಿರುವ ಬಾಣಗಳ; **ಅನಲನ ಗಹಗಹಿಸಿ ಝುಗಝುಗಿಸಿ ಕಣ್ಮುಚ್ಚಿ ಕೈಗಳ ಮುಗಿದು ಸಾರಥಿಗೆ**=ಆಯುಧಗಳ ಕಾಂತಿಯು ಉತ್ತರಕುಮಾರನ ಕಣ್ಣಿಗೆ ಬೆಂಕಿಯಂತೆ ಪ್ರಜ್ವಲಿಸುತ್ತಿರಲು ನೋಡಲಾಗದೆ ಕಣ್ಣುಗಳನ್ನು ಮುಚ್ಚಿ, ಕಯ್ಗಳನ್ನು ಮುಗಿಯುತ್ತ ಬೃಹನ್ನಳೆಯಲ್ಲಿ ಈ ರೀತಿ ಬೇಡಿಕೊಳ್ಳುತ್ತಾನೆ; **ತಂದೆ ಎನ್ನನು ತೆಗೆದುಕೊಳ್ಳೈ**= ತಂದೆಯೇ ನನ್ನನ್ನು ಹಿಡಿದುಕೊ/ನನ್ನನ್ನು ಕಾಪಾಡು; ಅಸ್ತ್ರ=ಆಯುಧ/ಹತಾರ; ಸೀಮೆ=ವಲಯ/ಜಾಗ; ಸಿಲುಕು=ಈಡಾಗು/ಗುರಿಯಾಗು; **ಅಸ್ತ್ರ ಸೀಮೆಯಲಿ ಸಿಲುಕಿದೆನು**=ಆಯುಧಗಳ ಎಡೆಯಲ್ಲಿ ಸಿಕ್ಕಿಬಿದ್ದಿದ್ದೇನೆ; ಕೊಡ=ಮಣ್ಣಿನ ಮಡಕೆ/ಗಡಿಗೆ; ದೋಷಿ=ತಪ್ಪನ್ನು ಮಾಡಿರುವ ವ್ಯಕ್ತಿ/ಅಪರಾಧಿ; ತುಡುಕು=ಮುಟ್ಟು/ತಾಗು/ಹಿಡಿ;

**ಹಾವಿನ ಕೊಡನ ದೋಷಿ ತುಡುಕಬಹುದೇ**=ತಪ್ಪನ್ನು ಮಾಡಿರುವ ವ್ಯಕ್ತಿಯು ಹಾವನ್ನುಳ್ಳ ಕೊಡದೊಳಕ್ಕೆ ಕಯ್ಯನ್ನು ಹಾಕಬಹುದೇ; ಪ್ರಾಚೀನಕಾಲದಲ್ಲಿದ್ದ ನ್ಯಾಯ ನಿರ್ಣಯ ವ್ಯವಸ್ಥೆಯ ಒಂದು ಆಚರಣೆ; ಆರೋಪಕ್ಕೆ ಗುರಿಯಾಗಿರುವ ವ್ಯಕ್ತಿಯು ತಾನು ನಿರಪರಾಧಿ ಎಂಬುದನ್ನು ಸಾಬೀತು ಮಾಡಲು ಹಾವಿನ ಕೊಡದೊಳಕ್ಕೆ ಪಂಚಾಯಿತಿದಾರರ ಮುಂದೆ ಹಾವಿನ ಕೊಡದೊಳಕ್ಕೆ ಕಯ್ಯನ್ನು ಕೆಲವು ಗಳಿಗೆಗಳ ಕಾಲ ಹಾಕಬೇಕು. ಆ ಸಮಯದಲ್ಲಿ ಹಾವು ಕಚ್ಚಿ ನಂಜೇರಿ ಆತ/ಆಕೆ ಸತ್ತರೆ, ಅವರನ್ನು ಅಪರಾಧಿಯೆಂದು ನಿರ್ಣಯಿಸಲಾಗುತ್ತಿತ್ತು. ಒಂದು ವೇಳೆ ಹಾವು ಕಚ್ಚದೆ ಉಳಿದುಕೊಂಡರೆ ಆರೋಪಕ್ಕೆ ಗುರಿಯಾದ ವ್ಯಕ್ತಿಯನ್ನು ನಿರಪರಾಧಿಯೆಂದು ತೀರ್ಮಾನಿಸಲಾಗುತ್ತಿತ್ತು;

**ಇವು ನಿನಗೆ ಕೈದುಗಳೆ**=ಇವು ನಿನಗೆ ಆಯುಧಗಳೆ; ಬರಸಿಡಿಲು=ಮೋಡಗಳ ತಿಕ್ಕಾಟದಿಂದ ಹೊರಹೊಮ್ಮಿ ಇದ್ದಕ್ಕಿದ್ದಂತೆ ಬಂದು ಭೂಮಿಗೆ ಬಂದು ಬಡಿಯುವ ಸಿಡಿಲು; ದಾವಣಿ=ಸಾಲು/ಗುಂಪು; **ಬರಸಿಡಿಲ ದಾವಣಿಯಾಗುತಿವೆ**=ನಿನ್ನ ಆಯುಧಗಳು ನನ್ನ ಪಾಲಿಗೆ ಎಡೆಬಿಡದೆ ಬಡಿಯುವ ಬರಸಿಡಿಲಾಗಿವೆ; **ಕೈಯಿಕ್ಕಲು ಅಂಜುವೆನು**=ಅವನ್ನು ಮುಟ್ಟಲು ಹೆದರುವೆನು; **ಸಾರಥಿ ಎನ್ನನು ಬಿಡಿಸು**=ಸಾರತಿ, ನನ್ನನ್ನು ಮರದಿಂದ ಕೆಳಗಿಳಿಸಿಕೊ; ಫಡ= ತಿರಸ್ಕಾರ ಇಲ್ಲವೇ

ಕೋಪವನ್ನು ಸೂಚಿಸುವಾಗ ಬಳಸುವ ಉದ್ಗಾರದ ನುಡಿ; **ಫಡ, ನಡುಗದಿರು**= ಫಡ... ಜೀವಭಯದಿಂದ ನಡುಗಬೇಡ; **ಫಲುಗುಣ**=ಅರ್ಜುನನಿಗೆ ಮತ್ತೊಂದು ಹೆಸರು; ಫಲುಗುಣನ ನೆನೆ=ಅರ್ಜುನನ ಹೆಸರನ್ನು ಉಚ್ಚರಿಸು; ಕೈ+ತುಡುಕು; ಕೈದುಡುಕು=ಕಯ್ಯನ್ನು ಹಾಕು; ಅಹವು=ಆಗುವುವು; **ತೆಗೆ ಸಾಕು. ಕೈದುಡುಕು ಕೈವಶ ಅಹವು ಎಂದನು ಆ ಪಾರ್ಥ**=ನಿನ್ನ ಅಂಜಿಕೆಯನ್ನು ಬಿಟ್ಟು ಕಯ್ಯನ್ನು ಹಾಕು. ಆಯುಧಗಳು ನಿನ್ನ ಕಯ್ಗೆ ಸಿಗುತ್ತವೆ ಎಂದು ಅರ್ಜುನನು ಉತ್ತರಕುಮಾರನಿಗೆ ಹೇಳಿದ; ಉಲಿ=ದನಿಮಾಡು/ಕೂಗು; ಸತ್ವ=ಬಲ/ಶಕ್ತಿ; ಔಕು=ಅದುಮು; **ಉಲಿದು ಸತ್ವದೊಳು ಔಕಿ**=ದೊಡ್ಡ ದನಿಯಲ್ಲಿ ಅರ್ಜುನನ ಹೆಸರನ್ನು ಉಚ್ಚರಿಸುತ್ತ, ಆಯುಧದ ಕಟ್ಟು ಕೆಳಕ್ಕೆ ಬೀಳದಂತೆ ಬಿಗಿಯಾಗಿ ಒತ್ತಿಹಿಡಿದು; ಕಾಯ=ದೇಹ/ ಮಯ್; ಬಲಿದು=ಬಿಗಿಗೊಳಿಸು; **ಕಾಯವ ಬಲಿದು**=ಮಯ್ಯ ಬಲವನ್ನೆಲ್ಲಾ ಒಗ್ಗೂಡಿಸಿ; ತೆಕ್ಕೆ=ಎರಡು ತೋಳುಗಳ ಹಿಡಿತ;

**ತೆಕ್ಕೆಯೊಳು ಒತ್ತಿ**=ಎರಡು ತೋಳುಗಳಲ್ಲಿಯೂ ಆಯುಧದ ಕಟ್ಟನ್ನು ಬಿಗಿಯಾಗಿ ಹಿಡಿದುಕೊಂಡು; ಕರತಳ=ಅಂಗಯ್/ಹಸ್ತ; ಗಾಂಡೀವ=ಅರ್ಜುನನ ಬಿಲ್ಲು; **ಬೆವರಿದು ಬಳಲಿ ಅರ್ಜುನನ ಕರತಳಕೆ ಗಾಂಡೀವವ ನೀಡಿದನು**=ಬೆವರು ಹರಿಯುತ್ತಿರಲು ಹೆಚ್ಚಿನ ಪರಿಶ್ರಮದಿಂದ ಆಯಾಸಗೊಂಡ ಉತ್ತರಕುಮಾರನು ಅರ್ಜುನನ ಹಸ್ತಕ್ಕೆ ಗಾಂಡೀವವನ್ನು ನೀಡಿದನು;

ಬಲುಹು=ಬಲ/ಕಸುವು; ಅವಡು+ಒತ್ತಿ; ಅವಡು=ದವಡೆ; **ಬಲುಹಿನಿಂದ ಅವಡೊತ್ತಿ ತೆಗೆ ತೆಗೆದು ಉಳಿದ ಬಿಲುಗಳ ನೀಡಿ**=ತನ್ನೆಲ್ಲ ಬಲವನ್ನು ಒಗ್ಗೂಡಿಸಿ ಕೊಂಡು ಮರದ ಕೊಂಬೆಯಲ್ಲಿ ಕಟ್ಟಿದ್ದ ಆಯುಧಗಳ ಹೊರೆಯಿಂದ ಉಳಿದ ಬಿಲ್ಲುಗಳನ್ನು ನೀಡಿ; **ಮರನನು ಮಲಗಿ**=ಮರದ ಕಾಂಡವನ್ನು ಆಸರೆಯಾಗಿ ತಬ್ಬಿಕೊಂಡು; ಢಗೆ+ಇಂದ; ಢಗೆ=ತಳಮಳ; ಅಳ್ಳೆ+ಪೊಯ್ದು; ಅಳ್ಳೆ=ಹೊಟ್ಟೆಯ ಪಕ್ಕೆ; **ಅಳ್ಳೆವೊಯ್ದು**=ಏದುಸಿರನ್ನು ಬಿಡುವಾಗ ಪಕ್ಕೆಗಳು ಉಬ್ಬಿತಗ್ಗತೊಡಗುತ್ತವೆ; **ಮರನನು ಮಲಗಿ ಢಗೆಯಿಂದ ಅಳ್ಳೆವೊಯ್ದು**=ಮರದ ದೊಡ್ಡ ಕಾಂಡವನ್ನು ಆಸರೆಯಾಗಿ ತಬ್ಬಿಹಿಡಿದು, ತೀವ್ರವಾದ ಆಯಾಸದಿಂದ ಬಳಲಿ ಏದುಸಿರನ್ನು ಬಿಡುತ್ತ; **ಕುಮಾರನು ಇಂತು ಎಂದ**=ಉತ್ತರಕುಮಾರನು ಈ ರೀತಿ ನುಡಿದ;

ಗಿರಿ=ಬೆಟ್ಟ; ತೆರಳಿಚು=ಅಲುಗಾಡಿಸು; ಆರ್=ಶಕ್ತನಾಗು; **ಗಿರಿಯನು ಎತ್ತಲು ಬಹುದು. ಬಿಲುಗಳ ತೆರಳಿಚುವಡೆ ಆರೆನು**=ಬೆಟ್ಟವನ್ನು ಬೇಕಾದರೆ ಎತ್ತಲು ಬಹುದು. ಆದರೆ ಇಲ್ಲಿರುವ ಬಿಲ್ಲುಗಳನ್ನು ಅಲುಗಿಸಲಾರೆನು; ಸಮರ್ಥ= ಶಕ್ತಿಶಾಲಿ/ಬಲವುಳ್ಳವನು; ಧರಿಸು=ತೊಡು/ಹಿಡಿ; ಶರಣು=ತಲೆಬಾಗುತ್ತೇನೆ; **ಬೃಹನ್ನಳೆ, ನೀ ಸಮರ್ಥನು ಧರಿಸಲಾಪೈ. ನಿನಗೆ ಶರಣು ಎನುತ**=ಬೃಹನ್ನಳೆ... ನೀನು

ಶಕ್ತಿಶಾಲಿಯಾಗಿರುವುದರಿಂದ ಇವನ್ನು ಹಿಡಿಯಬಲ್ಲೆ. ನಿನಗೆ ಶರಣಾಗಿದ್ದೇನೆ ಎಂದು ಉತ್ತರಕುಮಾರನು ಬೃಹನ್ನಳೆಯನ್ನು ಹೊಗಳುತ್ತ;

ಸರಳು=ಬಾಣ; ಹೊದೆ=ಬತ್ತಳಿಕೆ/ಬಾಣಗಳನ್ನಿಡುವ ಕೋಶ; ದೇವದತ್ತ=ಶಂಕ; ಪರಶು=ಕೊಡಲಿ; ತೋಮರ=ತುದಿಯಲ್ಲಿ ಅರ್ಧ ಚಂದ್ರಾಕಾರದಲ್ಲಿರುವ ಬಾಣ; ಕುಂತ=ಈಟಿ; ಅಸಿ=ಕತ್ತಿ; ಮುದ್ಗರ=ಸುತ್ತಿಗೆ/ಒಂದು ಬಗೆಯ ಆಯುಧ; ದಂಡ=ದಡಿ; ಆದಿ=ಮೊದಲಾದ; **ಸರಳ ಹೊದೆಗಳ, ದೇವದತ್ತವ, ಪರಶು ತೋಮರ ಕುಂತ ಅಸಿ ಮುದ್ಗರ ಗದಾ ದಂಡಾದಿ ಶಸ್ತ್ರವ ತೆಗೆದು ನೀಡಿದನು**=ಬಾಣಗಳಿಂದ ತುಂಬಿದ ಬತ್ತಳಿಕೆ, ಶಂಖ, ಕೊಡಲಿ, ಅರ್ಧ ಚಂದ್ರಾಕಾರದ ಬಾಣ, ಈಟಿ, ಕತ್ತಿ, ಸುತ್ತಿಗೆ, ಗದಾದಂಡ ಮೊದಲಾದ ಆಯುಧಗಳೆಲ್ಲವನ್ನೂ ಮರದ ಮೇಲಣ ಕಟ್ಟಿನಿಂದ ಉತ್ತರಕುಮಾರನು ಒಂದೊಂದಾಗಿ ತೆಗೆತೆಗೆದು ಬೃಹನ್ನಳೆಯ ಕಯ್ಗೆ ಕೊಟ್ಟು, ಮರದಿಂದ ಕೆಳಗಿಳಿದು ಬಂದು ಬೃಹನ್ನಳೆಯನ್ನು ಪ್ರಶ್ನಿಸತೊಡಗಿದನು; **ಹೇಳು ಸಾರಥಿ, ಬಿಲ್ಲು ಇದು ಆವನ ತೋಳಿಗೆ ಅಳವಡುವುದು**=ಹೇಳು ಸಾರಥಿ, ಈ ಬಿಲ್ಲು ಯಾವನ ತೋಲ್ಬಲಕ್ಕೆ ಹೊಂದುವುದು. ಅಂದರೆ ಇದನ್ನು ಹಿಡಿದು ಬಾಣವನ್ನು ಪ್ರಯೋಗಿಸಬಲ್ಲ ಶಕ್ತನು ಯಾರು; ಜಾಲ=ಗುಂಪು; ಬೆಸಗೈ=ಹೇಳಿದ ಕಾರ್ಯವನ್ನು ಮಾಡು;

**ಮಹಾಶರ ಜಾಲ ಬೆಸಗೈದಪವು**=ದೊಡ್ಡ ಬಾಣಗಳೆಲ್ಲವೂ ಯಾರ ಅಪ್ಪಣೆಯನ್ನು ಪಾಲಿಸುತ್ತವೆ. ಅಂದರೆ ಗುರಿಯತ್ತ ಸಾಗುತ್ತವೆ; **ಮಿಕ್ಕ ಬಿಲ್ಲುಗಳು ಇದು ಆರಿಗೆ**=ಇನ್ನುಳಿದ ಬಿಲ್ಲುಗಳೆಲ್ಲವೂ ಯಾರಿಗೆ ಸೇರಿದ್ದು; **ಕಾಳಗದೊಳು ಇವನು ಆರು ತೆಗೆವರು**=ಕಾಳೆಗದಲ್ಲಿ ಇವನ್ನು ಯಾರು ಬಳಸುತ್ತಾರೆ; ಮೇಲು ಕೈದುಗಳು=ಉತ್ತಮವಾದ ಆಯುಧಗಳು; ಕೈಮೇಳವಿಸು=ಒಪ್ಪು/ಉಂಟಾಗು/ಸೇರು; **ಮೇಲು ಕೈದುಗಳು ಆರಿಗೆ ಇವು ಕೈಮೇಳವಿಸುವವು**=ಉತ್ತಮವಾದ ಈ ಆಯುಧಗಳೆಲ್ಲವೂ ಯಾರಿಗೆ ಒಪ್ಪುತ್ತವೆ. ಅಂದರೆ ಇಂತಹ ಆಯುಧಗಳನ್ನು ಬಳಸುವ ಆ ವೀರರು ಯಾರು; ಹಿಂಗು=ಪರಿಹಾರವಾಗು/ನಿವಾರಣೆಯಾಗು; **ಮನದ ಸಂಶಯ ಹಿಂಗೆ ಹೇಳು**=ನನ್ನ ಮನವನ್ನು ಕಾಡುತ್ತಿರುವ ಈ ಅನುಮಾನ ಗಳೆಲ್ಲವನ್ನೂ ಪರಿಹರಿಸುವಂತೆ ಎಲ್ಲವನ್ನೂ ಹೇಳು; ಕಣಾ= ಕಂಡೆಯಾ/ನೋಡು; ಗಾಂಡಿವ=ಅರ್ಜುನನು ಬಳಸುತ್ತಿದ್ದ ಬಿಲ್ಲಿನ ಹೆಸರು;

**ಇದು ಕಣಾ, ಗಾಂಡಿವವು ಎಂದು ಎಂಬುದು. ಮಹಾಧನು ಪಾರ್ಥನದು**= ಇದು ನೋಡು 'ಈ ಬಿಲ್ಲಿನ ಹೆಸರು ಗಾಂಡೀವ. ಇದು ಅರ್ಜುನನದು; ಚಾಪ=ಬಿಲ್ಲು; **ಬಳಿಕ ಇದು ಯುಧಿಷ್ಠಿರ ಚಾಪವು**=ಅದರ ಪಕ್ಕದಲ್ಲಿರುವ ಈ ಬಿಲ್ಲು ಧರ್ಮರಾಯನದು; ಧನು=ಬಿಲ್ಲು; **ಈ ಧನು ಭೀಮಸೇನನದು**=ಈ ಬಿಲ್ಲು

ಭೀಮಸೇನನದು; ಕೋದಂಡ=ಬಿಲ್ಲು; **ಇದು ನಕುಲ ಕೋದಂಡ**=ಇದು ನಕುಲನ ಬಿಲ್ಲು; **ಬಿಲು ತಾನು ಇದುವೆ ಸಹದೇವನದು.**=ಇಲ್ಲಿ ಕಾಣುತ್ತಿರುವ ಈ ಬಿಲ್ಲೇ ಸಹದೇವನದು; ಅನಿಲಜ=ವಾಯುಪುತ್ರ/ಭೀಮನಿಗೆ ಇದ್ದ ಮತ್ತೊಂದು ಹೆಸರು; **ಭಾರಿಯ ಗದೆಯಿದು ಅನಿಲಜನದು**=ದೊಡ್ಡದಾಗಿರುವ ಈ ಗದೆ ಭೀಮನದು; ಕಿರೀಟಿ=ಅರ್ಜುನನಿಗೆ ಇದ್ದ ಮತ್ತೊಂದು ಹೆಸರು; **ಇವು ಕಿರೀಟಿಯ ಬಾಣವು**= ಇವು ಅರ್ಜುನನ ಬಾಣಗಳು;

ಬತ್ತಳಿಕೆ=ಬಾಣಗಳನ್ನು ಇಡುವ ಕೋಶ. ಬತ್ತಳಿಕೆಯನ್ನು ಬಿಲ್ಲುಗಾರನು ತನ್ನ ಬೆನ್ನಿಗೆ ಕಟ್ಟಿಕೊಂಡಿರುತ್ತಾನೆ; ಕಂಬು=ಶಂಖ; ಸೀಸಕ=ತಲೆಗೆ ತೊಡುವ ಲೋಹದ ಟೊಪ್ಪಿಗೆ; ಜೋಡು=ಕವಚ; ಬಿರುದು=ಕೀರ್ತಿ/ಪ್ರಸಿದ್ಧಿ; ಟೆಕ್ಕೆಯ=ಬಾವುಟ; ಶಸ್ತ್ರ+ ಅಸ್ತ್ರವನು; ಶಸ್ತ್ರ=ಆಯುಧ; ಅಸ್ತ್ರ=ಬಾಣ; ಬೆರಗು=ಅಚ್ಚರಿ; **ಅವರವರ ಬತ್ತಳಿಕೆ ಚಾಪವನು, ಅವರ ಶರವನು ಕಂಬು ಖಡುಗವ ಕವಚ ಸೀಸಕ ಜೋಡುಗಳ ಬಿರುದುಗಳ ಟೆಕ್ಕೆಯವ ವಿವಿಧ ಶಸ್ತ್ರಾಸ್ತ್ರವನು ಫಲುಗುಣನು ವಿವರಿಸಲು ಬೆರಗಾಗಿ**= ಅಯ್ವರು ಪಾಂಡವರು ಬಳಸುತ್ತಿದ್ದ ಬಿಲ್ಲುಬಾಣಗಳನ್ನು. ಶಂಖ, ಕತ್ತಿ, ದೇಹ ಮತ್ತು ತಲೆಗೆ ತೊಡುತ್ತಿದ್ದ ಬಹುಬಗೆಯ ಕವಚಗಳನ್ನು, ಪಾಂಡವರ ಕೀರ್ತಿಯನ್ನು ಎತ್ತಿಹಿಡಿಯುವ ಬಾವುಟಗಳನ್ನು, ಅನೇಕ ಬಗೆಯ ಶಸ್ತ್ರಾಸ್ತ್ರಗಳನ್ನು ಅರ್ಜುನನು ಉತ್ತರಕುಮಾರನಿಗೆ ವಿವರಿಸಿ ಹೇಳಲು, ಎಲ್ಲವನ್ನೂ ಕೇಳಿ ಉತ್ತರಕುಮಾರನು ಅಚ್ಚರಿಗೊಂಡು; ಸಾರಥಿ+ಇವನು; ತಾನು+ಆರು; ಮತ್ಸ್ಯ= ವಿರಾಟರಾಜನು ಆಳುತ್ತಿದ್ದ ರಾಜ್ಯದ ಹೆಸರು; ಸೂನು=ಮಗ; ಮತ್ಸ್ಯನ ಸೂನು= ವಿರಾಟರಾಜನ ಮಗನಾದ ಉತ್ತರಕುಮಾರ; ಬೆಸಗೊಳ್=ವಿಚಾರಿಸು/ಕೇಳು;

**ಸಾರಥಿಯಿವನು ತಾನಾರು ಎಂದು ಮತ್ಸ್ಯನ ಸೂನು ಬೆಸಗೊಂಡ**= ಪಾಂಡವರು ಅಯ್ವರಲ್ಲಿ ಈಗ ನನಗೆ ಸಾರಥಿಯಾಗಿ ಬಂದಿರುವವನು ಯಾರು ಎಂದು ಉತ್ತರಕುಮಾರನು ಬೃಹನ್ನಳೆಯನ್ನು ಕೇಳಿದನು; ಮಾರುತ= ವಾಯುದೇವ; ಸುತ=ಮಗ; ಮಾರುತನ ಸುತ=ಭೀಮ; ಮೇಣ್=ಇಲ್ಲವೇ; ಬಾಂಧವ=ನೆಂಟ; ಧೀರ=ಶೂರ/ಪರಾಕ್ರಮಿ;

**ಆರು ನೀನು. ಅರ್ಜುನನೊ...ನಕುಲನೊ...ಮಾರುತನ ಸುತನೋ...ಯುಧಿಷ್ಠಿರ ವೀರನೋ...ಸಹದೇವನೋ...ಮೇಣ್ ಅವರ ಬಾಂಧವನೊ. ಧೀರ ಹೇಳೈ ಬೇಡಿಕೊಂಬೆನು**=ಪಾಂಡವರು ಅಯ್ವರಲ್ಲಿ ನೀನು ಯಾರು. ಅರ್ಜುನನೊ... ನಕುಲನೊ... ಭೀಮನೊ... ಧರ್ಮರಾಯನೊ... ಸಹದೇವನೋ ಇಲ್ಲವೇ ಪಾಂಡವರ ನೆಂಟನೊ ಎಂಬುದನ್ನು ಶೂರನಾಗಿರುವ ನೀನು ಹೇಳಬೇಕೆಂದು ಬೇಡಿಕೊಳ್ಳುತ್ತಿದ್ದೇನೆ; **ಕಾರಣವ ವಿಸ್ತರಿಸು**=ಪಾಂಡವರ ಆಯುಧಗಳನ್ನು ಈ

ಮರದಲ್ಲಿಡಲು ಕಾರಣವೇನು ಎಂಬುದೆಲ್ಲವನ್ನು ವಿವರಿಸಿ ಹೇಳು; ತತಿ=ಸಮೂಹ;

**ಪಾಂಡು ಕುಮಾರರ ಆಯುಧ ತತಿಯ ನೀನು ಎಂತು ಅರಿವೆ**=ಈ ಆಯುಧಗಳೆಲ್ಲವೂ ಪಾಂಡುಕುಮಾರರದು ಎಂಬುದನ್ನು ನೀನು ಹೇಗೆ ಬಲ್ಲೆ; **ಆನು ಅರ್ಜುನನು ಎಮಗೆ ರಾಣಿವಾಸವು**=ನಾನು ಅರ್ಜುನ. ನಾನು ರಾಣಿವಾಸ ದಲ್ಲಿದ್ದೇನೆ; ಬಾಣಸಿ=ಅಡುಗೆಯವನು; **ಬಾಣಸಿಯಾದ ವಲಲನು ಭೀಮ**= ಅಡುಗೆಯ ಕಾಯಕವನ್ನು ಮಾಡುವ ವಲಲನೇ ಭೀಮ; ವರ=ಉತ್ತಮ; ಯತಿ=ಯೋಗಿ; **ವರ ಯತಿಯಾದ ಕಂಕನು ಧರ್ಮಪುತ್ರನು**=ಉತ್ತಮ ಯೋಗಿಯಾಗಿ ನಿಮ್ಮ ತಂದೆಯ ಜತೆಯಲ್ಲಿರುವ ಕಂಕನೇ ಧರ್ಮರಾಯ; **ನಿಮ್ಮ ಗೋಕುಲವ ಕಾದವನು ಸಹದೇವ**=ವಿರಾಟನಗರಿಯ ಗೋವುಗಳನ್ನು ಕಾಯುತ್ತಿರುವವನು ಸಹದೇವ; ರಾವುತ=ಕುದುರೆ ಸವಾರ; **ರಾವುತನಾದವನು ನಕುಲನು**=ಅರಸನ ಕುದುರೆಗಳನ್ನು ನೋಡಿಕೊಳ್ಳುತ್ತಿರುವವನೇ ನಕುಲ; ವಿಳಾಸಿನಿ+ಆದವಳು; ವಿಳಾಸಿನಿ=ದಾಸಿ; **ವಿಳಾಸಿನಿಯಾದವಳು ಸೈರಂಧ್ರಿ**= ರಾಣಿವಾಸದಲ್ಲಿ ನಿಮ್ಮ ತಾಯಿಗೆ ದಾಸಿಯಾಗಿರುವ ಸೈರಂಧ್ರಿಯೇ ದ್ರೌಪದಿ; ಮಹಿಮೆ=ಉನ್ನತಿ/ಹಿರಿಮೆ; **ಉಳಿದವರಿಗೆ ಈ ಮಹಿಮೆ ತಾನು ಎಲ್ಲಿಯದು ಕಾಣಲು ಬಹುದಲಾ**=ಬೇರೆಯವರಿಗೆ ನಿಮ್ಮ ಹಿರಿಮೆಯು ಹೇಗೆ ತಾನೆ ಕಾಣಲಾಗುತ್ತದೆ. ಅಂದರೆ ಮಾರುವೇಷದಲ್ಲಿರುವ ನಿಮ್ಮನ್ನು ಪಾಂಡವರೆಂದು ಯಾರೂ ತಿಳಿಯಲಾರರು;

ಮಹಾದೇವ=ಶಿವನ ಹೆಸರು; ಮನದಲ್ಲಿ ಉಂಟಾಗುವ ಆತಂಕ, ಅಚ್ಚರಿ ಮತ್ತು ಅಸಹಾಯಕತೆಯನ್ನು ಸೂಚಿಸುವಾಗ ಈ ರೀತಿ ದೇವರ ಹೆಸರನ್ನು ಹೇಳಲಾಗುತ್ತದೆ; ಗಹನ=ದೊಡ್ಡದು; ಅತಿಶಯ=ಅಸಾಧಾರಣವಾದುದು; **ಅಹುದು ಬಳಿಕೇನು ಮಹಾದೇವ ಗಹನ ಮಾಡದೆ ಅತಿಶಯವನು ಜೀವಿಸಿದರು**= ಮೋಸದ ಜೂಜಾಟದಲ್ಲಿ ದುರ್ಯೋಧನ ಮತ್ತು ಶಕುನಿಯಿಂದ ಸೋತ ಪಾಂಡವರಿಗೆ ಬೇರೆ ದಾರಿಯೇ ಇರಲಿಲ್ಲ. ಮಹಾದೇವ... ತಮಗೆ ಬಂದ ಆಪತ್ತನ್ನು ದೊಡ್ಡದೆಂದು ಕುಸಿದುಬೀಳದೆ, ಅಸಾಧಾರಣವಾದ ರೀತಿಯಲ್ಲಿ ವನವಾಸ ಮತ್ತು ಅಜ್ಞಾತವಾಸದಲ್ಲಿ ಜೀವಿಸಿದರು ಎಂದು ಉತ್ತರಕುಮಾರನು ಪಾಂಡವರ ಗುಣಗಾನ ಮಾಡುತ್ತಾನೆ; ಬಹುಳತೆ=ಹೆಚ್ಚಳ;

**ನುಡಿದ ತಪ್ಪಿನ ಬಹುಳತೆಯ ಭಾವಿಸದೆ**=ನಿನ್ನನ್ನು ನಿಂದಿಸಿ ನುಡಿದ ನನ್ನ ತಪ್ಪನ್ನು ದೊಡ್ಡದೆಂದು ಮನಸ್ಸಿಗೆ ತೆಗೆದುಕೊಳ್ಳದೆ; ಕುಹಕಿ=ಕಪಟಿ/ಇಬ್ಬಗೆಯ ನಡೆನುಡಿಯವನು; ಪದ=ಪಾದ; ಎರಗು=ನಮಿಸು; **ತನ್ನನು ಕುಹಕಿ ಎನ್ನದೆ**

**ಕಾಯಬೇಕು ಎಂದು ಪದಕೆ ಎರಗಿದನು**=ಅಲ್ಲಿ ರಾಣಿವಾಸದಲ್ಲಿ ವೀರನಂತೆ, ಇಲ್ಲಿ ರಣರಂಗದ ಮುಂಚೂಣಿಯಲ್ಲಿ ಹೇಡಿಯಂತೆ ನಡೆದುಕೊಂಡ ನನ್ನನ್ನು ಕಡೆಗಣಿಸದೆ ಕಾಪಾಡಬೇಕು ಎಂದು ನುಡಿಯುತ್ತ ಉತ್ತರಕುಮಾರನು ಅರ್ಜುನನ ಪಾದಗಳನ್ನು ಹಿಡಿದುಕೊಂಡನು; ಮಾಳಿ=ತಲೆ; ನೆಗಹು=ಮೇಲಕ್ಕೆ ಎತ್ತು; **ಮೌಳಿಯನು ನೆಗಹಿದನು**=ಉತ್ತರಕುಮಾರನ ತಲೆಯನ್ನು ಅರ್ಜುನನು ಮೇಲಕ್ಕೆ ಎತ್ತಿದನು; ಬೋಳವಿಸು=ಸಮಾಧಾನ ಮಾಡು/ಸಂತಯಿಸು;

**ನಿನ್ನಯ ಮೇಲೆ ತಪ್ಪಿಲ್ಲ ಎನುತ ಫಲುಗುಣ ಬೋಳವಿಸೆ**=ನಿನ್ನಿಂದ ಯಾವ ತಪ್ಪು ಆಗಿಲ್ಲ ಎಂದು ಅರ್ಜುನನು ಉತ್ತರಕುಮಾರನನ್ನು ಸಮಾಧಾನಪಡಿಸಲು; ಬಿನ್ನಪ=ಕೋರಿಕೆ; ಕೇಳಬೇಹುದು=ಕೇಳಬೇಕು; **ಉತ್ತರನು ನಿಂದಿರ್ದು ಕೈಮುಗಿದು ನಗುತ ಬಾಲಕನ ಬಿನ್ನಪವನು ಒಂದನು ಕೇಳಬೇಹುದು**= ಉತ್ತರಕುಮಾರನು ಅರ್ಜುನನ ಮುಂದೆ ನಿಂತುಕೊಂಡು ಕಯ್ ಮುಗಿಯುತ್ತ ತನ್ನದೊಂದು ಕೋರಿಕೆಯನ್ನು ಕೇಳಬೇಕು ಎಂದು ನುಡಿದನು; ದಶ=ಹತ್ತು; ನಾಮಾವಳಿ= ಹೆಸರುಗಳು; ಪೇಳ್ದು=ಹೇಳಿ; ಅಲ್ಪಮತಿ=ತಿಳುವಳಿಕೆಯಿಲ್ಲ ದಿರುವವನು;

**ನಿಮ್ಮ ದಶ ನಾಮಾವಳಿಯನು ಪೇಳ್ದು ಅಲ್ಪಮತಿಯನು ತಿಳುಹಬೇಕು ಎನಲು**= ನಿಮಗಿರುವ ಹತ್ತು ತೆರನ ಹೆಸರುಗಳನ್ನು ತಿಳಿಯದಿರುವ ನನಗೆ ಅವನ್ನು ತಿಳಸಬೇಕೆಂದು ಕೋರಿಕೊಳ್ಳಲು; ಪುನರಪಿ=ಮತ್ತೊಮ್ಮೆ; ಅಂದ=ರೀತಿ; ವಿಸ್ತರ=ವಿವರಣೆ; ವಿರಚಿಸು=ಬಣ್ಣಿಸು/ವಿವರಿಸು;

**ನಸು ನಗುತ ಅರ್ಜುನನು ಫಲುಗುಣ... ಧನಂಜಯ... ಜಿಷ್ಣು... ಸಿತವಾಹನ... ವಿಜಯ... ಬೀಭತ್ಸು... ಪಾರ್ಥ... ಕಿರೀಟಿ ಮೊದಲಾದ ವಿನುತ ಕೃಷ್ಣನು.. ಸವ್ಯಸಾಚಿಗಳು ಎನಿಪ ಪೆಸರನು ತಿಳುಹಿ ಪುನರಪಿ ತನಗೆ ಬಂದ ಅಂದವನು ವಿಸ್ತರವಾಗಿ ವಿರಚಿಸಿದ**=ಆಗ ಅರ್ಜುನನು ನಗುತ್ತ ತನಗೆ ಇದ್ದ... ಫಲುಗುಣ... ಧನಂಜಯ... ಜಿಷ್ಣು... ಸಿತವಾಹನ... ವಿಜಯ... ಬೀಭತ್ಸು... ಪಾರ್ಥ... ಕಿರೀಟಿ... ವಿನುತ ಕೃಷ್ಣ... ಸವ್ಯಸಾಚಿ... ಎಂಬ ಹತ್ತು ಬಗೆಯ ಹೆಸರುಗಳನ್ನು ಹೇಳಿ, ಮತ್ತೊಮ್ಮೆ ಆ ಹೆಸರುಗಳು ತನಗೆ ಬಂದ ಬಗೆಯನ್ನು ವಿವರವಾಗಿ ಬಣ್ಣಿಸಿದನು; ಲೇಸು= ಒಳ್ಳೆಯದು; **ಪಾರ್ಥ, ಲೇಸಾಗಿ ನಂಬಿದೆನು**= ಅರ್ಜುನ, ನಿನ್ನ ಮಾತುಗಳಿಂದ ನನಗೆ ನೀವೇ ಪಾಂಡವರು ಎಂಬ ನಂಬಿಕೆಯುಂಟಾಗಿದೆ; ನಿಶ್ಚಯ=ವಾಸ್ತವ/ದಿಟ; ಇಂಬು=ಆಶ್ರಯ/ಎಡೆ; **ನಿಶ್ಚಯವು ಇಂಬುಗೊಂಡುದು**=ನೀವು ಯಾರೆಂಬ ವಾಸ್ತವ ಸಂಗತಿಯು ಮನದಟ್ಟಾಯಿತು;

ಹುಲು=ಅತಿ ಸಾಮಾನ್ಯವಾದ; ಬಹುರೂಪ=ಅನೇಕ ರೂಪ/ಬೇರೆ ಬೇರೆ ರೂಪ; ಡೊಂಬು=ಬೂಟಾಟಿಕೆ/ಸೋಗು; **ನಿನಗೆ ಹುಲು ಬೃಹನ್ನಳೆತನದ ಬಹು**

**ರೂಪು. ಈ ಡೊಂಬು ಇದೇಕೈ**=ನೀನು ಅತಿಸಾಮಾನ್ಯವಾದ ಬೃಹನ್ನಳೆತನದ ರೂಪವನ್ನು ತಳೆದಿರುವೆ. ನಿನಗೆ ಈ ಸೋಗಿನ ವೇಷವೇಕೆ; ಅಂಬುಜಾಕ್ಷ=ವಿಷ್ಣು; ಸಾಹಸ=ಪರಾಕ್ರಮ; ಪ್ರತಿಬಿಂಬ=ಪ್ರತಿರೂಪ;

**ನೀನು ಅಂಬುಜಾಕ್ಷನ ಸಾಹಸ ಪ್ರತಿಬಿಂಬವಲ್ಲಾ**=ನೀನು ವಿಷ್ಣು ಪರಮಾತ್ಮನ ಪರಾಕ್ರಮದ ಪ್ರತಿರೂಪವಲ್ಲವೇ; ವಿಡಂಬಿಸು=ಅಣಕಮಾಡು; **ನಿನ್ನ ವಿಡಂಬಿಸಿದ ರೂಹಿಂಗೆ ಕಾರಣವೇನು ಹೇಳು**=ಇತ್ತ ಗಂಡೂ ಅಲ್ಲದ ಅತ್ತ ಹೆಣ್ಣೂ ಅಲ್ಲದ ನಿನ್ನ ಇಂತಹ ರೂಪಿಗೆ ಕಾರಣವೇನೆಂಬುದನ್ನು ಹೇಳು; ಕಣಾ=ಕಂಡೆಯಾ/ ತಿಳಿದಿರುವೆಯಾ; **ಇದು ಕಣಾ**=ಈ ಬಗೆಯ ರೂಪವನ್ನು ನಾನೇಕೆ ತಳೆದಿರುವೆ ಎಂಬುದನ್ನು ಹೇಳುತ್ತೇನೆ ಕೇಳು; ಧರ್ಮಜ=ಧರ್ಮರಾಯ; ಸತ್ಯ+ ಅಭ್ಯುದಯಕೆ+ಓಸುಗ; ಅಭ್ಯುದಯ=ಉತ್ತಮವಾಗಿ ಮುನ್ನಡೆಸುವುದು; ಓಸುಗ= ಸಲುವಾಗಿ/ಕಾರಣಕ್ಕಾಗಿ; ಊರ್ವಶಿ=ದೇವೇಂದ್ರನ ಅಮರಾವತಿ ಪಟ್ಟಣದಲ್ಲಿರುವ ದೇವತೆ; ಶಾಪ=ಕೇಡಾಗಲೆಂದು ಹೇಳುವ ನುಡಿಯುವುದು;

**ಊರ್ವಶಿಯ ಶಾಪ**=ಇದೊಂದು 'ಕಾವ್ಯ ಪ್ರಸಂಗ... ಕಾವ್ಯ ಪ್ರಸಂಗ...' ಎಂದರೆ ಕವಿಕಲ್ಪಿತವಾದ ಕಾವ್ಯಲೋಕದಲ್ಲಿ ನಡೆಯುವ ಪ್ರಸಂಗ. ಒಮ್ಮೆ ದೇವಲೋಕ ದಲ್ಲಿರುವ ದೇವೇಂದ್ರನ ಅಮರಾವತಿ ಪಟ್ಟಣಕ್ಕೆ ಅರ್ಜುನನು ಹೋಗಿದ್ದಾಗ, ಅರ್ಜುನನು ದೇವಲೋಕದ ಸುರಸುಂದರಿಯಾದ ಊರ್ವಶಿಯ ದೇಹದೊಡನೆ ಅರ್ಜುನನು ಕಾಮದ ನಂಟನ್ನು ಪಡೆದು ಆನಂದಿಸಲೆಂಬ ಉದ್ದೇಶದಿಂದ ದೇವೇಂದ್ರನು ಊರ್ವಶಿಯನ್ನು ಅವನ ಬಳಿಗೆ ಕಳುಹಿಸುತ್ತಾನೆ. ಆದರೆ ದೇವೇಂದ್ರನಿಗೆ ಪ್ರೇಯಸಿಯಾಗಿರುವ ಊರ್ವಶಿಯು ತನಗೆ ತಾಯಿಯ ಸಮಾನಳೆಂದು ಅರ್ಜುನನು ಹೇಳಿ, ಆಕೆಯೊಡನೆ ಕಾಮದ ನಂಟನ್ನು ನಿರಾಕರಿಸುತ್ತಾನೆ. ಇದರಿಂದ ಹತಾಶಳಾದ ಊರ್ವಶಿಯು ಅರ್ಜುನನಿಗೆ **"ನೀನು ಒಂದು ವರುಶದ ಕಾಲ ನಂಪುಸಕನಾಗಿರು"** ಎಂದು ಶಾಪವನ್ನು ನೀಡುತ್ತಾಳೆ. ಆಗ ಊರ್ವಶಿಯು ನೀಡಿದ ಶಾಪವು ಈಗ ವಿರಾಟನಗರಿಯಲ್ಲಿ ಪಾಂಡವರು ಅಜ್ಞಾತವಾಸಕ್ಕೆ ಬಂದಾಗ ಅರ್ಜುನನ ಪಾಲಿಗೆ ವರವಾಗಿ ಪರಿಣಮಿಸಿದೆ;

**ಧರ್ಮಜನ ಸತ್ಯಾಭ್ಯುದಯಕೋಸುಗ ಊರ್ವಶಿಯ ಶಾಪದಲಿ ಬಂದುದು**=ನಮ್ಮ ಅಣ್ಣ ಧರ್ಮರಾಯನ ಸತ್ಯದ ನಡೆನುಡಿಯನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ನೆರವಾಗುವಂತೆ ಊರ್ವಶಿಯ ಶಾಪವೇ ನನಗೆ ವರವಾಗಿ ಬಂತು; ವತ್ಸರ=ವರುಶ; ನಿರ್ವಿಘ್ನ=ಯಾವ ಅಡೆತಡೆಯಿಲ್ಲದಿರುವುದು; ಹೊತ್ತು= ಕಾಲ/ಸಮಯ; **ಒಂದು ವತ್ಸರವ ನಿರ್ವಿಘ್ನದಲಿ ಹೊತ್ತು ನೂಕಿದೆನು**=ಹಗೆಗಳಾದ ದುರ್ಯೋಧನಾದಿಗಳ ಕಣ್ಣಿಗೆ ಬೀಳದೆ ವಿರಾಟನಗರಿಯಲ್ಲಿ ಒಂದು ವರುಶದ

ಅಜ್ಞಾತವಾಸವನ್ನು ಯಾವ ಅಡೆತಡೆಯಿಲ್ಲದೆ ಕಳೆದೆನು; **ಅವಧಿಯನು ನೂಕಿದೆವು**=ಇಂದಿಗೆ ಒಂದು ವರುಶದ ಅಜ್ಞಾತವಾಸವನ್ನು ಪೂರೈಸಿದೆವು; ನಿಜ್ಝೋಡು=ಸರಿಯಾಗಿ ಹೊಂದಿಕೊಳ್ಳುವಿಕೆ;

**ಇದಕೆ ನಿಜ್ಝೋಡು ಆಯ್ತು**=ನನಗೆ ಬಂದ ಶಾಪಕ್ಕೂ ಅಜ್ಞಾತವಾಸಕ್ಕೂ ಸರಿಯಾದ ಹೊಂದಾಣಿಕೆಯಾಯಿತು; ಅದಟು=ಪರಾಕ್ರಮ; **ತನ್ನ ಅದಟುತನವನು ನೀನು ಭೀತಿಗೊಳ್ಳದೆ ನೋಡು**=ಕಾಳೆಗದ ಕಣದಲ್ಲಿ ನನ್ನ ಪರಾಕ್ರಮದ ಕಸುವು ಮತ್ತು ಕುಶಲತೆಯನ್ನು ನೀನು ಹೆದರಿಕೊಳ್ಳದೆ ನೋಡು; ಗಂಟಲ ಬಳೆ=ಕುತ್ತಿಗೆಯ ಎಡೆಯಲ್ಲಿ ಬಳೆಯಂತೆ ಬಾಗಿರುವ ಮೂಳೆಯ ರಚನೆ; ಮುರಿ= ತುಂಡುಮಾಡು; ವೊಲು=ಅಂತೆ/ಹಾಗೆ; ಬಳೆ=ಕಯ್ಯಲ್ಲಿ ತೊಟ್ಟಿದ್ದ ಬಳೆ; ನೆಗ್ಗೊತ್ತು=ಪುಡಿಪುಡಿಮಾಡು;

**ಕೌರವ ಬಲದ ಗಂಟಲ ಬಳೆಯ ಮುರಿವವೊಲು ಬಳೆಯ ನೆಗ್ಗೊತ್ತಿದನು**= ದುರ್ಯೋಧನನ ಸೇನೆಯ ಗಂಟಲಬಳೆಯನ್ನು ಅಂದರೆ ಸಮಸ್ತ ಶಕ್ತಿಯನ್ನು ಸದೆಬಡೆಯುವಂತೆ ಬೃಹನ್ನಳೆಯ ಉಡುಗೆತೊಡುಗೆಯಲ್ಲಿದ್ದ ಅರ್ಜುನನು ತನ್ನ ಕಯ್ ಬಳೆಗಳನ್ನು ಒತ್ತಿ ಪುಡಿಪುಡಿಮಾಡಿದನು; ಅಲಘು=ಮಹತ್ತರವಾದುದು/ ದೊಡ್ಡದಾದುದು; ಅಲಘು ಸಾಹಸಿ=ಮಹಾ ವೀರ; ಮಲ್ಲಗಂಟು=ಕುಸ್ತಿಪಟುಗಳು ಮತ್ತು ಕಾಳೆಗದ ರಣರಂಗಕ್ಕೆ ಹೋಗುವ ಕಾದಾಳುಗಳು ಸೊಂಟಕ್ಕೆ ಬಿಗಿದು ಕಟ್ಟುವ ಬಟ್ಟೆಯ ಗಂಟು; ಪಳಿ=ಬಟ್ಟೆ; **ಅಲಘು ಸಾಹಸಿ ಮಲ್ಲಗಂಟಿನಲಿ ಪಳಿಯನು ಉಟ್ಟನು**=ಮಹಾಪರಾಕ್ರಮಿಯಾದ ಅರ್ಜುನನು ಮಲ್ಲಗಂಟನ್ನು ಹಾಕಿ ಬಟ್ಟೆಯನ್ನು ಉಟ್ಟುಕೊಂಡನು; ನವಿರು=ಕೂದಲು; ಹಿಣಿಲು=ಜಡೆ/ಹೆರಳು;

**ತಲೆ ನವಿರ ಹಿಣಿಲಿರಿದು**=ತಲೆಗೂದಲನ್ನು ಹೆಣೆದು ಜಡೆಹಾಕಿ ಎತ್ತಿಕಟ್ಟಿ; ತಿಲಕ=ಹಣೆಯಲ್ಲಿ ಇಡುವ ಕುಂಕುಮ/ಗಂಧದ ಬೊಟ್ಟು; ಗೆಲ್=ಲೇಪಿಸು/ಬಳಿ; **ತಿಲಕವ ಗೆಲಿದು**=ಹಣೆಗೆ ಬೊಟ್ಟನ್ನು ಇಟ್ಟುಕೊಂಡು;ಕಿಗ್ಗಟ್ಟು=ಕೆಳಗಿನ ಕಟ್ಟು/ ಸೊಂಟದ ಎಡೆಯಲ್ಲಿ ಬಿಗಿದುಕಟ್ಟಿರುವ ಕಟ್ಟು; ಕಠಾರಿ=ಕಿರುಗತ್ತಿ/ಚೂರಿ/ಬಾಕು; ಗೊಂಡೆಯ=ಒಂದು ಬಗೆಯ ಒಡವೆ; ಮೆರೆ=ಅಲಂಕರಿಸು/ಎದ್ದುತೋರು; ಗಂಡು+ಅಂದವನು; ಅಂದ=ರೀತಿ; ಗಂಡಂದ=ಗಂಡಸಿನ ಉಡುಗೆ ತೊಡುಗೆಯನ್ನು; ಕೈಕೊಂಡ=ಹಾಕಿಕೊಂಡನು;

**ಕಿಗ್ಗಟ್ಟಿನ ಕಠಾರಿಯ ಹೊಳೆವ ಗೊಂಡೆಯ ಮೆರೆಯೆ ಗಂಡಂದವನು ಕೈಕೊಂಡ**= ಸೊಂಟದ ಕಟ್ಟಿನಲ್ಲಿ ಕಿರುಗತ್ತಿಯನ್ನು ಇಟ್ಟುಕೊಂಡು, ಹೊಳೆಯುತ್ತಿರುವ ಒಡವೆಯನ್ನಿಟ್ಟುಕೊಂಡು ಕಂಗೊಳಿಸುತ್ತ ಬೃಹನ್ನಳೆಯಾಗಿದ್ದ ಅರ್ಜುನನು ಈಗ ಗಂಡಸಿನ ಉಡುಗೆ ತೊಡುಗೆಗಳನ್ನು ತೊಟ್ಟುಕೊಂಡು ಕಾಳೆಗದ ಕಣಕ್ಕೆ

ಅಡಿಯಿಡಲು ಅಣಿಯಾದನು; **ತೇರ ತೆಗೆದನು**=ಅರ್ಜುನನು ತನ್ನ ಮೊದಲಿನ ತೇರನ್ನು ಅಣಿಗೊಳಿಸಿದನು; ಮುನ್ನಿನ=ಮೊದಲಿನ; ವಾರುವ=ಕುದುರೆ; ಹೂಡು=ಕಟ್ಟು; **ತನ್ನ ಮುನ್ನಿನ ವಾರುವಂಗಳ ಹೂಡಿದನು**=ಅರ್ಜುನನು ತಾನು ಮೊದಲು ಆಯ್ಕೆ ಮಾಡಿದ್ದ ಕುದುರೆಗಳನ್ನು ತೇರಿಗೆ ಕಟ್ಟಿದನು; ಕಪಿವೀರ=ಆಂಜನೇಯ; ಧ್ವಜ+ಅಗ್ರದಲಿ; ಧ್ವಜ=ಬಾವುಟ; ಅಗ್ರ=ತುದಿ/ ಮೇಲುಗಡೆ; ಮಂಡಿಸು=ಕುಳಿತುಕೊಳ್ಳು;

**ಕಪಿವೀರ ನೆನೆಯಲು ಬಂದು ಧ್ವಜಾಗ್ರದಲಿ ಮಂಡಿಸಿದನು**= ಆಂಜನೇಯನನ್ನು ನೆನೆಪಿಸಿಕೊಂಡ ಕೂಡಲೇ ಬಂದು ಅರ್ಜುನನ ತೇರಿನ ಬಾವುಟದ ನೆಲೆಯಲ್ಲಿ ಕುಳಿತನು; ಚಾರು=ಉತ್ತಮವಾದ; ಸೀಸಕ=ತಲೆಗೆ ತೊಡುವ ಲೋಹದ ಕವಚ; ಜೋಡು=ಜೊತೆ/ಎರಡು; ಕುಲಿಶ=ವಜ್ರ; ಸಾರ=ಶಕ್ತಿಯುತವಾದ; **ಚಾರು ಸೀಸಕ ಜೋಡು ಕುಲಿಶದ ಸಾರ ಕವಚವ ಬಿಗಿದು**=ತಲೆಗೆ ಉತ್ತಮವಾದ ಲೋಹದ ಟೊಪ್ಪಿಗೆಯನ್ನು ಇಟ್ಟುಕೊಂಡು ಮತ್ತು ಎದೆಯ ಭಾಗಕ್ಕೆ ವಜ್ರದಂತೆ ಗಟ್ಟಿಯಾದ ಎರಡು ಕವಚಗಳನ್ನು ಬಿಗಿದುಕೊಂಡು; ಬೊಬ್ಬೆ=ಅಬ್ಬರದ ದನಿ; ಭಾರವಣೆ=ಆಟಾಟೋಪ; ಮಿಗೆ=ಹೆಚ್ಚಾಗಲು;

**ಬೊಬ್ಬೆಯ ಭಾರವಣೆ ಮಿಗೆ**=ದೊಡ್ಡದನಿಯಲ್ಲಿ ಅಬ್ಬರಿಸುತ್ತ; ತಿರುವನು+ ಏರಿಸಿದ; ತಿರು=ಬಿಲ್ಲಿನ ಹಗ್ಗ; ಧನು=ಬಿಲ್ಲು; **ತಿರುವನೇರಿಸಿದ ಧನುವ ಕೊಂಡನು**= ಹಗ್ಗವನ್ನು ಬಿಗಿದುಕಟ್ಟಿ ಸಿದ್ಧಗೊಂಡಿರುವ ಬಿಲ್ಲನ್ನು ಕಯ್ಗೆ ತೆಗೆದು ಕೊಂಡನು; **ರಾಯ ಧರ್ಮಜ ಬಾಳುಗೆ ಎನುತ**=ರಾಜ ಧರ್ಮರಾಯನು ಬಾಳಲಿ ಎನ್ನುತ್ತ; ನಿಜ+ಆಯುಧದ; ನಿಜ=ತನ್ನ; **ಆಯುಧದ ಗುರುವಿಂಗೆ**= ಆಯುಧಗಳನ್ನು ಬಳಸಿ ಕಾಳೆಗದ ಕಣದಲ್ಲಿ ಹೋರಾಡುವ ವಿದ್ಯೆಯನ್ನು ಕಲಿಸಿದ ಗುರುವಾದ ದ್ರೋಣಾಚಾರ್ಯರಿಗೆ; ಎರಗು=ನಮಿಸು;

**ನಿಜಾಯುಧದ ಗುರುವಿಂಗೆ ಎರಗಿ**=ಗುರು ದ್ರೋಣಾಚಾರ್ಯರಿಗೆ ಮನದಲ್ಲಿಯೇ ನಮಸ್ಕರಿಸಿ; ಸುರರಾಯ=ದೇವತೆಗಳ ಒಡೆಯನಾದ ದೇವೇಂದ್ರ; ನಂದನ=ಮಗ; ಸುರರಾಯ ನಂದನ=ದೇವೇಂದ್ರನ ಮಗನಾದ ಅರ್ಜುನ; ಒಲವು=ಪ್ರೀತಿ/ಉತ್ಸಾಹ; ಗಾಂಡಿವ=ಅರ್ಜುನನ ಬಿಲ್ಲಿನ ಹೆಸರು; ಜೇವಡೆ=ಬಿಲ್ಲಿನ ಹೆದೆಯನ್ನು ಎಳೆದು ಜೇಂಕಾರದ ದನಿಯನ್ನು ಮಾಡುವುದು; **ಸುರರಾಯ ನಂದನನು ಒಲವಿನಲಿ ಗಾಂಡಿವವ ಜೇವಡಿಸಿ**=ಅರ್ಜುನನು ಅತ್ಯಂತ ಉತ್ಸಾಹದಿಂದ ಗಾಂಡೀವದ ಹೆದೆಯನ್ನು ಎಳೆದು ಜೇಂಕಾರದ ದನಿಯನ್ನು ಮಾಡುತ್ತ; ರಾಯ=ರಾಜ; ಕುವರ=ಮಗ; ರಾಯಕುವರ= ವಿರಾಟರಾಯನ ಮಗನಾದ ಉತ್ತರಕುಮಾರ; ಸೂತತನ=ಸಾರಥಿಯಾಗಿ ತೇರನ್ನು ಮುನ್ನಡೆಸುವ

ಕಸುವು; ವಿಡಾಯಿ=ಶಕ್ತಿ/ಉನ್ನತಿ/ಹಿರಿಮೆ; ಅರಿ=ತಿಳಿ;

**ರಾಯ ಕುವರನ ಸೂತತನದ ವಿಡಾಯಿಯ ಅರಿಯಲು ಬಹುದು ಎನುತ**= ಉತ್ತರಕುಮಾರನ ಸಾರಥ್ಯದ ಕಸುವು ಮತ್ತು ಕುಶಲತೆಯನ್ನು ಈಗ ಕಾಳೆಗದ ರಂಗದಲ್ಲಿ ತಿಳಿಯಬಹುದು ಎಂದು ಉತ್ತರಕುಮಾರನನ್ನು ಉತ್ತೇಜಿಸುತ್ತ; ಸಮರ+ಆಯತ+ಅಸ್ತ್ರನು; ಸಮರ=ಕಾಳೆಗ; ಆಯತ=ಸನ್ನದ್ಧ/ಸಿದ್ದ/ಸಜ್ಜು; ಸಮರಾಯತಾಸ್ತ್ರನು=ಕಾಳೆಗದಲ್ಲಿ ಹೋರಾಡಲೆಂದು ಆಯುಧ ಗಳಿಂದ ಸಜ್ಜುಗೊಂಡಿರುವ ವ್ಯಕ್ತಿ; ಪರಬಲ=ಹಗೆಯ ಸೇನಾಪಡೆ; ಮೈದೋರು= ಕಾಣಿಸಿಕೊ;

**ಸಮರಾಯತಾಸ್ತ್ರನು ಪಾರ್ಥ ಪರಬಲಕೆ ಮೈದೋರಿದನು**=ಕಾಳೆಗದ ಕಣದಲ್ಲಿ ಹೋರಾಡಲು ಆಯುಧವನ್ನು ಹಿಡಿದು ಸಜ್ಜಾಗಿರುವ ಅರ್ಜುನನು ಹಗೆಯ ಸೇನೆಯ ಮುಂದೆ ಕಾಣಿಸಿಕೊಂಡನು;



# ನೋಟ–೬

ವಾಘೆ=ಲಗಾಮು; ಒಡನೆ+ಒಡನೆ; ಒಡನೊಡನೆ=ಕೂಡಲೇ/ಜತೆಜತೆಯಲ್ಲಿಯೇ; ವೇಗಾಯ್ಲ=ಅತಿವೇಗದ; ತೇಜಿ–ಕುದುರೆ; ಚಿಮ್ಮು=ನೆಗೆ/ಹಾರು; **ಸಡಿಲ ಬಿಡೆ ವಾಘೆಯನು, ಒಡನೊಡನೆ ವೇಗಾಯ್ಲ ತೇಜಿಗಳು ಚಿಮ್ಮಿದವು**=ತೇರಿನ ಸಾರಥಿಯಾಗಿದ್ದ ಉತ್ತರಕುಮಾರನು ಬಿಗಿಯಾಗಿ ಹಿಡಿದುಕೊಂಡಿದ್ದ ಕುದುರೆಗಳ ಲಗಾಮಿನ ಹಗ್ಗವನ್ನು ಸಡಿಲುಸುತ್ತಿದ್ದಂತೆಯೇ ಅತಿವೇಗದಿಂದ ಓಡಬಲ್ಲ ಕುದುರೆಗಳು ಮುನ್ನುಗ್ಗಿದವು; ಒಡೆ=ಸೀಳು/ಬಿರಿ; ಇಳೆ+ಎನೆ; ಇಳೆ=ಭೂಮಿ; ಎನೆ=ಎನ್ನುವಂತೆ; ಗಜರು=ಗದ್ದಲ/ಅಬ್ಬರ; ಮಿಗೆ=ಹೆಚ್ಚಾಗಲು; ಗರ್ಜಿಸು=ದೊಡ್ಡದನಿಯಲ್ಲಿ ಕೂಗುವುದು;

**ಒಡೆದುದು ಇಳೆಯೆನೆ ಗಜರು ಮಿಗೆ ಗರ್ಜಿಸಿದವು**=ಭೂಮಂಡಲವೇ ಸಿಡಿಯಿತೇನೋ ಎನ್ನುವಂತೆ ದೊಡ್ಡದನಿಯಲ್ಲಿ ಕೆನೆದವು; ಅಳ್ಳಿರಿ=ಅಬ್ಬರಿಸು/ದೊಡ್ಡದಾಗಿ ದನಿಮಾಡು; ಕುಡಿ=ತುದಿ/ಕೊನೆ; ನೊರೆ=ನೀರಿನ ಬೆಳ್ಳನೆಯ ಕಣಗಳು; ಕಟವಾಯಿ=ಬಾಯಿಯ ಕೊನೆ; ಲೋಳೆ=ಜೊಲ್ಲು;

**ಅಳ್ಳಿರಿದು ಕುಡಿ ನೊರೆಯ ಕಟವಾಯ ಲೋಳೆಯೊಳು**=ಅಬ್ಬರದ ದನಿಯೊಡನೆ ಕೆನೆಯುತ್ತ ಮುನ್ನುಗ್ಗುತ್ತಿರುವ ಕುದುರೆಗಳ ಕಟಬಾಯಿಂದ ಬೆಳ್ಳನೆಯ ನೊರೆಯ ಜೊಲ್ಲು ಸುರಿಯುತ್ತಿರಲು; ಒಡಲು=ದೇಹ; ಸಂಚ=ಕೂಟ/ಸಂಪರ್ಕ; ನುಡಿ=ದನಿ; ಘುಡುಘುಡು=ಅಬ್ಬರವನ್ನು ಸೂಚಿಸುವ ಅನುಕರಣ ಪದ; ಘುಡಿಪ=ದೊಡ್ಡ ದನಿಯ; ನಾಸಾಪುಟ=ಮೂಗಿನ ಹೊಳ್ಳೆ; ಹುಂಕೃತಿ=ಹುಂಕಾರ; ಮಸಗು=ಹೊರಹೊಮ್ಮು; ಮುಂಚು=ಮುನ್ನುಗ್ಗು;

**ಒಡಲ ಸಂಚದ ನುಡಿಯ ಘುಡುಘುಡು ಘುಡಿಪ ನಾಸಾಪುಟದ ಹುಂಕೃತಿ ಮಸಗೆ ಮುಂಚಿದವು**=ದೊಡ್ಡ ದನಿಯೊಡನೆ ಕೆನೆಯುತ್ತ ಮುನ್ನುಗ್ಗುತ್ತಿರುವ ಕುದುರೆಗಳ ಮೂಗಿನ ಹೊಳ್ಳೆಗಳಿಂದ ಉಸಿರಿನ ಹುಂಕಾರವು ಹೊರಹೊಮ್ಮುತ್ತಿತ್ತು;

**ಅಲ್ಲಿ ಆರು ಕೌರವನು**=ತನ್ನ ಎದುರು ಹೋರಾಡಲು ಸಜ್ಜಾಗಿ ನಿಂತಿರುವ ದುರ್ಯೋಧನನ ಸೇನೆಯನ್ನು ನೋಡಿ ಸಾರಥಿಯಾದ ಉತ್ತರಕುಮಾರನು ಅರ್ಜುನನ್ನು ಕೇಳುತ್ತಾನೆ. ಅಲ್ಲಿರುವವರಲ್ಲಿ ದುರ್ಯೋಧನನು ಯಾರು; ಅದು+ಆರು; **ಭೀಷ್ಮನು ಅದಾರು**=ಭೀಷ್ಮನು ಯಾರು; ಆವ+ಅವನು; **ಕೃಪನು ಆವವನು**=ಕೃಪನೆಂಬುವನು ಯಾರು; ದ್ರೋಣನು ಅದಾರು=ದ್ರೋಣನು ಯಾರು; **ಅಶ್ವತ್ಥಾಮನು ಎಂಬವನು ಆವನು**=ಅಶ್ವತ್ಥಾಮನೆಂಬುವನು ಯಾರು; **ಕರ್ಣನು ಅದಾರು**=ಕರ್ಣನು ಯಾರು; ಬಳದ+ಒಳಗೆ; ಬಳ=ಸೇನೆ/ಪಡೆ; ಕಂಡು+ಅರಿಯೆನು;

**ಬಳದೊಳಗೆ ನಾ ಕಂಡರಿಯೆನು**=ದುರ್ಯೋಧನನ ಸೇನೆಯಲ್ಲಿರುವವರ ಬಗ್ಗೆ ನನಗೇನು ಗೊತ್ತಿಲ್ಲ; **ವೀರ, ಇಲ್ಲಿ ಎನಗೆ ತಿಳುಹು ಎನಲು**=ವೀರನಾದ ಅರ್ಜುನನೆ, ಈಗ ಅವರೆಲ್ಲರ ಬಗ್ಗೆ ನನಗೆ ವಿವರವಾಗಿ ಹೇಳು ಎಂದು ಉತ್ತರ ಕುಮಾರನು ಕೇಳಿಕೊಳ್ಳಲು; ವೈರಿ+ತಲ್ಲಣ; ವೈರಿ=ಹಗೆ; ತಲ್ಲಣ=ಅಂಜಿಕೆ/ಸಂಕಟ; ವೈರಿದಲ್ಲಣ= ಹಗೆಗಳನ್ನು ಅಂಜಿಸುವವನು/ಸಂಕಟಕ್ಕೆ ಗುರಿಮಾಡುವವನು. ಅರ್ಜುನನ ವೀರತನವನ್ನು ಸೂಚಿಸುವ ಒಂದು ಬಿರುದು; **ವೈರಿದಲ್ಲಣ ಪಾರ್ಥ ನಗುತ ಉತ್ತರನೊಳು ಇಂತು ಎಂದ**=ಹಗೆಗಳ ಎದೆ ನಡುಗಿಸುವ ಅರ್ಜುನನು ನಗುತ್ತ ಉತ್ತರಕುಮಾರನಿಗೆ ಈ ರೀತಿ ವಿವರಿಸಿದ;

ಉದಯ=ಹುಟ್ಟು; ಅರುಣ=ಕೆಂಪು ಬಣ್ಣ/ಕಿರಣ/ಸೂರ್ಯ; ಕರು= ಪಡಿಯಚ್ಚು; ಅಂದ=ರೀತಿ; ವರ್ಣ+ಛವಿ; ವರ್ಣ=ಬಣ್ಣ; ಛವಿ=ಕಾಂತಿ; ಒಪ್ಪುವ= ಕಂಗೊಳಿಸುವ; **ಉದಯದ ಅರುಣನ ಕರುವ ಹಿಡಿದ ಅಂದದಲಿ ವರ್ಣಚ್ಛವಿಯಲು ಒಪ್ಪುವ ಕುದುರೆಗಳ**=ಮೂಡಲದಿಕ್ಕಿನಲ್ಲಿ ಮೂಡಿಬರುತ್ತಿರುವ ಎಳೆಯ ಸೂರ್ಯನ ಬಿಂಬವನ್ನೇ ಎರಕ ಹೊಯ್ದಿರುವ ರೀತಿಯಲ್ಲಿ ಬಣ್ಣಬಣ್ಣದ ಕಾಂತಿಯಿಂದ ಕಂಗೊಳಿಸುತ್ತಿರುವ ಕುದುರೆಗಳ; ತಳತಳಿಸು=ಪ್ರಕಾಶಿಸು/ಹೆಚ್ಚಾಗಿ ಹೊಳೆ; ಹಳವಿಗೆ=ಬಾವುಟ; ಕೊಡ=ಕುಂಬ/ಗಡಿಗೆ; ಹಳವಿಗೆ=ಬಾವುಟ; ಕೊಡನ ಹಳವಿಗೆ=ದ್ರೋಣಾಚಾರ್ಯನ ತೇರಿನ ಮೇಲೆ ಕಟ್ಟಿದ್ದ ಬಾವುಟದಲ್ಲಿ ಕೊಡದ ಚಿತ್ರವಿದೆ. ದ್ರೋಣಾಚಾರ್ಯನಿಗೆ 'ಕುಂಭಧ್ವಜ' ಎಂಬ ಹೆಸರಿದೆ; ಗದಗದಿಸು=ಅಲ್ಲಾಡು/ಕಂಪಿಸು; ಮಣಿ=ರತ್ನ; ಮಯ=ತುಂಬಿದ/ಕೂಡಿದ;

**ತಳತಳಸಿ ಬೆಳಗುವ ಕೊಡನ ಹಳವಿಗೆಯ ಗದಗದಿಪ ಮಣಿಮಯದ ತೇರಿನ**= ಪ್ರಕಾಶಮಾನವಾಗಿ ಬೆಳಗುತ್ತ ಹಾರಾಡುತ್ತಿರುವ ಕೊಡದ ಚಿತ್ರವುಳ್ಳ ಬಾವುಟದಿಂದ ಕೂಡಿದ ರತ್ನಮಯವಾದ ತೇರಿನ; ಕದನ=ಯುದ್ಧ/ಕಾಳೆಗ; ಕೋಳಾಹಲ= ಗಲಾಟೆ/ಬೊಬ್ಬೆ; ಕದನ ಕೋಳಾಹಲ=ಇದು ಒಂದು ನುಡಿಗಟ್ಟು. ಕಾಳೆಗದಲ್ಲಿ

ಹಗೆಗಳನ್ನು ಸದೆಬಡಿಯುವ ವೀರ ಎಂಬ ತಿರುಳಿನ ಒಂದು ಬಿರುದು; ಗರುಡಿ=ಮಲ್ಲಶಾಲೆ; ಸದನ=ಮನೆ; ಸರ್ವಜ್ಞ=ಎಲ್ಲವನ್ನು ಬಲ್ಲವನು; ನೋಡೈ=ನೋಡುವಂತಹವನಾಗು; **ಕದನ ಕೋಳಾಹಲನು ಗರುಡಿಯ ಸದನ ಸರ್ವಜ್ಞನನು ನೋಡೈ...ಅವನು ದ್ರೋಣನು**=ಮಹಾಶೂರನೂ ಗರುಡಿಯ ಮನೆಯ ಗುರುವನ್ನು ನೋಡಲ್ಲಿ... ಅವನೇ ದ್ರೋಣಾಚಾರ್ಯ;

ನವರತುನ=ವಜ್ರ–ವೈಡೂರ್ಯ–ಗೋಮೇದಕ–ಪುಷ್ಯರಾಗ–ನೀಲ–ಮರಕತ–ಮಾಣಿಕ್ಯ–ಹವಳ–ಮುತ್ತು ಎಂಬ ಒಂಬತ್ತು ಬಗೆಯ ರತ್ನಗಳು; ಕೇವಣ=ಚಿನ್ನದಲ್ಲಿ ನವರತ್ನಗಳನ್ನು ಜೋಡಿಸುವುದು; **ನವರತುನ ಕೇವಣದ ರಥ**=ಚಿನ್ನದ ಅಚ್ಚಿನಲ್ಲಿ ನವರತ್ನಗಳನ್ನು ಜೋಡಿಸಿರುವ ತೇರು; ಅತಿ=ಹೆಚ್ಚು; ಜವ=ವೇಗ; ತೇಜಿ=ಕುದುರೆ; ತೆಕ್ಕೆ=ದಂಡು/ಪಡೆ; **ಅತಿಜವದ ತೇಜಿಯ ತೆಕ್ಕೆಗಳ**=ವೇಗವಾಗಿ ಓಡುವ ಕುದುರೆಗಳ ದಂಡಿನ; ರೌರವ= ಭಯಂಕರವಾದ;

ರೌದ್ರ+ಆಯುಧ; ರೌದ್ರ=ಭೀಕರವಾದ; ಗಡಣ=ಪಡೆ/ದಂಡು; **ರೌರವದ ರೌದ್ರಾಯುಧದ ಗಡಣದ**=ಭಯಂಕರವಾದ ಆಯುಧಗಳಿಂದ ಸಜ್ಜಾಗಿರುವ ಸೇನೆಯ; ಹರಿ=ಸಿಂಹ; ಹಳವಿಗೆ=ಬಾವುಟ; **ಹರಿಯ ಹಳವಿಗೆ**=ಸಿಂಹದ ಚಿತ್ರವುಳ್ಳ ಬಾವುಟ; ಬವರ=ಕಾಳೆಗ/ಯುದ್ಧ; ಭೈರವ=ಶಿವನ ಮತ್ತೊಂದು ಹೆಸರು; ಬವರ ಭೈರವ=ವೀರತನವನ್ನು ಸೂಚಿಸುವ ನುಡಿಗಟ್ಟು.

**ಹರಿಯ ಹಳವಿಗೆಯ ಬವರ ಭೈರವನು ಆತನು**=ಸಿಂಹದ ಚಿತ್ರವುಳ್ಳ ಬಾವುಟದ ತೇರಿನಲ್ಲಿರುವ ಬವರ ಭೈರವನಾಗಿರುವ ಅವನು; ಅತಿಬಲ=ಹೆಚ್ಚಿನ ಕಸುವು; ನೊಸಲು=ಹಣೆ; ಅಂದ=ರೀತಿ; **ಅತಿಬಲ ಶಿವನ ನೊಸಲ ಅಂದದಲಿ ಮೆರೆವವನು ನೋಡು**=ದೊಡ್ಡ ಕಸುವುಳ್ಳ ಶಿವನ ಹಣೆಗಣ್ಣಿನ ರೀತಿಯಲ್ಲಿ ಮೆರೆಯುತ್ತಿರುವವನನ್ನು ನೋಡು; ಜಿತ=ಗೆದ್ದಿರುವುದು/ಜಯಿಸಿರುವುದು; ಸಂಗ್ರಾಮ=ಕಾಳೆಗ; ಜಿತಸಂಗ್ರಾಮ=ವೀರತನವನ್ನು ಸೂಚಿಸುವ ನುಡಿಗಟ್ಟು. ಕಾಳೆಗದ ಕಣದಲ್ಲಿ ಹಗೆಗಳನ್ನು ಸದೆಬಡಿದು ಜಯವನ್ನು ಪಡೆದವನು; **ಇವನು ಜಿತಸಂಗ್ರಾಮನು ಅಶ್ವತ್ಥಾಮ**=ಇವನು ಜಿತಸಂಗ್ರಾಮನಾದ ಅಶ್ವತ್ಥಾಮ;

ಖುರ=ಕುದುರೆಯ ಕಾಲುಗಳ ಗೊರಸು/ಪಾದ; ಅವನಿ=ಭೂಮಿ; ಹೊಯ್=ಬಡಿ; ಲಹರಿ=ಅಲೆ/ತರಂಗ; ಉರಿ=ಬೆಂಕಿ; ಮಸಗು=ಹೊರಹೊಮ್ಮು/ಹೆಚ್ಚಾಗು; ಉರಿ ಮಸಗಲು=ಬೆಂಕಿಯ ಕಣಗಳಂತೆ ಕೆಂಪನೆಯ ದೂಳಿನ ಕಣಗಳು ಹೊರಹೊಮ್ಮುತ್ತಿರಲು; ಉಬ್ಬು+ಎದ್ದ; ಉಬ್ಬು=ಉಂಟಾಗು; ಉಬ್ಬೇಳು=ತಲೆದೋರು/ನೆಗೆದು ಮೇಲಕ್ಕೆ ಏಳು; ತೇಜಿ=ಕುದುರೆ; ಮೆರೆ=ಕಂಗೊಳಿಸು; **ಖುರದಲಿ ಅವನಿಯ ಹೊಯ್ದು ಲಹರಿಯಲಿ ಉರಿ ಮಸಗಲು ಉಬ್ಬೆದ್ದ ತೇಜಿಯ**

**ಮೆರೆವ**=ರಣರಂಗದಲ್ಲಿ ಮುನ್ನುಗ್ಗುತ್ತಿರುವ ಕುದುರೆಗಳ ಕಾಲ್ತುಳಿತದಿಂದ ಮೇಲೆದ್ದ ಕೆಂಪನೆಯ ದೂಳಿನ ಕಣಗಳಿಂದ ಕಂಗೊಳಿಸುತ್ತಿರುವ ಕುದುರೆಗಳ; ಮುಕ್ತಾವಳಿ=ಮುತ್ತಿನ ಸರ/ದಂಡೆ;

**ಮುಕ್ತಾವಳಿಯ ತೇರಿನ**=ಮುತ್ತಿನ ಸರಗಳಿಂದ ಸಿಂಗಾರಗೊಂಡಿರುವ ತೇರಿನ; ನವ=ಹೊಸ; ವಿಳಾಸ=ಒಯ್ಯಾರ/ಉಲ್ಲಾಸ; ಸರಳು=ಬಾಣ; **ನವವಿಳಾಸದಲಿ ಸರಳ ತಿರುಹುತ ನಿಂದು**=ಹೊಸಬಗೆಯ ಉಲ್ಲಾಸದಿಂದ ಬಾಣವನ್ನು ತಿರುಗಿಸುತ್ತ ನಿಂತುಕೊಂಡಿರುವ; ಧನು=ಬಿಲ್ಲು; ನಿರುತ=ನಿಶ್ಚಯ; ನೆರೆ=ಚೆನ್ನಾಗಿ; ತಾ=ತಾನು; ಝೇಂಕರಿಸು=ಮೊರೆ/ದೊಡ್ಡದಾಗಿ ದನಿಯನ್ನು ಮಾಡುವುದು; ಅತಿಬಲ= ಮಹಾಶಕ್ತ; **ಧನುವನು ನಿರುತವನು ನೆರೆ ನೋಡಿ ತಾ ಝೇಂಕರಿಸುವವನು ನೋಡು...ಅತಿಬಲ ಕೃಪಾಚಾರಿಯನು**=ತನ್ನ ಕಯ್ಯಲ್ಲಿರುವ ಬಿಲ್ಲನ್ನು ನಿಶ್ಚಯದ ಮನದಿಂದ ಅಂದರೆ ಹಗೆಗಳನ್ನು ಸದೆಬಡಿಯಬಲ್ಲೆನೆಂಬ ಆತ್ಮವಿಶ್ವಾಸದಿಂದ ನೋಡುತ್ತ ಅಬ್ಬರಿಸುತ್ತಿರುವ ವ್ಯಕ್ತಿಯನ್ನು ನೋಡು...ಅವನೇ ಕೃಪಾಚಾರಿ;

ಲಲಿತ=ಮನೋಹರವಾದ; ಪ್ರಭೆ=ಕಿರಣ/ಪ್ರಕಾಶ; ಉಲಿ=ಶಬ್ದ/ದನಿ; ರಭಸ=ಬೊಬ್ಬೆ/ದೊಡ್ಡ ಶಬ್ದ; **ಲಲಿತ ರತ್ನಪ್ರಭೆಯ ತೇರಿನಲಿ ಉಲಿವ ಬಹುವಿಧ ವಾದ್ಯ ರಭಸದ**=ಮನೋಹರವಾದ ರತ್ನಕಾಂತಿಯಿಂದ ಬೆಳಗುತ್ತಿರುವ ತೇರಿನಲ್ಲಿ ನುಡಿಸುತ್ತಿರುವ ಬಹುಬಗೆಯ ರಣ ವಾದ್ಯಗಳಿಂದ ಹೊರಹೊಮ್ಮುತ್ತಿರುವ ಬೊಬ್ಬೆಯ; ಕಳಕಳ=ಗಜಬಜಿಸು/ಬಹುಬಗೆಯ ದನಿಗಳು ಒಟ್ಟಾಗಿ ಕೇಳಿ ಬರುವುದು; ಕಡು=ಹೆಚ್ಚಿನ; ದರ್ಪ=ಸೊಕ್ಕು; ಅಳ್ಳಿರಿ=ಗರ್ಜಿಸು/ಕೆನೆಯುವುದು; ತೇಜಿ=ಕುದುರೆ; **ಕಳಕಳದ ಕಡುದರ್ಪದಿಂದ ಅಳ್ಳಿರಿವ ತೇಜಿಗಳ**=ಕಲಕಲ ನಾದವನ್ನು ಮಾಡುತ್ತ ಕಡುಸೊಕ್ಕಿನಿಂದ ಕೆನೆಯುತ್ತಿರುವ ಕುದುರೆಗಳ; ಲಳಿ=ಕಾಂತಿ/ಪ್ರಕಾಶ; ಲಹರಿ=ಅಲೆ/ತರಂಗ; ಲಗ್ಗೆ=ಮುತ್ತಿಗೆ; ಮೋಹಳಿಸು=ಕಾಳೆಗಕ್ಕೆ ಸಜ್ಜಾಗು/ ಅಣಿಯಾಗು;

**ಲಳಿಯ ಲಹರಿಯ ಲಗ್ಗೆಗಳ ಮೋಹಳಿಸಿ**=ಆಯುಧಗಳ ಕಾಂತಿಯ ತರಂಗಗಳೇ ಮುತ್ತಿಗೆಯನ್ನು ಹಾಕುತ್ತಿರುವಂತೆ ಸೇನೆಯನ್ನು ಸಜ್ಜುಗೊಳಿಸಿ; ಬಿಲು=ಬಿಲ್ಲು; ಝೇಂಕಾರ=ಮೊರೆತ; ರವ=ಶಬ್ದ/ದನಿ; ಉಲಿ=ದನಿ; ಅತುಳ= ಎಣೆಯಿಲ್ಲದ/ಅಸಮಾನವಾದ; ಪರಾಕ್ರಮ+ಅನಲ; ಅನಲ=ಬೆಂಕಿ; ಪರಾಕ್ರಮಾನಲ=ವೀರತನವನ್ನು ಸೂಚಿಸುವ ಒಂದು ನುಡಿಗಟ್ಟು. ಪರಾಕ್ರಮವೆಂಬ ಬೆಂಕಿಯಿಂದ ಹಗೆಗಳನ್ನು ಸುಟ್ಟುನಾಶಮಾಡುವವನು ಎಂಬ ತಿರುಳನ್ನು ಒಳಗೊಂಡಿದೆ;

**ಬಿಲು ಝೇಂಕಾರ ರವದಿಂದ ಉಲಿವವನು...ಅತುಳ ಪರಾಕ್ರಮಾನಲನು ಕಲಿಕರ್ಣನು**=ಬಿಲ್ಲಿನ ಹೆದೆಯನ್ನು ಮೀಂಟುತ್ತ ಜೇಂಕಾರ ನಾದವನ್ನು ಮಾಡುತ್ತಿರುವವನೇ... ಮಹಾ ಪರಾಕ್ರಮಿಯಾದ ಕಲಿಕರ್ಣ;

ಬಲ=ಶಕ್ತಿ; ಒತ್ತೊತ್ತೆ=ಒಂದರ ಪಕ್ಕ ಮತ್ತೊಂದು; ಹೂಡು=ಕುದುರೆಗಳನ್ನು ತೇರಿಗೆ ಕಟ್ಟುವುದು; ತೇಜಿ=ಕುದುರೆ;

**ಬಹಳ ಬಲದ ಒತ್ತೊತ್ತೆಯಲಿ ಹೂಡಿದ ಬಿಳಿಯ ತೇಜಿಗಳ**=ಒಂದರ ಪಕ್ಕದಲ್ಲಿ ಮತ್ತೊಂದನ್ನು ಜೋಡಿಸಿ ಕಟ್ಟಿರುವ ಹೆಚ್ಚಿನ ಕಸುವುಳ್ಳ ಬಿಳಿಯ ಕುದುರೆಗಳ; ತೆತ್ತಿಸು=ಜೋಡಿಸು/ಹೊಂದಿಸು; ಹೊನ್+ತಾಳ; ಹೊನ್=ಚಿನ್ನ; ತಾಳ=ಬುಡ; ಹೊಂದಾಳ=ಚಿನ್ನದ ಬುಡ ಅಂದರೆ ಚಿನ್ನದ ಹಿಡಿ; ಸಿಂಧ=ಬಾವುಟ; ಸತ್ತಿಗೆ= ಕೊಡೆ; **ತೆತ್ತಿಸಿದ ಹೊಂದಾಳ ಸಿಂಧದ ಸತ್ತಿಗೆಯ ಸಾಲಿನಲಿ**=ಚಿನ್ನದ ಹಿಡಿಯನ್ನು ಹೊಂದಿರುವ ಬಾವುಟ ಮತ್ತು ಬೆಳ್ಗೊಡೆಯ ಸಾಲಿನಲ್ಲಿ; ರಿಪು=ಹಗೆ; ಕುಲ= ಗುಂಪು; **ರಿಪುಕುಲ ಮೃತ್ಯುವಾತನು ನೋಡು**=ಹಗೆಗಳ ಪಡೆಗೆ ಸಾವನ್ನು ಉಂಟು ಮಾಡುವವನನ್ನು ನೋಡು; ಅತ್ತಲು+ಐದನೆ; ಅತ್ತಲೈದನೆ=ಅಲ್ಲಿರುವವನೇ;

ಉಭಯ=ಎರಡು; ರಾಯ=ರಾಜ; ಮುತ್ತಯ=ಅಜ್ಜ; ಗಂಗಾಸುತ= ಗಂಗಾದೇವಿ ಮತ್ತು ಶಂತನು ರಾಜನ ಮಗನಾದ ಭೀಷ್ಮ; **ನಮ್ಮ ಉಭಯ ರಾಯರ ಮುತ್ತಯನು ತಾನು ಎನಿಸಿ ವೀರ ಗಂಗಾಸುತನು**=ನಮ್ಮ ಎರಡು ಕಡೆಯ ರಾಜರಿಗೆ ಅಂದರೆ ಪಾಂಡವರಾದ ನಮಗೆ ಮತ್ತು ದುರ್ಯೋಧನನ ಕಡೆಯವರಿಗೆ ಅಜ್ಜನಾಗಿದ್ದು, ಮಹಾವೀರನೆಂದು ಕೀರ್ತಿವಂತನಾಗಿರುವ ಭೀಷ್ಮ;

ಅಗಿ=ತೊನೆದಾಡು/ಅತ್ತಿತ್ತ ಆಡುತ್ತಿರುವ; ಹಳವಿಗೆ=ಬಾವುಟ; ಹಾವಿನ ಹಳವಿಗೆ=ಹಾವಿನ ಚಿತ್ರವು ದುರ್ಯೋಧನನ ಬಾವುಟದ ಲಾಂಛನವಾಗಿತ್ತು; **ಅಗಿವ ಹಾವಿನ ಹಳವಿಗೆಯ**=ತೊನೆದಾಡುತ್ತಿರುವ ಹಾವಿನ ಲಾಂಛನವುಳ್ಳ ಬಾವುಟದ; ಮಿಗೆ=ಹೆಚ್ಚಾಗಿ/ಚೆನ್ನಾಗಿ; ನೆಗಹು=ಮೇಲಕ್ಕೆ ಎತ್ತಿ ಹಿಡಿ; ಮುಸುಕು=ಆವರಿಸಿದ/ಹರಡಿಕೊಂಡಿರುವ; ಝಲ್ಲರಿ=ಕೊಡೆ/ಬೆಳ್ಗೊಡೆ/ವೀರರ ಲಾಂಛನವಾಗಿ ಕೊಡೆಗಳನ್ನು ಬಳಸಲಾಗುತ್ತಿತ್ತು; ಜೋಡಿ=ಗುಂಪು;

**ಮಿಗೆ ನೆಗಹಿ ಮುಸುಕಿದ ಝಲ್ಲರಿಯ ಜೋಡಿಗಳ**=ಬಹಳ ಚೆನ್ನಾಗಿ ಎಲ್ಲೆಡೆ ಎದ್ದುಕಾಣುತ್ತ ಹರಡಿಕೊಂಡಿರುವ ಬೆಳ್ಗೊಡೆಗಳ ಗುಂಪಿನ; ತುಡುಕು=ಕೆಲಸದಲ್ಲಿ ತೊಡಗು; ತಂಬಟ=ತಮಟೆ/ಹಲಗೆ/ಒಂದು ಬಗೆಯ ಚರ್ಮವಾದ್ಯ;

**ತುಡುಕುವ ತಂಬಟಂಗಳ**=ಬಡಿಯುತ್ತಿರುವ ತಮಟೆಗಳ; ಮೊರೆ= ದೊಡ್ಡದಾಗಿ ದನಿಮಾಡುವುದು; ಚಂಬಕ=ಒಂದು ಬಗೆಯ ಚರ್ಮವಾದ್ಯ;

ಮೊರೆವ ಚಂಬಕದ=ಮೊರೆಯುತ್ತಿರುವ ಚಂಬಕದ; ನಿಗುರು=ನೆಟ್ಟಗೆ ನಿಲ್ಲು; ಟಕ್ಕೆಯ=ಬಾವುಟ;

**ನೆಗಹಿ ನಿಗುರುವ ಟಕ್ಕೆಯದ**=ಮೇಲಕ್ಕೆ ಎತ್ತಿಹಿಡಿದು ಎದ್ದು ಕಾಣುತ್ತಿರುವ ಬಾವುಟದ; ಮದ+ಪೊಗುವ; ಮದ=ಬೆದೆಬಂದ ಆನೆಯ ಗಂಡಸ್ಥಳದಿಂದ ಸುರಿಯುವ ದ್ರವ; ಪೊಗು=ಮೇಲೆ ಬೀಳು; ಕರಿ=ಆನೆ;

**ಮದವೊಗುವ ಕರಿಗಳ**=ಮದವೇರಿದ ಆನೆಗಳ; **ಜೂಜಿನ ಜಾಣ**=ಜೂಜಿನ ಪಂದ್ಯದಲ್ಲಿ ಶಕುನಿಯ ಜತೆಗೂಡಿ ಕಪಟತನದಿಂದ ಧರ್ಮರಾಯನನ್ನು ಸೋಲಿಸಿದ್ದ ದುರ್ಯೋಧನ; **ಮಧ್ಯದಲಿ ಜೂಜಿನ ಜಾಣನು ಅವನು**=ಇವುಗಳ ನಡುವೆ ಕಂಡುಬರುತ್ತಿರುವ ಜೂಜಿನ ಜಾಣನಾದ ಅವನೇ; ಅಗಡು=ನೀಚ; **ತಾನು ಅಗಡು ದುರಿಯೋಧನನು**=ನೀಚನಾದ ದುರ್ಯೋಧನ;

ಬಲವಂಕ=ಬಲಗಡೆ/ಬಲಬದಿ; **ಅವನ ಬಲವಂಕದಲಿ ನಿಂದವನು...ಅವನು ಭೂರಿಶ್ರವನು**=ದುರ್ಯೋಧನನ ಬಲಗಡೆ ನಿಂತಿರುವವನೇ ಭೂರಿಶ್ರವ; ಭುವನ=ಜಗತ್ತು; ಪತಿ=ಒಡೆಯ; ಭುವನಪತಿ=ರಾಜ; ಎಡವಂಕ=ಎಡಗಡೆ/ ಎಡಬದಿ; **ಮತ್ತೆ ಆ ಭುವನಪತಿಯ ಎಡವಂಕದಲಿ ನಿಂದವ... ಜಯದ್ರಥನು= ಅದೋ ನೋಡು...** ಆ ದುರ್ಯೋಧನನ ಎಡಬದಿಯಲ್ಲಿ ನಿಂತಿರುವವನೇ ಜಯದ್ರಥ; ತವತವಗೆ=ತಮ್ಮಲ್ಲಿಯೇ/ಪ್ರತಿಯೊಬ್ಬರೂ; ಬಲುಗೈ=ಶಕ್ತಿಯಿಂದ ಕೂಡಿದ ಕಯ್ಗಳನ್ನು ಉಳ್ಳವನು/ಶೂರ; ಎನಿಸುವ=ಎನ್ನಿಸುವ; **ತವತವಗೆ ಬಲುಗೈಗಳು ಎನಿಸುವ**=ತಮ್ಮತಮ್ಮಲ್ಲಿಯೇ ಪ್ರತಿಯೊಬ್ಬರೂ ಶೂರರೆಂದು ಹೆಸರು ಪಡೆದಿರುವ; ನೊಸಲು=ಹಣೆ; ಅಂದ=ರೀತಿ; ಮೆರೆ=ಕಂಗೊಳಿಸು; ಅವನಿ=ಭೂಮಿ; ಅವನಿಪಾಲಕ=ರಾಜ; ಅನುಜ=ತಮ್ಮ;

**ಶಿವನ ನೊಸಲ ಅಂದದಲಿ ಮೆರೆವವರು ನೋಡು...ಅವನಿಪಾಲಕನ ಅನುಜರನು**=ಶಿವನ ಹಣೆಯಲ್ಲಿರುವ ಕಣ್ಣಿನಂತೆ ಮೆರೆಯುತ್ತಿರುವವರನ್ನು ನೋಡು... ಅವರೇ ದುರ್ಯೋಧನನ ನೂರುಮಂದಿ ತಮ್ಮಂದಿರು; ಅನುಪಮ= ಹೋಲಿಕೆಗೆ ಮೀರಿದ; ಇಂತು=ಈ ರೀತಿ; ಅಂಧಾಸುರ=ಒಬ್ಬ ರಕ್ಕಸನ ಹೆಸರು; **ಹೊಗಳಲು ಅನುಪಮ ಈ ಸೈನ್ಯವು...ಇಂತು ಇದು ಅಂಧಾಸುರನ ಸೇನೆಗೆ ದ್ವಿಗುಣವು**=ದುರ್ಯೋಧನನ ಸೇನೆಗೆ ಸಮಾನವಾದ ಸೇನೆಯೇ ಜಗತ್ತಿನಲ್ಲಿ ಇಲ್ಲ. ದುರ್ಯೋಧನನ ಸೇನೆಯು ಅಂಧಾಸುರನ ಸೇನೆಗಿಂತಲೂ ಎರಡು ಪಟ್ಟು ದೊಡ್ಡದು; ಮೋಹರ=ಸೇನೆ; ಅಗ್ಗಳಿಕೆ=ಕಸುವು/ಶಕ್ತಿ; ನಾಲಗೆ ದಣಿಯುವುದು= ಇದು ಒಂದು ನುಡಿಗಟ್ಟು. ಮಾತನ್ನು ಹೆಚ್ಚಿನ ಪ್ರಮಾಣದಲ್ಲಿ ಆಡುವುದು; ಕೈವಾರ=ಹೊಗಳಿಕೆ/ಕೊಂಡಾಟ;

**ರಾವಣನ ಮೋಹರಕೆ ಇದು ತ್ರಿಗುಣವು ಎನುತ ಫಲುಗುಣನು ಹಗೆಯ ಭುಜದ ಅಗ್ಗಳಿಕೆಯನು ನಾಲಗೆ ದಣಿಯೆ ಕೈವಾರಿಸುತ**=ರಾವಣನ ಸೇನೆಗಿಂತಲೂ ಮೂರು ಪಟ್ಟು ದೊಡ್ಡದು ಎಂದು ಅರ್ಜುನನು ಹಗೆಯಾದ ದುರ್ಯೋಧನನ ಸೇನಾಬಲವನ್ನು ನಾಲಗೆ ದಣಿಯುವಂತೆ ಕೊಂಡಾಡುತ್ತ; ಗಾಂಡೀವ= ಅರ್ಜುನನ ಬಿಲ್ಲಿನ ಹೆಸರು; ಝೀವಡೆ=ಬಿಲ್ಲಿನ ಹೆದೆಯನ್ನು ಮೀಟಿ ದನಿಯನ್ನು ಮಾಡುವುದು; ಮಿಗೆ=ಅತಿಶಯವಾಗಿ; ನಿಗುರಿಸು=ನೆಟ್ಟಗೆ ನಿಲ್ಲಿಸು; **ಗಾಂಡೀವವ ಝೇವಡೆದು ಮಿಗೆ ನಿಗುರಿಚಿದನು**=ಅರ್ಜುನನು ತನ್ನ ಬಿಲ್ಲನ್ನು ಜೇವಡೆದು ಕಾಳೆಗಕ್ಕೆ ಸನ್ನದ್ಧನಾಗಿ ಬಿಲ್ಲನ್ನು ಎತ್ತಿಹಿಡಿದನು;

ಅರರೆ=ಮೆಚ್ಚುಗೆಯನ್ನು ಇಲ್ಲವೇ ಅಚ್ಚರಿಯನ್ನು ಸೂಚಿಸುವ ಪದ; ಪೂತು= ಬಲೇ 'ಭೇಶ್' ಎಂದು ಹೊಗಳುತ್ತ ಉತ್ತೇಜನವನ್ನು ನೀಡುವ ಪದ; ಹಯ= ಕುದುರೆ; ಚಪ್ಪರಿಸು=ದೇಹವನ್ನು ನೇವರಿಸು/ಸವರು; ನಿಗುರು=ಮುನ್ನುಗ್ಗು/ ಮುಂದಕ್ಕೆ ಚಲಿಸು; **ಉತ್ತರನು 'ಅರರೆ... ಪೂತುರೆ... ಹಯ...' ಎನುತೆ ಚಪ್ಪರಿಸಲೊಡೆ ನಿಗುರಿದವು**=ಸಾರಥಿಯಾಗಿರುವ ಉತ್ತರಕುಮಾರನು... ಅರರೆ... ಪೂತುರೆ... ಹಯ... ಎನ್ನುತ್ತ ತೇರಿಗೆ ಹೂಡಿದ್ದ ಕುದುರೆಗಳ ಮಯ್ ಮುಟ್ಟುತ್ತಿದ್ದಂತೆಯೇ ಕಾಳೆಗದ ಕಣದತ್ತ ಮುನ್ನುಗ್ಗಿದವು; ಖುರಪುಟ=ಕಾಲಿನ ಗೊರಸು; ಭಿತ್ತಿ=ಗೋಡೆ;

**ಖುರಪುಟದಲಿ ಆಕಾಶ ಭಿತ್ತಿಯ ಬರೆವವೋಲ್**=ಕುದುರೆಗಳ ಕಾಲ್ತುಳಿತದಿಂದ ಮೇಲೆದ್ದ ಕೆಂಪನೆಯ ದೂಳಿನಿಂದಲೇ ಆಕಾಶದ ಗೋಡೆಯನ್ನು ಚಿತ್ರಿಸುವಂತೆ;

**ಸೂರಿಯನ ತುರಗವ ಕರೆವವೋಲ್**=ಸೂರ್ಯನ ಕುದುರೆಗಳನ್ನು ತಮ್ಮ ವೇಗಕ್ಕೆ ಸರಿಸಾಟಿಯಾಗುವಂತೆ ಕರೆಯುವ ರೀತಿಯಲ್ಲಿ; ಕೈಗಟ್ಟು= ಆರಂಭ ಗೊಂಡು; ಆಹವ=ಕಾಳೆಗ/ಯುದ್ಧ; ದುವ್ವಾಳಿಸು=ವೇಗವಾಗಿ ಸಾಗು; **ಕೈಗಟ್ಟಿ ಆಹವಕೆ ದುವ್ವಾಳಿಸುವಡೆ**=ಹೊರಡಲು ತೊಡಗಿ ಕಾಳೆಗದ ಕಣದತ್ತ ಕುದುರೆಗಳು ವೇಗವಾಗಿ ಸಾಗುತ್ತಿರಲು; ನಭ=ಗಗನ/ಆಕಾಶ; ಉಪ್ಪರಿಸು=ಮೇಲೇಳು; ಅಂಡಲೆ= ವ್ಯಾಪಿಸು/ಕವಿ; **ಕೆಂದೂಳು ಇರದೆ ನಭಕೆ ಉಪ್ಪರಿಸಿ ರವಿ ಮಂಡಲವನು ಅಂಡಲೆಯೆ**=ಕುದುರೆಗಳ ಗೊರಸಿನ ತುಳಿತದಿಂದ ಚಿಮ್ಮಿದ ಕೆಂದೂಳು ಆಕಾಶದ ಉದ್ದಗಲದಲ್ಲಿ ಹರಡಿಕೊಂಡುದಲ್ಲದೆ ಸೂರ್ಯ ಮಂಡಲಕ್ಕೂ ಕವಿಯತೊಡಗಿತು;

**ತುರಗ ಗರ್ಜನೆ**=ಕುದುರೆಗಳ ಕೆನೆತ; **ರಥದ ಚೀತ್ಕೃತಿ**=ತೇರಿನ ಚಕ್ರಗಳ ಉರುಳುವಿಕೆಯಿಂದ ಹೊರಹೊಮ್ಮುತ್ತಿರುವ ಶಬ್ದ; **ವರ ಧನುಷ್ಟಂಕಾರ**= ಉತ್ತಮವಾದ ಬಿಲ್ಲುಗಳ ಹಗ್ಗವನ್ನು ಮೀಂಟಿದಾಗ ಹೊರಹೊಮ್ಮುತ್ತಿರುವ ನಾದ; **ಕಪಿಯ ಅಬ್ಬರಣೆ**=ಅರ್ಜುನನ ತೇರಿನ ಮೇಲೆ ಕುಳಿತಿರುವ ಹನುಮಂತನ

ಅಬ್ಬರದ ದನಿ; **ಪಾರ್ಥನ ಬೊಬ್ಬೆ**=ಅರ್ಜುನನ ವೀರಾವೇಶದ ಕೂಗಾಟ; ನಿಷ್ಠುರ=ಬಿರುಸಾದ/ಗಟ್ಟಿಯಾದ; ದೇವದತ್ತ=ಅರ್ಜುನನ ಶಂಖದ ಹೆಸರು; ರವ=ದನಿ/ಶಬ್ದ; **ದೇವದತ್ತ ರವ**=ಅರ್ಜುನನು ದೇವದತ್ತ ಶಂಖವನ್ನು ಊದುತ್ತಿರುವಾಗ ಹೊರಹೊಮ್ಮುತ್ತಿರುವ ನಾದ; ಅರರೆ=ಅಬ್ಬಬ್ಬಾ ಎಂಬ ಅಚ್ಚರಿಯ ಉದ್ಗಾರದ ಪದ; ಹೊದರೇಳು=ಗುಂಪುಗೂಡು/ದಟ್ಟವಾಗು; **ಅರರೆ, ಹೊದರೆದ್ದವು**=ಅಬ್ಬಬ್ಬಾ, ಒಮ್ಮೆಲೆ ಎಲ್ಲವೂ ಗುಂಪುಗೂಡಿದವು; ಗಿರಿ=ಬೆಟ್ಟ; ವ್ರಜ=ಗುಂಪು/ಸಮೂಹ; ಬಿರಿ=ಒಡೆ/ಸೀಳು;

**ಗಿರಿವ್ರಜ ಬಿರಿಯೆ**=ಬೆಟ್ಟಗುಡ್ಡಪರ್ವತಗಳೆಲ್ಲವೂ ಬಿರುಕುಬಿಟ್ಟು ಕುಸಿಯಲು; ಜಲನಿಧಿ=ಸಮುದ್ರ/ಕಡಲು; ಜರಿ=ಹಿಂದಕ್ಕೆ ಚಲಿಸು; **ಜಲನಿಧಿ ಜರಿಯೆ**=ಕಡಲು ಹಿಮ್ಮುಖನಾಗಿ ಸರಿಯಲು; ತಾರಕಿ=ಚುಕ್ಕಿ/ನಕ್ಷತ್ರ; ಸುರಿ=ಮೇಲಿನಿಂದ ಬೀಳು; **ತಾರಕಿ ಸುರಿಯೆ**=ಚುಕ್ಕಿಗಳು ಗಗನದಿಂದ ಕಳಚಿ ಬೀಳಲು; ಸುರ=ದೇವತೆ; ಕುಲ=ಗುಂಪು; ಸರಿ=ಓಡಿಹೋಗು/ಪಲಾಯನ ಮಾಡು; **ಸುರಕುಲ ಸರಿಯೆ**=ದೇವತೆಗಳು ಪಲಾಯನಮಾಡಲು; ಅಹಿತ=ಶತ್ರು/ಹಗೆ; ಹರಿ=ಹಿಮ್ಮೆಟ್ಟು; **ಭೀತಿಯಲಿ ಅಹಿತ ಬಲ ಹರಿಯೆ**=ಹೆದರಿಕೆಯಿಂದ ಹಗೆಯ ಸೇನೆಯು ಹಿಮ್ಮೆಟ್ಟಲು; ಶಿರ=ತಲೆ; ಎರಗು=ಬಡಿ; ವೊಲು=ಅಂತೆ/ಹಾಗೆ; **ಶಿರವ ಸಿಡಿಲು ಎರಗಿದವೊಲು**=ತಲೆಗೆ ಸಿಡಿಲು ಬಡಿದಂತಾಗಿ;

**ಉತ್ತರ ಮೂರ್ಛೆಯಲಿ ತಿರುಗಿ ಬಿದ್ದನು**=ರಣವಾದ್ಯಗಳ ದನಿ ಕೇಳುತ್ತಿದ್ದಂತೆಯೇ ಮತ್ತು ಅರ್ಜುನನ ಯುದ್ಧ ಸಿದ್ಧತೆಯ ಅಬ್ಬರವನ್ನು ನೋಡುತ್ತಿದ್ದಂತೆಯೇ ಅಂಜಿಕೆಯಿಂದ ತತ್ತರಿಸಿಹೋದ ಉತ್ತರಕುಮಾರನು ಮೂರ್ಛಿತನಾಗಿ ತೇರಿನಲ್ಲಿಯೇ ಉರುಳಿಬಿದ್ದನು; ಹೊಡೆಮರಳು=ಹಿಂತಿರುಗಿ ಬರು/ಮರಳಿಬರು;

**ಹೊಡೆಮರಳಿದವು**=ಕೆಲವೇ ಗಳಿಗೆಗಳಲ್ಲಿ ಉತ್ತರಕುಮಾರನಿಗೆ ಮತ್ತೆ ಅರಿವು ಬಂದು ಎಚ್ಚರಗೊಳ್ಳುತ್ತಾನೆ; ಕಣ್ಣು+ಆಲಿ; ಆಲಿ=ಕಣ್ಣುಗುಡ್ಡೆ; ಅರುಣ=ಕೆಂಪು ಬಣ್ಣ; ವಾರಿ=ನೀರು; ಕಾರು=ಹೊರಹಾಕು; **ಕಣ್ಣಾಲಿ ಅರುಣ ವಾರಿಗಳ ಕಾರಿದವು**=ಅಂಜಿಕೆಯಿಂದ ಕೆಂಪಾಗಿರುವ ಕಣ್ಣುಗಳಿಂದ ನೀರು ಸುರಿಯತೊಡಗಿತು; **ಹೊರಳುತ ಇರಲು**=ಸಾರಥಿಯು ಕುಳಿತುಕೊಳ್ಳಲು ಇರುವ ಜಾಗದಲ್ಲಿಯೇ ಉತ್ತರಕುಮಾರನು ಅತ್ತಿತ್ತ ಉರುಳಾಡುತ್ತಿರಲು; ಸೈರಿಸು=ತಾಳು/ಸಹಿಸು;

**ಎಲೆ ಪಾಪಿ ಸೈರಿಸಲು ಅರಿಯನು... ಇನ್ನೇನು... ಎನುತ ಫಲುಗುಣ ರಥದೊಳಗೆ ಕುಳ್ಳಿರಿಸಿದನು**=ಆಗ ಅರ್ಜುನನು... ಅಯ್ಯೋ... ಈ ಪಾಪಿಗೆ ಕಾಳೆಗದ ತೀವ್ರತೆಯನ್ನು ನೋಡಿ ಸಹಿಸಿಕೊಳ್ಳುವ ಕಸುವಿಲ್ಲ... ಎಂದು ನುಡಿಯುತ್ತ, ತೇರಿನ ಮುಂಭಾಗದ ಸಾರಥಿಯ ಜಾಗದಿಂದ ಉತ್ತರಕುಮಾರನನ್ನು ಮೇಲೆತ್ತಿ ತೇರಿನ

ಒಳಕ್ಕೆ ಕುಳ್ಳಿರಿಸಿದನು; **ಸೆರಗಿನಲಿ ಬೀಸಿದನು**=ಅರ್ಜುನನು ತನ್ನ ಮಯ್ ಮೇಲಣ ಶಲ್ಯದ ಅಂಚಿನಿಂದ ಗಾಳಿಯನ್ನು ಬೀಸಿ ಜೀವಭಯದಿಂದ ಕಂಗಾಲಾಗಿದ್ದ ಉತ್ತರಕುಮಾರನನ್ನು ಉಪಚರಿಸಿದನು;

ಮತ್ಸ್ಯಕುಮಾರ=ಮತ್ಸ್ಯರಾಜ್ಯದ ಅರಸನಾದ ವಿರಾಟರಾಯನ ಮಗ ಉತ್ತರಕುಮಾರ; ಬವಣಿ=ತಲೆ ಸುತ್ತುವಿಕೆ/ತೊಂದರೆ; **ಏನು ಮತ್ಸ್ಯಕುಮಾರ, ಬವಣಿ ಇದೇನು ನಿನಗೆ**=ರಾಜಪುತ್ರ...ಇದೇಕೆ ಹೀಗೆ ತಲೆಸುತ್ತಿಬಂದು ಕೆಳಕ್ಕೆ ಉರುಳಿದೆ; ಅವಸಾನ=ಕೊನೆ/ಅಂತ್ಯ; ಅಂದ=ರೀತಿ/ಹಾಗೆ; **ಜಗದ ಅವಸಾನದ ಅಂದದಿ ಸಿಡಿಲು ಸುಳಿದುದು**=ಪ್ರಳಯಕಾಲದಲ್ಲಿ ಇಡೀ ಜಗತ್ತೇ ನಾಶಗೊಳ್ಳುವ ರೀತಿಯಲ್ಲಿ ಸಿಡಿಲು ಬಂದು ಬಡಿಯಿತು; ಒಡಲು=ದೇಹ; ಬಿರಿ=ಸೀಳು; **ಎನ್ನ ಒಡಲು ಬಿರಿದುದು**=ನನ್ನ ಮಯ್ ಸೀಳಿದಂತಾಯಿತು/ನನ್ನ ಎದೆ ಒಡೆದಂತಾಯಿತು; ಧ್ವಾನ=ದನಿ/ಶಬ್ದ; ಆನು=ಹೊಂದು/ಎದುರಿಸು; ಆಪನೆ= ಶಕ್ತನೇ; **ನಿನ್ನ ಬಹಳ ಧ್ವಾನವನು ಆನಲು ಆಪನೆ**=ಕಾಳೆಗದ ಕಣದಲ್ಲಿ ನಿನ್ನ ವೀರಾವೇಶದ ಅಬ್ಬರದ ದನಿಯನ್ನು ಕೇಳಿ ತಡೆದುಕೊಳ್ಳುವ ಶಕ್ತಿ ನನ್ನಲ್ಲಿದೆಯೇ; **ಸಾಕು ಎನ್ನ ಕಳುಹು**=ಕಾಳೆಗವನ್ನು ಮಾಡುವುದು ಬೇಡ. ಇಲ್ಲಿಗೆ ನಿಲ್ಲಿಸು. ನನ್ನನ್ನು ವಿರಾಟನಗರಿಗೆ ಕಳುಹಿಸು; ನಿನಾದ=ದನಿ/ಶಬ್ದ; ಮಾಣು=ಬಿಡು; **ಮಹಾ ನಿನಾದವ ಮಾಣು ಮಾಣು**=ನಿನ್ನ ರಣಾವೇಶದ ಅಬ್ಬರದ ದನಿಯನ್ನು ಬಿಡು; ಖೇಡನ್+ಆಗದಿರು; ಖೇಡ=ಹೆದರಿದವನು/ಅಂಜಿದವನು;

**ಖೇಡನಾಗದಿರು. ಅದುಭುತ ಧ್ವನಿ ಮಾಡೆನು. ಅಂಜದಿರು**=ಹೆದರಿಕೆಯಿಂದ ತತ್ತರಿಸಬೇಡ. ಮತ್ತೆ ಮತ್ತೆ ಅಬ್ಬರದ ದನಿಯನ್ನು ಮಾಡುವುದಿಲ್ಲ. ಹೆದರಬೇಡ; ಧೃತಿ=ಕೆಚ್ಚು/ಶೂರತನ; ಜೋಡಿಸು=ಅಣಿಮಾಡು/ಸಜ್ಜುಗೊಳಿಸು; **ಧೃತಿ ಮಾಡಿಕೊಂಡು ಈ ರಥವ ಜೋಡಿಸು**=ಮನಸ್ಸಿಗೆ ಕೆಚ್ಚನ್ನು ತಂದುಕೊಂಡು, ಈ ತೇರನ್ನು ಸಜ್ಜುಗೊಳಿಸಿ, ಕಾಳೆಗದ ಕಣದಲ್ಲಿ ಮುನ್ನಡೆಸಲು ಅಣಿಯಾಗು;

ಅಖಿಲ=ಸಮಸ್ತ/ಎಲ್ಲ; ಜಾಲ=ಗುಂಪು; ಕೌರವಜಾಲ=ದುರ್ಯೋಧನನ ಸೇನೆ; ಭಂಗ=ಸೋಲು/ಪರಾಜಯ/ಅಪಮಾನ; ದುಗುಡ=ಸಂಕಟ/ಉಮ್ಮಳ; ಗಜಪುರ=ಹಸ್ತಿನಾವತಿ; ನಡೆತಂದು=ಆಗಮಿಸಿ; **ದುಗುಡದಲಿ ಗಜಪುರಕೆ ನಡೆತಂದು**=ಸೋಲಿನ ಸಂಕಟದಿಂದ ನೊಂದು ಹಸ್ತಿನಾಪುರಕ್ಕೆ ಹಿಂದಿರುಗಿ; **ಅಖಿಳ ಕೌರವಜಾಲ ಭಂಗದಲಿ ದುಗುಡದಲಿ ಗಜಪುರಕೆ ನಡೆತಂದು ತಿರುಗಿತು**= ದುರ್ಯೋಧನನ ಸಮಸ್ತ ಸೇನೆಯು ಸೋತು ದುಗುಡದಲ್ಲಿ ನೊಂದು ಹಸ್ತಿನಾಪುರಕ್ಕೆ ಹಿಂತಿರುಗಿತು; **ಅಖಿಲ ನೃಪರು**=ದುರ್ಯೋಧನನ ಚತುರಂಗಬಲ ದೊಡನೆ ತೆರಳಿದ್ದ ಎಲ್ಲಾ ರಾಜರು;

ಮುಸುಕು=ಮೊಗವನ್ನು ಮರೆಮಾಡಿಕೊಳ್ಳಲು ಹಾಕಿಕೊಳ್ಳುವ ಬಟ್ಟೆ; **ಮೇಲು ಮುಸುಕಿನ ಮೊಗದ**=ಮೊಗದ ಮೇಲೆ ಬಟ್ಟೆಯನ್ನು ಹಾಕಿಕೊಂಡಿರುವುದು; ಸೋಲಿನ ಸಂಕಟ ಮತ್ತು ಅಪಮಾನದಿಂದ ನೊಂದಿರುವ ದುರ್ಯೋಧನನ ಕಡೆಯ ರಾಜರು ತಮ್ಮ ಮೊಗವನ್ನು ಹಸ್ತಿನಾವತಿಯ ಪ್ರಜೆಗಳಿಗೆ ತೋರಿಸಲು ಹಿಂಜರಿದಿರುವುದನ್ನು ಇದು ಸೂಚಿಸುತ್ತಿದೆ; ಮೇಳ=ಗೋಷ್ಠಿ/ಅನೇಕರಿಂದ ಕೂಡಿರುವ ಸಭೆ; ಮೋನ=ನಿಶ್ಶಬ್ದ/ದನಿಯಿಲ್ಲದಿರುವುದು; **ವಾದ್ಯದ ಮೇಳ ಮೋನದಲಿ**=ವಾದ್ಯಗಾರರು ಯಾವೊಂದು ವಾದ್ಯವನ್ನು ನುಡಿಸದೆ ನಿಶ್ಶಬ್ದದಿಂದ ಹಜ್ಜೆಯಿಡುತ್ತ; ನಿಜ+ಆಲಯಂಗಳ; ನಿಜ=ತನ್ನ/ತಮ್ಮ; ಆಲಯ=ಮನೆ; ಹೊಕ್ಕರು=ಪ್ರವೇಶಿಸಿದರು; **ಹೊತ್ತ ದುಗುಡದಲಿ ನಿಜಾಲಯಂಗಳ ಬಂದು ಹೊಕ್ಕರು**=ಅಪಾರವಾದ ಸಂಕಟದಿಂದ ರಾಜರು ತಮ್ಮ ಮನೆಗಳನ್ನು ಹೊಕ್ಕರು; ಕೈದುವನ್+ಇರಿಸಿ; ಕೈದು=ಆಯುಧ;

**ಬಳಿಕ ಫಲುಗುಣನು ಅತ್ತಲಾ ಮರದೊಳಗೆ ಕೈದುವನಿರಿಸಿ**=ಅತ್ತ ಕಾಳೆಗದ ಕಣದಲ್ಲಿದ್ದ ಅರ್ಜುನನು ಶಮಿ ಮರದ ಬಳಿಗೆ ಬಂದು ಮೊದಲಿನಂತೆ ಆಯುಧ ಗಳನ್ನು ಮರದ ಕೊಂಬೆಗೆ ಬಿಗಿದು ಕಟ್ಟಿ; ಮುನ್ನಿನ=ಮೊದಲಿನ; ಹುಲು= ಸಾಮಾನ್ಯವಾದ; **ಮುನ್ನಿನ ಹುಲುರಥ**=ವಿರಾಟನಗರದಿಂದ ಉತ್ತರ ಕುಮಾರ ನೊಡನೆ ಬಂದಿದ್ದ ಸಾಮಾನ್ಯವಾದ ತೇರು; ಮೇಳೈಸು=ಸಿದ್ಧಪಡಿಸಿ/ಅಣಿಗೊಳಿಸಿ; ಅಳವಡಿಸು=ಹೊಂದಿಸು;

**ಮುನ್ನಿನ ಹುಲುರಥವ ಮೇಳೈಸಿ ಸಾರಥಿತನವನು ಅಳವಡಿಸೆ**=ಕಾಳೆಗಕ್ಕೆ ತನ್ನದೇ ಆದ ತೇರಿನಲ್ಲಿ ಹೋಗಿದ್ದ ಅರ್ಜುನನು ಈಗ ಅದನ್ನು ಬಿಟ್ಟು, ಈ ಮೊದಲು ವಿರಾಟನಗರಿಯಿಂದ ತಂದಿದ್ದ ಸಾಮಾನ್ಯವಾದ ತೇರನ್ನು ಅಣಿಗೊಳಿಸಿ, ಅದರಲ್ಲಿ ಮೊದಲಿನಂತೆ ತಾನೇ ಸಾರಥಿಯಾಗಿ ಕುಳಿತುಕೊಂಡನು; ಕುಲ=ಗುಂಪು/ ಸಮೂಹ; ಲಲಾಮ=ತಿಲಕ; ಕಪಿಕುಲಲಲಾಮ=ಕಪಿಗಳ ಸಮೂಹಕ್ಕೆ ತಿಲಕಪ್ರಾಯನಾದ ಹನುಮಂತ; ಮೈದಡವು=ಒಲವಿನ ಸಂಕೇತವಾಗಿ ಮಯ್ಯನ್ನು ನೇವರಿಸಿ; ವನ=ಕಾಡು;

**ಕಪಿ ಕುಲಲಲಾಮನು ಇಳಿದು ಪಾರ್ಥನ ಮೈದಡವಿ ವನಕೆ ಹಾಯ್ದನು**=ಕಾಳೆಗದ ಕಣದಲ್ಲಿ ಅರ್ಜುನನು ಹೋರಾಟಮಾಡುತ್ತಿದ್ದ ತೇರಿನ ಮೇಲೆ ಕುಳಿತಿದ್ದ ಹನುಮಂತನು ಈಗ ಕೆಳಕ್ಕೆ ಇಳಿದು ಬಂದು, ಒಲವಿನಿಂದ ಅರ್ಜುನನ ಮಯ್ಯನ್ನು ನೇವರಿಸಿ ಕಾಡನತ್ತ ನಡೆದನು; ಹೊಳಲು=ನಗರ; ಹೊರೆ=ಹತ್ತಿರ/ಸಮೀಪ; **ಫಲುಗುಣನು ಹೊಳಲ ಹೊರೆಯಲಿ ನಿಂದು ನಗುತ ಉತ್ತರನೊಳು ಇಂತು ಎಂದ**=ತೇರು ವಿರಾಟನಗರ ಹತ್ತಿರಕ್ಕೆ ಬರುತ್ತಿದ್ದಂತೆಯೇ, ತೇರನ್ನು ನಿಲ್ಲಿಸಿ

ಉತ್ತರಕುಮಾರನನ್ನು ಕುರಿತು ಅರ್ಜುನನು ಮುಗುಳುನಗುತ್ತ ಈ ರೀತಿ ಹೇಳಿದನು; ದೂತ=ಸುದ್ದಿ ಇಲ್ಲವೇ ಸಂದೇಶವನ್ನು ಒಯ್ಯುವವನು/ಸೇವಕ; ಅರುಹು=ತಿಳಿಸು;

**ದೂತರಿಗೆ ಕರೆದು ಅರುಹು**=ವಿರಾಟರಾಯನಿಗೆ ಕಾಳೆಗದ ಸುದ್ದಿಯನ್ನು ತಿಳಿಸುವುದಕ್ಕಾಗಿ ದೂತರನ್ನು ಕರೆದು ಅವರಿಗೆ ಹೇಳು; ಧುರ=ಕಾಳೆಗ; **ನೀನೇ ಧುರವ ಜಯಿಸಿದೆನು ಎನ್ನು**=ನೀನೇ ಕಾಳೆಗವನ್ನು ಗೆದ್ದೆನೆಂದು ತಿಳಿಸು;

**ನಾವು ಇದ್ದ ಇರವನು ಅರುಹದಿರು**=ಹಗೆಗಳ ಎದುರು ಹೋರಾಡಿ ಗೆದ್ದವನು ನಾನು ಎಂಬುದನ್ನು ಹೇಳಬೇಡ; ಇಂದು=ಈ ದಿನ/ಕಾಳೆಗವನ್ನು ಗೆದ್ದು ಬಂದಿರುವ ಈ ದಿನ; ವಿಕ್ರಮ=ಪರಾಕ್ರಮ; ಪಸರಿಸು=ಹಬ್ಬಿಸು; **ಇಂದು ನಿನ್ನ ವಿಕ್ರಮವ ಪಸರಿಸು**=ಇಂದಿನ ಕಾಳೆಗದಲ್ಲಿ ಜಯಪಡೆದ ನಿನ್ನ ಪರಾಕ್ರಮವನ್ನು ಎಲ್ಲೆಡೆ ತಿಳಿಯುವಂತೆ ಮಾಡು; ಮನ್ನಿಸು=ಮರ್ಯಾದೆ ಮಾಡು/ಆದರಿಸು; **ಅರಸ ನಿನ್ನನೆ ಮನ್ನಿಸಲಿ**=ಅರಸನು ನಿನ್ನನ್ನೇ ಹೆಚ್ಚು ಮನ್ನಿಸಲಿ; ಪುರ=ನಗರ/ಪಟ್ಟಣ; ಪರಿಜನ=ಸುತ್ತಲಿನ ಜನ/ಪರಿವಾರ;

**ಪುರ ಪರಿಜನಂಗಳು ನಿನ್ನ ವಿಜಯದ ಹರುಷದಲಿ ಹೆಚ್ಚಿರಲಿ**= ವಿರಾಟ ನಗರದಲ್ಲಿರುವ ನಿನ್ನ ಪರಿವಾರದವರು ಮತ್ತು ಪ್ರಜೆಗಳೆಲ್ಲರೂ ನಿನ್ನ ವಿಜಯದ ಆನಂದದಿಂದ ಹಿಗ್ಗುವಂತಾಗಲಿ; ನೇಮಿಸು=ಅಪ್ಪಣೆಮಾಡು; **ನೇಮಿಸಿದಂತೆ ಮಾಡು**=ನಾನು ಹೇಳಿದಂತೆ ಮಾಡು; ಕರ=ಹೆಚ್ಚಾಗಿ; ಲೇಸು=ಒಳ್ಳೆಯದು;

**ಕರ ಲೇಸು. ನೀನೇ ಬಲ್ಲೆ ಎನುತ**=ಹೆಚ್ಚಾಗಿ ಯಾವುದು ಒಳ್ಳೆಯದು ಎಂಬುದನ್ನು ನೀನೇ ತಿಳಿದಿರುವೆ ಎಂದು ಉತ್ತರಕುಮಾರನು ಅರ್ಜುನನ್ನು ಹೊಗಳುತ್ತ, ಅವನ ಮಾತಿನಂತೆ ನಡೆಯಲು ಒಪ್ಪಿಕೊಂಡು; **ದೂತರ ಕರೆದು**= ನಗರದ ಹೊರವಲಯದಲ್ಲಿದ್ದ ದೂತರನ್ನು ಕರೆದು; ಜನಕ=ತಂದೆ; **ಜನಕನಲ್ಲಿಗೆ ಪೋಗಿ**=ನಮ್ಮ ತಂದೆಯವರ ಬಳಿಗೆ ಹೋಗಿ; **ಮತ್ಸ್ಯತನಯ**= ಉತ್ತರಕುಮಾರ; ನಿಯಾಮಿಸು=ಅಪ್ಪಣೆಮಾಡು; **ಮತ್ಸ್ಯ ತನಯ ಕೌರವ ಬಲವ ಜಯಿಸಿದನು ಎಂದು ಪೇಳುವುದು ಎಂದು ಆತನು ನಿಯಾಮಿಸುತ ಇರ್ದನು**="ಉತ್ತರ ಕುಮಾರನು ದುರ್ಯೋಧನನ ಚತುರಂಗಸೇನೆಯನ್ನು ಸೋಲಿಸಿ ಜಯವನ್ನು ಪಡೆದನು ಎಂಬ ಸುದ್ದಿಯನ್ನು ವಿರಾಟರಾಜನಿಗೆ ತಿಳಿಸುವುದು" ಎಂದು ದೂತರಿಗೆ ಅಪ್ಪಣೆಮಾಡಿದನು;



## ನೋಟ–೭

ಅತ್ತಲು=ಆ ಕಡೆ; ಜನಪ=ರಾಜ/ವಿರಾಟರಾಯ; ಕುಂತೀಸುತ= ಧರ್ಮರಾಯ/ಕಂಕ ಭಟ್ಟ;

**ಅತ್ತಲು ಜನಪ ಕುಂತೀಸುತನ ಸಹಿತ ಅರಮನೆಗೆ ಐತಂದನು**=ಅತ್ತ ವಿರಾಟನಗರದಲ್ಲಿ ವಿರಾಟರಾಜನು ತನ್ನ ಆಪ್ತಸಹಾಯಕನಾದ ಕಂಕ ಭಟ್ಟನ ಜೊತೆಗೂಡಿ ಅರಮನೆಗೆ ಬಂದನು; ಅವನಿ=ಭೂಮಿ; ಪತಿ=ಒಡೆಯ; ಅವನಿಪತಿ=ರಾಜ; **ಅರಮನೆಯ ಹೊಕ್ಕು ಅವನಿಪತಿಯು ಉತ್ತರನ ಕಾಣದೆ**= ಅರಮನೆಯೊಳಕ್ಕೆ ಬಂದ ವಿರಾಟರಾಜನು ತನ್ನ ಮಗ ಉತ್ತರಕುಮಾರನನ್ನು ಕಾಣದೆ; **ಕಂದನು ಎತ್ತಲು ಸರಿದನು ಎನೆ**=ಮಗನು ಎಲ್ಲಿಗೆ ಹೋದನು ಎಂದು ರಾಣಿ ಸುದೇಷ್ಣೆಯನ್ನು ಕೇಳಿದನು; ಭೂಪತಿ=ರಾಜ; ಬಿನ್ನವಿಸು= ಅರಿಕೆಮಾಡಿಕೊಳ್ಳುವುದು;

**ರಾಣಿಯರು ಭೂಪತಿಗೆ ಬಿನ್ನವಿಸಿದರು**=ಸುದೇಷ್ಣೆಯು ರಾಜನಿಗೆ ನಡೆದ ಸಂಗತಿಯನ್ನು ಹೇಳಿದಳು;

ಉತ್ತರೆಯ ಗುರು=ಬೃಹನ್ನಳೆ; ಅಂಗೈಸು=ಒಪ್ಪು/ಸ್ವೀಕರಿಸು; ಕುರುಬಲ= ದುರ್ಯೋಧನನ ಸೇನೆ; ಅನುಕರಿಸು=ಅಣಿಯಾಗು/ಸಿದ್ಧಪಡಿಸು; **ಉತ್ತರೆಯ ಗುರು ಸಾರಥಿತನವನು ಅಂಗೈಸೆ, ಕುರು ಬಲವನು ಅನುಕರಿಸಿದನು ಎಂದರೆ**= ಕಾಳೆಗದ ಕಣದಲ್ಲಿ ತೇರನ್ನು ಮುನ್ನಡೆಸಲು ಬೃಹನ್ನಳೆಯು ಒಪ್ಪಿಕೊಂಡಿದ್ದರಿಂದ, ನಮ್ಮ ಮಗನು ದುರ್ಯೋಧನನ ಸೇನಾಬಲವನ್ನು ಎದುರಿಸಲು ರಣರಂಗಕ್ಕೆ ತೆರಳಿದನು ಎಂದು ಹೇಳಲು; ಹಾರು=ನೋಡು/ಕಾಯು; ಮಿಗೆ=ಅತಿಶಯತೆ/ ಹೆಚ್ಚಾಗಿ;

**ಕೆಲಬಲನ ಹಾರದೆ ಮಿಗೆ ಕದನಕೆ ಐದಿದನು**=ಮುಂದೆ ಏನಾಗುತ್ತದೆ ಎಂಬುದನ್ನು

ಲೆಕ್ಕಿಸದೆ ಹೆಚ್ಚಿನ ಸಡಗರದಿಂದ ಕಾಳೆಗಕ್ಕೆ ಹೋದನು; ಒಡಲು=ದೇಹ; ಕೂರ್+ಅಲಗು; ಕೂರ್=ಹರಿತವಾದ; ಅಲಗು=ಕತ್ತಿ; ಅಂದ=ರೀತಿ;

**ಒಡಲೊಳು ಕೂರಲಗು ಮುರಿದ ಅಂದದಲಿ ಕಳವಳಿಸಿದನು**=ದೇಹದೊಳಕ್ಕೆ ಹರಿತವಾದ ಕತ್ತಿಯ ತುಂಡು ನಾಟಿಕೊಂಡಂತೆ ವಿರಾಟರಾಯನು ಸಂಕಟಕ್ಕೆ ಒಳಗಾದನು. ದುರ್ಯೋಧನನ ಚತುರಂಗ ಸೇನೆಯ ಎದುರು ಹೋರಾಡಲು ಮಗನಾದ ಉತ್ತರಕುಮಾರನು ತೆರಳಿರುವ ಸಂಗತಿಯು ತಂದೆಯಾದ ವಿರಾಟರಾಯನ ಮನದಲ್ಲಿ ಅತಿ ಹೆಚ್ಚಿನ ಕಳವಳವನ್ನುಂಟುಮಾಡಿತು; ಮನ ನೊಂದನು=ಮನದಲ್ಲಿ ಬಹಳವಾಗಿ ನೊಂದನು;

ಅಕಟ=ಅಯ್ಯೋ; ಎತ್ತ=ಯಾವ ಕಡೆ; ರಾಯದಳ=ದುರ್ಯೋಧನನ ಚತುರಂಗ ಸೇನೆ; **ಅಕಟ, ಕುಮಾರನು ಎತ್ತಲು...ರಾಯದಳವು ಎತ್ತ**= ಅಯ್ಯೋ... ನನ್ನ ಮಗನ ಶಕ್ತಿಯೇನು... ದುರ್ಯೋಧನನ ಚತುರಂಗಬಲದ ಶಕ್ತಿಯೇನು. ಅಂದರೆ ಯಾವ ರೀತಿಯಿಂದಲೂ ನನ್ನ ಮಗನು ಅಂತಹ ದೊಡ್ಡಸೇನೆಯನ್ನು ಎದುರಿಸಿ ಗೆಲ್ಲಲಾರ; ಭೀಷ್ಮ+ಆದಿಗಳು; ಆದಿಗಳು=ಮೊದಲಾದವರು; **ಬಂದವರು ಭೀಷ್ಮಾದಿಗಳು**=ದುರ್ಯೋಧನನ ಸೇನೆಯೊಡನೆ ಬಂದಿರುವವರು ಸಾಮಾನ್ಯರಲ್ಲ. ಮಹಾವೀರರಾದ ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮ ಮುಂತಾದವರು;

ತರಹರ=ಕೆಚ್ಚು/ಸಾಹಸ/ಶಕ್ತಿ; ಇಂದು=ಚಂದ್ರ; ಧರ=ತೊಟ್ಟಿರುವವನು; ಇಂದುಧರ=ಶಿವ; **ತಾನು ಇಂದು ತರಹರಿಸುವೊಡೆ ತಾನೇನು ಇಂದುಧರನೇ**= ದುರ್ಯೋಧನನ ಮಹಾಸೇನೆಯೊಡನೆ ತನ್ನ ಸಾಹಸವನ್ನು ಮೆರೆಯಲು ಇವನೇನು ಶಿವನೇ; ಮರುಳ=ತಿಳಿಗೇಡಿ; **ಮರುಳಲಾ ಮಗನು ಎನುತ ಚಿಂತಿಸಿದ**= ನನ್ನ ಮಗನು ತಿಳಿಗೇಡಿಯಾದನು ಎನ್ನುತ್ತ ವಿರಾಟರಾಯನು ಕಾಳೆಗದ ಕಣದಲ್ಲಿ ತನ್ನ ಮಗನಿಗೆ ಏನಾಗುವುದೋ ಎಂಬ ಚಿಂತೆಗೊಳಗಾದನು; ಪಡಿಬಲ= ಸಹಾಯಕವಾಗಿ ಬರುವ ದೊಡ್ಡಸೇನೆ; ಬಲು=ಶಕ್ತಿಯುತರಾದ; ಅವನಿಪ=ರಾಜ; **ಮಗಗೆ ಪಡಿಬಲವಾಗಿ ಬಲು ಮಂತ್ರಿಗಳನು ಅವನಿಪ ಬೀಳುಗೊಟ್ಟನು**=ಮಗನಿಗೆ ನೆರವಾಗಿ ಹೋರಾಡಲೆಂದು ಶಕ್ತಿಯುತರಾದ ಮಂತ್ರಿಗಳಿಂದ ಕೂಡಿದ ಸೇನಾಬಲವನ್ನು ಕಾಳೆಗದ ರಂಗಕ್ಕೆ ಕಳುಹಿಸಿದನು;

**ದುಗುಡದಿಂದ ಇರೆ**=ವಿರಾಟರಾಯನು ಕಾಳೆಗದ ಕಣದಲ್ಲಿ ಮಗನಿಗೆ ಏನಾಗುವುದೋ ಎಂಬ ಆತಂಕದಿಂದ ಕಂಗಾಲಾಗಿರಲು; ಹೊಳಲು=ನಗರ/ ಪಟ್ಟಣ; ಕೈಸೂರೆ=ಲೂಟಿ; **ಹೊಳಲ ಕೈಸೂರೆ**=ಇಲ್ಲಿ ಇದೊಂದು ನುಡಿಗಟ್ಟಾಗಿ ಬಳಕೆಗೊಂಡಿದೆ. ಗೆದ್ದ ರಾಜನ ಪಡೆಯು ಸೋತ ರಾಜನ ಪಟ್ಟಣದ ಒಳಹೊಕ್ಕು ಕಯ್ಗೆ ಸಿಕ್ಕಿದ ಬೆಲೆಬಾಳುವ ವಸ್ತುಗಳನ್ನು ದೋಚುವಿಕೆಯನ್ನು **'ಹೊಳಲ ಕೈಸೂರೆ'**

ಎನ್ನುತ್ತಾರೆ. ಅಂತೆಯೇ ಕೆಲವೊಮ್ಮೆ ಗೆದ್ದ ರಾಜನ ಪಡೆಯು ತಮ್ಮ ರಾಜನ ಪಟ್ಟಣದಲ್ಲಿಯೂ ಗೆಲುವಿನ ಉತ್ಸಾಹದಲ್ಲಿ ಬೆಲೆಬಾಳುವ ವಸ್ತುಗಳನ್ನು ತಮ್ಮ ಜನರಿಂದಲೇ ದೋಚುತ್ತಾರೆ; ಕಳಕಳ=ಗಜಬಜೆ/ಗಲಾಟೆ; ಮೊಗ=ಮುಖ; ಅಖಿಲ=ಸಮಸ್ತ/ಎಲ್ಲ; ದೂತ+ಆಳಿಗಳು; ದೂತ=ಸುದ್ದಿವಾಹಕ; ಆಳಿ=ಗುಂಪು/ ಸಮೂಹ; **ಹೊಳಲ ಕೈಸೂರೆಗಳ ಕಳಕಳದ ಮೊಗದ ಹರುಷದಲಿ ಅಖಿಲ ದೂತಾಳಿಗಳು ಬಂದುದು**=ಜಯದ ಉತ್ಸಾಹ ಮತ್ತು ಉನ್ಮಾದದಲ್ಲಿ ಗದ್ದಲ ಮಾಡುತ್ತ ನಗೆಮೊಗದ ದೂತರ ಗುಂಪು ವಿರಾಟರಾಯನ ಬಳಿಗೆ ಬಂದಿತು; ಗುಡಿ=ಬಾವುಟ;

ಜೀಯ=ಒಡೆಯ; ಬಿನ್ನಹ=ಅರಿಕೆ; **ನಗರಿಯಲಿ ಗುಡಿಯ ಕಟ್ಟಿಸು**=ಜಯದ ಸಂಭ್ರಮದ ಆಚರಣೆಯ ಸಂಕೇತವಾಗಿ ಬಾವುಟವನ್ನು ನಗರದೆಲ್ಲೆಡೆ ಕಟ್ಟಿಸು; ಇದಿರುಗೊಳಿಸು=ಸ್ವಾಗತಿಸಲು/ಬರಮಾಡಿಕೊಳ್ಳಲು; **ಕುಮಾರಕನನು ಇದಿರುಗೊಳಿಸು ಕಳುಹು**=ಕಾಳೆಗದ ಕಣದಲ್ಲಿ ಗೆಲುವನ್ನು ಪಡೆದು ವಿರಾಟನಗರಕ್ಕೆ ಬರುತ್ತಿರುವ ಉತ್ತರಕುಮಾರನನ್ನು ಸ್ವಾಗತಿಸಲು ಜನರನ್ನು ಕಳುಹಿಸು;

ಪಿತಾಮಹ=ಬ್ರಹ್ಮ/ತಾತ; **ರಾಯಕುವರ ಪಿತಾಮಹ**=ಮಹಾಬಲನಾದ ರಾಜಕುವರ; ರಿಪು=ಹಗೆ/ಶತ್ರು; ರಾಯ=ರಾಜ; ಕುಠಾರ=ಕೊಡಲಿ; **ರಿಪುರಾಯ ಕುವರ ಕುಠಾರ**=ಇದು ಒಂದು ಬಿರುದಿನ ನುಡಿಗಟ್ಟು. ಶತ್ರುರಾಜರ ತಲೆಯನ್ನು ಕಡಿಯುವ ಕೊಡಲಿಯಂತಿರುವವನು; ಥಟ್ಟು=ಸೇನೆ; ವಿಭಾಡ= ನಾಶಮಾಡುವವನು/ಬಡಿದುಹಾಕುವವನು; **ಕೌರವ ರಾಯ ಥಟ್ಟು ವಿಭಾಡ**= ದುರ್ಯೋಧನನ ಸೇನೆಯನ್ನು ನಾಶಮಾಡುವವನು; ಗಜ=ಆನೆ; ಪಂಚಾಸ್ಯ=ಸಿಂಹ; **ಕುರುಕುಲ ಗಜಕೆ ಪಂಚಾಸ್ಯ**=ಕುರುಕುಲವೆಂಬ ಆನೆಗೆ ಸಿಂಹದಂತಿರುವವನು; ಗುರು=ದ್ರೋಣ; ಅಖಿಳ=ಸಮಸ್ತ; **ಕರ್ಣ ಗುರು ಗಾಂಗೇಯ ಮೊದಲಾದ ಅಖಿಳ ಕೌರವರಾಯ ದಳವನು ಗೆಲಿದನು. ಉತ್ತರ ತುರುವ ಮರಳಿಚಿದ**=ಉತ್ತರಕುಮಾರನು ಕರ್ಣ, ಗುರು ದ್ರೋಣ, ಗಾಂಗೇಯ ಮೊದಲಾದವರಿಂದ ಕೂಡಿದ್ದ ದುರ್ಯೋಧನನ ಸೇನೆಯನ್ನೆಲ್ಲಾ ಸದೆಬಡಿದು ಗೆಲುವನ್ನು ಪಡೆದು, ಗೋವುಗಳನ್ನು ವಿರಾಟನಗರಿಗೆ ಹಿಂತಿರುಗಿಸಿದ;

**ಕೇಳಿ ಮಿಗೆ ಹಿಗ್ಗಿದನು**=ಮಗನ ಗೆಲುವಿನ ವಾರ್ತೆಯನ್ನು ದೂತರಿಂದ ಕೇಳಿ ವಿರಾಟರಾಯನ ಆನಂದದಿಂದ ಹಿಗ್ಗಿದನು; ತನು=ದೇಹ; ಪುಳಕ+ಆಳಿ; ಪುಳಕ=ಮಯ್ ನವಿರೇಳುವಿಕೆ/ರೋಮಾಂಚನ; ಆಳಿ=ಸಾಲು/ಸಮೂಹ; ಪುಳಕಾಳಿ=ಹೆಚ್ಚಿನ ರೋಮಾಂಚನ; ತಳಿತು=ಅರಳು/ವಿಕಸಿಸು; ತಳಿತುದು= ಉಂಟಾಯಿತು; **ತನು ಪುಳಕಾಳಿ ತಳಿತುದು**=ವಿರಾಟರಾಯನ ದೇಹವೆಲ್ಲವೂ

ರೋಮಾಂಚನಗೊಂಡಿತು; ಮುಂದುಗೆಡು=ಹೆಚ್ಚಿನ ಭಾವೋದ್ರೇಕದಿಂದ ಏನು ಮಾಡಬೇಕು ಎಂಬುದನ್ನು ತಿಳಿಯದಂತಾಗುವುದು/ವಿವೇಚನೆಯನ್ನು ಕಳೆದು ಕೊಳ್ಳುವುದು; **ಬಹಳ ಹರುಷದ ದಾಳಿಯಲಿ ಮನ ಮುಂದುಗೆಟ್ಟುದು**= ಅಪಾರವಾದ ಆನಂದದ ಒತ್ತಡದಲ್ಲಿ ವಿರಾಟರಾಯನ ಮನಸ್ಸಿಗೆ ಮುಂದೆ ಏನು ಮಾಡಬೇಕೆಂಬುದೇ ತೋಚದಾಯಿತು; **ಕಂಗಳು ಅರಳಿದವು**=ಕಣ್ಣುಗಳು ಅರಳಿದವು; ಲಾಲಿಸು=ಕೇಳು/ಆಲಿಸು; ಸರ್ವಾಂಗ=ಇಡೀ ದೇಹ/ಮಯ್ ತುಂಬಾ; ಹರುಷದೊಳು+ಆಳೆ; ಆಳ್=ಮಗ್ನವಾಗು/ಮುಳುಗು;

**ಲಾಲಿಸುತ ಸರ್ವಾಂಗ ಹರುಷದೊಳಾಳೆ**=ಮಗನು ದುರ್ಯೋಧನನ ಸೇನಾಬಲದ ಮೇಲೆ ಜಯವನ್ನು ಪಡೆದ ವಾರ್ತೆಯನ್ನು ಕೇಳಿ ತಂದೆಯಾದ ವಿರಾಟರಾಯನ ದೇಹದ ಕಣಕಣವೆಲ್ಲವೂ ಆನಂದದಿಂದ ತುಂಬಿತುಳುಕಾಡಲು; ಜನಪ=ರಾಜ; ಪಸಾಯಿತ=ಉಡುಗೊರೆ/ಬಹುಮಾನ; ದೂತ+ಆಳಿ; ಆಳಿ= ಗುಂಪು; **ಜನಪ ದೂತಾಳಿಗೆ ಪಸಾಯಿತವ ಇತ್ತನು**=ವಿರಾಟರಾಜನು ದೂತರೆಲ್ಲರಿಗೂ ಉಡುಗೊರೆಯನ್ನು ನೀಡಿದನು; ಅವದಿರು=ಆ ದೂತರು; ಓಲಗ=ರಾಜನ ಸಬೆ; ಸುಲಿ=ವಸೂಲಿ ಮಾಡು; **ಅವದಿರು ರಾಯನ ಓಲಗವ ಸುಲಿದರು**=ವಿಜಯದ ವಾರ್ತೆಯನ್ನು ತಂದಿದ್ದ ದೂತರು ರಾಜಸಭೆಯಲ್ಲಿದ್ದವ ರಿಂದಲೂ ಉಡುಗೊರೆಗಳನ್ನು ವಸೂಲಿ ಮಾಡಿದರು; **ಇದಿರುಗೊಳ ಹೇಳು ಎನಲು**=ಉತ್ತರಕುಮಾರನನ್ನು ವೀರೋಚಿತವಾಗಿ ಸ್ವಾಗತಿಸಲು ಹೇಳಿರಿ ಎಂದು ವಿರಾಟರಾಜನು ಅಪ್ಪಣೆಮಾಡಲು;

ಸರ್ವಾಂಗ=ಮಯ್ ತುಂಬಾ; ಮಣಿ=ಮುತ್ತು/ರತ್ನ/ವಜ್ರ ಮುಂತಾದ ಬೆಲೆಬಾಳುವ ಹರಳುಗಳು; ಮೌಕ್ತಿಕ=ನವರತ್ನಗಳಲ್ಲಿ ಒಂದು ಬಗೆಯ ಹರಳು/ ಮುತ್ತು; ಸಿಂಗಾರ=ಅಲಂಕಾರ;

**ಸರ್ವಾಂಗದಲಿ ಮಣಿ ಮೌಕ್ತಿಕದ ಸಿಂಗಾರದ**=ಮಯ್ ತುಂಬಾ ಮುತ್ತು, ರತ್ನ, ವಜ್ರ ಮುಂತಾದ ಹರಳುಗಳಿಂದ ಮಾಡಿರುವ ಒಡವೆಗಳನ್ನು ಅಲಂಕರಿಸಿಕೊಂಡಿರುವ; ಸುರೇಖೆ=ಸುಂದರವಾದ ಗೆರೆ; ಲಲಿತ=ಚೆಲುವು/ ಮನೋಹರವಾದುದು; ಚಿತ್ರಾವಳಿ=ನಾನಾ ಬಗೆಯ ಬಣ್ಣದ ಚಿತ್ರಗಳಿಂದ ಕೂಡಿರುವ ಚಿತ್ರ; ಮುಸುಕು=ಮೊಗವನ್ನು ಮರೆಮಾಡಿಕೊಳ್ಳಲು ತೊಡುವ ಬಟ್ಟೆ; ಸುದತಿ=ಚೆಲುವೆ; **ಸುರೇಖೆಯ ಲಲಿತ ಚಿತ್ರಾವಳಿಯ ಮುಸುಕುಗಳ ಸುದತಿಯರು ಹೊರವಂಟರು**=ಸುಂದರವಾದ ಗೆರೆಗಳಿಂದ ಕೂಡಿ ಮನೋಹರವಾದ ಚಿತ್ರಗಳ ಕಸೂತಿಕಲೆಯಿಂದ ಸಿದ್ಧಗೊಂಡಿರುವ ಮುಸುಕನ್ನು ತಮ್ಮ ಮೊಗದ ಮೇಲೆ ಹಾಕಿಕೊಂಡಿರುವ ಚೆಲುವೆಯರು ಉತ್ತರಕುಮಾರನನ್ನು ಸ್ವಾಗತಿಸಲು

ಅರಮನೆಯಿಂದ ವಿರಾಟನಗರದ ಹೆಬ್ಬಾಗಿಲತ್ತ ನಡೆದರು; ಒಗ್ಗು=ಒಟ್ಟುಗೂಡು/ಗುಂಪಾಗಿ ಸೇರು; ಮೃದು=ಕೋಮಲವಾದ; ಮೃದಂಗ=ಒಂದು ಬಗೆಯ ಚರ್ಮವಾದ್ಯ; ಕಹಳೆ=ಕೊಂಬಿನಂತೆ ಬಾಗಿರುವ ತುತ್ತೂರಿ; ಸಂಪದ=ಹೆಚ್ಚಳ; ಸೊಂಪು=ಇಂಪು/ಇನಿದು; ಎಸೆ=ಶೋಭಿಸು/ಒಪ್ಪು;

**ಒಗ್ಗಿನ ಮೃದು ಮೃದಂಗದ ಕಹಳೆಗಳು ಸಂಪದದ ಸೊಂಪಿನಲಿ ಎಸೆಯೆ**=ಸ್ವಾಗತಕಾರಿಣಿಯರ ಮುಂದೆ ಒಗ್ಗೂಡಿದ ವಾದ್ಯದ ತಂಡದವರ ಮೃದಂಗದಿಂದ ಮತ್ತು ಕಹಳೆಗಳಿಂದ ಹೊರಹೊಮ್ಮುತ್ತಿರುವ ಕೋಮಲವಾದ, ಇಂಪಾದ ಮಂಗಳಕರವಾದ ದನಿಯು ಕೇಳಿಬರುತ್ತಿರಲು; ರಾಜ+ಅಂಗನೆ; ಅಂಗನೆ=ಹೆಂಗಸು; ರಾಜಾಂಗನೆ=ರಾಣಿವಾಸದ ಹೆಂಗಸರು; ಅನು+ಆಯ್ತು; ಅನು=ಅಣಿ/ಸಿದ್ದತೆ/ಸಜ್ಜು; **ರಾಜಾಂಗನೆಯರ ಅನುವಾಯ್ತು**=ರಾಣಿವಾಸದ ಹೆಂಗಸರು ಉತ್ತರಕುಮಾರನನ್ನು ಸ್ವಾಗತಿಸಲು ಸಜ್ಜುಗೊಂಡರು; ಕಂಕ=ಅಜ್ಞಾತವಾಸದಲ್ಲಿರುವ ಧರ್ಮರಾಯನ ಹೆಸರು;

ಕವಿ=ಮುತ್ತು/ಎರಗು/ದಟ್ಟವಾಗು; ನೂಕು=ಮಿಡಿ/ಮೀಟು; ಸಂತವಿಸು=ಶಾಂತವಾಗು; **ಕಂಕ, ಕವಿದು ನೂಕುವ ಹರುಷವನು ಸಂತವಿಸಲು ಅರಿಯೆನು**=ಕಂಕ ಭಟ್ಟನೇ, ಉತ್ತರಕುಮಾರನ ಜಯದ ವಾರ್ತೆಯನ್ನು ಕೇಳಿದ ಗಳಿಗೆಯಿಂದ ನನ್ನ ಮಯ್ ಮನದಲ್ಲಿ ದಟ್ಟವಾಗಿ ಮಿಡಿಯುತ್ತಿರುವ ಆನಂದದ ಒಳಮಿಡಿತಗಳನ್ನು ಹೇಗೆ ಹತ್ತಿಕ್ಕಿಕೊಳ್ಳಬೇಕೆಂಬುದು ನನಗೆ ತಿಳಿಯುತ್ತಿಲ್ಲ; ಎವಗೆ=ನಮಗೆ; ವಿಮಳ=ಉತ್ತಮವಾದ/ಪವಿತ್ರವಾದ; ದ್ಯೂತ=ಪಗಡೆಯಾಟ/ಜೂಜು; ಕೇಳಿ=ಆಟ; ಚಿತ್ತ+ಆಯ್ತು; ಚಿತ್ತ=ಮನಸ್ಸು; **ನಿನ್ನೊಡನೆ ಎವಗೆ ವಿಮಳ ದ್ಯೂತಕೇಳಿಗೆ ಚಿತ್ತವಾಯ್ತು**=ಕಂಕ... ನಿನ್ನೊಡನೆ ಉತ್ತಮವಾದ ಪಗಡೆಯಾಟವನ್ನು ಆಡಬೇಕೆಂಬ ಮನಸ್ಸಾಗಿದೆ; ಅವನಿ=ಭೂಮಿ; ಪತಿ=ಒಡೆಯ; ಅವನಿಪತಿ=ರಾಜ; ಸಿಲುಕು=ವಶವಾಗು/ಈಡಾಗು;

ವಿಧಿ=ಗತಿ/ಅವಸ್ತೆ; ಭುವನ=ಲೋಕ/ಜಗತ್ತು; ಅದು+ಆರು; **ಅವನಿಪತಿ ಕೇಳ್, ಜೂಜಿನಲಿ ಪಾಂಡವರು ಸಿಲುಕಿದರು. ಅವರ ವಿಧಿಯನು ಭುವನದಲಿ ಬಲ್ಲವರು ಅದಾರು**=ರಾಜನೇ ಕೇಳು, ಪಗಡೆಯಾಟದ ಜೂಜಿನಿಂದಾಗಿ ಪಾಂಡವರು ಅಪಾರವಾದ ಸಂಕಟಕ್ಕೆ ಈಡಾದರು. ಈಗ ಅವರ ಅವಸ್ಥೆಯು ಏನಾಗಿದೆ ಎಂಬುದನ್ನು ಲೋಕದಲ್ಲಿ ಯಾರು ತಾನೇ ತಿಳಿದಿದ್ದಾರೆ; ರಾಜ್ಯವನು+ಒಡ್ಡಿ; ಒಡ್ಡು=ಇಡು/ಜೂಜಾಟದಲ್ಲಿ ಇಡುವ ಸಂಪತ್ತು;

**ಅವರು ರಾಜ್ಯವನೊಡ್ಡಿ ಸೋತವೊಲು ಎವಗೆ ಪಣ ಬೇರಿಲ್ಲ**=ಪಾಂಡವರು ಜೂಜಾಟದಲ್ಲಿ ತಮ್ಮ ರಾಜ್ಯದ ಸಕಲ ಸಂಪತ್ತನ್ನು ಒಡ್ಡಿ ಸೋತ ರೀತಿಯಲ್ಲಿ

ನಮ್ಮಿಬ್ಬರ ನಡುವಣ ಜೂಜಿನಲ್ಲಿ ಹಣ ಇರುವುದಿಲ್ಲ; ಅಭ್ಯುದಯ=ಏಳಿಗೆ/ ಉನ್ನತಿ/ಶ್ರೇಯಸ್ಸು; ಶ್ರವಣ=ಕೇಳುವಿಕೆ; ಮಿಗು=ಹೆಚ್ಚಾಗು; ಹರ್ಷ+ಉತ್ಸವ;

**ಕುಮಾರ ಅಭ್ಯುದಯ ವಿಜಯ ಶ್ರವಣ ಸುಖ ಮಿಗಲು ಹರ್ಷೋತ್ಸವ ಎವಗೆ ಮನವಾಯ್ತು**=ನನ್ನ ಮಗನ ಉನ್ನತಿಗೆ ಕಾರಣವಾದ ಕಾಳೆಗದ ಗೆಲುವಿನ ವಾರ್ತೆಯನ್ನು ಕೇಳಿದಾಗಿನಿಂದ ಹೆಚ್ಚಾಗುತ್ತಿರುವ ಆನಂದವನ್ನು ಆಚರಿಸುವುದಕ್ಕಾಗಿ ನಿನ್ನೊಡನೆ ಪಗಡೆಯಾಟವನ್ನಾಡಬೇಕೆಂಬ ಮನಸ್ಸಾಗಿದೆ; ಸಾರಿ=ಪಗಡೆಯಾಟದಲ್ಲಿ ಬಳಸುವ ಕಾಯಿ/ಪಗಡೆ; ನಿವಹ=ಗುಂಪು/ಸಮೂಹ; ಹೂಡು=ಅಣಿಗೊಳಿಸು/ಸಿದ್ಧಗೊಳಿಸು; **ಒಡ್ಡು ಸಾರಿಯ ನಿವಹವನು ಹೂಡು ಎನಲು**=ಪಗಡೆಯಾಟಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಅಣಿಗೊಳಿಸು ಎಂದು ವಿರಾಟರಾಯನು ಹೇಳಲು;

ಅವನಿಪತಿ=ಧರ್ಮರಾಯ/ಕಂಕ ಭಟ್ಟ; **ಅವನಿಪತಿ ನಸುನಗುತ ಹೂಡಿದನು**= ಕಂಕ ಭಟ್ಟನು ವಿರಾಟರಾಯನ ಉತ್ಸುಕತೆಯನ್ನು ಕಂಡು ಮುಗುಳು ನಗುತ್ತ ಪಗಡೆಯಾಟದ ಹಾಸನ್ನು ಬಿಚ್ಚಿ ಹರಡಿದನು; ಹಾಸಂಗಿ=ಪಗಡೆಯಾಟದ ದಾಳ; ಹಾಯ್ಕು=ಬೀಳಿಸು/ಉರುಳಿಸು; **ಹಾಸಂಗಿಯನು ಹಾಯ್ಕಿದನು**=ದಾಳಗಳನ್ನು ಉರುಳಿಸಿದನು; ಸಮತಳಿಸು=ಸರಿಸಮಾನವಾಗಿರು; **ಕೇಳಿ ಸಮತಳಿಸಿತ್ತು**= ಪಗಡೆಯಾಟದಲ್ಲಿ ಇಬ್ಬರು ಸಮಗಯ್ ಆಗಿ ಆಡತೊಡಗಿದರು; ಥಟ್ಟು=ಸೇನೆ; ರಾಯ ಥಟ್ಟು=ರಾಜರ ಸೇನೆಗಳು; **ಕಂಕ, ನೋಡೈ ರಾಯ ಥಟ್ಟಿನಲಿ ಕಾಳಗವನು ಉತ್ತರನು ಗೆಲಿದನು**=ಪಗಡೆಯಾಟದ ಜತೆಜತೆಗೆ ವಿರಾಟರಾಯನ ತನ್ನ ಮನದ ಆನಂದವನ್ನು ಕಂಕನೊಡನೆ ತೋಡಿಕೊಳ್ಳುತ್ತ, ನೋಡು ಕಂಕ... ಉತ್ತರಕುಮಾರನು ರಾಜರ ನಡುವೆ ನಡೆದ ಕಾಳೆಗದಲ್ಲಿ ಜಯಪಡೆದನು; ಶೂಲಪಾಣಿ=ಶಿವ; ಸೆಡೆ=ಹೆದರು/ಕುಗ್ಗು; ಅಹಿತ=ಶತ್ರು/ಹಗೆ; ಭಟಾಳಿ= ಕಾದಾಳುಗಳ ಗುಂಪು;

**ಶೂಲಪಾಣಿಗೆ ಸೆಡೆಯದ ಅಹಿತ ಭಟಾಳಿ ಸೋತುದು**=ಶೂಲಪಾಣಿಯಾದ ಶಿವನಿಗೆ ಹೆದರದ ದುರ್ಯೋಧನನ ಸೇನಾಬಲವು ನನ್ನ ಮಗನ ಮುಂದೆ ಸೋಲನ್ನಪ್ಪಿತು; **ಏನ ಹೇಳು**=ಈಗ ನೀನೇ ಹೇಳು; ದಿವಿಜ=ದೇವತೆ; ನರ= ಮಾನವ; **ದಿವಿಜ ನರರೊಳು ಕುಮಾರನನು ಹೋಲುವವರು ಉಂಟೇ**= ದೇವತೆಗಳಲ್ಲಾಗಲಿ ಮಾನವರಲ್ಲಾಗಲಿ ನನ್ನ ಮಗ ಉತ್ತರಕುಮಾರ ಪರಾಕ್ರಮಕ್ಕೆ ಹೋಲುವವರು ಯಾರಾದರೂ ಇದ್ದಾರೆಯೇ; **ಅರಿ ಸೇನೆ ಸೋತುದು ಉಂಟು**= ಒಡೆಯನೇ... ನೀನು ತಿಳಿದಿರುವಂತೆ ಶತ್ರು ದುರ್ಯೋಧನನ ಮಹಾಸೇನೆ ಕಾಳೆಗದಲ್ಲಿ ಸೋತಿದೆ; ಸುರಭಿ=ಹಸು/ಗೋವು; ವ್ರಾತ=ಸಮೂಹ/ಗುಂಪು;

**ಸುರಭಿವ್ರಾತ ಮರಳಿದುದು ಉಂಟು**=ಸೆರೆಯಾಗಿದ್ದ ಹಸುಗಳು ಹಿಂತಿರುಗಿ ಬಂದುದು ನಿಜ; **ಗೆಲವು ಇದು ಕೌತುಕವಲೇ**=ಈ ರೀತಿಯ ಗೆಲುವು ನಿಜಕ್ಕೂ ಬಹಳ ಅಚ್ಚರಿಯನ್ನುಂಟುಮಾಡುವ ಸಂಗತಿಯಾಗಿದೆ; ಬಗೆ=ಚಿಂತಿಸು/ ಆಲೋಚಿಸು; ಚಿತ್ತ=ಮನಸ್ಸು; ಅದ್ಭುತ=ವಿಸ್ಮಯವನ್ನುಂಟುಮಾಡುವ ಸಂಗತಿ;

**ಎಮ್ಮ ಚಿತ್ತದಲಿ ಬಗೆಯಲು ಅದ್ಭುತವು**=ನನ್ನ ಮನಸ್ಸಿನಲ್ಲಿಯೂ ಕೂಡ ಉತ್ತರಕುಮಾರನ ಜಯ ವಿಸ್ಮಯವನ್ನುಂಟುಮಾಡುತ್ತಿದೆ; **ಮಾತು ಹೋಲುವೆ ಅಹುದು ತಪ್ಪೇನು**=ಉತ್ತರಕುಮಾರನ ಪರಾಕ್ರಮಕ್ಕೆ ಸರಿಸಾಟಿಯಾದವರು ದೇವತೆಗಳಲ್ಲಿ ಮತ್ತು ಮಾನವರಲ್ಲಿ ಯಾರೂ ಇಲ್ಲವೆಂಬ ನಿನ್ನ ಮಾತಿನಲ್ಲಿ ತಪ್ಪೇನಿಲ್ಲ; **ಜಗದ ವಿಖ್ಯಾತ ಸಾರಥಿಯಿರೆ ಬಳಿಕ ಕುಮಾರಗೆ ಭೀತಿ ಎಲ್ಲಿಯದು**= ಜಗತ್ತಿನಲ್ಲಿಯೇ ಹೆಸರಾಂತ ಸಾರಥಿಯಾದ ಬೃಹನ್ನಳೆಯು ಉತ್ತರಕುಮಾರನಿಗೆ ದೊರೆತಿರುವಾಗ, ರಣರಂಗದಲ್ಲಿ ಹೆದರಿಕೆ ಎಲ್ಲಿಯದು; ಮರುಳ=ತಿಳಿಗೇಡಿ/ ಹುಚ್ಚ; **ಎಲೆ ಮರುಳೆ ಸನ್ಯಾಸಿ, ನಿನ್ನದು ಮತ್ಸರದೊಳಗೆ ಮುಳುಗಿದ ಚಿತ್ತ**=ಎಲೆ ತಿಳಿಗೇಡಿ ಸನ್ಯಾಸಿ, ನಿನ್ನದು ಹೊಟ್ಟೆಕಿಚ್ಚಿನಲ್ಲಿ ಮುಳುಗಿರುವ ಮನಸ್ಸು. ಅಂದರೆ ನನ್ನ ಮಗನ ಗೆಲುವನ್ನು ಕೇಳಿ ಅಸೂಯೆಪಡುತ್ತಿದ್ದೀಯೆ; **ಹೇಳು, ಆವುದು ಅದ್ಭುತವು**= ಹೇಳು, ಯಾವ ಸಂಗತಿಯು ನಿನಗೆ ಅಚ್ಚರಿಯನ್ನುಂಟು ಮಾಡಿದೆ; **ಸಂದೇಹವೇ ಗೆಲವಿನಲಿ**=ನನ್ನ ಮಗ ಉತ್ತರಕುಮಾರನು ಕಾಳೆಗದಲ್ಲಿ ಜಯಶಾಲಿಯಾಗಿದ್ದಾನೆ ಎಂಬ ವಾರ್ತೆಯಲ್ಲಿ ನಿನಗೆ ಸಂದೇಹವೇ; ಅಳುಕು=ನಡುಗು/ಹೆದರು;

**ಸುಕುಮಾರ ಅಳುಕವನೆ**=ನನ್ನ ಮಗ ಉತ್ತರಕುಮಾರನು ಕಾಳೆಗದ ಕಣದಲ್ಲಿ ಹಗೆಗಳೊಡನೆ ಹೋರಾಡಲು ಹೆದರುತ್ತಾನೆಯೇ; ಬಲುಹು=ಕಸುವು/ಶಕ್ತಿ; ಖತಿ=ಕೋಪ; **ಸಾರಥಿ ಬಲುಹನು ಉಳ್ಳವನೇ ಎಂದು ವಿರಾಟ ಖತಿಗೊಂಡ**= ನೀನು ಹೇಳುವಂತೆ ಸಾರಥಿಯು ಕಾಳೆಗದಲ್ಲಿ ಜಯವನ್ನು ತಂದು ಕೊಡುವಂತಹ ಶಕ್ತಿಯುಳ್ಳವನೇ ಎಂದು ವಿರಾಟರಾಯನು ಕೋಪಗೊಂಡನು;

ನಾರಿ=ಹೆಂಗಸು; ಮೈ+ಕುರುಹು; ಕುರುಹು=ಗುರುತು; ಚಾರು= ಉತ್ತಮವಾದ/ಚೆಲುವಾದ; ಇನ್ನೆವರ=ಇದುವರೆಗೂ; ಸೈರಿಸು=ತಾಳು/ಸಹಿಸು; **ನಾರಿಯರ ಮೈಗುರುಹು, ಪುರುಷರ ಚಾರು ಚಿಹ್ನವ ಕೂಡಿಕೊಂಡಿಹ ಸಾರಥಿಯ ದೆಸೆಯಿಂದ ಕುವರನು ಗೆಲಿದನು ಎಂಬುದನು ನಾನು ಇನ್ನವರ ಸೈರಿಸಿದೆ**=ಹೆಣ್ಣಿನ ದೇಹದ ಹಾವಭಾವ ಮತ್ತು ಗಂಡಿನ ದೇಹದ ಕಸುವನ್ನು ಒಳಗೊಂಡಿರುವ ನಪುಂಸಕನಾದ ಸಾರಥಿಯ ಕಾರಣದಿಂದ ನನ್ನ ಮಗನು ಕಾಳೆಗದಲ್ಲಿ ಗೆದ್ದನೆಂಬ ನಿನ್ನ ಮಾತನ್ನು ಇದುವರೆಗೂ ಹೇಗೋ ಸಹಿಸಿಕೊಂಡಿದ್ದೇನೆ; **ಮತ್ತಾರೊಡನೆ ಮಾತಾಡದಿರು**=ಬೇರೆಯವರ ಮುಂದೆ ಈ ರೀತಿ ಮಾತಾಡಬೇಡ; ನಿಸ್ಸಾರ=

ಸಾರವಿಲ್ಲದ/ಸತ್ವವಿಲ್ಲದ; **ಕಂಕ, ನೀ ನಿಸ್ಸಾರ ಹೃದಯನು**=ಕಂಕ, ನಿನ್ನ ಮನದಲ್ಲಿ ಇತರರ ಬಗ್ಗೆ ಪ್ರೀತಿ, ಕರುಣೆ, ಉದಾರತೆಯಾಗಲಿ ಇಲ್ಲವೇ ಇತರರ ಒಳಿತನ್ನು ಕಂಡು ಮೆಚ್ಚುವ ಗುಣವಿಲ್ಲ; **ನಪುಂಸಕನಲಿ ನಿರಂತರ ಪಕ್ಷ**=ನಪುಂಸಕನಾದ ಬೃಹನ್ನಳೆಯ ಕಡೆಗೆ ಯಾವಾಗಲೂ ನೀನು ಒಲವನ್ನು ಹೊಂದಿರುವೆ; ದುಷ್ಟ+ಆತ್ಮ; ದುಷ್ಟಾತ್ಮ=ನೀಚ ವ್ಯಕ್ತಿ;

**ದುಷ್ಟಾತ್ಮ ಹೋಗು**=ನೀಚನೇ ಇಲ್ಲಿಂದ ತೊಲಗು; **ಅರಸ, ಖತಿಯ ಹಿಡಿಯದಿರು**=ಅರಸನೇ, ಕೋಪಗೊಳ್ಳಬೇಡ; ಅತಿಶಯ=ಅಸಾಧಾರಣವಾದ ಮಹಿಮೆ/ಬಹಳ ಹೆಚ್ಚಿನದು; **ದಿಟ, ನೀನು ಅತಿಶಯವ ಬಯಸುವರೆ**= ನಿಜವಾಗಿಯೂ ನೀನು ಕಾಳೆಗದ ಕಣದಲ್ಲಿ ನಡೆದಿರುವ ಅಚ್ಚರಿಯ ಸಂಗತಿಯನ್ನು ತಿಳಿಯುವುದಾದರೆ; ಸಮ್ಮತ=ಒಪ್ಪಿಗೆಯಾದುದು/ವಿಚಾರ; **ಜನ ಸಮ್ಮತವು**= ಪ್ರಜೆಗಳೆಲ್ಲರಿಗೂ ವಿಚಾರ ತಿಳಿಯುವಂತೆ; **ಸಾರಥಿ ಗೆಲಿದನು ಎಂದೇ ಡಂಗುರವ ಹೊಯಿಸು**=ದುರ್ಯೋಧನನ ಸೇನಾಬಲವನ್ನು ಸಾರಥಿಯು ಸದೆಬಡಿದು ಗೆಲುವನ್ನು ತಂದನು ಎಂದೇ ಡಂಗುರವನ್ನು ಹೊಡೆಸು; **ಸುತನು ಸಾರಥಿಯೆಂದು ಸಾರಿಸು**=ಉತ್ತರಕುಮಾರನು ಸಾರಥಿಯಾಗಿದ್ದನೆಂಬ ಸಂಗತಿಯನ್ನು ಸಾರಿಸು; ವಿತಥ=ಸುಳ್ಳು; **ಇದು ವಿತಥವಲ್ಲ**=ಕಾಳೆಗದ ಕಣದಲ್ಲಿ ಯುದ್ಧವನ್ನು ಮಾಡಿ ಗೆಲುವನ್ನು ತಂದವನು ಬೃಹನ್ನಳೆ ಮತ್ತು ತೇರನ್ನು ನಡೆಸಿದ ಸಾರಥಿಯು ಉತ್ತರಕುಮಾರ ಎಂದು ನಾನು ಹೇಳುತ್ತಿರುವ ಸಂಗತಿಯು ಸುಳ್ಳಲ್ಲ; ಕವಲು ನಾಲಗೆ=ಇದೊಂದು ನುಡಿಗಟ್ಟು. ಸಮಯಕ್ಕೆ ತಕ್ಕಂತೆ ಸುಳ್ಳನ್ನು ನಿಜವೆಂದು, ನಿಜವನ್ನು ಸುಳ್ಳೆಂದು ಹೇಳುವುದು; **ತನಗೆ ಕವಲು ನಾಲಗೆಯಿಲ್ಲ**=ನಾನು ಸಮಯಕ್ಕೆ ತಕ್ಕಂತೆ ಕಪಟದ ನುಡಿಯನ್ನಾಡುವವನಲ್ಲ;

ಪಕ್ಷಪಾತ=ಒಬ್ಬರಲ್ಲಿ ಹೆಚ್ಚು ಪ್ರೀತಿಯನ್ನು ತೋರಿಸುವುದು; **ಪಕ್ಷಪಾತ ಸ್ಥಿತಿಯನು ಆಡೆವು**=ನಾನು ಯಾರನ್ನೂ ವಹಿಸಿಕೊಂಡು ಮಾತನಾಡುವುದಿಲ್ಲ; ಕಣ್+ಗಳು; ಮೋಹದ ಕಂಗಳು=ಇದೊಂದು ನುಡಿಗಟ್ಟು. ಮಮತೆಯಿಂದ ಕಾಣುವ ನೋಟ. ಯಾವುದೇ ವ್ಯಕ್ತಿಯನ್ನು ವ್ಯಕ್ತಿಗತ ನಂಟು ಇಲ್ಲವೇ ಒಲವಿನ ಕಾರಣಕ್ಕಾಗಿ ಮೆಚ್ಚಿಕೊಳ್ಳುವುದು; ಉನ್ನತ+ಉನ್ನತ; ಉನ್ನತ=ಉತ್ತಮ; ಸತ್ವ=ಬಲ/ಶಕ್ತಿ; ಉನ್ನತೋನ್ನತ ಸತ್ವನು=ಮಹಾ ಬಲಶಾಲಿ; **ನಿನ್ನ ಮೋಹದ ಕಂಗಳಿಗೆ ಮಗನು ಉನ್ನತೋನ್ನತ ಸತ್ವನೆಂದೇ ಮುನ್ನ ತೋರಿತು**=ತಂದೆಯಾದ ನಿನ್ನ ಮೋಹದ ನೋಟದಿಂದಾಗಿ ನಿನ್ನ ಮಗನನ್ನು ಮಹಾಬಲನೆಂದೇ ನೀನು ತಿಳಿದಿರುವೆ. ವಾಸ್ತವದ ಅರಿವಿಗಿಂತ ಮೋಹವೇ ಮೊದಲಾಗಿದೆ; ಸಂಸಾರಕ= ಹೆಂಡತಿ ಮಕ್ಕಳು ನೆಂಟರಿಂದ ಕೂಡಿದ ಪರಿವಾರ; ಭ್ರಮೆ=ಇಲ್ಲದ್ದನ್ನು

ಇದೆಯೆಂದು... ಇರುವುದನ್ನು ಇಲ್ಲವೆಂದು ನಂಬುವುದು; ಹೊಲ್ಲೆಹ=ತಪ್ಪು/ದೋಶ/ಅಪರಾದ;

**ಸಂಸಾರಕ ಭ್ರಮೆಗೆ ಹೊಲ್ಲೆಹವೆ**=ಮಡದಿ ಮಕ್ಕಳ ಮೇಲಣ ವ್ಯಾಮೋಹದಿಂದ ಇಂತಹ ತಪ್ಪು ಭಾವನೆಗಳು ವ್ಯಕ್ತಿಗಳಲ್ಲಿ ಮೂಡುತ್ತವೆ; **ಆ ಬೃಹನ್ನಳೆ ಗೆಲಿದವನು**=ಇಂದಿನ ಕಾಳೆಗದಲ್ಲಿ ಗೆದ್ದವನು ಬೃಹನ್ನಳೆ; ತನೂಭವ=ಮಗ; ಗುರುತನೂಭವ=ಗುರು ದ್ರೋಣರ ಮಗ ಅಶ್ವತ್ಥಾಮ; **ಇನ್ನು ಭೀಷ್ಮನು ಕರ್ಣ ಕೃಪ ಗುರು ಗುರುತನೂಭವರು ನಿನ್ನ ಮಗಗೆ ಅಳುಕವರೆ ಎನಲು**=ಇನ್ನು ಆ ಭೀಷ್ಮ, ಕರ್ಣ, ಕೃಪ, ಗುರುದ್ರೋಣ, ಅಶ್ವತ್ಥಾಮ ಮೊದಲಾದ ವೀರರು ನಿನ್ನ ಮಗನಿಗೆ ಹೆದರುತ್ತಾರೆಯೇ ಎಂದು ಕಂಕ ಭಟ್ಟನು ನುಡಿಯಲು;

ಬಿಗುಹು+ಏರಿ; ಬಿಗುಹು=ಬಿರುಸುತನ; ಏರಿ=ಹೆಚ್ಚಾಗಿ; **ಖತಿ ಬಿಗುಹೇರಿ**=ಕೋಪದ ತೀವ್ರತೆಯಿಂದ ಮಯ್ಯೆಲ್ಲ ಉರಿಯುತ್ತ; ಹಲು=ಹಲ್ಲು; ಹಲುದಿನು=ತೀವ್ರವಾದ ಕೋಪಬಂದಾಗ ಎರಡು ದವಡೆಯ ಹಲ್ಲುಗಳನ್ನು ಕಡಿಯುವುದು;

**ಹಲು ಹಲುದಿನುತೆ**=ಕೋಪೋದ್ರೇಕದಿಂದ ವಿರಾಟರಾಯನು ದವಡೆಯ ಹಲ್ಲುಗಳನ್ನು ಕರಕರನೆ ಕಡಿಯುತ್ತ; ಕಂಗಳು=ಕಣ್ಣುಗಳು; ಉರಿ=ಬೆಂಕಿ; **ಕಂಗಳಲಿ ಉರಿಯನು ಉಗುಳುತ**=ಕಣ್ಣುಗಳಲ್ಲಿ ಬೆಂಕಿಯನ್ನು ಕಾರುತ್ತ. ಅಂದರೆ ಕೋಪದ ತೀವ್ರತೆಯಿಂದಾಗಿ ವಿರಾಟರಾಯನ ಕಣ್ಣುಗಳು ಕೆಂಪಾಗಿ; ಔಡು+ಒತ್ತಿ; ಔಡು=ಕೆಳತುಟಿ; ಒತ್ತು=ಅದುಮು/ಅಮುಕು;ಬಿಗಿದು=ಕೂಡು/ಸೇರಿಸು; ಕನಲು=ಸಿಟ್ಟಿಗೇಳು/ಕೋಪಗೊಳ್ಳು; **ಔಡೊತ್ತಿ ಬಿಗಿದು ಕನಲಿ**=ತುಟಿಕಚ್ಚಿ ಬಿಗಿಹಿಡಿದು ಸಿಟ್ಟಿಗೆದ್ದು; ಕನಕ=ಚಿನ್ನ; ಸಾರಿ=ಪಗಡೆಕಾಯಿ/ಪಗಡೆಯಾಟದಲ್ಲಿ ಬಳಸುವ ದಾಳ; ನೆಗಹು=ಎತ್ತಿಕೊಳ್ಳು; ಜನಪತಿ=ರಾಜ/ಧರ್ಮರಾಯ; ಒಡೆಯಲ್+ಇಡೆ; ಒಡೆ=ಸೀಳು/ಬಿರಿ; ಇಡು=ಎಸೆ; **ಕನಕದ ಸಾರಿಯನು ನೆಗಹಿ ಜನಪತಿಯ ಹಣೆ ಒಡೆಯಲಿಡೆ**=ಪಗಡೆಯಾಟದ ಚಿನ್ನದ ದಾಳವೊಂದನ್ನು ಎತ್ತಿಕೊಂಡು ಕಂಕ ಭಟ್ಟನ ಹಣೆ ಒಡೆಯುವಂತೆ ಎಸೆಯಲು; ಭೋಂಕನೆ=ತಟ್ಟನೆ/ಕೂಡಲೇ; ಜಾಜು=ಕೆಂಪು ಬಣ್ಣದ ಶಿಲೆ; ಗಿರಿ=ಬೆಟ್ಟ; ಜಾಜಿನ ಗಿರಿ=ಕೆಂಪುಕಲ್ಲುಗಳಿಂದ ಕೂಡಿರುವ ಬೆಟ್ಟ; ನಿರ್ಜರ=ಜಲಪಾತ; ವೊಲು=ಅಂತೆ; ಶಿರ=ತಲೆ; ಸೆಲೆ+ಒಡೆದು; ಸೆಲೆ=ನರ/ರಕ್ತ ನಾಳ; ಒಡೆ=ಸೀಳು/ಬಿರಿ; ರುಧಿರ=ರಕ್ತ/ನೆತ್ತರು; ಧಾರೆ=ಪ್ರವಾಹ/ಒಂದೇ ಸಮನೆ ಸುರಿಯುವುದು; ಸಿಡಿ=ಚಿಮ್ಮು/ಎಲ್ಲ ಕಡೆಗೂ ಹಾರು;

**ಭೋಂಕೆನಲು ಜಾಜಿನ ಗಿರಿಯ ನಿರ್ಜರದವೊಲು ಶಿರದ ಸೆಲೆಯೊಡೆದು ರುಧಿರದ ಧಾರೆ ಸಿಡಿದುದು**=ವಿರಾಟರಾಯನು ಕೋಪೋದ್ರೇಕದಿಂದ ಎಸೆದ ದಾಳವು

ಬಂದು ಕಂಕ ಭಟ್ಟನ ಹಣೆಗೆ ಬಡಿಯುತ್ತಿದ್ದಂತೆಯೇ ತಟ್ಟನೆ ಕೆಂಪನೆಯ ಶಿಲೆಯಿಂದ ಕೂಡಿದ ಬೆಟ್ಟದಿಂದ ದುಮ್ಮಿಕ್ಕುವ ಕೆಂಬಣ್ಣದ ಜಲಪಾತದಂತೆ ಕಂಕ ಭಟ್ಟನ ತಲೆಯ ನರಸೀಳಿ ನೆತ್ತರು ಚಿಮ್ಮಿ ಹರಿಯತೊಡಗಿತು; **ಅತಿಧೀರನು ಕೈಯೊಡ್ಡಿ ರಕುತದ ಧಾರೆಯನು ಕೈತುಂಬ ಹಿಡಿದು ಸೈರಿಸುತ**=ಮಹಾವೀರನಾದ ಕಂಕ ಭಟ್ಟನು ಚಿಮ್ಮಿ ತೊಟ್ಟಿಕ್ಕತೊಡಗಿದ ರಕ್ತದ ಕೋಡಿಗೆ ತನ್ನ ಕಯ್ಯನ್ನು ಒಡ್ಡಿ, ರಕ್ತವನ್ನು ನೆಲಕ್ಕೆ ಬೀಳದಂತೆ ತಡೆಹಿಡಿದುಕೊಂಡು, ಉಂಟಾದ ನೋವು ಮತ್ತು ಅಪಮಾನವನ್ನು ಸಹಿಸಿಕೊಂಡು;

**ಓರೆಯ ನೋಟದಲಿ ಸೈರಂಧ್ರಿಯನು ಕರೆಯೆ**=ಕಡೆಗಣ್ಣಿನ ನೋಟದಿಂದ ಸೂಚ್ಯವಾಗಿ ಸೈರಂಧ್ರಿಯನ್ನು ತನ್ನತ್ತ ಕರೆಯಲು; **ನಾರಿ ಹರಿತಂದು**=ಸೈರಂಧ್ರಿಯು ಓಡೋಡಿ ಬಂದು; ಕಾರುಣಿಕ=ಕರುಣೆಯುಳ್ಳವನು; ಅಕಟ, **ಕಾರುಣಿಕ ಸನ್ಯಾಸಿ ನೊಂದನು ಎನುತ ವಿಕಾರಿಸದೆ**=ಅಯ್ಯೋ... ಕರುಣಾಮಯಿಯಾದ ಸನ್ಯಾಸಿಯು ನೊಂದನು ಎನ್ನುತ್ತ; ವಿಕಾರಿಸಿದೆ=ತಡಮಾಡದೆ; ಶೋಣಿತ=ನೆತ್ತರು; ತೋದು=ನೆನೆಯಿಸು/ಒದ್ದೆಮಾಡು; **ವಿಕಾರಿಸದೆ ಬಹಳ ಶೋಣಿತವ ಸೆರಗಿನಲಿ ತೋದಳು**=ತಡಮಾಡದೆ ಕಂಕಭಟ್ಟನ ಹಣೆಯಿಂದ ಸುರಿಯುತ್ತಿದ್ದ ರಕ್ತವನ್ನು ಕೆಳಕ್ಕೆ ಬೀಳದಂತೆ ತನ್ನ ಸೀರೆಯ ಸೆರಗಿನಿಂದ ಒತ್ತಿಹಿಡಿದಳು; ಮಡದಿ=ದ್ರೌಪದಿ; ಕರ=ಹಸ್ತ; ಪಲ್ಲವ=ಚಿಗುರು; ಕರಪಲ್ಲವ=ಕೋಮಲವಾದ ಕಯ್; **ಮಡದಿ ಕರಪಲ್ಲವದಲಿ ಒರೆಸಿದಳು**=ಕಂಕ ಭಟ್ಟನ ಹಣೆಯ ಮೇಲಿನ ನೆತ್ತರ ಬಿಂದುಗಳನ್ನು ತನ್ನ ಕೋಮಲವಾದ ಹಸ್ತದಿಂದ ಒರೆಸಿದಳು; ಅಡಿಗಡಿಗೆ=ಪದೇಪದೇ/ಮತ್ತೆ ಮತ್ತೆ; ಕಪೋಲ=ಕೆನ್ನೆ/ಗಲ್ಲ; ತೊಡೆ=ಸವರು;

**ಅಡಿಗಡಿಗೆ ಹಣೆಯನು ಕಪೋಲವ ತೊಡೆದು ಮುಖವನು ತೊಳೆದಳು**= ಮತ್ತೆ ಮತ್ತೆ ಕಂಕ ಭಟ್ಟನ ಹಣೆಯನ್ನು ಮತ್ತು ಕೆನ್ನೆಯನ್ನು ಸವರುತ್ತ... ನೆತ್ತರ ಹನಿಯನ್ನು ಒರೆಸುತ್ತ, ನೆತ್ತರ ಕಲೆಗಳು ಕಾಣದಂತೆ ಅವನ ಮೊಗವನ್ನು ಶುಚಿಮಾಡಿದಳು; **ಅದನು ಅವ ಕಂಡು ಬೆರಗಾಗಿ**=ಸೈರಂಧ್ರಿಯು ಕಂಕ ಭಟ್ಟನಿಗೆ ಮಾಡುತ್ತಿರುವ ಉಪಚಾರವನ್ನು ಕಂಡ ವಿರಾಟರಾಯನು ಅಚ್ಚರಿಗೊಂಡು; ಕಾಮಿನಿ=ಹೆಂಗಸು; **ಏಕೆ ಕಾಮಿನಿ, ರಕುತವನು ಹಿಡಿದೆ**=ಏಕೆ ಸೈರಂಧ್ರಿ, ಕಂಕಭಟ್ಟನ ಹಣೆಯಿಂದ ಸುರಿಯುತ್ತಿದ್ದ ನೆತ್ತರನ್ನು ಕೆಳಕ್ಕೆ ಬೀಳದಂತೆ ಹಿಡಿದುಕೊಂಡೆ; ನಿಧಾನ=ನಿಶ್ಚಯ/ನಿಜ/ಸತ್ಯ; **ನಿಧಾನವನು ನುಡಿ**=ಈ ರೀತಿ ನೀನು ಮಾಡಲು ಕಾರಣವೇನೆಂಬುದನ್ನು ಹೇಳು; ಮಿಡುಕಲು+ಏತಕೆ; ಮಿಡುಕು=ಕನಿಕರ/ಅನುಕಂಪ; ಬೆಸಗೊಳ್=ವಿಚಾರಿಸು/ಪ್ರಶ್ನಿಸು; **ಇವರು ನೊಂದರೆ ಮಿಡುಕಲೇತಕೆ ನೀನು ಎನುತ ದುರುಪದಿಯ ಬೆಸಗೊಂಡ**=ಕಂಕ ಭಟ್ಟನು ನೊಂದರೆ ನೀನು

ಕನಿಕರಗೊಂಡು ಉಪಚರಿಸುತ್ತಿರುವೆಲ್ಲಾ… ಏನು ಕಾರಣ ಎಂದು ಸೈರಂಧ್ರಿಯನ್ನು ವಿರಾಟರಾಯನು ಪ್ರಶ್ನಿಸಿದ;

**ಅರಸ ಕೇಳು, ಬದುಕಿದೆ**=ಅರಸನೇ ಕೇಳು…ದೊಡ್ಡ ಆಪತ್ತಿನಿಂದ ನೀನು ಪಾರಾಗಿ ಉಳಿದುಕೊಂಡಿರುವೆ; ನೆತ್ತರು=ರಕ್ತ; ಧರೆ=ಭೂಮಿ/ನೆಲ; ಒಕ್ಕು=ಹರಿ/ಪ್ರವಹಿಸು; ಕಣೆಯ=ಸಲ/ಸರತಿ; ಒರೆಸು=ಅಳಿಸು/ನಾಶಮಾಡು; ಕಳೆ=ತೆಗೆದುಹಾಕು;

**ಈ ಮುನಿಯ ನೆತ್ತರು ಧರೆಯೊಳು ಒಕ್ಕೊಡೆ ಒಂದು ಕಣೆಯಕೆ ಆ ಪ್ರದೇಶವನು ಒರೆಸಿ ಕಳೆವುದು ದಿಟ**=ಈ ಕಂಕ ಭಟ್ಟನ ನೆತ್ತರು ನೆಲದ ಮೇಲೆ ಬಿದ್ದರೆ ಒಂದೇ ಸಲಕ್ಕೆ ಆ ಪ್ರದೇಶವನ್ನೆಲ್ಲಾ ಅಳಿಸಿ ನಾಶಮಾಡುವುದು; **ನಿನ್ನ ರಾಜ್ಯದ ಸಿರಿಯು ಉರಿದು ಹೋಹುದು**=ಕಂಕ ಭಟ್ಟನ ತಲೆಯಿಂದ ಸುರಿದ ನೆತ್ತರಿನಲ್ಲಿ ಒಂದು ತೊಟ್ಟು ನೆಲವನ್ನು ಸೋಂಕಿದ್ದರೆ, ನಿನ್ನ ರಾಜ್ಯದ ಸಕಲ ಸಂಪತ್ತು ಉರಿದು ಹೋಗುತ್ತಿತ್ತು;

ಏರಿಸು=ಪಡೆ/ಹೊಂದು; ಬಿರುದು=ಸವಾಲು; **ಬೃಹನ್ನಳೆಗೆ ಏರಿಸಿದ ಬಿರುದು**=ಇದು ಬೃಹನ್ನಳೆಯು ಮಾಡಿರುವ ಶಪಥ; ಯತಿ=ಯೋಗಿ; **ಕೈಯಲಿ ತುಂಬಿ ಶೋಣಿತವ ಪರಮ ಯತಿ ಕಾಯಿದನು**=ಉತ್ತಮ ಯತಿಯಾದ ಕಂಕ ಭಟ್ಟನು ತನ್ನ ತಲೆಯಿಂದ ಸುರಿಯುತ್ತಿದ್ದ ರಕ್ತವನ್ನು ಕಯ್ಯಲ್ಲಿ ತುಂಬಿಕೊಂಡು ನಿನ್ನನ್ನು ಮತ್ತು ನಿನ್ನ ಸಕಲ ರಾಜ್ಯವನ್ನು ಕಾಪಾಡಿದನು;

ನಾಟ್ಯ ವ್ಯಾಕರಣ ಪಂಡಿತ=ಕುಣಿತ ಮತ್ತು ಅಭಿನಯ ಕಲೆಯಲ್ಲಿ ಪಾರಂಗತನಾದ ವ್ಯಕ್ತಿ; **ಈಕೆ ಯಾರು. ಇವರಾರು. ನಾಟ್ಯ ವ್ಯಾಕರಣ ಪಂಡಿತ ಬೃಹನ್ನಳೆಯು ಈಕೆಗೆ ಏನ್ ಅಹನು**=ನಮ್ಮ ರಾಣಿವಾಸದಲ್ಲಿರುವ ಈ ಸೈರಂಧ್ರಿ ಯಾರು… ಈ ಕಂಕಭಟ್ಟ… ಈ ಬೃಹನ್ನಳೆ ಯಾರು… ನಾಟ್ಯಕಲೆಯಲ್ಲಿ ಪರಿಣತನಾದ ಬೃಹನ್ನಳೆಯು ಈ ಸೈರಂಧ್ರಿಗೆ ಏನಾಗಬೇಕು; **ಕಾಳು ಕೀಲುಗಳ ಅರಿಯಬಾರದು**=ಈ ನುಡಿಗಳು ಒಂದು ನುಡಿಗಟ್ಟಿನ ತಿರುಳಿನಲ್ಲಿ ಬಳಕೆ ಗೊಂಡಿವೆ. ಯಾವುದೇ ಒಂದು ಸಂಗತಿಯ ಮೂಲವನ್ನಾಗಲಿ ಇಲ್ಲವೇ ಕಾರ್ಯಕಾರಣದ ಸಂಬಂಧವನ್ನಾಗಲಿ ಅರಿತುಕೊಳ್ಳಲು ಆಗದಿರುವುದು; ಅಂದರೆ ತುಂಬಾ ಜಟಿಲವಾದ ಸಂಗತಿ; ಅರಿತ=ತಿಳುವಳಿಕೆ; ಅವಿವೇಕಿ=ವಿವೇಕವಿಲ್ಲದವನು; ಇರೆ=ಇರಲು; **ನನಗೆ ಏಕೆ ಅದರ ಅರಿತ ಎಂದು ಅವಿವೇಕಿಯಿರೆ**=ನನಗೇಕೆ ಬೇಕು ಅದರ ವಿವರ ಎಂದುಕೊಂಡು ವಿರಾಟರಾಯನು ಕಂಕಭಟ್ಟ, ಬೃಹನ್ನಳೆ ಮತ್ತು ಸೈರಂಧ್ರಿಯ ನಂಟಿನ ಬಗ್ಗೆ ಹೆಚ್ಚು ಚಿಂತಿಸದೆ ಸುಮ್ಮನಾದನು;

# ನೋಟ–೮

ನೆರವಿ=ಗುಂಪು; ನೂಕುನಾಕಾಯಿತು=ನಿಲ್ಲಲು ಜಾಗವಿಲ್ಲದೆ ಒಬ್ಬರ ಮೇಲೆ ಮತ್ತೊಬ್ಬರು ಬೀಳುವಂತಾಗುವುದು;

**ಇತ್ತ ಪುರದಲಿ ಉತ್ತರನ ನೋಡುವ ನೆರವಿಯು ನೂಕು ನೂಕಾಯಿತ್ತು**=ಇತ್ತ ವಿರಾಟನಗರಿಯಲ್ಲಿ ಉತ್ತರಕುಮಾರನು ದುರ್ಯೋಧನನ ಸೇನೆಯ ಮೇಲೆ ಜಯವನ್ನು ಪಡೆದ ಸುದ್ದಿಯು ಹಬ್ಬುತ್ತಿದ್ದಂತೆಯೇ, ಅವನನ್ನು ನೋಡಲು ಪುರಜನರು ಗುಂಪು ಗುಂಪಾಗಿ ಬರತೊಡಗಲು ಅರಮನೆಯ ಬಳಿ ಜನಸಂದಣಿಯು ನೂಕುನೂಕಾಯಿತು; **ಮಂತ್ರಿಗಳು ಇದಿರು ಬಂದರು**= ಮಂತ್ರಿಗಳು ಉತ್ತರಕುಮಾರನನ್ನು ಸ್ವಾಗತಿಸಲು ಬಂದರು; ಉದಿತ=ಹುಟ್ಟಿದ/ ಹೊರಹೊಮ್ಮುತ್ತಿರುವ; ಘೋಷ=ಕೂಗಿ ಹೇಳುವಿಕೆ/ದೊಡ್ಡ ದನಿಯಲ್ಲಿ ಸಾರುವಿಕೆ; ವಿತಾನ=ಗುಂಪು; ರಭಸ=ಜೋರು/ಅಬ್ಬರ/ಬೊಬ್ಬೆ;

**ಉದಿತ ಮಂಗಳ ಘೋಷ ವಾದ್ಯ ವಿತಾನ ರಭಸದಲಿ**=ಮಂಗಳವಾದ್ಯಗಳಿಂದ ಹೊರಹೊಮ್ಮುತ್ತಿರುವ ದನಿಯು ಜೋರಾಗಿ ಕೇಳಿಬರುತ್ತಿರಲು; ವರ=ಉತ್ತಮ; ಸುದತಿ=ಸುಂದರವಾದ ಹಲ್ಲುಗಳನ್ನುಳ್ಳವಳು/ಹೆಂಗಸು; ಸೇಸೆ=ಅರಿಸಿನ/ ಕುಂಕುಮ/ಗಂಧದ ಹಸಿ ಬೆರೆತ ಅಕ್ಕಿಯ ಕಾಳುಗಳು; ಸೂಸು=ಎಸೆ/ಚೆಲ್ಲು; **ವರ ಸುದತಿಯರು ಸೇಸೆಯನು ಸೂಸಿದರು**=ಸುಂದರಿಯರು ಅಕ್ಷತೆಯ ಕಾಳುಗಳನ್ನು ಉತ್ತರಕುಮಾರನ ಮಯ್ ಮೇಲೆ ಎಸೆದರು; ಕೋವಿದ=ಪಂಡಿತ/ಜ್ಞಾನಿ/ ವಿದ್ವಾಂಸ; ಗುಜುಗುಜು=ಪಿಸುಮಾತು; **ವರಕೋವಿದರು ಕೂಡೆ ತಮ್ಮೊಳಗೆ ಗುಜುಗುಜಿಸಿ ಆಡುತಿರ್ದರು**=ಪುರಜನರ ಗುಂಪಿನಲ್ಲಿದ್ದ ಕೆಲವು ಪಂಡಿತರು ತಮ್ಮ ತಮ್ಮಲ್ಲಿಯೇ ಮೆಲ್ಲನೆಯ ದನಿಯಲ್ಲಿ ಪರಸ್ಪರ ಮಾತನಾಡಿಕೊಳ್ಳತೊಡಗಿದರು; ವದನ+ಇದೆ; ವದನ=ಮೊಗ/ಮುಕ; ಕಳೆ+ಕುಂದಿ; ಕಳೆ=ಕಾಂತಿ/ತೇಜಸ್ಸು; ಕುಂದು=ಕುಗ್ಗು; ಅಭ್ಯುದಯ=ಏಳಿಗೆ/ಶ್ರೇಯಸ್ಸು; ತಾನ್+ಎಂತು; ಎಂತು=ಹೇಗೆ;

**ವದನವಿದೆ ಕಳೆಗುಂದಿ...ಜಯದ ಅಭ್ಯುದಯ ತಾನೆಂತು**=ಉತ್ತರಕುಮಾರನ ಮೊಗದಲ್ಲಿ ತುಸುವಾದರೂ ಗೆಲುವಿಲ್ಲ. ಸಪ್ಪಗಿದ್ದಾನೆ. ಹಾಗಾದರೆ ಈತನಿಗೆ ಜಯದ ಶ್ರೇಯಸ್ಸಾದರೂ ಹೇಗೆ ಬಂದಿತು; ಕಾಳೆಗದಲ್ಲಿ ಈತ ಜಯಶಾಲಿಯಾಗಿದ್ದರೆ ಈತನ ಮೊಗದಲ್ಲಿ ತೇಜಸ್ಸು ಕಂಗೊಳಿಸಬೇಕಾಗಿತ್ತು ಎಂಬುದು ಅವರ ಲೆಕ್ಕಾಚಾರ; ಎಂದಿನವನು=ಮೊದಲಿನಂತೆಯೇ ಇದ್ದಾನೆ. ಯಾವೊಂದು ಬದಲಾವಣೆ ಕಾಣುತ್ತಿಲ್ಲ;

**ಉತ್ತರನು ಎಂದಿನವನು**=ಉತ್ತರಕುಮಾರನ ಹಾವಭಾವಗಳಲ್ಲಿ ಯಾವ ಬದಲಾವಣೆಯೂ ಕಂಡುಬರುತ್ತಿಲ್ಲ; **ಗಂಗಾನಂದನ**=ಗಂಗಾದೇವಿಯ ಮಗನಾದ ಭೀಷ್ಮ; ಹೂಹೆ=ಮಗು/ಹಸುಳೆ; **ಈ ಹೂಹೆ ಗೆಲಿದನು**=ಈ ನುಡಿಗಳು ವ್ಯಂಗ್ಯದ ನುಡಿಯಾಗಿ ಬಳಕೆಗೊಂಡಿವೆ. ಭೀಷ್ಮನ ಪರಾಕ್ರಮದ ಮುಂದೆ ಉತ್ತರಕುಮಾರನ ಪರಾಕ್ರಮ ಏನೇನು ಅಲ್ಲ. ಭೀಷ್ಮನ ಮುಂದೆ ಉತ್ತರಕುಮಾರನು ಒಂದು ಹಸುಳೆಯಿದ್ದಂತೆ ಎಂಬ ತಿರುಳನ್ನು ಈ ನುಡಿಗಳು ಸೂಚಿಸುತ್ತಿವೆ;

ಸಂದ=ಹೆಸರಾಂತ; ಸುಭಟ=ಒಳ್ಳೆಯ ಕಾದಾಳು; **ಗಂಗಾನಂದನನು ಈ ಹೂಹೆ ಗೆಲಿದನು. ಸಂದ ಸುಭಟ ದ್ರೋಣ ಕರ್ಣಾದಿಗಳನು ಓಡಿಸಿದ**=ಕಾಳೆಗದ ಕಣದಲ್ಲಿ ಗಾಂಗೇಯರನ್ನು ಈ ಹಸುಳೆ ಗೆದ್ದನು. ಹೆಸರಾಂತ ಕಾದಾಳುಗಳಾದ ದ್ರೋಣ ಕರ್ಣ ಮುಂತಾದ ಕಲಿಗಳನ್ನು ಓಡಿಸಿದನು ಎಂಬ ಸುದ್ದಿ ನಿಜವೇ, ನಂಬುವುದಕ್ಕೆ ಆಗುತ್ತಿಲ್ಲ. ಏಕೆಂದರೆ ಉತ್ತರಕುಮಾರನ ತೋಳ್ಬಲದ ಪರಾಕ್ರಮ ಎಂತಹುದೆಂಬುದು ನಮಗೆ ಚಿಕ್ಕಂದಿನಿಂದಲೂ ಗೊತ್ತಿದೆ ಎಂದು ಕೆಲವರು ಉತ್ತರಕುಮಾರನ ಗೆಲುವಿನ ವಾರ್ತೆಯನ್ನೇ ಅನುಮಾನಿಸಿದರು;

ಅಂದ=ರೀತಿ; **ಇವ ಗೆಲಿದ ಅಂದವಾಗಿರದು**=ಉತ್ಸಾಹವಿಲ್ಲದೆ ಕಳೆಗುಂದಿರುವ ಉತ್ತರಕುಮಾರನನ್ನು ಗಮನಿಸಿದರೆ, ಕಾಳೆಗದಲ್ಲಿ ಗೆದ್ದವನಂತೆ ಇವನು ಕಾಣಿಸುತ್ತಿಲ್ಲ; ಸಂಭಾವಿಸು=ಉಂಟಾಗು; **ಈ ಬೃಹನ್ನಳೆಯಿಂದ ಸಂಭಾವಿಸುವುದು ಎಂದುದು ಮಂದಿ ತಮತಮಗೆ**= "ಇವನ ಸಾರಥಿಯಾಗಿ ಕಾಳೆಗಕ್ಕೆ ಹೋಗಿದ್ದ ಬೃಹನ್ನಳೆಯಿಂದ ಜಯ ದೊರೆತಿರಬೇಕು..." ಎಂದು ಕೋವಿದರು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡರು;

ಜಾಲ=ಗುಂಪು; ಜೀಯ=ಸ್ವಾಮಿ/ಒಡೆಯ; **ಪುರಜನ ಜಾಲ 'ಜೀಯ' ಎನಲು**=ಉತ್ತರಕುಮಾರನನ್ನು ಕಂಡ ಕೂಡಲೇ ಹೆಮ್ಮೆಯಿಂದ ಪಟ್ಟಣಿಗರ ಗುಂಪು 'ಒಡೆಯ' ಎಂದು ಆನಂದಿಂದ ಒಕ್ಕೊರಳಿನಿಂದ ಕೂಗಲು; ನಿವಾಳಿಸು=ಇದೊಂದು ಆಚರಣೆ. ಯಾವುದೇ ಒಂದು ಕೆಲಸದಲ್ಲಿ ಯಶಸ್ಸನ್ನು ಪಡೆದಿರುವ ವ್ಯಕ್ತಿಗೆ ಜನರ ಕೆಟ್ಟಕಣ್ಣು ಬಿದ್ದರೆ ಕೇಡಾಗುತ್ತದೆ. ಆದ್ದರಿಂದ ಜನರ

ಕೆಟ್ಟಕಣ್ಣಿನ ದಿಟ್ಟಿಯಿಂದಾಗುವ ಕೇಡನ್ನು ತಡೆಗಟ್ಟಲೆಂದು ಮಾಡುವ ಆಚರಣೆ.ಇದನ್ನು 'ಇಳಿ ತೆಗೆಯುವುದು' ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಈ ಆಚರಣೆಯಲ್ಲಿ ಅರಿಸಿನ ಕುಂಕುಮ ಕಲೆಸಿದ ನೀರಿನ ತಟ್ಟೆಯಿಂದ ಆರತಿಯನ್ನೆತ್ತಿ, ಅನಂತರ ಆ ನೀರನ್ನು ಹೊರಚೆಲ್ಲುತ್ತಾರೆ. ಇನ್ನು ಅನೇಕ ಬಗೆಯ ಆಚರಣೆಗಳ ಮೂಲಕ ಕೆಟ್ಟಕಣ್ಣಿನ ಕೇಡನ್ನು ಹೋಗಲಾಡಿಸುತ್ತಾರೆ; ನಿವಾಳಿಗಳು=ಕೆಟ್ಟಕಣ್ಣಿನ ಕೇಡನ್ನು ತೆಗೆಯಲು ಬಂದವರು; 'ಕೆಟ್ಟಕಣ್ಣು' ಎಂಬುದು ಒಂದು ನುಡಿಗಟ್ಟು. ಕೆಲವರ ನೋಟದಿಂದಲೇ ವಸ್ತುಗಳಿಗೆ ಮತ್ತು ವ್ಯಕ್ತಿಗಳಿಗೆ ಕೇಡು ತಟ್ಟುತ್ತದೆ ಎಂಬ ಭಾವನೆಯು ಜನಮನದಲ್ಲಿ ಬಹುಕಾಲದಿಂದಲೂ ಬೇರೂರಿದೆ. ಇದೊಂದು ನಂಬಿಕೆಯೇ ಹೊರತು ವಾಸ್ತವವಲ್ಲ;

**ಇದಿರು ಬಂದ ನಿವಾಳಿಗಳ ಉತ್ತರನು ನೂಕಿದನು**=ಉತ್ತರಕುಮಾರನು ತನಗೆ ಆರತಿಯನ್ನೆತ್ತಿ ಕೆಟ್ಟಕಣ್ಣಿನ ಕೇಡನ್ನು ನಿವಾರಿಸಲೆಂದು ಬಂದ ಹೆಂಗಸರನ್ನು ದೂರತಳ್ಳಿದನು; ಲೀಲೆ=ಆಟ/ಆಚರಣೆ; **ಲೀಲೆ ಮಿಗಿಲು ಕೈವಾರಿಗಳ ಕೋಪಿಸುತ**= ಆರತಿಯನ್ನು ಬೆಳಗಿ ಇಳಿತೆಗೆಯಲೆಂದು ತನ್ನತ್ತ ಉತ್ಸಾಹದಿಂದ ಬರುತ್ತಿರುವ ಹೆಂಗಸರನ್ನು ತಡೆಗಟ್ಟುವಂತೆ ಕೋಪದಿಂದ ನೋಡುತ್ತ; ಆಲಿ=ಕಣ್ಣು; ಅವನಿ=ನೆಲ; ಬರೆಯೆ=ಬರೆಯುತ್ತಿರಲು;

**ಆಲಿಯು ಅವನಿಯ ಬರೆಯುವುದು**=ಇದೊಂದು ರೂಪಕದ ನುಡಿಗಟ್ಟು. ವ್ಯಕ್ತಿಯು ಲಜ್ಜೆ/ಹೆದರಿಕೆ/ಹಿಂಜರಿಕೆಯ ಒಳಮಿಡಿತಗಳಿಗೆ ಒಳಗಾದ ಸನ್ನಿವೇಶದಲ್ಲಿ ಏನನ್ನೂ ಮಾಡಲು ತೋಚದೆ, ತನ್ನ ಸುತ್ತಮುತ್ತಲಿದ್ದವರನ್ನು ಕಣ್ಣೆತ್ತಿ ನೋಡಲಾಗದೆ, ತಲೆತಗ್ಗಿಸಿಕೊಂಡು ನೆಲವನ್ನೇ ನೋಡುತ್ತಿರುವುದು; **ಆಲಿಯು ಅವನಿಯ ಬರೆಯೆ**=ಉತ್ತರಕುಮಾರನು ತಲೆತಗ್ಗಿಸಿಕೊಂಡು ನೆಲವನ್ನೇ ನೋಡುತ್ತ; ಮುಸುಕು=ತುಂಬಿರು/ಆವರಿಸಿರು; ದುಗುಡ=ಚಿಂತೆ/ಕಳವಳ; ರಾಜ+ಆಲಯ; ರಾಜಾಲಯ=ಅರಮನೆ;

**ಮುಸುಕಿನ ಮೇಲು ದುಗುಡದ ಭಾರದಲಿ ರಾಜಾಲಯಕೆ ಬರಲು**=ತನ್ನ ಮಯ್ ಮನವನ್ನು ಕವಿದಿರುವ ಚಿಂತೆಯ ಹೊರೆಯಲ್ಲಿ ಕುಗ್ಗಿಹೋಗಿರುವ ಉತ್ತರಕುಮಾರನು ಅರಮನೆಗೆ ಬರಲು; **ವಿರಾಟರಾಯ ಇದಿರು ಬಂದು ನಂದನನ ಅಪ್ಪಿದನು**=ವಿರಾಟರಾಯನು ಎದುರು ಬಂದು ಉತ್ತರಕುಮಾರನನ್ನು ಅಪ್ಪಿಕೊಂಡನು; ವಸುಕುಲ=ವಸುವಂಶ; ನೃಪ=ರಾಜ; ಚಿಂತಾಮಣಿ=ರತ್ನ; **ವಸುಕುಲದ ನೃಪ ಚಿಂತಾಮಣಿ**=ಇದೊಂದು ಬಿರುದು. ವಸುವಂಶದ ರಾಜರಲ್ಲಿ ರತ್ನದಂತೆ ಕಂಗೊಳಿಸುವವನು; ಕುರುರಾಯ=ದುರ್ಯೋಧನ; ಮೋಹರ=ಸೇನೆ; ಧೂಮಕೇತು=ಗಗನದಲ್ಲಿ ಕಾಣಿಸಿಕೊಳ್ಳುವ ಒಂದು ಬಗೆಯ ಆಕಾಶಕಾಯ. ಇದು ಗೋಚರಿಸಿದರೆ ರಾಜನಿಗೆ ಇಲ್ಲವೇ ನಾಡಿಗೆ ಕೇಡು ತಟ್ಟುತ್ತದೆ ಎಂಬ ನಂಬಿಕೆ

ಜನಮನದಲ್ಲಿದೆ; ಕುರುರಾಯ ಮೋಹರ ಧೂಮಕೇತು=ಇದೊಂದು ಬಿರುದು; ಕುರುರಾಯನ ಸೇನೆಯ ಪತನಕ್ಕೆ ಕಾರಣನಾದ ಮಹಾಪರಾಕ್ರಮಿ;

**ಬಾ ಮಗನೆ, ವಸುಕುಲದ ನೃಪ ಚಿಂತಾಮಣಿಯೆ…ಕುರುರಾಯ ಮೋಹರ ಧೂಮಕೇತುವೆ…ಕಂದ ಬಾ. ಎಂದು ಅಪ್ಪಿ ಕುಳ್ಳಿರಿಸೆ**=ಬಾ ಮಗನೆ, ವಸುಕುಲದ ರಾಜರ ಚಿಂತಾಮಣಿಯೇ…ಕುರುರಾಯನ ಸೇನೆಯ ಧೂಮಕೇತುವೆ…ಕಂದ ಬಾ ಎನ್ನುತ್ತ, ಮಗನನ್ನು ಅಪ್ಪಿಕೊಂಡು, ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು;

ಕಾಮಿನಿ=ಹೆಂಗಸು; ಉಪ್ಪಾರತಿ=ಕೆಟ್ಟಕಣ್ಣಿನ ಕೇಡಿನ ಪರಿಹಾರಕ್ಕಾಗಿ ಎತ್ತುವ ಉಪ್ಪಿನ ಆರತಿ/ಉಪ್ಪನ್ನು ನಿವಾಳಿಸಿ ದೃಷ್ಟಿಯನ್ನು ತೆಗೆಯುವುದು; **ಕಾಮಿನಿಯರ ಉಪ್ಪಾರತಿಗಳ**=ಕಾಮಿನಿಯರು ಉಪ್ಪಾರತಿಗಳನ್ನು ಎತ್ತಿದರು; ಅಭಿರಾಮ= ಸುಂದರವಾದ/ಮನೋಹರವಾದ; **ಅಭಿರಾಮ ವಸ್ತ್ರ ನಿವಾಳಿ**=ಸುಂದರವಾದ ಬಟ್ಟೆಗಳಿಂದ ಇಳಿತೆಗೆದರು; ಸ್ತೋಮ=ಗುಂಪು; ಸೊಡರು=ದೀಪ; ಒಗ್ಗು=ಒಟ್ಟುಗೂಡು; ಸುಳಿ=ಕಾಣಿಸಿಕೊಳ್ಳು/ಗೋಚರವಾಗು; **ರತ್ನಸ್ತೋಮ ಬಣ್ಣದ ಸೊಡರು ಹರುಷದ ಒಗ್ಗಿನಲಿ ಸುಳಿದವು**=ನವರತ್ನಗಳ ಕಾಂತಿಯಿಂದ ಮತ್ತು ಬಣ್ಣಬಣ್ಣದ ದೀಪಗಳಿಂದ ಒಟ್ಟುಕೂಡಿ ಆನಂದದಿಂದ ಮೆರೆಯುತ್ತಿರುವ ರಾಣಿವಾಸದವರಿಂದ ಉತ್ತರಕುಮಾರನನ್ನು ಅರಮನೆಗೆ ಸ್ವಾಗತಿಸಲಾಯಿತು; ಬೊಪ್ಪ=ತಂದೆ/ಅಪ್ಪ;ಬಯಲು=ಉಪಯುಕ್ತವಲ್ಲದ/ಪ್ರಯೋಜವಿಲ್ಲದ; ಡೊಂಬು=ಸೋಗು/ಬೂಟಾಟಿಕೆ; **ಬಯಲ ಡೊಂಬು**=ಇದೊಂದು ನುಡಿಗಟ್ಟು. ಮೇಲು ನೋಟಕ್ಕೆ ದೊಡ್ಡದಾಗಿ ಕಾಣಿಸುತ್ತಿದ್ದರೂ ಒಳಗಡೆ ಟೊಳ್ಳಾಗಿರುವುದು;

**ಬೊಪ್ಪ ಸಾಕು, ಈ ಬಯಲ ಡೊಂಬು ಎನಗೆ ಒಪ್ಪುವುದೆ**=ಅಪ್ಪ ಸಾಕು ನಿಲ್ಲಿಸಿ. ಈ ರೀತಿ ಸಡಗರ ಉತ್ಸಾಹ ಆಡಂಬರಗಳಿಂದ ನೀವು ಮಾಡುತ್ತಿರುವ ಸ್ವಾಗತದ ಉತ್ಸವವು ಮೇಲು ನೋಟಕ್ಕೆ ನಿಮ್ಮೆಲ್ಲರಿಗೂ ಚೆನ್ನಾಗಿ ಕಂಡರೂ ನನಗೆ ಇದು ಬೂಟಾಟಿಕೆಯ ಉತ್ಸವವಾಗಿದೆ. ಇಂತಹ ಸ್ವಾಗತವು ನನಗೆ ಒಪ್ಪುವುದೆ. ಅಂದರೆ ಇಂತಹ ಸ್ವಾಗತಕ್ಕೆ ನಾನು ಯೋಗ್ಯನಲ್ಲ; ವೀರ+ಉಪಚಾರವು; ಉಪಚಾರ=ಸತ್ಕಾರ; ಒಪ್ಪು=ಯೋಗ್ಯವಾದುದು/ಹಿರಿಮೆ/ಅಗ್ಗಳಿಕೆ;

**ವೀರೋಪಚಾರವು ಇದು ಒಪ್ಪುವರಿಗೆ ಒಪ್ಪುವುದು. ತೆಗೆಸು ಎನಲು**=ಇಂತಹ ವೀರೋಪಚಾರವು ಯೋಗ್ಯರಾದವರಿಗೆ ಒಪ್ಪುತ್ತದೆ. ಹಿರಿಮೆಯುಳ್ಳ ವೀರರಿಗೆ ಮಾಡಿದಾಗ ಇಂತಹ ಸತ್ಕಾರಕ್ಕೆ ಬೆಲೆಬರುತ್ತದೆ ಎಂದು ಉತ್ತರಕುಮಾರನು ನುಡಿಯಲು; **ಅರಸ ನಸುನಗುತ**=ವಿರಾಟರಾಯನು ಮುಗುಳು ನಗುತ್ತ; ದರ್ಪ+ ಉಳ್ಳಂಗೆ; ದರ್ಪ=ಹೆಮ್ಮೆ/ಅಗ್ಗಳಿಕೆ/ಕಸುವು; ಉಳ್ಳಂಗೆ=ಇರುವವನಿಗೆ; ಈಸು=ಇಷ್ಟು/ಈ ಪ್ರಮಾಣ; ಮಂಗಳ=ಉತ್ಸವ; ಒಪ್ಪುದೇನೈ=ಶೋಭಿಸುವು

ದಿಲ್ಲವೇ; **ದರ್ಪವುಳ್ಳಂಗೆ ಈಸು ಮಂಗಳವು ಒಪ್ಪದೇನೈ**=ಅಗ್ಗಳಿಕೆಯುಳ್ಳವನಿಗೆ ವೀರೋಚಿತವಾದ ಇಷ್ಟು ದೊಡ್ಡ ಪ್ರಮಾಣದ ಸ್ವಾಗತದ ಉತ್ಸವವು ಕಂಗೊಳಿಸುವುದಿಲ್ಲವೇ; ಆವಂಗೆ=ಆವನಿಗೆ/ಯಾರಿಗೆ; ಅಪ್ಪುದು=ಒದಗು/ಉಂಟಾಗು; ನಿಗರ್ವತೆ=ವಿನಯ;

**ಜಗದೊಳು ಆವಂಗೆ ಅಪ್ಪುದು ಈ ಬಲವು ಈ ನಿಗರ್ವತೆ**=ಜಗತ್ತಿನಲ್ಲಿ ಯಾರಿಗೆ ತಾನೆ ನಿನ್ನಲ್ಲಿರುವ ಇಂತಹ ಬಲ ಮತ್ತು ವಿನಯವಿದೆ; **ಮಗನೆ, ಕರ್ಣ ದ್ರೋಣ ಭೀಷ್ಮಾದಿಗಳನು ಒಬ್ಬನೆ ಗೆಲಿದೆ**=ಇಂದಿನ ಕಾಳೆಗದಲ್ಲಿ ಕರ್ಣ, ದ್ರೋಣ, ಭೀಷ್ಮ ಮೊದಲಾದ ಮಹಾವೀರರೊಡನೆ ನೀನೊಬ್ಬನೇ ಹೋರಾಡಿ ಗೆಲುವನ್ನು ಪಡೆದಿರುವೆ; ಕಡು+ಕಲಿತನ; ಕಡು=ಹೆಚ್ಚಾಗಿ/ಬಹಳವಾಗಿ; ಕಲಿತನ=ಪರಾಕ್ರಮ; ಪೂರ್ವಪುರುಷ=ಹಿಂದಿನ ಕಾಲದಲ್ಲಿದ್ದ ವ್ಯಕ್ತಿ; **ಈ ಕಾಳಗದ ಕಡುಗಲಿತನಗಳು ಪೂರ್ವ ಪುರುಷರಲಿ ಉಂಟೇ**=ಇಂದು ನಡೆದ ಕಾಳೆಗದಲ್ಲಿ ನೀನು ತೋರಿಸಿದ ಕೆಚ್ಚು ಮತ್ತು ತೋಳ್ಬಲದ ಪರಾಕ್ರಮ ಹಿಂದಿನ ಯಾವ ವ್ಯಕ್ತಿಗಳಲ್ಲಾದರೂ ಇತ್ತೇ; ನಿನ್ನಂತಹ ಶೂರನನ್ನು ನಾವು ಕಂಡಿಲ್ಲ; ಕೇಳಿಲ್ಲ; ಎನ್ನ+ಆಣೆ; ದುಗುಡ+ಏಕೆ; **ಎನ್ನಾಣೆ ದುಗುಡವೇಕೆ**=ನನ್ನ ಮೇಲೆ ಆಣೆಯಿಟ್ಟು ಹೇಳು. ಅಂದರೆ ನಿಜವಾಗಿ ನಿನಗೆ ಏನಾಗುತ್ತಿದೆ ಎಂಬುದನ್ನು ತಿಳಿಸು. ಏತಕ್ಕೆ ಈ ರೀತಿ ಸಂಕಟಕ್ಕೆ ಗುರಿಯಾಗಿರುವೆ;

**ಹೆತ್ತರ ಮೊಗಕೆ ಹರುಷವ ತಂದೆಲಾ**=ಇಂದು ನೀನು ಹೆತ್ತ ತಂದೆತಾಯಿಯ ಮೊಗಕ್ಕೆ ಆನಂದವನ್ನು ತಂದಿರುವೆ. ನಿನ್ನ ಸಾಹಸದ ಗೆಲುವಿನಿಂದ ನಮ್ಮ ಮಯ್ ಮನ ಮುದಗೊಂಡಿದೆ; ಹಂಗಿಗ=ಇತರರ ಅದೀನಕ್ಕೆ ಒಳಗಾದವನು/ಆಶ್ರಯದಲ್ಲಿರುವವನು; ತಲೆ+ಕುತ್ತಲ್+ಏಕೆ; ಕುತ್ತು=ಬಾಗು/ಕುಸಿ/ತಗ್ಗಿಸು; ತಲೆಗುತ್ತು=ತಲೆಯನ್ನು ಬಗ್ಗಿಸು/ತಲೆಬಾಗು; **ನೀ ಹಂಗಿಗನೆ...ತಲೆಗುತ್ತಲೇಕೆ ಎಂದು ಮುಖವ ಎತ್ತಿದನು**=ನೀನು ಮತ್ತೊಬ್ಬರ ರುಣದಲ್ಲಿರುವೆಯಾ... ಈ ರೀತಿ ತಲೆತಗ್ಗಿಸಲು ಕಾರಣವೇನು ಎಂದು ಉತ್ತರಕುಮಾರನ ಬಗ್ಗಿದ ಮೊಗವನ್ನು ಮೇಲೆತ್ತಿದನು; ನಿಮ್ಮ+ಅಡಿ; ಅಡಿ=ಹತ್ತಿರ/ಸಮೀಪ/ಸನ್ನಿದಿ; ಆದರಿಸು=ಸತ್ಕರಿಸು; **ನಿಮ್ಮಡಿ ಆದರಿಸಲು**=ನಿಮ್ಮ ಸನ್ನಿಧಿಯಲ್ಲಿ ಸತ್ಕಾರವನ್ನು ಪಡೆಯಲು; ಕಾದಿ=ಹೋರಾಟವನ್ನು ಮಾಡಿ;

**ಕಾದಿ ಗೆಲಿದವ ಬೇರೆ**=ಇಂದಿನ ಕಾಳೆಗದ ಕಣದಲ್ಲಿ ಹಗೆಗಳ ಎದುರು ಹೋರಾಟವನ್ನು ಮಾಡಿ ಗೆಲುವನ್ನು ತಂದವನು ಬೇರೊಬ್ಬನಿದ್ದಾನೆ; ಈಸು+ಏಕೆ; ಈಸು=ಇಷ್ಟು; **ಸಾರಥಿಯಾದ ತನಗೆ ಈಸೇಕೆ**=ಸಾರಥಿಯಾಗಿದ್ದ ನನಗೆ ಇಷ್ಟೊಂದು ದೊಡ್ಡಮಟ್ಟದ ಸತ್ಕಾರವೇಕೆ; ಒಡೆ=ಬಿಡಿಸು; ಮುರಿಚು=ತಿರುಗಿಸು; ಒಡೆಮುರಿಚು=ಸೆರೆಯಾಗಿದ್ದುದನ್ನು ಬಿಡಿಸಿ ಕರೆತರುವುದು; **ಒಡೆಮುರಿಚ ಬಲ್ಲನೆ**=ದುರ್ಯೋಧನನ ಸೇನೆಯಿಂದ ಅಪಹರಣಗೊಂಡಿದ್ದ ದನಗಳನ್ನು ಬಿಡಿಸಿಕೊಂಡು

ಬರುವಂತಹ ಶಕ್ತಿಯಾಗಲಿ ಇಲ್ಲವೇ ಕೆಚ್ಚಾಗಲಿ ನನ್ನಲ್ಲಿದೆಯೆ: **ನಾಚಿಸದಿರಿ**= ಅಂತಹ ವೀರನೆಂದು ಹೊಗಳಿ ನನ್ನನ್ನು ನಾಚಿಸಬೇಡಿ; ವಿಕ್ರಮ=ಶೂರತನ/ ಪರಾಕ್ರಮ; **ಕಾದಿದಾತನು ನೀನು. ಸಾರಥಿಯಾದವನು ತಂಗಿಯ ಬೃಹನ್ನಳೆ. ವಾದ ಬೇಡಲೆ ಮಗನೆ. ನಿನ್ನ ವಿಕ್ರಮವ ಬಲ್ಲೆನು**=ಇಂದಿನ ಕಾಳೆಗದ ಕಣದಲ್ಲಿ ಹೋರಾಡಿದವನು ನೀನು; ಸಾರಥಿಯಾಗಿದ್ದವನು ನಿನ್ನ ತಂಗಿ ಉತ್ತರೆಯ ನಾಟ್ಯಗುರುವಾದ ಬೃಹನ್ನಳೆ ಎಂಬುದು ನನಗೆ ಚೆನ್ನಾಗಿ ತಿಳಿದಿದೆ. ಮಗನೇ, ನನ್ನೊಡನೆ ವಾದವನ್ನು ಮಾಡಬೇಡ. ನಿನ್ನ ಪರಾಕ್ರಮವನ್ನು ನಾನು ಅರಿತಿದ್ದೇನೆ;

ಅದಟು=ಪರಾಕ್ರಮ; ಎನಗೆ+ಉಂಟೆ; **ಅದಟುತನವು ಎನಗುಂಟೆ**= ಪರಾಕ್ರಮದ ಗುಣವು ನನ್ನಲ್ಲಿದೆಯೇ; ಬೆಂದುದ=ಬೆಂದು ಕರಿಕಲಾಗುತ್ತಿರು ವುದನ್ನು/ಸುಟ್ಟು ಬೂದಿಯಾಗುತ್ತಿರುವುದನ್ನು; ಬೆದಕು=ಕೆದಕು/ಕೆದರು; **ಬೆಂದುದ ಬೆದಕು**=ಇದೊಂದು ನುಡಿಗಟ್ಟು. ಉರಿದು ಬೂದಿಯಾಗುತ್ತಲಿರುವ ಕಸಕಡ್ಡಿಯ ಗುಡ್ಡೆಯನ್ನು ಕೆದಕಿದರೆ, ಮತ್ತೆ ಅಳಿದುಳಿದ ವಸ್ತುಗಳನ್ನು ಸುಡುವಂತೆ ಬೆಂಕಿಯು ಮತ್ತೆ ಹತ್ತಿ ಉರಿಯತೊಡಗುತ್ತದೆ.ಅಂತೆಯೇ ಸಂಕಟದಲ್ಲಿದ್ದವರನ್ನು ಮತ್ತೆ ಪ್ರಶ್ನಿಸತೊಡಗಿದರೆ ಇಲ್ಲವೇ ಅವರ ಮುಂದೆ ಮಾತನಾಡತೊಡಗಿದರೆ ಅವರ ನೋವು ಇನ್ನೂ ಹೆಚ್ಚಾಗುತ್ತದೆ ಎಂಬ ತಿರುಳಿನಲ್ಲಿ ಈ ನುಡಿಗಟ್ಟು ಬಳಕೆಯಾಗಿದೆ;

**ಬೆಂದುದ ಬೆದಕಿ ನೋಯಿಸಬೇಡ**=ಅಪ್ಪ, ಕಾಳೆಗದ ಕಣಕ್ಕೆ ಹೋಗುವ ಮುನ್ನ ಮತ್ತು ಹೋದ ನಂತರ ನಡೆದ ಸಂಗತಿಗಳಿಂದ ಬಹಳವಾಗಿ ನೊಂದಿದ್ದೇನೆ. ಮತ್ತೆ ಮತ್ತೆ ನನ್ನನ್ನು ಪರಾಕ್ರಮಿಯೆಂದು ಹೊಗಳಿ ಹೊಗಳಿ ನೋಯಿಸಬೇಡ; ಕದನ=ಯುದ್ಧ/ಕಾಳಗ; **ಬೊಪ್ಪ ನುಡಿಯದಿರು**=ಅಪ್ಪ ಮತ್ತೆ ಮಾತನ್ನು ಮುಂದುವರಿಸಬೇಡ; ಗೆಲಿದಾತ=ಗೆದ್ದವನು; ಇಹ=ಇರುವನು;

**ಹಗಲಿನ ಕದನವನು ಗೆಲಿದಾತ ಬೇರೆ ಇಹ**=ಇಂದು ಹಗಲಿನಲ್ಲಿ ನಡೆದ ಕದನದಲ್ಲಿ ಗೆದ್ದವನು ಬೇರೊಬ್ಬನಿದ್ದಾನೆ; ಉದಯ=ಹುಟ್ಟು; **ಉದಯದಲಿ ಗೆಲಿದಾತನನು ನಿಮ್ಮ ಇದಿರಿನಲಿ ತೋರುವೆನು**=ನಾಳೆ ಬೆಳಗ್ಗೆ ದುರ್ಯೋಧನನ ಚತುರಂಗ ಬಲವನ್ನು ಸೋಲಿಸಿ ಯುದ್ಧದಲ್ಲಿ ಗೆದ್ದವನನ್ನು ಕರೆತಂದು ನಿಮ್ಮ ಎದುರಿನಲ್ಲಿ ತೋರಿಸುವೆನು; ಸದನ=ಮನೆ/ನಿವಾಸ; **ಸದನಕೆ ಬೀಳ್ಕೊಡಿ ಎಂದು ಕುಮಾರ ಅರಮನೆಗೆ ಕಳುಹಿಸಿಕೊಂಡನು**=ಈಗ ನನ್ನನ್ನು ಕಳುಹಿಸಿಕೊಡಿ ಎಂದು ತಂದೆಯಾದ ವಿರಾಟರಾಯನನ್ನು ಕೇಳಿಕೊಂಡು ಅರಮನೆಯ ತನ್ನ ಕೊಟಡಿಯತ್ತ ನಡೆದನು;



## ನೋಟ-೯

ಇತ್ತಲು=ಈ ಕಡೆ; ಭವನ=ಮನೆ/ನಿವಾಸ; ಸಾರು=ಸಮೀಪಿಸು; **ಇತ್ತಲು ಅರ್ಜುನ ದೇವ ಉತ್ತರೆಯ ಭವನವನು ಸಾರಿದನು**=ಈ ಕಡೆ ಅರ್ಜುನನು ಉತ್ತರೆಯಿದ್ದ ರಾಣಿವಾಸದ ಕೊಟಡಿಗೆ ಬಂದನು; ತಾ=ತಾನು; ಅಂಬರ=ಬಟ್ಟೆ; ರತ್ನ+ಆಭರಣ; ಕನ್ನಿಕೆ=ಕನ್ಯೆ; **ತಾ ತಂದ ಉತ್ತಮ ಅಂಬರ ವಿವಿಧ ರತ್ನಾಭರಣ ವಸ್ತುಗಳ ಆ ಕನ್ನಿಕೆಗೆ ಇತ್ತನು**=ಕಾಳೆಗದ ಕಣದಲ್ಲಿ ಅರ್ಜುನನ ಸಂಮೋಹನಾಸ್ತ್ರಕ್ಕೆ ವಶರಾಗಿ ಮೂರ್ಛಿತರಾಗಿ ಬಿದ್ದಿದ್ದ ದುರ್ಯೋಧನನ ಸೇನೆಯ ವೀರರ ಮಯ್ ಮೇಲಿದ್ದ ಬೆಲೆಬಾಳುವ ಬಟ್ಟೆ ಮತ್ತು ಬಹುಬಗೆಯ ರತ್ನದ ಒಡವೆಗಳನ್ನು ಗೆಲುವಿನ ಉಡುಗೊರೆಯಾಗಿ ಅರ್ಜುನನು ಉತ್ತರೆಗೆ ನೀಡಿದನು; ಹಗೆಗಳ ಮಯ್ ಮೇಲಣ ಬೆಲೆಬಾಳುವ ವಸ್ತುಗಳನ್ನು ತನಗೆ ತಂದುಕೊಡಬೇಕೆಂದು ಉತ್ತರೆಯು ಕಾಳೆಗಕ್ಕೆ ಹೋಗುವ ಮುನ್ನ ಬೃಹನ್ನಳೆಯನ್ನು ಕೇಳಿಕೊಂಡಿದ್ದಳು; ಮುದ=ಆನಂದ/ಹಿಗ್ಗು; ಮಿಗಲು=ಹೆಚ್ಚಾಗಲು; ಶಶಿ=ಚಂದ್ರ; ಕುಲ=ವಂಶ; ಮತ್ತ= ಮದಿಸಿದ/ಸೊಕ್ಕಿದ; ವಾರಣ=ಆನೆ; ಶಶಿಕುಲ ಮತ್ತವಾರಣ= ಅರ್ಜುನನಿಗಿದ್ದ ಒಂದು ಬಿರುದು. ಚಂದ್ರವಂಶದ ಮದಿಸಿದ ಆನೆ; ಭೀಮ+ಅಗ್ರಜನ; ಅಗ್ರಜ=ಅಣ್ಣ; ಹೊರೆ=ಸಮೀಪ/ಹತ್ತಿರ;

**ಮುದ ಮಿಗಲು ಉತ್ತರೆಯ ಮನೆಯಿಂದ ಶಶಿಕುಲ ಮತ್ತವಾರಣ ಆ ಭೀಮಾಗ್ರಜನ ಹೊರೆಗೆ ಬಂದನು**=ಕಾಳೆಗದಲ್ಲಿ ಪಡೆದ ಜಯ ಮತ್ತು ಉತ್ತರೆಯು ಆಸೆಯನ್ನು ಈಡೇರಿಸಿದ್ದರಿಂದ ಅರ್ಜುನನ ಆನಂದ ಇಮ್ಮಡಿಗೊಂಡಿರಲು ಉತ್ತರೆಯ ಮನೆಯಿಂದ ಶಶಿಕುಲ ಮತ್ತವಾರಣನು ಅಣ್ಣನಾದ ಭೀಮನ ಬಳಿಗೆ ಬಂದನು; ಸಂಕೇತ=ಸೂಚನೆ; ಕಲಿ=ಶೂರ; ಭೂಪ=ರಾಜ/ಧರ್ಮರಾಯ; ನಿಳಯ=ಮನೆ; **ಬಳಿಕ ಕಲಿಭೀಮ ಸಂಕೇತದಲಿ ಭೂಪನ ನಿಳಯವನು ಹೊಕ್ಕನು**= ಅನಂತರ ಕಲಿಭೀಮನ ಸೂಚನೆಯಂತೆ ಇಬ್ಬರೂ ಅರಮನೆಯಲ್ಲಿದ್ದ

ಧರ್ಮರಾಯನ ಕೊಟಡಿಗೆ ಬಂದರು; ಆ ಕ್ಷಣಕೆ=ಅದೇ ಸಮಯಕ್ಕೆ; ನಳಿನ=ತಾವರೆ; ನಳಿನಮುಖಿ=ತಾವರೆ ಹೂವಿನ ಮೊಗದವಳು/ಸೈರಂಧ್ರಿ;

ಆ ಕ್ಷಣಕೆ **ನಳಿನಮುಖಿ ಸಹದೇವ ನಕುಲರು ಬಂದರು**=ಅದೇ ಸಮಯಕ್ಕೆ ಸೈರಂಧ್ರಿ, ಸಹದೇವ ಮತ್ತು ನಕುಲರು ಧರ್ಮರಾಯನಿದ್ದ ಕೊಟಡಿಗೆ ಬಂದರು; ಫಲುಗುಣ=ಅರ್ಜುನ; ಹೊಡವಡು=ಸಾಷ್ಟಾಂಗ ನಮಸ್ಕಾರ ಮಾಡು/ವಂದಿಸು; **ಫಲುಗುಣನು ಇಬ್ಬರಿಗೆ ಹೊಡವಂಟನು**=ಅಣ್ಣಂದಿರಾದ ಧರ್ಮರಾಯ ಮತ್ತು ಭೀಮಸೇನನಿಗೆ ಅರ್ಜುನನು ನಮಸ್ಕರಿಸಿದನು; **ಉಳಿದವರು ಪಾರ್ಥಂಗೆ ವಂದಿಸಲು**=ಇನ್ನುಳಿದ ತಮ್ಮಂದಿರಾದ ನಕುಲ ಸಹದೇವರು ಅರ್ಜುನನಿಗೆ ನಮಸ್ಕರಿಸಲು; ಪರಿತೋಷ=ಹೆಚ್ಚಿನ ಆನಂದ; ಒಲಿದು=ಪ್ರೀತಿಯಿಂದ; ಬಿಗಿ+ಅಪ್ಪಿದನು; ಅಪ್ಪು=ಆಲಿಂಗಿಸು/ತಬ್ಬಿಕೊಳ್ಳುವುದು; **ಪರಿತೋಷದಲಿ ಸಮಬಲರ ಒಲಿದು ಬಿಗಿಯಪ್ಪಿದನು**=ಅಪಾರವಾದ ಆನಂದದಿಂದ ಸೋದರರನ್ನು ಪ್ರೀತಿಯಿಂದ ಬಿಗಿದಪ್ಪಿದನು; **ಉಳಿದ ನಾಲ್ವರು**=ಅರ್ಜುನನನ್ನು ಹೊರತುಪಡಿಸಿ, ಇನ್ನುಳಿದ ನಾಲ್ವರು ಅಣ್ಣತಮ್ಮಂದಿರಾದ ಧರ್ಮರಾಯ, ಭೀಮ, ನಕುಲ, ಸಹದೇವ;

ತ್ರಿಗರ್ತರು=ದುರ್ಯೋಧನನ ಕಡೆಯ ರಾಜರು. ಇವರಲ್ಲಿ ಸುಶರ್ಮ ಎಂಬುವನು ಒಬ್ಬ ರಾಜನಾಗಿದ್ದ; ; ಪರಿ=ರೀತಿ; **ಉಳಿದ ನಾಲ್ವರು ಕಲಿ ತ್ರಿಗರ್ತರ ಗೆಲಿದ ಪರಿಯನು**=ದುರ್ಯೋಧನನು ಕಳುಹಿಸಿದ್ದ ತ್ರಿಗರ್ತರ ಸೇನೆಯು ಮೊದಲನೆಯ ದಿನ ವಿರಾಟನಗರದ ದಕ್ಷಿಣ ಭಾಗದ ಹೊರವಲಯದಲ್ಲಿದ್ದ ಗೋವುಗಳನ್ನು ಅಪಹರಿಸಿತ್ತು. ಆಗ ಅರ್ಜುನನನ್ನು ಹೊರತುಪಡಿಸಿ, ಇನ್ನುಳಿದ ನಾಲ್ವರು ಅಣ್ಣತಮ್ಮಂದಿರು ಮೊದಲ ದಿನ ನಡೆದ ಗೋಗ್ರಹಣದ ಕಾಳೆಗದಲ್ಲಿ ಪಾಲ್ಗೊಂಡು ಹೋರಾಡಿದ್ದರು. ಅಂದು ತ್ರಿಗರ್ತರ ಸೇನೆಯು ಇದ್ದಕ್ಕಿದ್ದಂತೆ ವಿರಾಟನಗರದ ಹೊರವಲಯದಲ್ಲಿದ್ದ ಗೋವುಗಳನ್ನು ಅಪಹರಿಸಿದಾಗ, ವಿರಾಟರಾಜನೊಡನೆ ದುರ್ಯೋಧನನ ಸೇನೆಯ ಎದುರು ಹೋರಾಡಲೆಂದು ಧರ್ಮರಾಯ, ಭೀಮ, ನಕುಲ, ಸಹದೇವರು ಹೋಗಿದ್ದರು. ಕಾಳೆಗದ ಕಣದಲ್ಲಿ ತ್ರಿಗರ್ತ ರಾಜರ ಪರಾಕ್ರಮ ಮೇಲಾಗಿ ವಿರಾಟರಾಜನನ್ನು ಸೆರೆಹಿಡಿದು ಕೊಂಡೊಯ್ಯುತ್ತಿದ್ದಾಗ, ಭೀಮಸೇನನು ತ್ರಿಗರ್ತ ರಾಜರನ್ನು ಸದೆಬಡಿದು, ವಿರಾಟರಾಯನನ್ನು ಮತ್ತು ಗೋವುಗಳನ್ನು ಸೆರೆಯಿಂದ ಬಿಡಿಸಿಕೊಂಡು ಬಂದ ಸಾಹಸದ ಪ್ರಸಂಗವನ್ನು ಅರ್ಜುನನಿಗೆ ಹೇಳಿದರು; ಭಂಗ=ಸೋಲು;

**ಪಾರ್ಥ ಕೌರವ ಬಲವ ಭಂಗಕೆ ತಂದ ಪರಿಯನು ಹೇಳುತಿರುತಿರಲು**= ಎರಡನೆಯ ದಿನ ಮತ್ತೆ ದುರ್ಯೋಧನನ ಚತುರಂಗಬಲದವರು

ವಿರಾಟನಗರದ ಉತ್ತರದ ಕಡೆಯಿಂದ ಆಕ್ರಮಣ ಮಾಡಿ, ಗೋವುಗಳನ್ನು ಅಪಹರಿಸಿ, ಗೊಲ್ಲನೊಬ್ಬನಿಗೆ ಅಪಮಾನ ಮಾಡಿ ಕಳುಹಿಸಿದ್ದಾಗ ಉತ್ತರಕುಮಾರ ನೊಡನೆ ಸಾರಥಿಯಾಗಿ ತೆರಳಿದ್ದ ಅರ್ಜುನನು ತಾನು ಹೇಗೆ ದುರ್ಯೋಧನನ ಸೇನೆಯನ್ನು ಸದೆಬಡಿದು ಸೋಲಿಸಿ, ಗೆದ್ದುಬಂದ ಬಗೆಯನ್ನು ತನ್ನ ಅಣ್ಣತಮ್ಮಂದಿರಿಗೆ ವಿವರಿಸುತ್ತಿರಲು; ಈ ರೀತಿ ಎರಡು ದಿನ ಗೋಗ್ರಹಣದ ಕಾಳೆಗದ ಹೋರಾಟದ ಪ್ರಸಂಗಗಳನ್ನು ಅಣ್ಣತಮ್ಮಂದಿರು ಪರಸ್ಪರ ಹೇಳಿಕೊಂಡು ಸಂತಸಪಡುತ್ತಿರುವಾಗ; ನಿಲುಕು=ಕಾಣಿಸು/ಗೋಚರವಾಗು; **ಬಳಿಕ ರಾಯನ ಹಣೆಯ ಗಾಯವ ಪಾರ್ಥ ನಿಲುಕಿ ಕಂಡನು**=ಸೋದರರು ಮಾತಿನಲ್ಲಿ ತೊಡಗಿದ್ದಾಗ ಅರ್ಜುನನ ಕಣ್ಣಿಗೆ ಧರ್ಮರಾಯನ ಹಣೆಯಲ್ಲಿ ಆಗಿದ್ದ ಗಾಯ ಗೋಚರಿಸಿತು;

ನೊಸಲು=ಹಣೆ; ನಸು=ಸ್ವಲ್ಪ/ತುಸು; ಬಿಂದು=ಹನಿ; **ಇದೇನು ನೊಸಲಿಂದ ನಸು ರಕ್ತ ಬಿಂದುಗಳು ಇಳಿವುತಿದೆ**=ಇದೇನು ಹಣೆಯಿಂದ ರಕ್ತದ ಹನಿಗಳು ಸೋರುತ್ತಿದೆಯಲ್ಲ; ಅವಧಾನ=ಎಚ್ಚರಿಕೆ; ಅನವಧಾನ=ಎಚ್ಚರಿಕೆಯಿಲ್ಲದೆ/ಮಯ್ ಮರೆಯುವಿಕೆ; **ಅನವಧಾನದೊಳು ಆಯ್ತು**=ಎಚ್ಚರಿಕೆಯಿಲ್ಲದೆ ಆಯಿತು; ನೆನೆಯಲು+ಏತಕೆ; ಮಾಣು=ಬಿಡು; **ಸಾಕು ಅದ ನೆನೆಯಲೇತಕೆ ಮಾಣು ಎನಲು**= ಸಾಕು, ಅದನ್ನು ಈಗೇಕೆ ನೆನೆಸಿಕೊಳ್ಳಬೇಕು ಬಿಡು ಎಂದು ಧರ್ಮರಾಯನು ಹೇಳಲು; ಮಿಗೆ=ಅತಿ ಹೆಚ್ಚಾಗಿ; ಕನಲು=ಕೋಪಗೊಳ್ಳು/ಸಿಟ್ಟಿಗೇಳು; ಸೂರುಳ್= ಆಣೆಯಿಡು; ಅರಿ=ತಿಳಿ; **ಮಿಗೆ ಕನಲುತ ಅರ್ಜುನನು ಆ ದ್ರೌಪದಿಯ ಸೂರುಳಿಸಿ ಅರಿದನು**=ತುಂಬಾ ಕೋಪಗೊಂಡ ಅರ್ಜುನನು ದ್ರೌಪದಿಯನ್ನು ಒತ್ತಾಯಮಾಡಿ, ನಿಜವನ್ನು ಹೇಳಲೇಬೇಕೆಂದು ಅವಳಿಂದ ಆಣೆಯಿಡಿಸಿ, ನಡೆದಿದ್ದ ಪ್ರಮಾದವನ್ನು ಅರಿತನು; ಉರಿದು+ಎದ್ದನು; ಉರಿದೇಳು=ಇದೊಂದು ನುಡಿಗಟ್ಟು. ಅತಿ ಹೆಚ್ಚಿನ ಕೋಪೋದ್ರೇಕಕ್ಕೆ ಒಳಗಾಗುವುದು;

**ಮನದಲಿ ಉರಿದೆದ್ದನು**=ವಿರಾಟರಾಜನಿಂದ ತನ್ನ ಅಣ್ಣ ಧರ್ಮರಾಯನಿಗೆ ಆಗಿರುವ ಪೆಟ್ಟು ಮತ್ತು ಅಪಮಾನದಿಂದ ಅರ್ಜುನನು ಮನದಲ್ಲಿ ತೀವ್ರವಾದ ಆಕ್ರೋಶಕ್ಕೆ ಗುರಿಯಾದನು; ತನು=ದೇಹ/ಮಯ್; ಹೊರಳಿಸಿ–ಹೊಳ್ಳಿಸಿ; ಹೊರಳು=ಉರುಳಿ ಬೀಳು/ಉರುಳಾಡು; ಹೊಳ್ಳಿಸಿ=ಕೆಳಕ್ಕೆ ಹಾಕಿಕೊಂಡು ಉರುಳಾಡಿಸಿ ತುಳಿದು; ಶಾಕಿನಿಯರು=ಮಾನವರ ರಕ್ತಮಾಂಸಗಳನ್ನು ಸೇವಿಸುವ ದೇವತೆಯರು; ಹೊಯ್=ಕೊಡು/ಎರೆ; **ವಿರಾಟನ ತನುವ ಹೊಳ್ಳಿಸಿ ರಕುತವನು ಶಾಕಿನಿಯರಿಗೆ ಹೊಯಿಸುವೆನು**=ವಿರಾಟರಾಜನನ್ನು ಉರುಳಾಡಿಸಿ ಕೊಂದು, ಅವನ ರಕ್ತವನ್ನು ಶಾಕಿನಿಯರಿಗೆ ಉಣಬಡಿಸುತ್ತೇನೆ; ಹೊಲ್ಲೆಹ+ಏನು; ಹೊಲ್ಲೆಹ= ತಪ್ಪು/ಅಪರಾದ; **ಹೊಲ್ಲೆಹವೇನು ಹೇಳು**=ನಿನ್ನನ್ನು ಅಪಮಾನ ಪಡಿಸಿರುವ ರಾಜ

ವಿರಾಟನನ್ನು ನಾನು ಕೊಲ್ಲುವುದು ತಪ್ಪೇನು ಎಂದು ಅರ್ಜುನನು ಧರ್ಮರಾಯನನ್ನೇ ಪ್ರಶ್ನಿಸಿದ;

**ಶಿವ ಶಿವ ಮಹಾದೇವ**=ಏನಾದರೂ ಆಗಬಾರದ ಹಾನಿ ಇಲ್ಲವೇ ಕೇಡು ಉಂಟಾದಾಗ ವ್ಯಕ್ತಿಗಳ ಬಾಯಿಂದ ಹೊರಡುವ ದೇವರ ಹೆಸರಿನ ಉದ್ಗಾರ; ಅಣ್ಣ ಧರ್ಮರಾಯನಿಗೆ ಈ ರೀತಿ ವಿರಾಟರಾಜನಿಂದ ಪೆಟ್ಟಾಗಿರುವ ಸಂಗತಿಯು ಭೀಮನಿಗೆ ಇದುವರೆಗೂ ತಿಳಿದಿರಲಿಲ್ಲ. ಈಗ ತಿಳಿದ ಕೂಡಲೇ ಅವನ ಬಾಯಿಂದ ಕೋಪೋದ್ರೇಕದ ಸಂಕೇತವಾಗಿ ಉದ್ಗಾರದ ನುಡಿಗಳು ಹೊರಹೊಮ್ಮಿದವು; ಕೀಚಕ+ಇಂದ್ರ; ಇಂದ್ರ=ಒಡೆಯ/ಯಜಮಾನ; ಬಳಗ=ಒಂದೇ ವಂಶಕ್ಕೆ ಸೇರಿದ ವ್ಯಕ್ತಿಗಳ ಸಮೂಹ; **ಕೀಚಕೇಂದ್ರನ ಬಳಗ**=ಕೀಚಕ ಮತ್ತು ಕೀಚಕನ ನೂರು ಮಂದಿ ತಮ್ಮಂದಿರು;

**ವಿರಾಟನ ತಲೆಯ ಕೀಚಕೇಂದ್ರನ ಬಳಗವು ಇದ್ದಲ್ಲಿಗೆ ಕಳುಹಬೇಕೇ**=ವಿರಾಟನ ತಲೆಯನ್ನು ಕಡಿದು ಕೀಚಕ ಮತ್ತು ಕೀಚಕನ ತಮ್ಮಂದಿರು ಇರುವ ಸಾವಿನ ಮನೆಗೆ ಕಳುಹಿಸಬೇಕೇ : ಭೀಮನು ಅಣಕದ ನುಡಿಯಿಂದ ವಿರಾಟ ಮತ್ತು ಕೀಚಕನ ಬಳಗವನ್ನು ಹಂಗಿಸಿ ನುಡಿಯುತ್ತಿದ್ದಾನೆ. ಆದ್ದರಿಂದಲೇ ತನ್ನಿಂದ ಕೊಲೆಯಾದ ಕೀಚಕನನ್ನು... **'ಕೀಚಕೇಂದ್ರ...'** ಎಂದು ವ್ಯಂಗ್ಯವಾಡುತ್ತಿದ್ದಾನೆ; ಋಣ=ಸಾಲ/ಹಂಗು; ಸಾಲಿಗ=ಸಾಲವನ್ನು ನೀಡಿದವನು/ಸಾಲಗಾರ;

**ಋಣ ಸಾಲಿಗನಲೇ**=ವಿರಾಟರಾಯನು ಕೀಚಕನ ರುಣದಲ್ಲಿಯೇ ಬದುಕಿದ್ದವನಲ್ಲವೇ; ಅಂದರೆ ಕೀಚಕನ ಬಲದಿಂದಲೇ ವಿರಾಟರಾಯನ ರಾಜ್ಯ ನಡೆಯುತ್ತಿತ್ತು; ಒಕ್ಕು=ಹರಿ/ಪ್ರವಹಿಸು; **ರಕ್ತವು ನೆಲದೊಳು ಒಕ್ಕುದೆ**=ರಕ್ತವು ನೆಲದಲ್ಲಿ ಹರಿಯಿತೇ; ಕುಲ=ವಂಶ/ಮನೆತನ; ಸವರು=ನಾಶಗೊಳಿಸು; **ಅವದಿರ ಕುಲವ ಸವರುವೆನು**=ವಿರಾಟರಾಯನ ರಾಜವಂಶವನ್ನೇ ಸಂಪೂರ್ಣವಾಗಿ ನಾಶಮಾಡುತ್ತೇನೆ; ಭೂತ=ದೆವ್ವ; ಗಣ=ಸಮೂಹ/ಗುಂಪು; ಬಲಿ=ಆಹುತಿ; **ಇವನ ಸೀಳಿದು ಭೂತಗಣಕೆ ಬಲಿಯ ಕೊಡುವೆನು ಎನುತ ಎದ್ದನು ಆ ಭೀಮ**=ವಿರಾಟರಾಯನನ್ನು ಸೀಳಿ ದೆವ್ವಗಳಿಗೆ ಬಲಿಕೊಡುತ್ತೇನೆ ಎಂದು ಅಬ್ಬರಿಸುತ್ತ ಭೀಮನು ಮೇಲೆದ್ದನು; ಹೋ...ಹೋ=ಆತಂಕ ಮತ್ತು ಹೆದರಿಕೆಯುಂಟಾದಾಗ ವ್ಯಕ್ತಿಯ ಬಾಯಿಂದ ಹೊರಡುವ ಉದ್ಗಾರದ ದನಿಗಳು; **ಹೋ... ಹೋ... ಸಾಕು ಸಾಕೈ ತಮ್ಮ**=ವಿರಾಟರಾಜನನ್ನು ಕೊಲ್ಲುವುದಾಗಿ ಹೇಳುತ್ತಿರುವ ಬೀಮನ ಮಾತುಗಳನ್ನು ಕೇಳುತ್ತಿದ್ದಂತೆಯೇ ಧರ್ಮರಾಯನು ಆತಂಕ ಮತ್ತು ಏನಾದರೂ ಅನಾಹುತವಾಗುವುದೆಂಬ ಹೆದರಿಕೆಯಿಂದ... ಹೋ... ಹೋ... ಸಾಕು ಸಾಕು ನಿಲ್ಲಿಸು ತಮ್ಮ; ಕಾಕು=ಕೊಂಕು ನುಡಿ; ಕಾಕ ಬಳಸು=ಕೆಟ್ಟ ಮಾತಾಡು/ವಕ್ರವಾಗಿ

ನುಡಿ; **ಕಾಕ ಬಳಸಲು ಬೇಡ**=ವಿರಾಟರಾಜನ ಬಗ್ಗೆ ಇಂತಹ ಕೆಟ್ಟ ಮಾತನ್ನಾಡಬೇಡ/ಕೊಂಕು ನುಡಿಯನ್ನಾಡಬೇಡ; ಉದ್ರೇಕ=ದುಡುಕು/ಉದ್ವೇಗ; ಮಾಣು=ಬಿಡು;

**ಉದ್ರೇಕವನು ಮಾಣು**=ದುಡುಕುತನದ ನಡೆನುಡಿಯನ್ನು ಬಿಡು; **ನೆಲ ರಕ್ತ ಕಂಡರೆ ನನ್ನ ಮೇಲಾಣೆ**=ನನ್ನಾಣೆಯಾಗಿಯೂ ಹೇಳುತ್ತಿದ್ದೇನೆ. ಆಗ ನನ್ನ ಹಣೆಯಿಂದ ತೊಟ್ಟಿಕ್ಕಿದ ರಕ್ತ ನೆಲದ ಮೇಲೆ ಬೀಳಲಿಲ್ಲ; ಧರ್ಮರಾಯನು ಆಣೆಯಿಡುವುದರ ಮೂಲಕ ಉದ್ರಿಕ್ತಗೊಂಡಿರುವ ಭೀಮನನ್ನು ಸಾಂತ್ವನಗೊಳಿಸಲು ಪ್ರಯತ್ನಿಸುತ್ತಿದ್ದಾನೆ; ಲೋಚನ=ಕಣ್ಣು; ಕಮಲಲೋಚನೆ= ತಾವರೆಯ ಹೂವಿನಂತಹ ಕಣ್ಣುಳ್ಳವಳು/ಸೈರಂಧ್ರಿ; ಸೇಕ=ಬಳಿ/ಒರೆಸು/ಸವರು;

**ಈ ಕಮಲಲೋಚನೆಯ ಸೆರಗಿಗೆ ರಕುತವು ಸೇಕವಾಯಿತು**=ಈ ಸೈರಂಧ್ರಿಯ ಸೆರಗಿನಿಂದ ಬೀಳುತ್ತಿದ್ದ ರಕ್ತವನ್ನು ತಡೆದು ಒರೆಸಲಾಯಿತು. ಸೈರಂಧ್ರಿಯ ಸೆರಗಿನ ಬಟ್ಟೆಯು ರಕ್ತವನ್ನು ಹೀರಿಕೊಂಡಿತು; ನನ್ನ ಹಣೆಯಿಂದ ಒಂದು ತೊಟ್ಟು ರಕ್ತವೂ ನೆಲದ ಮೇಲೆ ಬೀಳಲಿಲ್ಲ; ಸವ್ಯಾಕುಲ=ವ್ಯಾಕುಲಗೊಂಡವನು; ವ್ಯಾಕುಲ= ಸಂಕಟದಿಂದ ಕಂಗೆಟ್ಟವನು; ಅನಿಲ=ವಾಯುದೇವ; ಜ=ಜನಿಸಿದವನು; ಅನಿಲಜ= ವಾಯುದೇವನ ಅನುಗ್ರಹದಿಂದ ಹುಟ್ಟಿದವನು/ಭೀಮ; **ಅತಿ ಸವ್ಯಾಕುಲತೆ ಬೇಡ ಎಂದು ಅನಿಲಜನ ಗಲ್ಲವ ಹಿಡಿದನು**= ಪ್ರೀತಿಯ ನಡೆನುಡಿಯಿಂದಲೇ ಭೀಮನನ್ನು ಸಮಾಧಾನಪಡಿಸಲೆಂದು…"ಅತಿಯಾದ ಸಂಕಟದಿಂದ ನೋಯಬೇಡ…" ಎನ್ನುತ್ತ… ಭೀಮನ ಗಲ್ಲವನ್ನು ಹಿಡಿದುಕೊಂಡು ಧರ್ಮರಾಯನು ಮುದ್ದುಮಾಡಿದನು;

**ಆತನ ಜೀವವನು ಕೊಂಬೆನು=ಆತನ ಪ್ರಾಣವನ್ನು ತೆಗೆಯುತ್ತೇನೆ; ಪತಿ**= ಒಡೆಯ/ಯಜಮಾನ/ದೊರೆ; ಗರ್ವ=ಸೊಕ್ಕು/ಮದ; ಎರಗು=ಮೇಲೆ ಬಿದ್ದು ಹೊಡೆ/ಬಡಿ; **ಪತಿ ಎಂಬ ಗರ್ವವನು ಅವನ ನೆತ್ತಿಯ ತುಂಬಿ ಬಿಡಲು ಎರಗುವೆನು**= ನಮ್ಮೆಲ್ಲರಿಗೂ ತಾನು ಯಜಮಾನನೆಂಬ ಸೊಕ್ಕು ವಿರಾಟರಾಯನ ತಲೆಯಲ್ಲಿ ತುಂಬಿಕೊಂಡಿದೆ. ಅವನ ಸೊಕ್ಕು ಅಡಗುವಂತೆ ಮೇಲೆ ಬಿದ್ದು ಬಡಿಯುತ್ತೇನೆ; ಸಂತತಿ=ವಂಶ; ಮತ್ಸ್ಯ ಸಂತತಿ=ವಿರಾಟರಾಯನ ವಂಶದ ಹೆಸರು; ವಿರಾಟರಾಯನು ಆಳುತ್ತಿದ್ದ ದೇಶದ ಹೆಸರು : ಮತ್ಸ್ಯದೇಶ; ತರಿ=ಕಡಿ/ಕತ್ತರಿಸು; **ಮತ್ಸ್ಯ ಸಂತತಿಯ ತರಿವೆನು**=ವಿರಾಟರಾಯನ ವಂಶವನ್ನೇ ಕಡಿದು ನಾಶಮಾಡುತ್ತೇನೆ; ಅಂಬುಜ+ಅಕ್ಷಿ; ಅಂಬುಜ=ತಾವರೆಯ ಹೂವು; ಅಕ್ಷಿ=ಕಣ್ಣು; ಅಂಬುಜಾಕ್ಷಿ=ತಾವರೆಯ ಕಣ್ಣಿನವಳು/ದ್ರೌಪದಿ; ಬೇಳಂಬ=ಕೇಡು/ವಿಪತ್ತು; ಕೂಟ=ಜತೆ/ಸಂಗ;

**ಕೀಚಕನ ಅಂಬುಜಾಕ್ಷಿಯ ಬೇಳಂಬವು ಈತನ ಕೂಟ**=ಈ ವಿರಾಟರಾಯನ ಕುಮ್ಮಕ್ಕಿನಿಂದಲೇ ಕೀಚಕನು ದ್ರೌಪದಿಗೆ ಕೇಡನ್ನು ಬಗೆಯಲು ಪ್ರಯತ್ನಿಸಿದ್ದನು; ಕದಂಬ=ಗುಂಪು; ತುಷ್ಟಿ=ತಣಿವು/ತೃಪ್ತಿ; ಸೆರಗು=ಬಾಹುಗಳ ಮೇಲೆ ಹಾಕಿಕೊಂಡಿರುವ ಉತ್ತರೀಯ/ಶಲ್ಯದ ಅಂಚು; **ಭೂತ ಕದಂಬ ತುಷ್ಟಿಯ ಮಾಡಬೇಹುದು, ಸೆರಗ ಬಿಡಿ**=ವಿರಾಟರಾಯನನ್ನು ಕೊಂದು ದೆವ್ವಗಳ ರಕ್ತದಾಹವನ್ನು ಹಿಂಗಿಸಬೇಕು... ನನ್ನ ಸೆರಗನ್ನು ಬಿಡಿ; ಧರ್ಮರಾಯನು ಭೀಮನ ಗಲ್ಲವನ್ನು ಹಿಡಿದುಕೊಂಡು ಪ್ರೀತಿಯನ್ನು ತೋರಿಸುತ್ತಿರುವಾಗಲೇ, ಕೋಪೋದ್ರೇಕದಿಂದ ಕೂಡಿರುವ ಭೀಮನು ಅತ್ತಿತ್ತ ನುಗ್ಗದಂತೆ ಅವನ ಶಲ್ಯದ ಸೆರಗನ್ನೂ ಧರ್ಮರಾಯನು ಹಿಡಿದುಕೊಂಡಿದ್ದನು;

ಓಲೈಸು=ಸೇವೆಮಾಡು/ಆಶ್ರಯ ಪಡೆದಿರು; ಕೈಯೊಡನೆ=ನಮ್ಮ ಉದ್ದೇಶ ಮುಗಿದ ನಂತರ; ಇವಗೆ=ಇವನಿಗೆ; ಮುನಿ=ಕೋಪಗೊಳ್ಳು/ಇದಿರುಬೀಳು; ಭುವನ=ಜಗತ್ತು; **ಇವನ ನಾವು ಓಲೈಸಿ ಕೈಯೊಡನೆ ಇವಗೆ ಮುನಿದೊಡೆ ಭುವನ ಜನವು ಏನನು ಎಂಬುದು**=ಅಜ್ಞಾತವಾಸಕ್ಕಾಗಿ ಇದುವರೆಗೆ ವಿರಾಟರಾಯನ ಆಶ್ರಯದಲ್ಲಿದ್ದ ನಾವು, ಈಗ ನಮ್ಮ ಉದ್ದೇಶ ಈಡೇರಿದ ನಂತರ, ಇವನಿಗೆ ಇದಿರುಬಿದ್ದರೆ ಲೋಕದ ಜನ ನಮ್ಮ ಬಗ್ಗೆ ಏನೆಂದುಕೊಳ್ಳುತ್ತಾರೆ. ಪಾಂಡವರು ಉಪಕಾರ ಸ್ಮರಣೆಯಿಲ್ಲದವರು ಎಂದು ನಿಂದಿಸುವುದಿಲ್ಲವೇ; ಭ್ರಮೆ=ತಪ್ಪು ಆಲೋಚನೆ/ಗ್ರಹಿಕೆ; ಸೈರಣೆ=ತಾಳ್ಮೆ/ಸಹನೆ;

**ಭ್ರಮಿಸದಿರು, ಸೈರಣೆಗೆ ಮನ ಮಾಡು**=ತಪ್ಪು ಕಲ್ಪನೆಗೆ ಒಳಗಾಗಬೇಡ. ತಾಳ್ಮೆಯಿಂದ ನಡೆದುಕೊಳ್ಳಲು ಮನಸ್ಸು ಮಾಡು; ಎವಗೆ=ನಮಗೆ; **ಎವಗೆ ನೋವಿನ ಹೊತ್ತು**=ಪಾಂಡವರಾದ ನಮ್ಮೆಲ್ಲರಿಗೂ ಇದು ಬಹಳ ಸಂಕಟದ ಸಮಯ; ದುಷ್ಕೃತ=ಕೆಟ್ಟಕೆಲಸ/ಪಾಪ; ವಿವರಣ=ಪ್ರಕಟಗೊಳಿಸುವುದು/ ವ್ಯಕ್ತಪಡಿಸುವುದು; ಫಲ=ಮಾಡಿದ ಕೆಲಸದ ಪರಿಣಾಮ; **ದುಷ್ಕೃತ ವಿವರಣದ ಫಲವು**=ನಾವು ಮಾಡಿದ ಪಾಪದ ಫಲವಿದು; ವ್ಯಕ್ತಿಯ ಜೀವನದಲ್ಲಿ ಉಂಟಾಗುವ ಒಳಿತು ಕೆಡುಕಿಗೆ ಹಿಂದಿನ ಜನ್ಮದಲ್ಲಿ ಇಲ್ಲವೇ ಈ ಜನ್ಮದಲ್ಲಿ ವ್ಯಕ್ತಿಯು ಮಾಡಿರುವ ಪಾಪಪುಣ್ಯಗಳೇ ಕಾರಣವೆಂಬ ನಂಬಿಕೆಯು ಜನಮನದಲ್ಲಿದೆ; ಒಳಿತನ್ನು ಮಾಡಿದ್ದರೆ ಪುಣ್ಯಫಲ-ಕೆಟ್ಟದ್ದನ್ನು ಮಾಡಿದ್ದರೆ ಕೇಡಿನ ಫಲವನ್ನು ಉಣ್ಣಲೇಬೇಕು ಎಂಬ ಭಾವನೆಯು ಧರ್ಮರಾಯನ ಮನದಲ್ಲಿದೆ; ಇದಕೆ=ಈಗ ನಮಗೆ ಬಂದಿರುವ ಸಂಕಟಕ್ಕೆ; ಲೋಗರು=ಲೋಕದ ಜನರು; ಅವಗಡಿಸು= ಪ್ರತಿಭಟಿಸು/ವಿರೋಧಿಸು; **ಇದಕೆ ಲೋಗರನು ಅವಗಡಿಸಿದೊಡೆ ಎಮಗೆ ಹಾನಿಯು**=ನಮಗೆ ಬಂದಿರುವ ಸಂಕಟಕ್ಕೆ ಲೋಕದ ಜನರನ್ನು ಎದುರು

ಹಾಕಿಕೊಂಡರೆ ನಮಗೆ ಹಾನಿಯುಂಟಾಗುತ್ತದೆ;

ಬರಿಯ=ಕೇವಲ/ಉಪಯುಕ್ತವಲ್ಲದ; ಜಾಡ್ಯ=ರೋಗ/ಬೇನೆ; ಮೈಮರೆ=ಎಚ್ಚರತಪ್ಪು. ರಾಜಪದವಿಯಲ್ಲಿದ್ದವರು ಹೇಗೆ ಬಾಳಬೇಕೆಂಬುದನ್ನೇ ಮರೆತು; ವನ=ಕಾಡು; ಬಿಕ್ಕೆ=ಒಂದು ಬಗೆಯ ಕಾಡುಮರ ಮತ್ತು ಅದರ ಹಣ್ಣು; ಅರಸು=ಹುಡುಕು; ತೊಳಲು=ಅಲೆದಾಡು; **ಬರಿಯ ಧರ್ಮದ ಜಾಡ್ಯದಲಿ ಮೈಮರೆದು ವನದಲಿ ಬೇವು ಬಿಕ್ಕೆಯನು ಅರಸಿ ತೊಳಲಿದು ಸಾಲದೇ**=ಬರಿಯ ಧರ್ಮದ ಹೆಸರಿನ ರೋಗದಲ್ಲಿ ಎಚ್ಚರತಪ್ಪಿ ಹನ್ನೆರಡು ವರುಶಗಳ ಕಾಲ ಹೊಟ್ಟೆ ಪಾಡಿಗಾಗಿ ಕಾಡಿನ ಮರಗಿಡಗಳ ಹಣ್ಣುಕಾಯಿಯನ್ನು ಹುಡುಕಿಕೊಂಡು ಅಲೆದಾಡಿದ್ದು ಸಾಕಾಗಿಲ್ಲವೇ; ಅಣ್ಣ ಧರ್ಮರಾಯನೇ... ಅಂತಹ ಕೀಳಾದ ಬಾಳು ನಿನಗೆ ಸಂಕಟವನ್ನಾಗಲಿ ಇಲ್ಲವೇ ದುರ್ಯೋಧನನ ಬಗ್ಗೆ ಆಕ್ರೋಶವನ್ನಾಗಿ ಮೂಡಿಸಲಿಲ್ಲವೇ; ವತ್ಸರ=ವರುಶ; ಉರುಕು=ನಡುಕ/ಹೆದರಿಕೆ; ಉರುಕುಗೊಳ್ಳು= ಹೆದರು/ಕಂಪಿಸು/ನಡುಗು; ತೇಜ=ಏಳಿಗೆ/ಶ್ರೇಯಸ್ಸು; ಮೆರೆ=ಪ್ರದರ್ಶಿಸು/ತೋರಿಸು;

**ಹದಿಮೂರು ವತ್ಸರದಿ ಉರುಕುಗೊಂಡೊಡೆ ರಾಜ ತೇಜವ ಮೆರೆವ ದಿನವು ಎಂದು ಇಹುದು**=ಹನ್ನೆರಡು ವರುಶ ವನವಾಸ ಮತ್ತು ಒಂದು ವರುಶದ ಅಜ್ಞಾತವಾಸದುದ್ದಕ್ಕೂ ಹೆದರಿಕೆಯಿಂದಲೇ ತತ್ತರಿಸುತ್ತಿದ್ದರೆ, ಪಾಂಡುರಾಜನ ಮಕ್ಕಳಾದ ನಾವು ರಾಜತೇಜಸ್ಸಿನಿಂದ ಮೆರೆಯುವ ದಿನ ಯಾವಾಗ ಬರುವುದು;

**ನೀವು ಇನ್ನು ಅರಿಯಿರಿ**=ನೀವು ರಾಜಕಾರಣದ ಒಳಸುಳಿಗಳನ್ನು ತಿಳಿದಿಲ್ಲ ಎಂದು ಭೀಮನು ಧರ್ಮರಾಯನ ಸಾಂತ್ವನದ ನುಡಿಗಳನ್ನು ತಿರಸ್ಕರಿಸುತ್ತ; **ಎಮ್ಮನು ಹರಿಯ ಬಿಡಿ ಸಾಕು**=ನನ್ನನ್ನು ನನ್ನ ಇಚ್ಚೆಗೆ ತಕ್ಕಂತೆ ವಿರಾಟರಾಯನನ್ನು ಕೊಲ್ಲಲು ಬಿಡಿ. ಅಣ್ಣನಾದ ನೀನು ನನಗೆ ಅಂತಹ ಸ್ವಾತಂತ್ರ್ಯವನ್ನು ಕೊಟ್ಟರೆ ಅದೇ ಸಾಕು; ಉದಯ=ಹುಟ್ಟು; ಇನಿಬರು=ಇವರೆಲ್ಲರೂ; ಸದನ=ಅರಮನೆ; ನೃಪಪೀಠ= ಸಿಂಹಾಸನ; ಗರ್ವ=ಹೆಮ್ಮೆ; ನೆಮ್ಮು=ಆಕ್ರಮಿಸು/ಆವರಿಸು; **ಉದಯದಲಿ ನಾವು ಇನಿಬರು ಆತನ ಸದನದಲಿ ನೃಪಪೀಠವನು ಗರ್ವದಲಿ ನೆಮ್ಮುವೆವು**=ನಾಳೆ ಬೆಳಗ್ಗೆ ನಾವೆಲ್ಲರೂ ಜತೆಗೂಡಿ ವಿರಾಟರಾಜನ ಅರಮನೆಯಲ್ಲಿರುವ ಸಿಂಹಾಸನವನ್ನು ವಶಪಡಿಸಿಕೊಂಡು, ಹೆಮ್ಮೆಯಿಂದ ಅದರ ಮೇಲೆ ಕುಳಿತುಕೊಳ್ಳೋಣ;

ಖೋಡಿ=ತಪ್ಪು/ಅಪರಾದ; ಮದಮುಖನು=ಸೊಕ್ಕಿನವನು; ಒರಸು=ಅಳಿಸು /ನಾಶಗೊಳಿಸು; **ಆತ ನಮ್ಮಲಿ ಖೋಡಿಯನು ಹಿಡಿಯೆ ಮದಮುಖನನು ಒರಸುವೆವು**=ಆಗ ವಿರಾಟರಾಯನು ನಮ್ಮಲ್ಲಿ ತಪ್ಪನ್ನು ಹಿಡಿದು ನಮ್ಮನ್ನು ಸಿಂಹಾಸನದಿಂದ ಹೊರತಳ್ಳಲು ಮುನ್ನುಗ್ಗಿದರೆ, ಸೊಕ್ಕಿನಿಂದ ಮೆರೆಯುತ್ತಿರುವ ಅವನನ್ನು ಕೊಲ್ಲೋಣ; ಮನ್ನಿಸು=ವ್ಯಕ್ತಿಯು ಮಾಡಿದ ತಪ್ಪನ್ನು ಮರೆತು,

ವ್ಯಕ್ತಿಯನ್ನು ಆದರಿಸುವುದು; **ಹರುಷದಲಿ ಇದಿರುಗೊಂಡೊಡೆ ಮನ್ನಿಸುವ ಮಾತು**=ಅವನ ಸಿಂಹಾಸನದಲ್ಲಿ ಕುಳಿತಿರುವ ನಮ್ಮನ್ನು ನೋಡಿ, ನಾವು ಯಾರೆಂಬುದನ್ನು ತಿಳಿದುಕೊಂಡು ಆನಂದದಿಂದ ನಮ್ಮನ್ನು ಎದುರುಗೊಂಡು ಆದರಿಸಿದರೆ, ಆಗ ಅವನು ನನಗೆ ಹೊಡೆದಿರುವ ತಪ್ಪನ್ನು ಮರೆತು ಆದರಿಸೋಣ. ಇದೇ ನನ್ನ ಕಡೆಯ ಮಾತು; ಸನ್ಮತ=ಒಳ್ಳೆಯ ಉದ್ದೇಶ/ಒಳ್ಳೆಯ ಆಶಯ; ಪವನ=ವಾಯದೇವ; ಜ=ಜನಿಸಿದವನು; ಪವನಜ=ವಾಯುದೇವನ ಅನುಗ್ರಹದಿಂದ ಜನಿಸಿದವನು/ಭೀಮ;

**ಇದುವೆ ಸನ್ಮತವು ಎಂದು ಪವನಜನ ಸಂತೈಸಿದನು**=ಎಲ್ಲರ ಒಳಿತಿಗಾಗಿ ಈಗ ನಾನು ತೆಗೆದುಕೊಂಡಿರುವ ನಿಲುವು ಒಳ್ಳೆಯ ಉದ್ದೇಶದಿಂದ ಕೂಡಿದೆಯೆಂದು ನುಡಿದು ಉದ್ರಿಕ್ತನಾಗಿದ್ದ ಭೀಮನನ್ನು ಧರ್ಮರಾಯನು ಸಮಾಧಾನಪಡಿಸಿದನು.



# ನೋಟ–೧೦

ಧರಿತ್ರೀ=ಭೂಮಿ; ಪಾಲ=ಪಾಲಿಸುವವನು; ಧರಿತ್ರೀಪಾಲ=ರಾಜ;

**ಕೇಳು ಜನಮೇಜಯ ಧರಿತ್ರೀಪಾಲ**=ವೈಶಂಪಾಯನ ಮುನಿಯು ವ್ಯಾಸರು ರಚಿಸಿದ ಮಹಾಭಾರತದ ಕತೆಯನ್ನು ಮತ್ತೊಮ್ಮೆ ಪಾಂಡುವಂಶದ ಅರಸನಾದ ಜನಮೇಜಯನಿಗೆ ಹೇಳತೊಡಗಿದ್ದಾನೆ; ಚರಿತ=ನಿಯಮ/ನೆರವೇರಿಸಿದ; ಅಜ್ಞಾತವಾಸ=ತಮ್ಮ ನಿಜವಾದ ಗುರುತು ಯಾರಿಗೂ ಗೊತ್ತಾಗದಂತೆ ಜೀವನವನ್ನು ನಡೆಸುವುದು; ಬೀಳ್ಕೊಡು=ಹೋಗಲು ಬಿಡು; **ಚರಿತ ಅಜ್ಞಾತವಾಸವ ಬೀಳುಕೊಟ್ಟರು**=ದುರ್ಯೋಧನನೊಡನೆ ಆಡಿದ ಜೂಜಿನ ನಿಯಮದಂತೆ ಜೂಜಿನಲ್ಲಿ ಸೋತಿದ್ದ ಪಾಂಡವರು ಹನ್ನೆರಡು ವರುಶ ವನವಾಸದ ನಂತರ, ಒಂದು ವರುಶ ಅಜ್ಞಾತವಾಸವನ್ನು ವಿರಾಟನಗರಿಯಲ್ಲಿ ಸಂಪೂರ್ಣವಾಗಿ ಮಾಡಿ ಮುಗಿಸಿದರು; ಇರುಳು=ರಾತ್ರಿ;

**ಬಹಳ ಹರುಷದಲಿ ಇರುಳ ನೂಕಿದರು**=ಬಹಳ ಆನಂದದಿಂದ ರಾತ್ರಿಯನ್ನು ಕಳೆದರು; ಮೇಲಣ=ಮುಂದಿನ; ಅಭ್ಯುದಯ=ಏಳಿಗೆ/ಶ್ರೇಯಸ್ಸು; ಕೈಮೇಳವಿಸು=ನೆರವೇರು/ಈಡೇರು/ಸಿದ್ದಿಸು; **ಮೇಲಣ ಅವರ ಅಭ್ಯುದಯವನು ಕೈಮೇಳವಿಸಿ ಕೊಡುವಂತೆ**=ಮುಂದಿನ ದಿನಗಳಲ್ಲಿ ಪಾಂಡವರ ಏಳಿಗೆಯನ್ನು ನೆರವೇರಿಸಿ ಕೊಡುವಂತೆ; ಮೂಡಣ=ಪೂರ್ವ ದಿಕ್ಕಿನ; ಶೈಲ=ಬೆಟ್ಟ; ಮುಖ=ಮಗ್ಗಲು/ಬದಿ; ಶೈಲಮುಖ=ಬೆಟ್ಟದ ಎಡೆ; ಭಾನು=ಸೂರ್ಯ;

ಮಂಡಲ=ವಲಯ/ದುಂಡಾಗಿರುವುದು; ಸುಳಿ=ಕಾಣಿಸಿಕೊಳ್ಳುವುದು; **ಮೂಡಣ ಶೈಲಮುಖದಲಿ ಭಾನುಮಂಡಲದ ಕೆಂಪು ಸುಳಿದುದು**=ಮೂಡಣ ದಿಕ್ಕಿನಲ್ಲಿದ್ದ ಬೆಟ್ಟದೆಡೆಯಿಂದ ಮೂಡುತ್ತಿರುವ ರವಿಯ ಕೆಂಪನೆಯ ಕಿರಣಗಳು ಕಾಣತೊಡಗಿದವು; ಸೂರ್ಯನ ತೇರನ್ನು ಏಳು ಕುದುರೆಗಳು ಎಳೆಯುತ್ತವೆ

ಎಂಬ ಕಲ್ಪನೆಯು ಜನಮನದಲ್ಲಿದೆ; ಖುರಪುಟ=ಕುದುರೆಯ ಕಾಲಿನ ಗೊರಸು; ಕೆಂದೂಳಿ=ಕೆಂಪನೆಯ ದೂಳು; **ಏಳು ಕುದುರೆಯ ಖುರಪುಟದ ಕೆಂದೂಳಿಯೋ=** ರವಿಯ ತೇರನ್ನೆಳೆಯುತ್ತಿರುವ ಏಳು ಕುದುರೆಗಳ ಗೊರಸಿನಿಂದೆದ್ದ ಕೆಂದೂಳಿಯೋ ಎನ್ನುವಂತೆ ಮೂಡಣ ದಿಕ್ಕಿನ ಗಗನದಲ್ಲಿ ಕೆಂಪನೆಯ ಕಿರಣಗಳು ತುಂಬಿಕೊಂಡಿವೆ; ತನಿ=ಸವಿಯಾದ; ರಾಗ=ಪ್ರೀತಿ/ಒಲುಮೆ; ತನಿರಾಗರಸ= ಇದೊಂದು ನುಡಿಗಟ್ಟು. ಒಲವು ನಲಿವು ಗೆಲವನ್ನು ಉಂಟುಮಾಡುವ ಸಂಗತಿ ಎಂಬ ರೂಪಕದ ತಿರುಳಿನಲ್ಲಿ ಈ ಬಳಕೆಗೊಂಡಿದೆ; ಉಬ್ಬರ=ಅತಿಶಯ/ಏರಿಕೆ; ಪಸರಿಸು=ಹರಡು/ವ್ಯಾಪಿಸು;

**ಕುಂತೀ ಕುಮಾರಕರ ಏಳಿಗೆಯ ತನಿರಾಗರಸ ಉಬ್ಬರಿಸಿ ಪಸರಿಸಿತೊ=** ಪಾಂಡವರ ಮುಂದಿನ ಜೀವನದಲ್ಲಿ ಒಲವು ನಲಿವು ಗೆಲವಿನ ಏಳಿಗೆಯು ಅತಿಶಯವಾಗಿ ಹರಡಿಕೊಳ್ಳುವುದನ್ನು ಸೂಚಿಸುತ್ತಿದೆಯೋ ಎನ್ನುವಂತೆ ರವಿಯ ಹೊಂಗಿರಣಗಳ ಕಾಂತಿ ಎಲ್ಲೆಡೆ ಹರಡುತ್ತಿದೆ; **ಹೇಳಲೇನು**=ಸೂರ್ಯೋದಯದ ಚೆಲುವನ್ನು ಏನೆಂದು ಬಣ್ಣಿಸಲಿ; ಮಹೇಂದ್ರ=ದೇವೇಂದ್ರ; ವರ=ಉತ್ತಮವಾದ; ದಿಕ್+ಬಾಲಕಿ; ಮಹೇಂದ್ರ ವರ ದಿಕ್ಕು=ಪೂರ್ವ ದಿಕ್ಕನ್ನು 'ಇಂದ್ರನ ದಿಕ್ಕು' ಎಂಬ ಮತ್ತೊಂದು ಹೆಸರಿನಿಂದಲೂ ಕರೆಯುತ್ತಾರೆ; ಬಾಲಕಿ=ಹುಡುಗಿ; ಬೈತಲೆ= ತಲೆಗೂದಲನ್ನು ನೆತ್ತಿಯ ನಡುಭಾಗದಲ್ಲಿ ವಿಂಗಡಿಸಿ ಬಾಚಿದಾಗ, ನಡುವೆ ಕಾಣುವ ಉದ್ದನೆಯ ಗೆರೆ;

**ಮಹೇಂದ್ರ ವರ ದಿಗ್ಬಾಲಕಿಯ ಬೈತಲೆಯ ಕುಂಕುಮ ಜಾಲವೋ ಹೇಳೆನಲು=** ಮೂಡಣದ ಸುಂದರ ಬಾಲೆಯ ಬಯ್ತಲೆಯಲ್ಲಿ ಕಂಗೊಳಿಸುತ್ತಿರುವ ದಟ್ಟವಾದ ಕುಂಕುಮವೋ ಎನ್ನುವಂತೆ; ದಿನಪ=ಸೂರ್ಯ/ರವಿ; ಚೂಣಿ=ಮುಂದಿನ ಸಾಲು; ರಂಜಿಸು=ಹೊಳೆ/ಪ್ರಕಾಶಿಸು/ಬೆಳಗು; **ದಿನಪನ ಚೂಣಿ ರಂಜಿಸಿತು=** ಉದಯಿಸುತ್ತಿರುವ ಸೂರ್ಯನ ಹೊಂಗಿರಣಗಳ ಬೆಳಗು ಕಂಗೊಳಿಸಿತು;

ಮೂಡಣ+ಅದ್ರಿಯೊಳು; ಅದ್ರಿ=ಬೆಟ್ಟ; ಓಲಗ=ದರ್ಬಾರು; **ಮೂಡಣಾದ್ರಿಯೊಳು ರವಿ ಓಲಗವ ಇತ್ತನು**=ಮೂಡಣದ ಬೆಟ್ಟದಿಂದ ಮೂಡಿ ಬಂದ ಸೂರ್ಯನಿಂದಾಗಿ ನಿಸರ್ಗದಲ್ಲಿ ಅನೇಕ ಬಗೆಯ ಬದಲಾವಣೆಗಳು ಕಂಡುಬರತೊಡಗಿದವು; ಸರಸಿಜ=ತಾವರೆ; ಸರಸಿ=ಕೊಳ/ಸರೋವರ; ಜ=ಹುಟ್ಟಿದ್ದು; ಪರಿಮಳ=ಸುವಾಸನೆ; ಬರವಕೊಟ್ಟನು=ಆಹ್ವಾನಿಸಿದನು; **ಸರಸಿಜದ ಪರಿಮಳಕೆ ತುಂಬಿಯ ಬರವ ಕೊಟ್ಟನು**=ತನ್ನ ಹೊಂಗಿರಣಗಳ ತಾಕುವಿಕೆಯಿಂದ ಅರಳತೊಡಗಿದ ತಾವರೆಯ ಹೂವಿನ ಸುವಾಸನೆಯ ಬಂಡನ್ನು ಸವಿಯಲು ತುಂಬಿಗೆ ಆಹ್ವಾನವನ್ನು ನೀಡಿದನು; ಚಂದ್ರಕಾಂತ=ಚಂದ್ರನ ಬೆಳುದಿಂಗಳ

ಕಾಂತಿಯಂತೆ ಹೊಳೆಯುವ

ಒಂದು ಬಗೆಯ ಕಲ್ಲು; ಇದು ಇರುವ ಕಡೆಯಲ್ಲಿ ಪರಿಸರ ತಂಪಾಗಿರುತ್ತದೆ; ಬೆರಗನು+ಇತ್ತನು; ಬೆರಗು=ತಲ್ಲಣ/ತಳಮಳ;

**ಚಂದ್ರಕಾಂತಕೆ ಬೆರಗನಿತ್ತನು**=ಸೂರ್ಯನ ಹೊಂಗಿರಣಗಳ ಬಿಸಿಯಿಂದ ತಂಪಾಗಿದ್ದ ಚಂದ್ರಕಾಂತ ಶಿಲೆಯ ತಂಪು ಅಡಗಿತು; ಜಕ್ಕವಕ್ಕಿ=ಇರುಳೆಲ್ಲವೂ ಬೇರೆಬೇರೆಯಾಗಿದ್ದು ಸೂರ್ಯೋದಯವಾಗುತ್ತಿದ್ದಂತೆಯೇ ಜತೆಗೂಡುವ ಜೋಡಿಹಕ್ಕಿಗಳು; **ಜಕ್ಕವಕ್ಕಿಯ ಸೆರೆಯ ಬಿಡಿಸಿದನು**=ಒಂದನ್ನೊಂದು ಅಗಲಿದ್ದ ಜಕ್ಕವಕ್ಕಿಗಳನ್ನು ಮತ್ತೆ ಜತೆಗೂಡಿಸಿದನು; ನೈದಿಲೆ=ಕಡು ನೀಲಿ ಬಣ್ಣದ ತಾವರೆಯ ಹೂವು. ಇದು ರಾತ್ರಿಯ ವೇಳೆ ಅರಳುತ್ತದೆ. ಹಗಲಿನಲ್ಲಿ ಮುದುಡಿಕೊಳ್ಳುತ್ತದೆ; ನೈದಿಲ ಸಿರಿ=ಕತ್ತಲಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಅರಳಿದ್ದ ನೀಲಿ ತಾವರೆಹೂಗಳ ಗುಂಪು; ಸೂರೆ=ಲೂಟಿ; ಕೆರಳು=ಕೋಪಗೊಂಡು; **ಕೆರಳಿ ನೈದಿಲ ಸಿರಿಯ ಸೂರೆಯ ತರಿಸಿದನು**=ಸೂರ್ಯನು ತನ್ನ ಹೊಂಗಿರಣಗಳ ಬಿಸಿಯಿಂದ ನೈದಿಲೆಯ ಹೂವುಗಳೆಲ್ಲವೂ ಮುದುಡಿಕೊಳ್ಳುವಂತೆ ಮಾಡಿದನು; ರಿಪು=ಹಗೆ/ಶತ್ರು; ರಿಪುರಾಯ ರಾಜ್ಯ=ಹಗಲಿನ ರಾಜ್ಯಕ್ಕೆ ಹಗೆಯಾಗಿರುವುದು ಕತ್ತಲರಾಜ್ಯ; ಒರಸು=ನಾಶಗೊಳಿಸು; **ರಿಪುರಾಯ ರಾಜ್ಯವನು ಒರಸಿದನು**=ಕತ್ತಲೆಯನ್ನು ಸಂಪೂರ್ಣವಾಗಿ ತೊಲಗಿಸಿ ಬೆಳಕನ್ನು ಚೆಲ್ಲಿದನು;

ಹರ=ಶಿವ; ಶ್ರೀಕಾಂತ=ವಿಷ್ಣು; ಉಪ್ಪವಡಿಸು=ನಿದ್ರೆಯಿಂದ ಏಳು; **'ಹರಹರ ಶ್ರೀಕಾಂತನು' ಎನುತ ಐವರು ಕುಮಾರಕರು ಉಪ್ಪವಡಿಸಿದರು**=ಅಯ್ದು ಮಂದಿ ಪಾಂಡವರು ಅಂದು ಬೆಳಗಿನ ಜಾವ ನಿದ್ರೆಯಿಂದ ಎಚ್ಚರಗೊಂಡು… "ಹರ ಹರ ಶ್ರೀಕಾಂತ" ಎಂದು ದೇವರ ನಾಮಸ್ಮರಣೆ ಮಾಡುತ್ತ ಮೇಲೆದ್ದರು; ಅರಿ=ಹಗೆ;

ವಿದಾರಕ=ಸೀಳುಮಾಡುವ/ನಾಶಮಾಡುವ; ಅರಿವಿದಾರ=ಹಗೆಯನ್ನು ಸೀಳುವವನು;

ಮಾಂಗಲ್ಯ=ಮಂಗಳಕರವಾದುದು; ಮಜ್ಜನ=ಸ್ನಾನ; **ಅರಿವಿದಾರರು ಮಾಂಗಲ್ಯ ಮಜ್ಜನವ ಮಾಡಿದರು**=ಹಗೆಗಳನ್ನು ನಾಶಪಡಿಸುವ ಶಕ್ತಿಯುಳ್ಳ ಪಾಂಡವರು ಮಂಗಳಕರವಾದ ಸ್ನಾನವನ್ನು ಮಾಡಿದರು; ವರ=ಉತ್ತಮ; ವಿಭೂಷಣ=ಒಡವೆ; ಗಂಧ=ಚಂದನದ ಕೊರಡನ್ನು ನೀರಿನಲ್ಲಿ ಅರೆದು ಮಾಡಿದ ವಸ್ತು; ಮಾಲ್ಯ=ಹೂವಿನ ಹಾರ; ಅಂಬರ=ಬಟ್ಟೆ; ಪರಿವೃತ=ಆವರಿಸಿದ/ಸುತ್ತುವರಿದ; **ವರ ವಿಭೂಷಣ ಗಂಧ ಮಾಲ್ಯ ಅಂಬರದಿ ಪರವೃತರಾದರು**=ಉತ್ತಮವಾದ ಬಟ್ಟೆಗಳನ್ನು ಉಟ್ಟು, ಒಡವೆಗಳನ್ನು ತೊಟ್ಟು, ಹೂಮಾಲೆಯನ್ನು ಹಾಕಿಕೊಂಡು, ಗಂಧವನ್ನು ಲೇಪಿಸಿಕೊಂಡು ಸಿಂಗಾರಗೊಂಡರು; ಅವನೀಸುರ=ಭೂಮಿಯ

ಮೇಲೆ ಇರುವ ದೇವತೆ/ಬ್ರಾಹ್ಮಣ; ಧೇನು=ಹಸು; ಮಣಿ=ನವ ರತ್ನಗಳು; ಕನಕ+ಆದಿ; ಕನಕ=ಚಿನ್ನ; ಆದಿ=ಮೊದಲು; ಅವನೀ=ಭೂಮಿ; ಸುರ=ದೇವತೆ; **ಅವನೀಸುರರಿಗೆ ಧೇನು ಮಣಿ ಕನಕಾದಿ ವಸ್ತುಗಳ ಇತ್ತರು**=ಬ್ರಾಹ್ಮಣರಿಗೆ ಹಸು, ನವರತ್ನ, ಚಿನ್ನ ಮೊದಲುಗೊಂಡು ಅನೇಕ ಬಗೆಯ ವಸ್ತುಗಳನ್ನು ದಾನವಾಗಿ ನೀಡಿದರು;

ತಮ=ಕತ್ತಲು; ಹರುಷ=; ದ್ಯುಮಣಿ=ಸೂರ್ಯ; **ತಮದ ಗಂಟಲನು ಒಡೆದ ಹರುಷ ದ್ಯುಮಣಿಮಂಡಲದಂತೆ**=ಕತ್ತಲಿನ ಗಂಟಲನ್ನು ಸೀಳಿದ ಹೊಂಗಿರಣದ ಸೂರ್ಯಮಂಡಲದಂತೆ; ಜೀವಭ್ರಮೆ=ಮಾನವ ದೇಹ ಮತ್ತು ಆತ್ಮದ ಬಗೆಗಿರುವ ತಪ್ಪು ಕಲ್ಪನೆಗಳು; ಕವಚ=ಹೊದಿಕೆ; ಕಳೆದು=ತೆಗೆದುಹಾಕಿ; ಹೊಳೆಹೊಳೆವ=ಅತ್ಯಂತ ಪ್ರಕಾಶಮಾನವಾದ; ಆತ್ಮ=ಚೇತನ; ಅಂದ=ರೀತಿ; **ಜೀವಭ್ರಮೆಯ ಕವಚವ ಕಳೆದು ಹೊಳೆ ಹೊಳೆವ ಆತ್ಮನ ಅಂದದಲಿ**=ಅಳಿಯುವ ದೇಹದ ಬಗೆಗಿನ ತಪ್ಪುಕಲ್ಪನೆಯನ್ನು ಹೋಗಲಾಡಿಸಿ, ಎಂದೆಂದಿಗೂ ಪ್ರಕಾಶಮಾನವಾಗಿ ಬೆಳಗುತ್ತ ಚಿರವಾಗಿ ಉಳಿಯುವ ಆತ್ಮದ ರೀತಿಯಲ್ಲಿ; ವಿಮಲ=ಪವಿತ್ರವಾದ/ಪರಿಶುದ್ದವಾದ; ಕ್ಷತ್ರ=ಕ್ಷತ್ರಿಯ ತೇಜಸ್ಸು; ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ ಎಂಬ ನಾಲ್ಕು ವರ್ಣಗಳು; ರಶ್ಮಿ=ಕಿರಣ; ಕ್ಷತ್ರ ರಶ್ಮಿ= ರಾಜತೇಜಸ್ಸು; ಅಮರು=ಕೂಡಿಸು; ದೆಸೆ=ದಿಕ್ಕು; **ವಿಮಲ ಬಹಳ ಕ್ಷತ್ರ ರಶ್ಮಿಗಳು ಅಮರಿ ದೆಸೆಗಳ ಬೆಳಗೆ**=ಪರಿಶುದ್ಧವಾದ ಮತ್ತು ಅತಿಶಯವಾದ ರಾಜ ತೇಜಸ್ಸು ಕೂಡಿಕೊಂಡು ದಿಕ್ಕುಗಳನ್ನು ಬೆಳಗುತ್ತಿರಲು; ರಾಜ+ಉತ್ತಮ; ಎಸೆ=ಶೋಭಿಸು/ ಕಂಗೊಳಿಸು; **ರಾಜೋತ್ತಮ ಯುಧಿಷ್ಠಿರ ದೇವನು ರಾಜ ತೇಜದಲಿ ಎಸೆದನು**= ರಾಜರಲ್ಲಿಯೇ ಉತ್ತಮನಾಗಿರುವ ಧರ್ಮರಾಯನು ರಾಜತೇಜಸ್ಸಿನಿಂದ ಕಂಗೊಳಿಸುತ್ತಿದ್ದನು;

ಪರಮ=ಅತ್ಯುತ್ತಮವಾದ; ಕ್ರತು=ಯಾಗ; ವರ=ಉತ್ತಮವಾದುದು; ಮಜ್ಜನ=ಸ್ನಾನ; ಅವಭೃತ ಮಜ್ಜನ=ಯಾಗದ ಆಚರಣೆಯ ಮುಕ್ತಾಯದ ಹಂತದಲ್ಲಿ ಮಾಡುವ ಸ್ನಾನ; ವಿಸ್ತರಿಸಿ=ಸಜ್ಜುಗೊಳಿಸಿ/ಅಣಿಮಾಡಿ; **ಪರಮ ಸತ್ಯವ್ರತ ಮಹಾಕ್ರತು ವರದಲಿ ಅವಭೃತ ಮಜ್ಜನವ ವಿಸ್ತರಿಸಿ ಭೀಮಾದಿಗಳು ಸಹಿತ ವಿರಾಟನ ಅರಮನೆಗೆ ಅರಸ ಬಂದನು**=ಪರಮ ಸತ್ಯವ್ರತವೆಂಬ ಹೆಸರಿನ ಮಹಾಯಾಗವನ್ನು ಮಾಡಿ, ಯಾಗದ ಕೊನೆಯಲ್ಲಿ ಸ್ನಾನವನ್ನು ಮಾಡಿಕೊಂಡು ಭೀಮ ಮತ್ತು ಇತರ ಸಹೋದರರು ಹಾಗೂ ದ್ರೌಪದಿಯ ಜತೆಗೂಡಿ ಧರ್ಮರಾಯನು ವಿರಾಟರಾಯನ ಅರಮನೆಯ ರಾಜಸಭಾಂಗಣಕ್ಕೆ ಬಂದನು; ಮಣಿ=ನವರತ್ನಗಳು; ಖಚಿತ=ಕೂಡಿಸಿದ; ಕೇಸರಿ=ಸಿಂಹ; ಪೀಠ=ಗದ್ದುಗೆ;

ಕೇಸರಿಯ ಪೀಠ=ಸಿಂಹಾಸನ; ಅಡರು=ಏರು/ಮೇಲಕ್ಕೆ ಹತ್ತು; **ಮಣಿಖಚಿತ ಕೇಸರಿಯ ಪೀಠವನು ಅಡರಿದನು**=ನವರತ್ನಗಳನ್ನು ಜೋಡಿಸಿ ಸಿದ್ಧಪಡಿಸಿರುವ ಸಿಂಹಾಸನವನ್ನೇರಿ ಕುಳಿತುಕೊಂಡನು; ಪರುಟವಿಸು=ಆವರಿಸು/ಸುತ್ತುವರಿದು; ಚರಣ=ಪಾದ; **ಒಡಹುಟ್ಟಿದರು ಪರುಟವಿಸಿ ನಿಜ ಚರಣ ಸೇವೆಯಲಿ ಎಸೆದರು**= ಒಡವುಟ್ಟಿದ ನಾಲ್ಕುಮಂದಿ ತಮ್ಮಂದಿರು ಧರ್ಮರಾಯನನ್ನು ಸುತ್ತುವರಿದು, ಅವನ ಪಾದಸೇವೆಯಲ್ಲಿ ತೊಡಗಿದರು;

ಕಂಚುಕಿ=ರಾಣಿವಾಸದ ಉಸ್ತುವಾರಿಯ ಅಧಿಕಾರಿ; ಐತಂದು=ಆಗಮಿಸಿ; ಈಕ್ಷಿಸು=ನೋಡು; **ಕಂಚುಕಿಗಳು ಐತಂದು ಇವರನು ಈಕ್ಷಿ**ಸಿ=ರಾಜಸಭಾಂಗಣಕ್ಕೆ ಬಂದ ಕಂಚುಕಿಗಳು ಸಿಂಹಾಸನವನ್ನು ಆಕ್ರಮಿಸಿಕೊಂಡಿರುವ ಇವರನ್ನು ನೋಡಿ; ಅವನಿಪ=ರಾಜ; ಸಗರ್ವಿತ=ಮಹಾಸೊಕ್ಕಿನವನು; ಆರು=ಯಾರು; **ಅವನಿಪನ ಸಿಂಹಾಸನವನು ಏರುವ ಸಗರ್ವಿತರು ಆರು**=ವಿರಾಟರಾಯನ ಸಿಂಹಾಸನವನ್ನೇ ಏರಿಕುಳಿತಿರುವ ಮತ್ತು ಸುತ್ತುವರಿದಿರುವ ಮಹಾಸೊಕ್ಕಿನವರಾದ ಇವರು ಯಾರು; ಎವೆ=ಕಣ್ಣಿನ ರೆಪ್ಪೆ; ಉರಿ=ಸುಡು/ಜ್ವಲಿಸು; ಹಾಯ್=ಸಂಕಟ ಉಂಟಾದಾಗ ಬಾಯಿಂದ ಹೊರಹೊಮ್ಮುವ ಉದ್ಗಾರದ ದನಿ; **ನೋಡಿದಡೆ ಎವೆಗಳು ಉರಿವುದು ಹಾಯ್ ಎನುತ**=ಇವರನ್ನು ನೋಡುತ್ತಿದ್ದರೆ ನಮ್ಮ ಕಣ್ಣಿನ ರೆಪ್ಪೆಗಳೇ ಸುಟ್ಟುಹೋಗುತ್ತಿವೆ...ಹಾಯ್ ಎನ್ನುತ್ತ; ಕ್ಷಾತ=ಕ್ಷತ್ರಿಯ; ಕ್ಷಾತ್ರತೇಜ= ರಾಜತೇಜಸ್ಸು; ಅವಗಡಿಸು=ವಿರೋಧಿಸು;

**ಕ್ಷಾತ್ರ ತೇಜವನು ಅವಗಡಿಸಲು ಅಂಜಿದರು**=ಕ್ಷತ್ರಿಯ ತೇಜೋಬಲದಿಂದ ಕೂಡಿರುವ ಅವರನ್ನು ವಿರೋಧಿಸಲು ಹೆದರಿದರು; ಅವದಿರು=ಅವರು/ ಕಂಚುಕಿಗಳು; ಹರಿತಂದು=ಓಡೋಡಿ ಬಂದು; ಎಬ್ಬಿಸಿ=ನಿದ್ರೆಯಲ್ಲಿದ್ದ ರಾಜನನ್ನು ಎಚ್ಚರಗೊಳಿಸಿ; ಮತ್ಸ್ಯಭೂಪತಿ=ಮತ್ಸ್ಯವೆಂಬ ಹೆಸರಿನ ದೇಶದ ರಾಜ ವಿರಾಟರಾಯ; ಬಿನ್ನವಿಸು=ಅರಿಕೆ ಮಾಡು/ತಿಳಿಸು; **ಅವದಿರು ಹರಿತಂದು ಎಬ್ಬಿಸಿ ಮತ್ಸ್ಯಭೂಪತಿಗೆ ಬಿನ್ನವಿಸಿದರು**=ಕಂಚುಕಿಗಳು ರಾಜಸಭಾಂಗಣದಿಂದ ಓಡೋಡಿ ಬಂದು, ನಿದ್ರೆಯಲ್ಲಿದ್ದ ವಿರಾಟರಾಯನ್ನು ಎಬ್ಬಿಸಿ, ಅಲ್ಲಿ ತಾವು ಕಂಡ ನೋಟವನ್ನು ಅರಿಕೆ ಮಾಡಿಕೊಂಡರು; ಜೀಯ=ಒಡೆಯ/ಯಜಮಾನ; ದಿವಿಜ=ದೇವತೆ; ರಾಯ=ರಾಜ; ದಿವಿಜರಾಯ=ದೇವೇಂದ್ರ; ಮೇಣ್=ಇಲ್ಲವೇ; ನರ=ಮಾನವ; **ಜೀಯ, ಸಿಂಹಾಸನಕೆ ದಿವಿಜರ ರಾಯನೋ...ಶಂಕರನೊ ಮೇಣ್ ನಾರಾಯಣನೊ...ನರರಲ್ಲ**=ಒಡೆಯ, ನಿನ್ನ ಸಿಂಹಾಸನದ ಮೇಲೆ ಯಾರೋ ಬಂದು ಕುಳಿತಿದ್ದಾನೆ. ಅವನು ದೇವೇಂದ್ರನೋ... ಶಂಕರನೊ ಇಲ್ಲವೇ ನಾರಾಯಣನೋ ಹೇಳಲಾಗದು. ಅಂತು ಸಿಂಹಾಸನವನ್ನೇರಿ ಕುಳಿತಿರುವವನು

ನರನಲ್ಲ; **ದೇವರು ಬಂದು ನೋಡುವುದು**=ಅಲ್ಲಿಗೆ ಬಂದು ನೀವೇ ನೋಡಿರಿ; ಕಾಯ್=ಕಾಪಾಡು; ಅಸದಳ=ಅಸಾಧ್ಯ/ಆಗುವುದಿಲ್ಲ; **ಎಮಗೆ ಕಾಯಲು ಅಸದಳವು**=ಸಿಂಹಾಸನದಲ್ಲಿ ಕುಳಿತಿರುವವನನ್ನು ಹೊರಹಾಕಿ, ಗದ್ದುಗೆಯನ್ನು ಕಾಪಾಡಿಕೊಳ್ಳಲು ನಮ್ಮಿಂದ ಆಗದು; ನಿರ್ದಾಯ=ನಿಶ್ಚಯ/ನಿಜ; ನೆಲೆಗೊಳ್ಳು= ತಳವೂರು/ಬಂದು ನೆಲಸು; ನಿರ್ಜರ=ದೇವತೆ; ನಿರ್ಜರರಾಯ=ದೇವತೆಗಳ ಒಡೆಯ; ಆರು=ಯಾರು; **ನಿರ್ದ್ದಾಯದಲಿ ನೆಲೆಗೊಂಡ ನಿರ್ಜರರಾಯನು ಆರು ಎಂದೆನುತಲು ಆಗ ವಿರಾಟ ಚಿಂತಿಸಿದ**=ನಿಶ್ಚಯದ ಮನದಿಂದ ನನ್ನ ಸಿಂಹಾಸನವನ್ನೇರಿ ಕುಳಿತಿರುವ ದೇವತೆಗಳ ಒಡೆಯ ಯಾರಿರಬಹುದು ಎಂದುಕೊಳ್ಳುತ್ತ, ಆಗ ವಿರಾಟರಾಜನು ಚಿಂತೆಗೊಳಗಾದನು;

ಅಖಿಲ=ಎಲ್ಲ/ಸಮಸ್ತ; ಪ್ರಧಾನ=ಮಂತ್ರಿ; ಓಲಗಶಾಲೆ=ರಾಜಸಬಾಂಗಣ; ನೃಪತಿ=ರಾಜ; ಐತರು=ಆಗಮಿಸು; **ಉತ್ತರನನು ಅಖಿಲ ಮಹಾ ಪ್ರಧಾನರನು ಪುರೋಹಿತನನು ಕರೆಸಿಕೊಂಡು ಅರಮನೆಯ ಹೊರವಂಟು ಓಲಗಶಾಲೆಗೆ ನೃಪತಿ ಐತರುತ ದೂರದಲಿ**=ವಿರಾಟರಾಯನು ಉತ್ತರಕುಮಾರನನ್ನು, ತನ್ನೆಲ್ಲಾ ಮಹಾಮಂತ್ರಿಗಳನ್ನು ಮತ್ತು ಪುರೋಹಿತನನ್ನು ಕರೆಸಿಕೊಂಡು ಅವರೆಲ್ಲರ ಜತೆಗೂಡಿ ತನ್ನ ಅರಮನೆಯಿಂದ ಓಲಗಶಾಲೆಯ ಒಳಕ್ಕೆ ಬರುತ್ತಿದ್ದಂತೆಯೇ ದೂರದಲ್ಲಿ;

ಕಿರಣ=ರಶ್ಮಿ/ಬೆಳಕು; ಸೂಸು=ಹರಡು; ಲಹರಿ=ಅಲೆ/ತರಂಗ; **ಚಂದ್ರ ಬಿಂಬದ ಕಿರಣ ಕರಗಿ ಸೂಸಿದ ಲಹರಿಗಳು ಎನಲು**=ಚಂದ್ರಬಿಂಬದ ಬೆಳುದಿಂಗಳ ಕಿರಣಗಳು ಕರಗಿ ಹರಡಿಕೊಂಡಿರುವ ಬೆಳಕಿನ ಅಲೆಗಳೋ ಎನ್ನುವಂತೆ; ಆಭರಣ=ಒಡವೆ; ಮುಕ್ತ=ಎಸೆದ/ತೂರಿದ; ಪ್ರಭೆ=ಕಾಂತಿ/ಬೆಳಕು; ಮುಕ್ತಪ್ರಭೆ= ಎಲ್ಲೆಡೆ ಹರಡಿಕೊಂಡಿರುವ ಬೆಳಕು; **ವಿವಿಧ ಆಭರಣ ಮುಕ್ತ ಪ್ರಭೆಯ ನೃಪತಿ ಕಂಡನು**=ವಿರಾಟರಾಯನು ಸಿಂಹಾಸನವಿರುವ ಎಡೆಯಲ್ಲಿ ಬಹುಬಗೆಯ ಒಡವೆಗಳ ಕಾಂತಿಯ ಬೆಳಕು ಹರಡಿಕೊಂಡಿರುವುದನ್ನು ಕಂಡನು;

ಹರ=ಶಿವ; ಸ್ಫುರಿತ=ಹೊಳೆಯುವ; ಈಶಾನ=ಶಿವನ ಪಂಚಮುಕಗಳಲ್ಲಿ ಒಂದು; ಚತುಷ್ಟಯ=ನಾಲ್ಕು ಮಂದಿ;

**ಹರನ ನಾಲುಕು ಮುಖದ ಮಧ್ಯ ಸ್ಫುರಿತದ ಈಶಾನದವೊಲು ಆ ಸೋದರ ಚತುಷ್ಟಯ ಮಧ್ಯದಲಿ ಯುಧಿಷ್ಠಿರನ ಕಂಡನು**=ಪಂಚಮುಖವುಳ್ಳ ಶಿವನಲ್ಲಿ ಅತ್ತ ಎರಡು ಮುಖ…ಇತ್ತ ಎರಡು ಮುಖದ ನಡುವೆ ಹೊಳೆಯುತ್ತಿರುವ ಈಶಾನದಂತೆ ನಾಲ್ಕು ಮಂದಿ ತಮ್ಮಂದಿರ ನಡುವೆ ಸಿಂಹಾಸನದ ಮೇಲೆ ಕಂಗೊಳಿಸುತ್ತಿರುವ ಧರ್ಮರಾಯನನ್ನು ವಿರಾಟರಾಯನು ಕಂಡನು;

ವಾಮ=ಎಡಗಡೆ; ಅರಸಿ=ಸೈರಂಧ್ರಿ; ರಶ್ಮಿ=ಕಿರಣ; ಹೊದರು=ಸಮೂಹ; ಹೊರಳಿ=ಹೆಚ್ಚಳ; **ವಾಮದಲಿ ಅರಸಿಯನು ವಿವಿಧ ಆಭರಣ ಮಣಿ ರಶ್ಮಿಗಳ ಹೊದರಿನ ಹೊರಳಿಯಲಿ ಕಂಡನು**=ಧರ್ಮರಾಯನ ಎಡಭಾಗದಲ್ಲಿ ಬಹುಬಗೆಯ ಒಡವೆಗಳಲ್ಲಿನ ನವರತ್ನಗಳ ಕಾಂತಿಯ ಹೆಚ್ಚಳದಿಂದ ತೊಳಗಿಬೆಳಗುತ್ತಿರುವ ಸೈರಂಧ್ರಿಯನ್ನು ಕಂಡನು;

ಕಣ್ಣು+ಆಲಿ; ಕಣ್ಣಾಲಿ=ಕಣ್ಣುಗುಡ್ಡೆಗಳು; ಕೋರೈಸು=ಅತಿಯಾದ ಪ್ರಕಾಶದಿಂದ ಕಣ್ಣನ್ನು ಕುಕ್ಕುವುದು; **ನಿಮಿಷದಲಿ ಕಣ್ಣಾಲಿ ಕೋರೈಸಿದವು**= ನೋಡನೋಡುತ್ತಿದ್ದಂತೆಯೇ ಒಂದು ಗಳಿಗೆಯಲ್ಲಿಯೇ ವಿರಾಟರಾಯನ ಕಣ್ಣುಗಳನ್ನು ಕುಕ್ಕುವಂತೆ ಸಿಂಹಾಸನದ ಎಡೆಯಲ್ಲಿನ ಪ್ರಕಾಶಮಾನದ ಬೆಳಕು ಕಂಗೊಳಿಸಿದವು; ಮೇಳ=ಸ್ಪರ್ಧೆ/ಸೆಣೆಸಾಟ; ಫಡ=ಬಿಡು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ಉದ್ಗಾರ;

**ಮೇಳವೇ ಫಡ**=ಇವರೊಡನೆ ನನಗೆ ಸ್ಪರ್ಧೆಯೇ... ಬಿಡು... ಬಿಡು; ಕಾಲಿಡು=ಪ್ರವೇಶಿಸು/ಉಂಟಾಗು; ತೆರಹು+ಇಲ್ಲ; ತೆರಹು=ಅವಕಾಶ; **ಮನದ ಮತ್ಸರ ಕಾಲಿಡಲು ತೆರಹಿಲ್ಲ**=ಇವರನ್ನು ನೋಡುತ್ತಿದ್ದರೆ ನನ್ನ ಮನದಲ್ಲಿ ಹೊಟ್ಟೆಕಿಚ್ಚು ಉಂಟಾಗುತ್ತಿಲ್ಲ; ನಿರ್ಜರ=ದೇವತೆ; ಮಂಡಲೇಶ್ವರ=ಒಂದು ಪ್ರಾಂತ್ಯದ ಒಡೆಯರು; **ಮನುಜರ ಹೋಲುವೆಯ ನಾಟಕದ ನಿರ್ಜರ ಮಂಡಲೇಶ್ವರರು**= ಮಾನವರನ್ನೇ ಹೋಲುತ್ತಿರುವ ಈ ಮಂಡಲೇಶ್ವರರು ನಾಟಕದ ದೇವತೆಗಳಂತೆ ಕಂಡುಬರುತ್ತಿದ್ದಾರೆ; ಆಲಿ=ಕಣ್ಣು; ಮೇಲೆ+ಇಕ್ಕಲು+ ಅಮ್ಮವು; ಇಕ್ಕು=ಇಡು; ಅಮ್ಮವು=ಆಗುತ್ತಿಲ್ಲ;

**ಆಲಿಗಳು ಮೇಲಿಕ್ಕಲಮ್ಮವು**=ತೇಜಸ್ಸಿನಿಂದ ಬೆಳಗುತ್ತಿರುವ ಅವರನ್ನು ಕಣ್ಣುಗಳಿಂದ ನೋಡಲಾಗುತ್ತಿಲ್ಲ; ಶೂಲಪಾಣಿ=ಶಿವ; ಚೂಳಿ=ಮುಂಭಾಗ/ ಮುಂದಿನ ಸಾಲು; **ಶೂಲಪಾಣಿಯ ಪರಮ ತೇಜದ ಚೂಳಿಯೋ ಶಿವ ಶಿವ... ಎನುತ್ತ ವಿರಾಟ ಬೆರಗಾದ**=ಶಿವನ ಪರಮ ತೇಜಸ್ಸಿನ ಮುಂಬೆಳಕೋ ಎನ್ನುವಂತೆ ಕಂಗೊಳಿಸುತ್ತಿದ್ದಾರೆ...ಶಿವ ಶಿವ ಎನ್ನುತ್ತ ವಿರಾಟರಾಯನು ಬೆರಗಾದನು; ಸುಳಿವು=ಗುರುತು; ಮೈಸುಳಿವು=ದೇಹದ ಆಕಾರ/ಗುರುತು; **ವಲಲ...ಕಂಕ... ಬೃಹನ್ನಳೆಯ ಮೈಸುಳಿವ ಹೋಲುವರು**=ಅರಮನೆಯಲ್ಲಿ ಬಾಣಸಿಗನಾಗಿದ್ದ ವಲಲನ ರೂಪವನ್ನು, ವಿರಾಟರಾಯನಿಗೆ ಸಹಾಯಕನಾಗಿದ್ದ ಕಂಕ ಭಟ್ಟನ ರೂಪವನ್ನು, ರಾಣಿವಾಸದಲ್ಲಿ ನಾಟ್ಯವಿದ್ಯೆಯನ್ನು ಹೇಳಿಕೊಡುತ್ತಿದ್ದ ಬೃಹನ್ನಳೆಯ ದೇಹದ ರೂಪವನ್ನು ಇವರಲ್ಲಿ ಕೆಲವರು ಹೋಲುತ್ತಿದ್ದಾರೆ; ಇದು+ಎತ್ತಣ; ಎತ್ತಣ=ಯಾವ ಕಡೆಯ; **ಇದೆತ್ತಣ ನರರು ತೆಗೆ**=ಇವರು ಯಾವ

ರೀತಿಯಿಂದಲೂ ಮಾನವರಂತೆ ಕಾಣುತ್ತಿಲ್ಲ; ಸುರಲೋಕ= ದೇವಲೋಕ; ಅರಿದು=ಆಗುತ್ತಿಲ್ಲ; ತಳವೆಳಗಾಗು= ಅಚ್ಚರಿಗೊಳ್ಳು/ವಿಸ್ಮಯಪಡು; **ಸುರಲೋಕ ಪಾಲಕರು**=ದೇವಲೋಕದ ಒಡೆಯರು; **ಎಮಗೆ ತಿಳಿಯಲು ಅರಿದು ಎಂದು ತಳವೆಳಗುಗೊಳುತಿರಲು**=ನಮಗೆ ಇವರು ಯಾರೆಂಬುದನ್ನು ತಿಳಿಯ ಲಾಗುತ್ತಿಲ್ಲ ಎಂದು ಅಚ್ಚರಿಗೊಳ್ಳುತ್ತಿರಲು; **ಉತ್ತರ ಮಂದಿಯ ಕೆಲಕೆ ನೂಕಿಯೆ ತಂದೆಗೆ ನಗುತ ಕೈಮುಗಿದ**=ಗುಂಪಿನ ಮುಂದಕ್ಕೆ ಬಂದು ಕೆಲವರನ್ನು ಪಕ್ಕಕ್ಕೆ ನೂಕಿ, ತಂದೆಯನ್ನು ನೋಡಿ ನಗುತ್ತ ಕಯ್ ಮುಗಿದು ಮಾತನಾಡತೊಡಗಿದ;

ತಾತ=ಅಪ್ಪ; ಬಿನ್ನಹ=ಅರಿಕೆ; **ತಾತ ಬಿನ್ನಹ**=ಅಪ್ಪ, ಈಗ ನಿಮ್ಮಲ್ಲಿ ಒಂದು ಸಂಗತಿಯನ್ನು ಅರಿಕೆಮಾಡಿಕೊಳ್ಳುತ್ತೇನೆ. ಧರ್ಮರಾಯನು ಕುಳಿತಿದ್ದ ಸಿಂಹಾಸನದ ಅಕ್ಕಪಕ್ಕದಲ್ಲಿದ್ದವರನ್ನು ಉತ್ತರನು ವಿರಾಟರಾಯನಿಗೆ ತೋರಿಸುತ್ತ, ಅವರ ಬಗೆಗಿನ ಮಾಹಿತಿಯನ್ನು ನೀಡತೊಡಗುತ್ತಾನೆ; ವ್ರಾತ=ಸಮೂಹ/ಗುಂಪು; ವೈರಿವ್ರಾತ=ಶತ್ರುಸೇನಾಪಡೆ; **ಈ ತೋರ್ಪಾತನು ನಿನ್ನೆ ವೈರಿವ್ರಾತವನು ಗೆಲಿದಾತನು**= ಇಲ್ಲಿ ಕಾಣುತ್ತಿರುವವನು ನಿನ್ನೆಯ ಕಾಳೆಗದಲ್ಲಿ ದುರ್ಯೋಧನನ ಚತುರಂಗ ಬಲವನ್ನು ಗೆದ್ದವನು; ಮೆರೆ=ಎದ್ದುತೋರು/ಶೋಭಿಸು; ಕೀಚಕ+ ಅಂತಕ; ಅಂತಕ=ಯಮ; ಕೀಚಕಾಂತಕ=ಕೀಚಕನನ್ನು ಕೊಂದವನು; **ಈತನ ಮುಂದೆ ಮೆರೆವವ ಕೀಚಕಾಂತಕನು**=ಈತನ ಮುಂದೆ ಎದ್ದುಕಾಣುತ್ತಿರುವವನು ಕೀಚಕನನ್ನು ಕೊಂದವನು; **ಈತ ನಕುಲನು**=ಇವನು ನಕುಲ; ವಾಮ=ಎಡಗಡೆ; ಸಹದೇವ+ಅಂಕನು; ಅಂಕ=ಹೆಸರು; **ವಾಮದಲಿನಿಂದಾತ ಸಹದೇವಾಂಕನು**= ಸಿಂಹಾಸನದ ಎಡಬದಿಯಲ್ಲಿ ನಿಂತಿರುವವನು ಸಹದೇವನೆಂಬ ಹೆಸರಿನವನು; ಅನಿಬರಿಗೆ=ಅವರೆಲ್ಲರಿಗೂ; **ಅನಿಬರಿಗೆ ಈತ ಹಿರಿಯನು ಧರ್ಮನಂದನನು ಎಂದು ತೋರಿಸಿದ**=ಅವರೆಲ್ಲರಿಗೂ ಸಿಂಹಾಸನದಲ್ಲಿ ಕುಳಿತಿರುವ ಈತನೇ ಹಿರಿಯನಾದ ಧರ್ಮರಾಯನು ಎಂದು ಪಾಂಡುನಂದನರನ್ನು ತೋರಿಸಿದ;

ಕೆಲ=ಪಕ್ಕ; ಕಮಲಮುಖಿ=ಕಮಲದ ಹೂವಿನಂತಹ ಮೊಗವುಳ್ಳವಳು/ ಸುಂದರಿ; ರಮಣಿ=ಹೆಂಡತಿ; **ಕೆಲದಲಿ ಕಮಲಮುಖಿಯನು ನೋಡು...ಈಕೆ ಐವರಿಗೆ ರಮಣಿ**=ಪಕ್ಕದಲ್ಲಿರುವ ಸುಂದರಿಯನ್ನು ನೋಡು. ಈಕೆಯು ಅಯ್ದುಮಂದಿಗೆ ಹೆಂಡತಿ; **ತಾವು ಇವರು ಪಾಂಡುನಂದನರು**=ಈ ಅಯ್ದು ಮಂದಿಯು ಹಸ್ತಿನಾವತಿಯ ಪಾಂಡುರಾಜನ ಮಕ್ಕಳು; ಅಮಳ=ನಿರ್ಮಲವಾದ/ ಪರಿಶುದ್ಧವಾದ; ಗಂಭೀರ=ಗಹನವಾದ/ಮಹತ್ತರವಾದ; **ಅಮಳ ಗುಣ ಗಂಭೀರ ರಾಯರು**=ಒಳ್ಳೆಯ ನಡೆನುಡಿಯಿಂದ ಕೂಡಿದ ದೊಡ್ಡ ಗುಣವಂತರಾದ ರಾಜರು; ಭಾರಿ=ಹೆಚ್ಚಾದ/ಅತಿಶಯವಾದ; ಭಾಗ್ಯಲಕ್ಷ್ಮಿ=ಸಂಪತ್ತಿನ ದೇವತೆ;

ಮಮತೆ+ಆಯ್ತು; ಮಮತೆ=ಪ್ರೀತಿ/ವಾತ್ಸಲ್ಯ;

**ನಮಗೆ ಭಾರಿಯ ಭಾಗ್ಯಲಕ್ಷ್ಮಿಯ ಮಮತೆಯಾಯ್ತು**=ಇವರು ಇಲ್ಲಿರುವುದರಿಂದ ನಮಗೆ ದೊಡ್ಡ ಸಂಪತ್ತಿನ ದೇವತೆಯೇ ಒಲಿದು ಬಂದಂತಾಯಿತು; **ಇನ್ನೇನು ನಡೆ ನಡೆ**=ನಿನ್ನ ಸಿಂಹಾಸನವನ್ನು ಏರಿ ಕುಳಿತವನು ಮತ್ತು ಅವನನ್ನು ಸುತ್ತುವರಿದವರು ಯಾರು ಎಂಬುದು ತಿಳಿದ ನಂತರವೂ ತಡಮಾಡಬೇಡ. ಅವರತ್ತ ಹೋಗೋಣ ನಡೆ...ನಡೆ; ನೃಪ=ರಾಜ; ಪದ=ಪಾದ/ಚರಣ; ಪದಕಮಲ=ಇದೊಂದು ನುಡಿಗಟ್ಟು. ವ್ಯಕ್ತಿಗೆ ಅಪಾರವಾದ ಪ್ರೀತಿ ಮತ್ತು ವಿನಯವನ್ನು ತೋರಿಸುವಾಗ, ಅವನ ಪಾದವನ್ನು ಪವಿತ್ರವೆಂದು ತಿಳಿಯುವುದು; ಬೀಳುವೆವು=ಬೀಳುತ್ತೇವೆ; **ನೃಪ ಪದಕಮಲದಲಿ ಬೀಳುವೆವು**=ರಾಜ ಧರ್ಮರಾಯನ ಪಾದಕಮಲಗಳಿಗೆ ನಮಿಸೋಣ; ಧನ್ಯ=ಪುಣ್ಯಶಾಲಿ; ಅಹೆವು=ಆಗುವೆವು; **ಧನ್ಯರು ಅಹೆವು**=ಪುಣ್ಯಶಾಲಿಗಳಾಗೋಣ; ಈತನೇ ಧರ್ಮಜನು ದಿಟ=ನಿಜವಾಗಿಯೂ ಈತನೇ ಧರ್ಮರಾಯ;

ತಾನು+ಈತನೆ; ಪವನಜ=ವಾಯುಪುತ್ರ/ಭೀಮ; ನಿಶ್ಚಯ=ನಿಜ/ದಿಟ; **ತಾನೀತನೆ ಪವನಜನು ನಿಶ್ಚಯ**=ನಿಜವಾಗಿಯೂ ಈತ ಭೀಮಸೇನ; **ಈತನೇ ಫಲುಗುಣನು**=ಇವನೇ ಅರ್ಜುನ; **ಇವರು ಮಾದ್ರೀತನುಜರೇ**=ಇವರೇ ಮಾದ್ರಿಯ ಮಕ್ಕಳಾದ ನಕುಲ ಸಹದೇವ; ತಳ+ಉದರಿ; ತಳ=ತೆಳುವಾದ; ಉದರ=ಹೊಟ್ಟೆ; ತಳೋದರಿ=ತೆಳುವಾದ ಹೊಟ್ಟೆಯುಳ್ಳವಳು/ಸುಂದರಿ; ಸುತೆ=ಮಗಳು; ದ್ರುಪದ ಸುತೆ=ದ್ರುಪದರಾಜನ ಮಗಳು ದ್ರೌಪದಿ; **ಈ ತಳೋದರಿ ದ್ರುಪದ ಸುತೆಯೇ**=ಈ ಸುಂದರಿಯೇ ದ್ರುಪದನ ಮಗಳಾದ ದ್ರೌಪದಿ; **ಕೌತುಕವಲೇ**=ನಿಜಕ್ಕೂ ನನಗೆ ಇದೆಲ್ಲವೂ ಅಚ್ಚರಿಯನ್ನು ಮೂಡಿಸುತ್ತಿದೆ;

ಭುವನ=ಲೋಕ/ಜಗತ್ತು; ಭುವನಜನ=ಲೋಕದ ಜನರು; ವಿಖ್ಯಾತ=ಹೆಸರುವಾಸಿಯಾದ; ಎಲ್ಲಿಂದ+ಎಲ್ಲಿ; ಮೂಡು=ಹುಟ್ಟು; **ಭುವನಜನ ವಿಖ್ಯಾತರು ಎಲ್ಲಿಂದೆಲ್ಲಿ ಮೂಡಿದರು ಎನುತ ಬೆರಗಾದ**=ಲೋಕದ ಜನತೆಯಲ್ಲಿ ಕೀರ್ತಿವಂತರಾದ ಇವರು ಎಲ್ಲಿಂದ ಎಲ್ಲಿಗೆ ಈ ರೀತಿ ಬಂದರು ಎನ್ನುತ್ತ ಅಚ್ಚರಿಗೊಂಡ. ಜೂಜಿನಲ್ಲಿ ಸೋತು ಹಸ್ತಿನಾವತಿಯಿಂದ ಹನ್ನೆರಡು ವರುಶ ಕಾಡುಪಾಲಾಗಿದ್ದ ಮತ್ತು ಒಂದು ವರುಶದ ಕಾಲ ತಲೆಮರೆಸಿಕೊಂಡಿದ್ದ ಈ ಪಾಂಡವರು ಇಲ್ಲಿಗೆ ಹೇಗೆ ಬಂದರು ಎಂದು ವಿರಾಟರಾಯನು ಅಚ್ಚರಿಗೊಂಡು ಉತ್ತರಕುಮಾರನನ್ನು ಈ ಬಗ್ಗೆ ಪ್ರಶ್ನಿಸಿದ; ಇರು=ನೆಲಸು; **ವರುಷವೊಂದು ಅಜ್ಞಾತ ವಾಸವನು ಇರದೆ ಇಲ್ಲಿ ನೂಕಿದರು**=ಒಂದು ವರುಶದ ಅಜ್ಞಾತವಾಸವನ್ನು ಬೇರೆ ಪ್ರಾಂತ್ಯಕ್ಕೆ ಹೋಗದೆ, ಇಲ್ಲಿ ನಮ್ಮ ವಿರಾಟನಗರಿಯಲ್ಲಿ ಮಾಡಿದರು; **ಬಳಕೆಯ**

**ಹೊರೆಯ ಹೆಸರು ಅವು ಬೇರೆ**=ನಿಜ ಜೀವನದ ವ್ಯವಹಾರದಲ್ಲಿ ಇವರಿಗಿದ್ದ ಹೆಸರು ಬೇರೆ; ನಡವಳಿ=ನಡವಳಿಕೆ/ವರ್ತನೆ; ಅಂಗ=ರೀತಿ; **ನಡವಳಿಯ ಅಂಗವದು ಬೇರೆ**=ವ್ಯಕ್ತಿಗತವಾದ ನಡವಳಿಕೆಯ ರೀತಿಯೇ ಬೇರೆ. ಪಾಂಡವರು ತಾವು ರಾಜಕುಮಾರರಾಗಿದ್ದರೂ ತಮ್ಮ ನಿಜಜೀವನದ ಹೆಸರನ್ನು ಮರೆಮಾಚಿಕೊಂಡು, ಇಲ್ಲಿ ವಿರಾಟನಗರದ ನಮ್ಮ ಅರಮನೆಯಲ್ಲಿ ಸಾಮಾನ್ಯರಂತೆ ಸೇವೆಯನ್ನು ಮಾಡಿದರು; ಪರಮ=ಉತ್ತಮ; ತತ್ವಜ್ಞಾನಿ=ಸತ್ಯವನ್ನು ಅರಿತವನು; ಮರುಳನಂತೆ+ಇರೆ; ಮರುಳ=ದಡ್ಡ; ತೋರನೆ=ಕಂಡುಬರುವುದಿಲ್ಲವೇ;

**ಪರಮ ತತ್ವಜ್ಞಾನಿ ಮರುಳನಂತಿರೆ ಜಗಕೆ ತೋರನೆ**=ಕೆಲವೊಮ್ಮೆ ಪರಮ ತತ್ವಜ್ಞಾನಿಯಾದವನೂ ಕೂಡ ಏನೂ ತಿಳಿಯದವನಂತೆ ಜಗತ್ತಿನ ಜನರ ಕಣ್ಣಿಗೆ ಕಾಣಿಸಿಕೊಳ್ಳುವುದಿಲ್ಲವೇ; ಪಾಂಡವರೆಲ್ಲರೂ ತಮ್ಮ ನಿಜಸ್ವರೂಪ ಮತ್ತು ಶಕ್ತಿಯನ್ನು ಮರೆಮಾಡಿಕೊಂಡು, ಅತಿಸಾಮಾನ್ಯರಂತೆ ನಮ್ಮ ಅರಮನೆಯಲ್ಲಿದ್ದರು; **ನಮ್ಮ ಈ ಅರಸುತನ ಫಲವಾಯ್ತು ನಡೆ ಎಂದನು ಕುಮಾರಕನು**=ಜಗತ್ತಿನಲ್ಲಿಯೇ ಕೀರ್ತಿವಂತರಾದ ಪಾಂಡವರು ವಿರಾಟನಗರಿಯಲ್ಲಿದ್ದುದರಿಂದ ನಮ್ಮ ಅರಸುತನಕ್ಕೆ ದೊಡ್ಡ ಹೆಸರು ಮತ್ತು ಒಳ್ಳೆಯ ಫಲದೊರಕುವಂತಾಯಿತು. ಇನ್ನು ಅವರನ್ನು ಆದರಿಸಿ ಸತ್ಕರಿಸೋಣ ನಡೆಯಿರಿ ಎಂದು ಉತ್ತರಕುಮಾರನು ವಿರಾಟರಾಯನಿಗೆ ಹೇಳಿದನು;

ಮಣಿ=ಬೆಲೆಬಾಳುವ ಹರಳು, ಮುತ್ತು, ವಜ್ರ ಮುಂತಾದುವು; ಕನಕ=ಚಿನ್ನ; **ದರುಶನಕೆ ಮಣಿ ರತುನ ಕನಕವ ತರಿಸಿ**=ಪಾಂಡವರನ್ನು ನೋಡಿ ಸತ್ಕರಿಸಲೆಂದು ಮುತ್ತು, ರತ್ನ, ಚಿನ್ನದ ಒಡವೆಗಳನ್ನು ತರಿಸಿ; ಮುದ=ಆನಂದ/ಹಿಗ್ಗು; **ಮುದದಲಿ ಮುಳುಗಿ**=ಆನಂದಿಂದ ಕೂಡಿದವನಾಗಿ; ನಿಜ=ತನ್ನ; ಪರಿಕರ=ಪರಿವಾರ/ ಸುತ್ತಮುತ್ತಲಿನ ಜನ; ಸಹಿತ=ಜತೆಗೂಡಿ; ಮೈಯಿಕ್ಕು=ದೇಹವನ್ನು ನೆಲದ ಮೇಲೆ ಬಾಗಿಸಿ ನಮಿಸುವುದು/ಅಡ್ಡಬೀಳು; ಕಾಣಿಕೆ=ಉಡುಗೊರೆ; **ನಿಜ ಪರಿಕರ ಸಹಿತ ಮೈಯಿಕ್ಕಿದನು...ಕಾಣಿಕೆಯನು ಒಪ್ಪಿಸಿದ**=ವಿರಾಟರಾಯನು ತನ್ನ ಪರಿವಾರ ಸಮೇತ ಧರ್ಮರಾಯನಿಗೆ ಮೆಯ್ಯಿಕ್ಕಿ, ಕಾಣಿಕೆಯನ್ನು ಸಲ್ಲಿಸಿದನು;

ವರ=ಉತ್ತಮ; ನೃಪಾಲ=ರಾಜ; ತ್ರಾಹಿ=ಕಾಪಾಡು; ಭುವನ+ಈಶ್ವರ; ಭುವನ=ಲೋಕ/ಜಗತ್ತು; ಈಶ್ವರ=ಒಡೆಯ; ಭುವನೇಶ್ವರ=ಲೋಕದ ಒಡೆಯ; ಪರಿತ್ರಾಣ=ಕಾಪಾಡುವಿಕೆ; ಕರುಣಿಸು=ಅನುಗ್ರಹಿಸು/ದಯಪಾಲಿಸು; ಮತ್ಸ್ಯಭೂಪಾಲ= ಮತ್ಸ್ಯದೇಶದ ರಾಜನಾದ ವಿರಾಟರಾಯ; ಅಂಘ್ರಿ=ಪಾದ; **ವರನೃಪಾಲ ತ್ರಾಹಿ ಭುವನೇಶ್ವರ ಪರಿತ್ರಾಯಸ್ವ ಕರುಣಿಸು ಕರುಣಿಸು ಎಂದು ಮತ್ಸ್ಯ ಭೂಪಾಲ ಅಂಘ್ರಿಗಳ ಹಿಡಿದನು**=ಉತ್ತಮನಾದ ರಾಜನೇ ಕಾಪಾಡು. ಲೋಕದ

ಒಡೆಯನೇ ಕಾಪಾಡು…ಕರುಣೆಯನ್ನು ತೋರಿ ಅನುಗ್ರಹಿಸು ಎಂದು ವಿರಾಟರಾಯನು ಮೊರೆಯಿಡುತ್ತ ಧರ್ಮರಾಯನ ಪಾದಗಳನ್ನು ಹಿಡಿದುಕೊಂಡನು; **ಅಪರಾಧವನು ಬಗೆದೆನು**=ತಪ್ಪನ್ನು ಮಾಡಿದೆನು; ಕರುಣಾಳು=ಕನಿಕರವುಳ್ಳವನು/ದಯಾಳು;

ಬಲ್ಲಹ=ಒಡೆಯ/ಯಜಮಾನ; **ನೀನು ಕರುಣಾಳುಗಳ ಬಲ್ಲಹ**=ಕರುಣೆಯ ನಡೆನುಡಿಯಲ್ಲಿ ನೀನು ಬಹಳ ದೊಡ್ಡವನು; ಬಂಟ=ದಾಸ/ಸೇವಕ; ತಲೆಬಂಟ= ಪಾದಸೇವಕ; **ನಿನ್ನ ಅಂಘ್ರಿಗಳಿಗೆ ಈ ತಲೆ ಬಂಟ**=ನಿನ್ನ ಪಾದಗಳಿಗೆ ನಾನು ತಲೆಬಾಗಿದ ಸೇವಕ; **ನೀನು ಇದ ಕಾಯಬೇಕು ಎನುತ**=ಪಾದಸೇವಕನಾದ ನನ್ನನ್ನು ಮತ್ತು ನನ್ನ ಪರಿವಾರವನ್ನು ಕಾಪಾಡಬೇಕು ಎನ್ನುತ್ತ; **ಮಿಗೆ ಭಕುತಿ ಭಾವದಲಿ**=ಹೆಚ್ಚಿನ ಒಲುವು ನಲಿವು ವಿನಯದ ಭಾವದಿಂದ ಕೂಡಿದವನಾಗಿ; ಮಹೀಶ=ರಾಜನಾದ ಧರ್ಮರಾಯ; **ಮನ ನಂಬುಗೆ**=ಮನವೊಲಿಸಿ ಕೊಳ್ಳುವುದು/ನಂಬಿಕೆ ಮೂಡುವಂತೆ ನಡೆದುಕೊಳ್ಳುವುದು; ಮೆರೆ=ಎದ್ದುತೋರು/ ಕಾಣಿಸಿಕೊಳ್ಳು; **ನಿಜ ಮಂತ್ರಿಗಳು ಮಕ್ಕಳು ಸಹಿತ ಮಹೀಶರ ಇದಿರಿನಲಿ ಮತ್ಸ್ಯಭೂಪ ಮನ ನಂಬುಗೆಯ ಮೆರೆದನು**=ವಿರಾಟರಾಯನು ತನ್ನ ಮಂತ್ರಿ ಮಕ್ಕಳು ಸಹಿತ ಒಲವು ನಲಿವು ವಿನಯದ ನಡೆನುಡಿಯಿಂದ ಧರ್ಮರಾಯನ ಮನಸ್ಸನ್ನು ಒಲಿಸಿಕೊಳ್ಳುವಂತೆ ನಡೆದುಕೊಂಡನು;

ವಿಳಾಸಿನಿ=ದಾಸಿ/ಸಖಿ; ರಾಣಿವಾಸದಲ್ಲಿಗೆ=ದ್ರೌಪದಿಯಿದ್ದ ಕಡೆಗೆ; ಪೊಡವಡು=ಸಾಶ್ಟಾಂಗ ನಮಸ್ಕಾರ ಮಾಡು/ನಮಿಸು; **ಆ ಸುದೇಷ್ಣೆ ಕುಮಾರಿಯೊಡನೆ ವಿಳಾಸಿನೀಜನ ಸಹಿತ ರಾಣೀವಾಸದಲ್ಲಿಗೆ ಬಂದು ಕಾಣಿಕೆ ಕೊಟ್ಟು ಪೊಡವಂಟು**=ವಿರಾಟರಾಯನ ಹೆಂಡತಿಯಾದ ರಾಣಿ ಸುದೇಷ್ಣೆಯು ತನ್ನ ಮಗಳು ಉತ್ತರೆ ಮತ್ತು ದಾಸಿಯರ ಜತೆಗೂಡಿ ದ್ರೌಪದಿಯ ಬಳಿಗೆ ಬಂದು ಕಾಣಿಕೆಯನ್ನು ಕೊಟ್ಟು ನಮಿಸಿದಳು; ಮಹೀಶ=ರಾಜ; ಮೈಯಿಕ್ಕು=ನಮಿಸು/ ವಂದಿಸು; **ಆ ಸಕಲ ಪರಿವಾರ ಪುರಜನ ದೇಶಜನ ಬಹಳ ಹರುಷದಲಿ ಮಹೀಶನಿಗೆ ಮೈಯಿಕ್ಕಿ ಕಾಣಿಕೆಯನು ಇತ್ತು ಕಂಡುದು**=ಅಲ್ಲಿದ್ದ ರಾಜಪರಿವಾರದವರು, ಪುರಜನರು ಮತ್ತು ದೇಶದ ಜನರೆಲ್ಲರೂ ರಾಜ ಧರ್ಮರಾಯನಿಗೆ ನಮಸ್ಕರಿಸಿ ಬಹಳ ಹರುಷದಿಂದ ಕಾಣಿಕೆಯನು ನೀಡಿ, ಪಾಂಡವರ ದರ್ಶನವನ್ನು ಪಡೆದರು;

**ಅವನಿಪತಿ ಮುಗುಳು ನಗೆಯಲಿ ಭೀಮ ಪಾರ್ಥರ ಮೊಗವ ನೋಡಿದನು**= ವಿರಾಟರಾಯ ಮತ್ತು ವಿರಾಟರಾಯನ ಪರಿವಾರದವರ ವಿನಯಶೀಲವಾದ ವರ್ತನೆಯನ್ನು ನೋಡಿ ಆನಂದಗೊಂಡ ಧರ್ಮರಾಯನು ಮುಗುಳು ನಗುತ್ತ ಭೀಮನ ಮತ್ತು ಅರ್ಜುನನ ಮೊಗವನ್ನು ನೋಡಿದನು; **ತಮ್ಮಂದಿರು ಕೈಮುಗಿದು**

**ತಲೆವಾಗಿದರು**=ತಮ್ಮಂದಿರು ಕಯ್ ಮುಗಿದು ತಲೆಬಾಗಿದರು; **ಮಹೀಪತಿಗೆ ಕಾಣಿಕೆಯನು ತೆಗೆಸಿದರು**=ಧರ್ಮರಾಯನಿಗೆ ನೀಡಿದ್ದ ಉಡುಗೊರೆ ಗಳೆಲ್ಲವನ್ನೂ ಪಕ್ಕಕ್ಕೆ ತೆಗೆಸಿ ಇಡಿಸಿದರು; ದೃಕ್=ಕಣ್ಣು; ಯುಗ=ಎರಡು/ಜೋಡಿ; ದೃಗುಯುಗ=ಎರಡು ಕಣ್ಣುಗಳು; ಕರುಣಾರಸ=ಒಲವು ನಲಿವು ಕರುಣೆಯಿಂದ ಕೂಡಿದ ಒಳಮಿಡಿತಗಳು; ಅನಿಬರ=ಅವರೆಲ್ಲರನ್ನೂ; ಹೊರೆ=ಸಲಹು/ಕಾಪಾಡು; ಮನ್ನಿಸು=ಮರ್ಯಾದೆ ಮಾಡು/ಆದರಿಸು; **ಆ ಮಂತ್ರಿಗಳನು ಆ ಪರಿವಾರವನು ದೃಗುಯುಗದ ಕರುಣಾರಸದಲಿ ಅನಿಬರ ಹೊರೆದು ಮನ್ನಿಸಿದ**=ಧರ್ಮರಾಯನು ವಿರಾಟರಾಜನ ಮಂತ್ರಿಗಳನ್ನು ಮತ್ತು ರಾಜಪರಿವಾರದವರನ್ನು ಸಲಹುವಂತೆ ಒಲವು ನಲಿವು ಕರುಣೆಯ ನೋಟವನ್ನು ಬೀರುತ್ತ, ಅವರೆಲ್ಲರನ್ನು ಆದರಿಸಿದನು;

**ಶಿರವನು ಎತ್ತಿ ವಿರಾಟ ಭೂಪನ ಕರೆದು ಹತ್ತಿರ ಪೀಠದಲಿ ಕುಳ್ಳಿರಿಸಲು**= ತಲೆಯನ್ನು ತಗ್ಗಿಸಿಕೊಂಡು ತನ್ನ ಮುಂದೆ ನಿಂತಿದ್ದ ವಿರಾಟರಾಯನನ್ನು ಧರ್ಮರಾಯನು ಕರೆದು ಸಿಂಹಾಸನ ಹತ್ತಿರದ ಗದ್ದುಗೆಯಲ್ಲಿ ಕುಳಿತುಕೊಳ್ಳುವಂತೆ ಸೂಚಿಸಲು; ಕೆಲ=ಪಕ್ಕ; ಸರಿ=ಜರುಗು; ಒಡೆ=ಕೂಡಲೇ/ಬೇಗ; ಮುರಿಚು= ನುಣುಚಿಕೊಳ್ಳುವುದು; **ಗದ್ದುಗೆಯ ಕೆಲದಲಿ ಸರಿದು ಒಡೆಮುರಿಚಿದನು**= ಸಿಂಹಾಸನದ ಪಕ್ಕಕ್ಕೆ ಸರಿದು ಕೂಡಲೇ ನುಣುಚಿಕೊಂಡನು; ಪರಮ=ಉತ್ತಮ; ಸುಕೃತ=ಪುಣ್ಯ; ಧರಾಧೀಶ್ವರ=ಭೂಮಂಡಲದ ಒಡೆಯ/ರಾಜ; **ಪರಮ ಸುಕೃತವಲಾ, ಧರಾಧೀಶ್ವರನ ದರುಶನವಾಯ್ತು**=ಪರಮ ಪುಣ್ಯವಲ್ಲವೇ... ಆ ಪುಣ್ಯದಿಂದಲೇ ಭೂಮಂಡಲದ ಒಡೆಯನಾದ ನಿಮ್ಮ ದರ್ಶನವಾಯಿತು; **ಧರೆಯೊಳು ಧನ್ಯರು ಎಮಗೆ ಇನ್ನಾರು ಸರಿ**=ಜಗತ್ತಿನಲ್ಲಿ ನಮಗೆ ಸರಿಸಾಟಿಯಾದ ಪುಣ್ಯವಂತರು ಯಾರಿದ್ದಾರೆ; ಹೆಚ್ಚಿದ=ತುಂಬಿರುವ; ಕೋಶ=ಹಣ ಒಡವೆ ವಸ್ತುಗಳಿಂದ ತುಂಬಿರುವ ಬೊಕ್ಕಸ;

**ದೇಶ ನಿಮ್ಮದು. ನಗರ ಹೆಚ್ಚಿದ ಕೋಶ ನಿಮ್ಮದು**=ಈ ಮತ್ಸ್ಯದೇಶ ನಿಮ್ಮದು. ವಿರಾಟನಗರದ ತುಂಬಿದ ರಾಜಬೊಕ್ಕಸ ನಿಮ್ಮದು; ವಿಳಾಸ=ಉಲ್ಲಾಸ/ನಲಿವು; **ನನ್ನ ಜೀವ ವಿಳಾಸ ನಿಮ್ಮದು**=ನನ್ನ ಜೀವನದ ಉಲ್ಲಾಸವು ನಿಮ್ಮದು; **ಸಲಹಬೇಹುದು**=ನಮ್ಮನ್ನು ನೀವೇ ಕಾಪಾಡಬೇಕು; ಬಿನ್ನಹ=ಅರಿಕೆ/ಕೋರಿಕೆ; ಹದನ=ನಿಲುವು/ಅಬಿಪ್ರಾಯ; ಚಿತ್ತೈಸು=ಕೇಳು/ಮನವಿಟ್ಟು ಆಲಿಸು; **ಬಿನ್ನಹದ ಹದನ ಚಿತ್ತೈಸು**=ನನ್ನದೊಂದು ಕೋರಿಕೆಯನ್ನು ನಿನ್ನ ಮುಂದೆ ಈಗ ಹೇಳಲಿದ್ದೇನೆ. ಮನವಿಟ್ಟು ಕೇಳು; ಸಮಂಜಸ=ಸೂಕ್ತವಾದ/ಯೋಗ್ಯವಾದ; ಅಭಿಷೇಕ=ವ್ಯಕ್ತಿಗೆ ರಾಜಪಟ್ಟವನ್ನು ಕಟ್ಟುವಾಗ ಮಾಡುವ ಆಚರಣೆ/ಮಂಗಳ ಸ್ನಾನ; ಭೂಮೀಶ=ಭೂಮಿಗೆ ಒಡೆಯ/ರಾಜ; ವಿಸ್ತರಿಸು=ನೆರವೇರಿಸು; **ಈ**

**ಸಮಂಜಸ ದಿವಸದಲಿ ಸಿಂಹಾಸನದಲಿ ಅಭಿಷೇಕವನು ಭೂಮೀಶ ವಿಸ್ತರಿಸುವೆನು ಎಂದನಾ ಭೂಪ**=ಯೋಗ್ಯವಾದ ಈ ದಿನದಂದು ಸಿಂಹಾಸನದಲ್ಲಿ ನಿನ್ನನ್ನು ಕುಳ್ಳಿರಿಸಿ ಅಭಿಷೇಕವನ್ನು ನೆರವೇರಿಸುತ್ತೇನೆ ಎಂದು ವಿರಾಟರಾಯನು ವಿನಂತಿಸಿಕೊಂಡನು; **ಎನಲು ಧರ್ಮರಾಯನು ನಗುತ**=ಮತ್ಸ್ಯದೇಶದ ರಾಜನಾದ ವಿರಾಟರಾಯನ ಮಾತುಗಳನ್ನು ಕೇಳಿ ಧರ್ಮರಾಯನು ನಗುತ್ತ; ಮಹಿ=ಭೂಮಿ; ಪತಿ=ಒಡೆಯ; ಮಹೀಪತಿ=ರಾಜ; ಮಧುರ=ಸಿಹಿಯಾದುದು; ರಸಾಭಿಷೇಕ=ಬಹುಬಗೆಯ ಹಣ್ಣುಗಳ ರಸವನ್ನು ದೇವರ ವಿಗ್ರಹದ ಮೇಲೆ ಸುರಿಯುವ ಆಚರಣೆ; ಮಧುರ ರಸಾಭಿಷೇಕ=ನುಡಿಗಟ್ಟಿನ ತಿರುಳಿನಲ್ಲಿ ಬಳಕೆಗೊಂಡಿದೆ; ದೇವರ ವಿಗ್ರಹಕ್ಕೆ ಮಾಡುವ ಅಭಿಷೇಕದಂತೆಯೇ ವ್ಯಕ್ತಿಯ ಮನಸ್ಸನ್ನು ಮುದಗೊಳಿಸುವ ನಡೆನುಡಿ;

**ಮಹೀಪತಿ ವಿನಯ ಮಧುರ ರಸಾಭಿಷೇಕವನು ಎನಗೆ ಮಾಡಿದೆ**= ವಿರಾಟರಾಯನೇ, ರಾಜ್ಯದ ಪಟ್ಟಾಭಿಷೇಕಕ್ಕಿಂತ ಮಿಗಿಲಾಗಿ ವಿನಯದ ನಡೆ ನುಡಿಯಿಂದ ನನ್ನ ಮನಸ್ಸಿಗೆ ಆನಂದವನ್ನುಂಟುಮಾಡಿರುವೆ; ಧರಿತ್ರಿ=ಭೂಮಿ; ನೆನಹು=ನೆನಪು; ಪುನರ್+ಉಕ್ತ+ಅಭಿಷೇಕ+ಅದು; ಪುನರ್=ಮತ್ತೆ/ಪುನಹ; ಉಕ್ತ=ಹೇಳಿದ/ಮಾತು; **ಧರಿತ್ರಿಯಿದು ಎಮ್ಮದು ಎಂಬ ಈ ನೆನಹು ತಾನು ಸಾಕು. ಪುನರುಕ್ತಾಭಿಷೇಕವದು**=ಮತ್ಸ್ಯದೇಶಕ್ಕೆ ಧರ್ಮರಾಯನಾದ ನಾನು ಒಡೆಯನೆಂಬ ನೆನಪು ನನಗೆ ಸಾಕು. ನೀನು ಹೇಳಿದ ಮಾತುಗಳೇ ನನಗೆ ಈ ರಾಜ್ಯದ ಪಟ್ಟವನ್ನು ಮತ್ತೆ ಕಟ್ಟಿದಂತಿದೆ; **ಜನವಿದು ಎಮ್ಮದು**=ನಿನ್ನ ಪ್ರಜೆಗಳೇ ನನ್ನ ಪ್ರಜೆಗಳು; **ನೀನು ನಮ್ಮಾತನು**=ನೀನು ನಮ್ಮವನು; ಉಪಚಾರ=ಸತ್ಕಾರ/ಸೇವರ; **ನಮಗೇಕೆ ಉಪಚಾರ**=ನಮಗೇಕೆ ಸತ್ಕಾರವನ್ನು ಮಾಡುವೆ. ನಾವು ನೀವೆಲ್ಲರೂ ಸಮಾನರು;

ಭೀಮ+ಅರ್ಜುನರು; **ಭೀಮಾರ್ಜುನರು ನೊಂದವರು**=ನನ್ನ ತಮ್ಮಂದಿರಾದ ಭೀಮ ಮತ್ತು ಅರ್ಜುನ ಜೀವನದಲ್ಲಿ ತುಂಬಾ ನೊಂದಿದ್ದಾರೆ; ಹಗೆ=ಶತ್ರು; ಹಳುವ=ಕಾಡು; ಕಂದು=ಕಳೆಗುಂದು; ಕಸರಿಕೆ=ಸೊರಗುವಿಕೆ/ಅಸಮಾದಾನ/ ಮುಜುಗರ; **ಮನಸಿನ ಕಂದುಕಸರಿಕೆ**=ಇದೊಂದು ನುಡಿಗಟ್ಟಿನ ತಿರುಳಿನಲ್ಲಿ ಬಳಕೆಯಾಗಿದೆ; ಹಸಿವು, ಅಪಮಾನ, ಆಕ್ರೋಶ, ಅಸಹಾಯಕತೆ ಮತ್ತು ಸೇಡಿನ ಒಳಮಿಡಿತಗಳಿಂದ ಮನಸ್ಸಿನಲ್ಲಿ ಉಂಟಾಗಿರುವ ಪೆಟ್ಟು;

**ಹಗೆಯಿಂದ ಹಳುವವ ಹೊಕ್ಕು ಮನಸಿನ ಕಂದು ಕಸರಿಕೆ ಹೋಗದು**= ದುರ್ಯೋಧನನು ಮಾಡಿದ ಮೋಸದ ಜೂಜಾಟದಿಂದಾಗಿ ಕಾಡಿಗೆ ಬಂದು ಹನ್ನೆರಡು ವರುಶ ವನವಾಸ ಮತ್ತು ಒಂದು ವರುಶ ಅಜ್ಞಾತವಾಸವನ್ನು

ಮಾಡುವಾಗ ಪಟ್ಟ ಪರಿತಾಪ ಮತ್ತು ಅಪಮಾನದ ಸಂಗತಿಗಳೆಲ್ಲವೂ ಭೀಮ ಮತ್ತು ಅರ್ಜುನನ ಮನದಲ್ಲಿ ಅಪಾರವಾದ ನೋವನ್ನುಂಟುಮಾಡಿದೆ. ಆ ಅಪಮಾನದ ಕಹಿ ಅನುಭವಗಳು ಅವರ ಮನಸ್ಸಿನಿಂದ ಹೋಗುವುದಿಲ್ಲ; ದುರ್ಯೋಧನ+ಆದಿಗಳ; ಆದಿ=ಮೊದಲು; ದುರ್ಯೋಧನಾದಿಗಳು= ದುರ್ಯೋಧನ, ಅವನ ನೂರು ಮಂದಿ ತಮ್ಮಂದಿರು, ಅವನ ಕೇಡಿನ ಕೆಲಸಕ್ಕೆ ಬೆಂಬಲವಾಗಿ ನಿಂತ ನೀಚರೆಲ್ಲರನ್ನೂ; ಕಳ=ರಣರಂಗ/ಕಾಳೆಗದ ನೆಲ; ಗಜಪುರಿ=ಹಸ್ತಿನಾವತಿ; ಗಮಿಸು=ಹೋಗು; ತವಕ=ಅತಿಯಾದ ಬಯಕೆ/ಆತುರ/ ಉತ್ಸುಕತೆ; **ಆ ದುರ್ಯೋಧನಾದಿಗಳ ಕಳದಲಿ ಕೊಂದು, ಮತ್ತೆ ಗಜಪುರಿಗೆ ಎಂದು ಗಮಿಸುವೆವು ಎಂಬ ತವಕಿಗರು**=ಆ ದುರ್ಯೋಧನನ್ನು ಒಳಗೊಂಡಂತೆ ಅವನ ಕಡೆಯವರೆಲ್ಲರನ್ನೂ ಕಾಳೆಗದ ಕಣದಲ್ಲಿ ಕೊಂದು, ಮತ್ತೆ ಹಸ್ತಿನಾವತಿಗೆ ಯಾವಾಗ ಹೋಗುತ್ತೇವೆ ಎಂಬ ರಣೋತ್ಸಾಹದಿಂದ ಭೀಮ ಮತ್ತು ಅರ್ಜುನ ತವಕಿಸುತ್ತಿದ್ದಾರೆ; **ಇಂದು ತಾನೇ ಬಲ್ಲರು ಎಂದನು ಧರ್ಮನಂದನನು**=ಇನ್ನು ಮುಂದೆ ಪಾಂಡವರಾದ ನಾವು ಏನು ಮಾಡಬೇಕೆಂಬುದನ್ನು ಅವರೇ ತಿಳಿದಿದ್ದಾರೆ ಎಂದು ಧರ್ಮರಾಯನು ನುಡಿದನು;

ಅಂಘ್ರಿ=ಪಾದ; ಅಂದು=ಆಗ; ಮಕುಟ=ಕಿರೀಟ/ತಲೆ; ಚಾಚು=ಮುಂದೆ ಒಡ್ಡು;ಬಿನ್ನಹ=ಕೋರಿಕೆ; ನೇಮ=ಅನುಮತಿ/ಒಪ್ಪಿಗೆ; ಈವೆನು=ಕೊಡುವೆನು; **ಅರಸನ ಅಂಘ್ರಿಯೊಳು ಅಂದು ಮಕುಟವ ಚಾಚಿ ಬಿನ್ನಹವು ಇಂದು. ನೇಮವ ಕೊಡಿ. ಅರ್ಜುನಗೆ ಕುಮಾರಿಯನು ಈವೆನು ಎಂದಡೆ**=ಉತ್ತರಕುಮಾರನು ಧರ್ಮರಾಯನ ಪಾದಗಳಿಗೆ ತಲೆಬಾಗಿ ನಮಿಸಿ, ನಿಮ್ಮಲ್ಲಿ ನನ್ನದೊಂದು ಕೋರಿಕೆ. ನಿಮ್ಮ ಒಪ್ಪಿಗೆಯನ್ನು ನೀಡಿ. ಅರ್ಜುನನಿಗೆ ನನ್ನ ತಂಗಿಯಾದ ಉತ್ತರೆಯನ್ನು ನೀಡುವೆನು, ಅರ್ಜುನ ಮತ್ತು ಉತ್ತರೆಯ ಮದುವೆಗೆ ನಿಮ್ಮ ಅನುಮತಿಯನ್ನು ನೀಡಿ ಎಂದು ಕೇಳಿಕೊಂಡನು; ಏಳು ಏಳು ಎಂದು ನಸುನಗೆಯಿಂದ ಯುಧಿಷ್ಠಿರನು ಪಾರ್ಥನ ನೋಡೆ=ಆಗ ಧರ್ಮರಾಯನು ಉತ್ತರಕುಮಾರನ ಕೋರಿಕೆಯನ್ನು ಕೇಳಿ ಮುಗುಳು ನಗುತ್ತ **‘ಏಳು ಏಳು’ ಎಂದು ಅವನಿಗೆ ಹೇಳುತ್ತ, ಅರ್ಜುನನತ್ತ ನೋಡಲು; ನಿಶ್ಚಯ**=ಗಟ್ಟಿಯಾದ ನಿಲುವು/ಅಚಲವಾದ ಅಭಿಪ್ರಾಯ; **ಅವನು ಯುಧಿಷ್ಠಿರಗೆ ಕೈಮುಗಿದು ಮನದ ನಿಶ್ಚಯವನು ಎಂದನು**= ಅರ್ಜುನನು ಧರ್ಮರಾಯನಿಗೆ ಕಯ್ ಮುಗಿದು ಉತ್ತರಕುಮಾರನು ಪ್ರಸ್ತಾಪಿಸಿದ ಮದುವೆಯ ಬಗ್ಗೆ ತನ್ನ ಮನದಲ್ಲಿದ್ದ ಅಚಲವಾದ ನಿಲುವನ್ನು ಹೇಳಿದನು;

ಪರುಟವಿಸು=ವಿವರವಾಗಿ ಹೇಳು; **ಇವಳಲಿ ವರುಷವು ನಾಟ್ಯ ವಿದ್ಯೆಯ ಪರುಟವಿಸಿದೆನು**=ಉತ್ತರೆಗೆ ಒಂದು ವರುಶದ ಕಾಲ ನಾಟ್ಯವಿದ್ಯೆಯನ್ನು

ಕಲಿಸಿದ್ದೇನೆ; ಆ ಪ್ರಕಾರ=ಅದಕ್ಕೆ ಅನುಗುಣವಾಗಿ; ರಹಸ್ಯ ದೇಶದಲಿ=ಇದೊಂದು ನುಡಿಗಟ್ಟಿನ ತಿರುಳಿನಲ್ಲಿ ಬಳಕೆಗೊಂಡಿದೆ. ನಾನು ಮತ್ತು ಉತ್ತರೆಯ ಏಕಾಂತದಲ್ಲಿದ್ದಾಗ; ಭಜಿಸು=ಪೂಜಿಸು/ಸೇವಿಸು; **ಆ ಪ್ರಕಾರ ರಹಸ್ಯ ದೇಶದಲಿ ಈ ತರುಣಿ ತಂದೆಯಂತೆ ಭಜಿಸಿದಳು**=ನಾಟ್ಯವಿದ್ಯೆಯನ್ನು ನಾನು ಆಕೆಗೆ ಕಲಿಸುವಾಗ ಅದಕ್ಕೆ ಅನುಗುಣವಾಗಿ ಅವಳು ನನ್ನನ್ನು ತಂದೆಯಂತೆ ಕಂಡು ಉಪಚರಿಸಿದಳು; ಆಕೆಯು ನನ್ನ ಪಾಲಿಗೆ ಮಗಳಾಗಿದ್ದಾಳೆ; ಗರುವಾಯಿ=ದೊಡ್ಡತನ; ಎತ್ತಲು= ಯಾವ ಕಡೆಯದು; ಅರಸಿ+ಎಂಬುದು; ಇದು+ಆವ; ಮತ=ಆಶಯ/ಉದ್ದೇಶ;

**ಗುರುತನದ ಗರುವಾಯಿ ಎತ್ತಲು…ಅರಸಿಯೆಂಬುದು ಇದಾವ ಮತವು**= ಗುರುತನದ ದೊಡ್ಡ ವ್ಯಕ್ತಿತ್ವ ಎಲ್ಲಿ… ವಿದ್ಯೆ ಕಲಿಸಿದ ಗುರುವಿಗೆ ಶಿಷ್ಯೆಯನ್ನೇ ಹೆಂಡತಿಯನ್ನಾಗಿ ಮಾಡಿಕೊಳ್ಳಿ ಎಂಬ ಈ ಕೋರಿಕೆ ಹೇಗೆ ತಾನೆ ಸರಿಯಾಗುತ್ತದೆ; ವರ=ಉತ್ತಮ; ಈವಡೆ=ಕೊಡುವುದಾರೆ; **ಈ ವರ ಕುಮಾರಿಯನು ಈವಡೆ ಅಭಿಮನ್ಯುವಿಗೆ ಕೊಡಲಿ**=ಪಾಂಡವರಾದ ನಮ್ಮ ಕುಟುಂಬದೊಡನೆ ನಂಟನ್ನು ಪಡೆಯಬೇಕೆಂಬ ಆಸೆಯಿದ್ದರೆ ಉತ್ತಮಳಾದ ಈ ಕುಮಾರಿಯನ್ನು ನನ್ನ ಮಗನಾದ ಅಭಿಮನ್ಯುವಿಗೆ ಕೊಟ್ಟು ಮದುವೆಯನ್ನು ಮಾಡಲಿ;

ಎವಗೆ=ಎಮಗೆ; ಉತ್ಸವ=ಸಡಗರ; **ಎವಗೆ ನೀವೇನು ಆತನೇನು. ಉತ್ಸವದೊಳು ಆಗಲಿ ಎನೆ**= ನಮ್ಮ ಪಾಲಿಗೆ ನೀವೇನು ಆ ಅಭಿಮನ್ಯುವೇನು ಬೇರೆಬೇರೆಯಲ್ಲ; ನಮಗೆ ಇಬ್ಬರೂ ಒಂದೇ; ನೀವು ಹೇಳಿದಂತೆಯೇ ಉತ್ತರೆ ಮತ್ತು ಅಭಿಮನ್ಯು ಮದುವೆ ನಡೆಯಲಿ ಎಂದು ವಿರಾಟರಾಯನು ಸಡಗರದಿಂದ ಒಪ್ಪಿಗೆಯನ್ನು ನೀಡಲು; ಅವನಿಪತಿ=ಧರ್ಮರಾಯ; **ವಿರಾಟನನ್ ಅವನಿಪತಿ ಮನ್ನಿಸಿದನು**=ವಿರಾಟರಾಯನನ್ನು ಧರ್ಮರಾಯನು ಆದರಿಸಿದನು; **ವೀಳೆಯವ ನಗುತ ಇತ್ತನು**=ಮಂಗಳದ ಸಂಕೇತವಾಗಿ ವೀಳೆಯವನ್ನು ವಿರಾಟರಾಯನಿಗೆ ಧರ್ಮರಾಯನು ಮುಗುಳು ನಗುತ್ತ ನೀಡಿದನು; ಎವಗೆ=ನಮಗೆ; ಪರಮ=ಉತ್ತಮ; ಸ್ವಾಮಿ=ಒಡೆಯ; **ಎವಗೆ ಪರಮಸ್ವಾಮಿ**=ನಮಗೆ ಉತ್ತಮ ಒಡೆಯ; ಉತ್ಸವ=ಸಡಗರ; **ಎಮ್ಮ ಉತ್ಸವದ ನೆಲೆ**=ನಮ್ಮ ಜೀವನದ ಒಲವು ನಲಿವು ಗೆಲುವಿನ ಸಡಗರಕ್ಕೆ ನೆಲೆಯಾದವನು; **ಎಮ್ಮೈವರಸು**=ನಾವು ಅಯ್ದು ಮಂದಿ ಪಾಂಡವರ ರಾಜ; ಯಾದವ=ಯದು ಕುಲ; ಶಿರೋಮಣಿ=ತಲೆಯ ಮುಡಿಯಲ್ಲಿ ತೊಡುವ ರತ್ನದ ಒಡವೆ; ಯಾದವ ಶಿರೋಮಣಿ=ಒಂದು ಬಿರುದು. ಯದುಕುಲದಲ್ಲಿ ಅತ್ಯುತ್ತಮನಾದ ವ್ಯಕ್ತಿ; ಅಭಿಮತ=ಅಭಿಪ್ರಾಯ/ ನಿಲುವು; ಮತ=ಅಬಿಪ್ರಾಯ;

**ಯಾದವ ಶಿರೋಮಣಿ ಕೃಷ್ಣನ ಅಭಿಮತವು ಎಮ್ಮ ಮತ**=ಯಾದವ

ಶಿರೋಮಣಿ ಕೃಷ್ಣನ ಅಭಿಪ್ರಾಯವೇ ನಮ್ಮ ಅಭಿಪ್ರಾಯ; ಪೊಡವಿ+ಒಡೆತನ; ಪೊಡವಿ=ಭೂಮಿ; ಒಡೆತನ=ಹಕ್ಕುದಾರಿಕೆ/ಯಜಮಾನಿಕೆ; ಮಿಗೆ= ಅತಿಶಯವಾಗಿ; ಕಟ್ಟೊಡೆಯ=ದೊಡ್ಡ ಯಜಮಾನ; **ಎಮಗೆ ಪೊಡವಿಯೊಡೆತನ...ಕೃಷ್ಣನು ಮಿಗೆ ಕಟ್ಟೊಡೆಯ**=ನಮಗೆ ಭೂಮಿಯ ಒಡೆತನ ದೊರೆತಿರುವುದು ಕೃಷ್ಣನಿಂದ...ಕೃಷ್ಣನೇ ನಮಗೆ ಎಲ್ಲ ರೀತಿಯಿಂದಲೂ ದೊಡ್ಡ ಯಜಮಾನ; ಒಡಬಡು=ಒಪ್ಪು/ಅನುಮತಿ ಕೊಡು; ನಿರಂತರಾಯ=ಅಡೆತಡೆಯಿಲ್ಲದ/ಸುಸೂತ್ರತೆ; **ಕೃಷ್ಣನು ಒಡಬಟ್ಟೊಡೆ ವಿವಾಹ ನಿರಂತರಾಯವು**=ಕೃಷ್ಣನು ಒಪ್ಪಿದರೆ ಉತ್ತರೆ ಮತ್ತು ಅಭಿಮನ್ಯುವಿನ ವಿವಾಹ ಯಾವುದೇ ಅಡೆತಡೆಯಿಲ್ಲದೆ ಚೆನ್ನಾಗಿ ನಡೆಯುತ್ತದೆ; **ಚಿಂತೆ ಬೇಡ ಎನಲು**=ಚಿಂತೆ ಮಾಡಬೇಡ ಎಂದು ಧರ್ಮರಾಯನು ನುಡಿಯಲು;

ಮೇಣ್= ಇಲ್ಲವೇ; **ಒಡಬಡಲಿ ಮೇಣ್ ಇರಲಿ**=ಕೃಷ್ಣನು ಮದುವೆಗೆ ಒಪ್ಪಲಿ ಇಲ್ಲವೇ ಒಪ್ಪದಿರಲಿ; ನಿಮ್ಮಡಿ=ತಾವು; ಮುರಾರಿ=ಕೃಷ್ಣ; ಕೃತಾರ್ಥ=ಕಯ್ಗೊಂಡ ಕೆಲಸದಲ್ಲಿ ಶ್ರೇಯಸ್ಸನ್ನು ಪಡೆದವನು/ಪುಣ್ಯಶಾಲಿ; ಹಿಗ್ಗು=ಆನಂದ; **ಗುರು ನಿಮ್ಮಡಿ ಮುರಾರಿಯ ತೋರಿಸುವಿರಾದೊಡೆ ಕೃತಾರ್ಥನು ತಾನು. ಎನುತ ಮತ್ಸ್ಯನೃಪ ಹಿಗ್ಗಿದನು**=ಗುರು ಸಮಾನರಾದ ತಾವು ಈ ನೆಪದಲ್ಲಿ ಮುರಾರಿಯನ್ನು ನಮಗೆ ತೋರಿಸಿದರೆ ನಾನೇ ಪುಣ್ಯಶಾಲಿ ಎನ್ನುತ್ತ ವಿರಾಟರಾಯನು ಹಿಗ್ಗಿದನು;

ಅನಂತರ ದ್ವಾರಕಾವತಿಯಲ್ಲಿದ್ದ ಕೃಷ್ಣನನ್ನು ಪಾಂಡವರು ವಿರಾಟನಗರಿಗೆ ಕರೆಸಿಕೊಂಡು, ಮದುವೆಗೆ ಕೃಷ್ಣನ ಒಪ್ಪಿಗೆಯನ್ನು ಪಡೆದು ಪಾಂಡವರು, ಯಾದವರು ಮತ್ತು ವಿರಾಟರಾಯನ ಕಡೆಯವರೆಲ್ಲರೂ ಜತೆಗೂಡಿ ಸಡಗರದಿಂದ ಉತ್ತರೆ ಮತ್ತು ಅಭಿಮನ್ಯುವಿನ ಮದುವೆಯನ್ನು ಮಾಡುತ್ತಾರೆ. )



# ಡಾ.ಬಿ.ಎ.ವಿವೇಕ ರೈ ಅವರ ಪತ್ರ

ಡಾ. ಸಿ.ಪಿ. ನಾಗರಾಜ ಅವರು ನಿವೃತ್ತ ಕನ್ನಡ ಪ್ರಾಧ್ಯಾಪಕರಾಗಿದ್ದು ನಿರಂತರವಾಗಿ ಕನ್ನಡ ಸಾಹಿತ್ಯದ ಓದು ಮತ್ತು ಬರಹಗಳಿಂದ ಕ್ರಿಯಾಶೀಲರಾಗಿ ನಮ್ಮ ನಡುವೆ ಇರುವ ಪ್ರಮುಖ ಸಾಹಿತ್ಯ ಸಂಶೋಧಕ–ವಿಮರ್ಶಕರು. ನಾಟಕ ಮತ್ತು ಜಾನಪದ ಕ್ಷೇತ್ರಗಳಲ್ಲಿ ವಿಶೇಷ ಸಾಧನೆ ಮಾಡಿರುವ ನಾಗರಾಜ್ ಇತ್ತೀಚೆಗಿನ ವರ್ಷಗಳಲ್ಲಿ ಆಯ್ದುಕೊಂಡ ವಿಶಿಷ್ಟ ಕ್ಷೇತ್ರ – 'ಸಾಹಿತ್ಯ ಪಠ್ಯಗಳ ಓದು' ಎಂಬ ಹೊಸ ಪ್ರಕಾರ.

ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯ ಕೃತಿಗಳನ್ನು ಆಯ್ದುಕೊಂಡು ಅವುಗಳ ಪ್ರತಿಯೊಂದು ಪದ್ಯಗಳನ್ನು ಪದವಿಂಗಡಿಸಿ, ಅರ್ಥ ವಿವರಣೆ ಕೊಟ್ಟು, ಅನ್ವಯಾನುಸಾರ ಜೋಡಿಸಿ ವಿವರಿಸುವ ಅಪೂರ್ವ ಮಾದರಿಯನ್ನು ನಾಗರಾಜ್ ತಮ್ಮ ಕೃತಿಗಳಲ್ಲಿ ಮಾಡಿ ತೋರಿಸಿದ್ದಾರೆ. ಸರ್ವಜ್ಞ ವಚನಗಳ ಓದು, ಅಲ್ಲಮ ವಚನಗಳ ಓದು, ಬಸವಣ್ಣ ವಚನಗಳ ಓದು, ಶಿವಶರಣ ಶರಣೆಯರ ವಚನಗಳ ಓದು, ವಚನದಿಂದ ಆಯ್ದ ಸಾಲುಗಳ ಓದು, ಕನಕದಾಸರ ರಾಮಧಾನ್ಯ ಪ್ರಸಂಗ ಓದು, ಕನ್ನಡ ಬಯ್ಗುಳ ಓದು, ಕುವೆಂಪು ಕವನಗಳ ಓದು, ಪಂಪಭಾರತ ಓದು – ಇವು ಅವರ 'ಓದುಸರಣಿ'ಯ ಮುಖ್ಯ ಪುಸ್ತಕಗಳು.

ಇಂತಹ ಮಾದರಿಯ ಪುಸ್ತಕಗಳ ಪ್ರಕಟಣೆಯ ಜೊತೆಗೆ ನಾಗರಾಜ್ ಅವರು ಮೈಲಾಂಗ್ ಮತ್ತು ಋತುಮಾನ ಡಿಜಿಟಲ್ ಪುಸ್ತಕಗಳಲ್ಲಿ ಕನ್ನಡ ಸಾಹಿತ್ಯದ ಪ್ರಾತಿನಿಧಿಕ ರಚನೆಗಳ ಓದನ್ನು ದಾಖಲೀಕರಣ ಕೂಡಾ ಮಾಡಿದ್ದಾರೆ. ಅವರ ಇನ್ನೊಂದು ಮಹತ್ವದ ಸಾಧನೆಯೆಂದರೆ ಇಂತಹ ಸಾಹಿತ್ಯ ಕೃತಿಗಳ ಓದನ್ನು ಯೂಟ್ಯೂಬ್ ಮೂಲಕ ದಾಖಲಿಸಿ ಕೇಳುಗರ ಜಗತ್ತಿಗೆ ಹರಿಯಬಿಟ್ಟಿರುವುದು.

ಈಗ ಮತ್ತೆ ಡಾ. ಸಿ.ಪಿ. ನಾಗರಾಜ್ ಅವರು ಇನ್ನೊಂದು ಬೌದ್ಧಿಕ ಸಾಹಸದ ಕೆಲಸವನ್ನು ಸಾಧಿಸಿದ್ದಾರೆ. ಅದು'ಪಂಪ ಭಾರತ ಪ್ರಸಂಗ' ಎನ್ನುವ ಸಮಗ್ರ ಬೃಹತ್ ಗ್ರಂಥದ ಪ್ರಕಟಣೆ. (ನಾಗು ಸ್ಮಾರಕ ಪ್ರಕಾಶನ, ಬೆಂಗಳೂರು. ೨೦೨೩). ಪಂಪನ 'ವಿಕ್ರಮಾರ್ಜುನ ವಿಜಯ' ಸಮಗ್ರ ಕಾವ್ಯವನ್ನು ಹದಿನಾಲ್ಕು ಆಶ್ವಾಸಗಳ ಹರಹಿನಲ್ಲಿ ೧೧೦೭ ನಾಟಕ ಪ್ರಸಂಗಗಳ ರೂಪದಲ್ಲಿ ಮೂಲ ಕೃತಿಗೆ ವಿಧೇಯವಾಗಿ ಅಳವಡಿಸಿದ ವಿನ್ಯಾಸ ಅಪೂರ್ವವಾಗಿದೆ, ವಿಶಿಷ್ಟವಾಗಿದೆ.

ಡಿ.ಎಲ್. ನರಸಿಂಹಾಚಾರ್ ಅವರ 'ಪಂಪಭಾರತ ದೀಪಿಕೆ', ಎನ್. ಅನಂತ ರಂಗಾಚಾರ್ ಅವರ 'ಪಂಪಮಹಾಕವಿ ವಿರಚಿತ ಪಂಪ ಭಾರತಂ ಗದ್ಯಾನುವಾದ' – ಈ ಎರಡು ಕೃತಿಗಳಲ್ಲಿ ಪಂಪ ಭಾರತದ ಪ್ರತಿಯೊಂದು ಪದ್ಯಗಳ ಅರ್ಥ ವಿವರಣೆ ದೊರೆಯುತ್ತದೆ. ಆದರೆ ಸಿ.ಪಿ. ನಾಗರಾಜ್ ಅವರದ್ದು ಅದಕ್ಕಿಂತ ಭಿನ್ನವಾದ ಪ್ರಸಂಗ ಪಠ್ಯ ಮಾದರಿ. ಈ ಕೃತಿಯಲ್ಲಿ ಪ್ರತಿಯೊಂದು ಆಶ್ವಾಸದಲ್ಲಿ ಬರುವ ಕಥನದ ಒಳಗೆ ಇರುವ ಸಂವಾದದ ಭಾಗವನ್ನು ನಾಟಕದ ಪ್ರಸಂಗದ ವಿನ್ಯಾಸದಲ್ಲಿ ಸೊಗಸಾಗಿ ಕಟ್ಟಿಕೊಡಲಾಗಿದೆ. ಇಲ್ಲಿನ ಪ್ರತಿಯೊಂದು ಆಶ್ವಾಸದ ಒಂದೊಂದು ನಾಟಕೀಯ ಪ್ರಸಂಗವನ್ನು ಓದುತ್ತ ಹೋದಂತೆ, ಪಂಪನು ತನ್ನ ಕಾವ್ಯವನ್ನು ನಾಟಕದ ಪ್ರಸಂಗಗಳ ರೂಪದಲ್ಲಿ ಬರೆದನೋ ಎನ್ನುವ ಭಾವನೆ ಬರುವಷ್ಟು ಇಲ್ಲಿನ ರಚನೆಗಳು ಸಹಜವಾಗಿವೆ, ಶಕ್ತಿಯುತವಾಗಿವೆ. ಪ್ರಾಚೀನ ಕನ್ನಡ ಸಾಹಿತ್ಯದ ಓದನ್ನು ನಾಟಕರೂಪದಲ್ಲಿ ನಿರ್ಮಿಸಿದ ಇದೊಂದು ಬಹಳ ವಿಶಿಷ್ಟವಾದ ರಾಜಮಾರ್ಗ.

ಸಿ ಪಿ ನಾಗರಾಜ್ ಅವರ 'ಪಂಪಭಾರತ ಪ್ರಸಂಗ'ವು ಪಂಪನ ಕಾವ್ಯದ ನಡೆಯನ್ನು ಆಧರಿಸಿಕೊಂಡು ಪ್ರಥಮ ಆಶ್ವಾಸದ 'ಮತ್ಸ್ಯಗಂಧಿ ಪ್ರಸಂಗ'ದಿಂದ ಆರಂಭವಾಗಿ ಚತುರ್ದಶ ಆಶ್ವಾಸದ 'ಅರ್ಜುನನ ಕೃತಜ್ಞತೆ'ಪ್ರಸಂಗದಿಂದ ಮುಕ್ತಾಯವಾಗುತ್ತದೆ. ಪಂಪನು ತನ್ನ 'ವಿಕ್ರಮಾರ್ಜುನ ವಿಜಯ' ಕಾವ್ಯವನ್ನು' ಸಮಸ್ತ ಭಾರತ' ಎಂದು ಕರೆದು, ವ್ಯಾಸಭಾರತದ ಕಥೆಯ ಮೆಯ್ಗಿಡಲೀಯದೆ ರಚಿಸಿದ್ದೇನೆ ಎಂದು ಹೇಳಿಕೊಂಡಿದ್ದಾನೆ. ನಾಗರಾಜ್ ಅವರು ಪಂಪ ಭಾರತದ ಮೆಯ್ ಕಿಡಲೀಯದೆ ಸಮಸ್ತ ಭಾರತವನ್ನು ನಾಟಕಗಳ ಪ್ರಸಂಗಗಳ ರೂಪದಲ್ಲಿ ಅಪೂರ್ವವಾಗಿ ಕಟ್ಟಿಕೊಟ್ಟಿದ್ದಾರೆ.

ಪ್ರತಿಯೊಂದು ಪ್ರಸಂಗದ ಆರಂಭದಲ್ಲಿ ಆ ಪ್ರಸಂಗದಲ್ಲಿ ಬರುವ ಪಾತ್ರಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಇದರಿಂದ ಮುಂದಿನ ಪ್ರಸಂಗವನ್ನು ಓದಲು ಅನುಕೂಲಕರವಾದ ಹಿನ್ನೆಲೆ ಸಿಗುತ್ತದೆ. ಉದಾಹರಣೆಗೆ ಮೊದಲನೆಯ 'ಮತ್ಸ್ಯಗಂಧಿ ಪ್ರಸಂಗ'ದಲ್ಲಿ ಬರುವ ಈ ಪಾತ್ರಗಳನ್ನು ಪರಿಚಯಿಸಿದ್ದಾರೆ: ಪರಾಶರ ಮುನಿ, ಮತ್ಸ್ಯಗಂಧಿ, ವ್ಯಾಸ, ಶಂತನು, ದಾಶರಾಜ, ಗಾಂಗೇಯ. ಇಲ್ಲಿ ಬರುವ

ಪಾತ್ರಗಳ ಹೆಸರುಗಳು, ಮುಂದೆ ಬರುವ ಪ್ರಸಂಗದಲ್ಲಿ ಪಂಪನು ತನ್ನ ಕಾವ್ಯದಲ್ಲಿ ಬಳಸಿದ ಹೆಸರುಗಳೇ ಆಗಿವೆ. ಮುಂದಿನ ಪ್ರಸಂಗಗಳಲ್ಲಿ ಮತ್ತೆ ಈ ಪಾತ್ರಗಳು ಬಂದಾಗಲೂ ಮತ್ತೆ ಅವನ್ನು ಪ್ರತ್ಯೇಕವಾಗಿ ಪರಿಚಯಿಸಲಾಗಿದೆ.ಹೀಗೆ ಇಲ್ಲಿನ ಒಂದೊಂದು ಪ್ರಸಂಗವೂ ಇಡೀ ಕಾವ್ಯ ಕಥನದ ನಡೆಯ ಒಂದು ಭಾಗವಾಗಿ ಇರುವುದರ ಜೊತೆಗೆ, ಸ್ವತಂತ್ರವಾಗಿ ಒಂದು ಕಿರು ರೂಪಕವಾಗಿಯೂ ಅಸ್ತಿತವನ್ನು ಉಳಿಸಿಕೊಳ್ಳುತ್ತದೆ. ರಂಗಪ್ರದರ್ಶನದ ದೃಷ್ಟಿಯಿಂದ ಇಂತಹ ಬಿಡಿ ಪ್ರಸಂಗಗಳನ್ನು ಅಥವಾ ಪ್ರಸಂಗಗಳ ಗುಚ್ಛವನ್ನು ಅಭಿನಯಿಸಲು ಕೂಡ ಅವಕಾಶ ದೊರೆಯುತ್ತದೆ.

ಪಂಪಭಾರತದ ಸಮಗ್ರ ಪಠ್ಯವನ್ನು ಈರೀತಿ ಬಿಡಿಬಿಡಿಯಾಗಿ ಪ್ರಸಂಗಗಳ ರೂಪದಲ್ಲಿ ರೂಪಿಸುವಾಗ ಸಿ.ಪಿ. ನಾಗರಾಜ್ ಅವರು ಮೂಲ ಪಠ್ಯವನ್ನು ಸರಿಯಾಗಿ ಅರ್ಥೈಸಿಕೊಂಡು ಪದ್ಯಗಂಧಿ ಗದ್ಯದ ರೂಪದಲ್ಲಿ ಕೊಟ್ಟಿರುವುದರ ಹಿಂದೆ ಅವರ ಸೂಕ್ಷ್ಮ ಅವಲೋಕನದ ಓದು ಗಾಢವಾಗಿ ಗಮನಕ್ಕೆ ಬರುತ್ತದೆ. ಅನೇಕ ಕಡೆಗಳಲ್ಲಿನ ಪಾಠ ಕ್ಲೇಶಗಳನ್ನು ನಿವಾರಿಸಿಕೊಂಡು ಬರೆದಿರುವುದರ ಹಿನ್ನೆಲೆಯಲ್ಲಿ ಅವರ ಗ್ರಂಥಸಂಪಾದನೆಯ ವಿದ್ವತ್ತು ಗೋಚರವಾಗುತ್ತದೆ. ಈ ಇಡೀ ಪಠ್ಯವು ಡಿ ಎಲ್ ನರಸಿಂಹಚಾರ್, ಅನಂತರಂಗಾಚಾರ್ ಅವರು ನಡೆಸಿದ' ಪಂಪ ಭಾರತ' ಕಾವ್ಯದ ಪಠ್ಯಗಳ ಸಮಗ್ರ ಪರಿಷ್ಕರಣವಾಗಿದೆ. ಆದ್ದರಿಂದ ಈ ಗ್ರಂಥವನ್ನು ಪಂಪ ಭಾರತದ ಸಂಪಾದನೆಯ ಹೊಸಮಾದರಿಯ ಪಠ್ಯ ಎಂದು ಪರಿಭಾವಿಸಬಹುದು. ಪಂಪಭಾರತದ ಗಂಭೀರ ಅಭ್ಯಾಸಿಗಳು ಈ ನೆಲೆಯಿಂದಲೂ ಈ ಗ್ರಂಥವನ್ನು ಸೂಕ್ಷ್ಮವಾಗಿ ಗಮನಿಸಿಕೊಂಡು ಬಳಸಬಹುದು.

ನಾಗರಾಜ್ ಅವರ ಈ ಪ್ರಸಂಗ ಪಠ್ಯದಲ್ಲಿ ಪಂಪನ ಕಾವ್ಯದ ಪದ್ಯಗಳು, ವೃತ್ತಗಳು, ಕಂದಗಳು ಮತ್ತು ಇತರ ಪದ್ಯಗಳು– ಎಲ್ಲವೂ ಒಳಗೊಂಡಿವೆ. ಹಾಗೆಯೇ ಮೂಲ ಪಠ್ಯದ ಗದ್ಯಭಾಗಗಳು ಪದ್ಯಭಾಗಗಳ ಜೊತೆಗೆ ಆತ್ಮೀಯವಾಗಿ ಒಡಗೊಂಡು ಕಾವ್ಯನಾಟಕಬಂಧವನ್ನು ಸೊಗಸಾಗಿ ರೂಪಿಸಿವೆ. ಇದರಿಂದ ಪಂಪ ಭಾರತದ ಓದುವಿಕೆಗೆ ಬಹು ಆಯಾಮಗಳು ಪ್ರಾಪ್ತವಾಗಿವೆ. ಗಂಭೀರವಾಗಿ ಕಾವ್ಯವನ್ನು ಅಧ್ಯಯನ ಮಾಡುವವರಿಗೆ ಸುಲಲಿತವಾಗಿ ಸಮಗ್ರ ಪಠ್ಯವೊಂದು ಪ್ರಾಪ್ತವಾಗಿದೆ. ಕಾವ್ಯವಾಚನ ಮಾಡುವವರಿಗೆ ವಾಚನಕ್ಕೆ ಅನುಕೂಲಕರವಾಗಿ ಎರಡು ಮೂರು ಮಂದಿ ಜೊತೆಯಾಗಿ ಕುಳಿತು ಒಂದೊಂದು ಪಾತ್ರದ ನುಡಿ ಗಳನ್ನು ವಾಚನಮಾಡಲು ಅವಕಾಶ ಕಲ್ಪಿತವಾಗಿದೆ. ರಂಗಪ್ರಯೋಗ ಮಾಡುವವರಿಗೆ ಇಲ್ಲಿನ ಕೆಲವು ಪ್ರಸಂಗಗಳನ್ನು ಆಯ್ದುಕೊಂಡು ತಮಗೆ ಬೇಕಾದಂತೆ ರಂಗಪಠ್ಯವನ್ನು ಕಟ್ಟಿಕೊಂಡು ಅಭಿನಯಿಸಲು ಸಾಧ್ಯತೆಯನ್ನು ಕಲ್ಪಿಸಲಾಗಿದೆ. 'ಪ್ರಸಂಗ' ಎನ್ನುವ ಪದವು ಯಕ್ಷಗಾನ ಪಠ್ಯಕ್ಕೆ ಕೂಡಾ ಬಳಕೆ

ಆಗುವುದರಿಂದ, ಇಲ್ಲಿನ ಕೆಲವು ಪ್ರಸಂಗಗಳನ್ನು ಜೋಡಿಸಿಕೊಂಡು ಹೊಸತಾಗಿ' ಯಕ್ಷಗಾನ ಪಠ್ಯ' ಗಳನ್ನು ರಚಿಸಲು ಪ್ರಸಂಗಕರ್ತರಿಗೆ ಪ್ರೇರಣೆ ದೊರೆಯುತ್ತದೆ.

ಡಾ.ಸಿ ಪಿ. ನಾಗರಾಜ್ ಅವರ'ಪಂಪಭಾರತ ಪ್ರಸಂಗ' ಪಠ್ಯವನ್ನು ಓದಿ ಮುಗಿಸಿದಾಗ ಮಹಾಭಾರತದ ಕಥನವು ಮತ್ತೊಮ್ಮೆ ನಮ್ಮ ಕಣ್ಣಮುಂದೆ ಬಂದು ಕುಣಿಯುತ್ತದೆ, ಮಾತನಾಡುತ್ತದೆ, ಅಭಿನಯಿಸುತ್ತದೆ. ಒಂದು ದೃಶ್ಯಕಾವ್ಯವಾಗಿ ಅದು ನಮ್ಮ ಮನೋಭೂಮಿಕೆಯಲ್ಲಿ ಚಿರಸ್ಥಾಯಿಯಾಗಿ ಉಳಿಯುತ್ತದೆ. ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯ 'ರೀಡಿಂಗ್' ಎನ್ನುವ ವಿಮರ್ಶೆಯ ಪರಿಭಾಷೆಗೆ ಡಾ.ಸಿ ಪಿ.ನಾಗರಾಜ್ ಅವರು ತಮ್ಮ ಈ ಕೃತಿಯ ಮೂಲಕ ಬಹುರೂಪಿ ಅರ್ಥದ ಹೊಸ ಆಯಾಮವನ್ನು ಜೋಡಿಸಿದ್ದಾರೆ.

೧೪ ಜೂನ್ ೨೦೨೪ **ಡಾ. ಬಿ. ಎ. ವಿವೇಕ ರೈ**

# ಬರಹಗಾರ

**ಹೆಸರು** : ಸಿ.ಪಿ.ನಾಗರಾಜ ( ೧೯೪೫ )

**ತಾಯಿ** : ಲಕ್ಷ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

**ತಂದೆ** : ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

**ಓದು** : ಎಂ.ಎ., ಪಿಎಚ್.ಡಿ.,

**ಕೆಲಸ** : ಕನ್ನಡ ಅಧ್ಯಾಪಕ

೧೯೭೧–೭೨ ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ.

೧೯೭೨–೨೦೦೩ ಭಾರತಿ ಕಾಲೇಜು, ಕಾಳಮುದ್ದನದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

೨೦೦೬–೨೦೨೧ ತೇಜಸ್ವಿ ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

## ಬರಹ

### ೧. ಮುದ್ರಿತ ಪುಸ್ತಕಗಳು

**ನಾಟಕ:**

| | | |
|---|---|---|
| ಭಾಗೀರಥಿ | ಅಂಬೆ | ಹಾವು |
| ಅಂಗಿಬಟ್ಟೆ | ಒಂದು ರೂಪಾಯಿ | ಕಳ್ಳರಿದ್ದಾರೆ ಎಚ್ಚರಿಕೆ |
| ಹೆಣದ ಹಣ | ಮೂರು ಸಾಮಾಜಿಕ ನಾಟಕಗಳು | |

**ಗದ್ಯ:**

| | |
|---|---|
| ಕರಿಯನ ಪುರಾಣ | ಕನಕನ ಅವ್ವ |
| ಹಳ್ಳಿಗಾಡಿನ ರೂವಾರಿ | ಡಾ.ಬಂದೀಗೌಡ |
| ಆಣೆ ಪ್ರಮಾಣಗಳು | ಬಯ್ಗುಳ |

ಸರ್ವಜ್ಞ ವಚನಗಳ ಓದು
ಅಲ್ಲಮ ವಚನಗಳ ಓದು
ಶಿವಶರಣೆಯರ ವಚನಗಳ ಓದು
ಶಿವಶರಣರ ವಚನಗಳ ಓದು
ಬಸವಣ್ಣ ವಚನಗಳ ಓದು
ಮುದ್ದೆಗಂಟು
ಶಿವಶರಣಶರಣೆಯರ ವಚನಗಳ ಓದು
ಪಂಪ ಭಾರತ ಓದು
ಸರ್ವಜ್ಞ ಮತ್ತು ಅಲ್ಲಮ ವಚನಗಳ ಓದು
ವಚನದಿಂದ ಆಯ್ದ ಸಾಲುಗಳ ಓದು
ಕುವೆಂಪು ಕವನಗಳ ಓದು
ಕನ್ನಡ ಬಯ್ಗುಳ ಓದು
ಬಸವಯುಗದ ವಚನಕಾರರು
ಕನಕದಾಸರ ರಾಮಧಾನ್ಯ ಪ್ರಸಂಗ ಓದು
ಬ್ರೆಕ್ಟ್ ಕವನಗಳ ಓದು
ರವೀಂದ್ರನಾಥ ಠಾಕೂರ್ ಕವನಗಳ ಓದು
ಸೀತಾ ಪರಿತ್ಯಾಗ ಪ್ರಸಂಗ
ಕುಮಾರವ್ಯಾಸ ಭಾರತ ಓದು–ಕೀಚಕನ ಪ್ರಸಂಗ ಮತ್ತು ಉತ್ತರ ಕುಮಾರನ ಪ್ರಸಂಗ

## ೨. ಡಿಜಿಟಲ್ ಪುಸ್ತಕಗಳು

೧. ಕನ್ನಡ ಸಾಹಿತ್ಯ ಸಂಚಯ :
https://cpnagaraj.sanchaya.net
೨. ಮೈಲಾಂಗ್–ಕನ್ನಡ ಇ ಬುಕ್ಸ್ – ಆಡಿಯೋ ಬುಕ್ಸ್
https://mylang.in
೩. ಋತುಮಾನ
https://ruthumana.com

## 3. C P Nagaraj-You Tube

Play lists
ಸರ್ವಜ್ಞನ ವಚನಗಳ ಓದು–೧೩ ಎಪಿಸೋಡ್
ಅಲ್ಲಮನ ವಚನಗಳ ಓದು– ೩೬ ಎಪಿಸೋಡ್
ಬಸವಣ್ಣನ ವಚನಗಳ ಓದು–೨೬ ಎಪಿಸೋಡ್
ಶಿವಶರಣಶರಣೆಯರ ವಚನಗಳ ಓದು–೫೨ ಎಪಿಸೋಡ್
ವಚನದಿಂದ ಆಯ್ದ ಸಾಲುಗಳ ಓದು–೧೬೨ ಎಪಿಸೋಡ್
ಮುದ್ದೆಗಂಟು–೬೦ ಎಪಿಸೋಡ್

ಹಳ್ಳಿಗಾಡಿನ ರೂವಾರಿ ಜಿ.ಮಾದೇಗೌಡ–೧೫ ಎಪಿಸೋಡ್
ಜನಪರ ಚೇತನ ಡಾ.ಬಂದೀಗೌಡ–೧೫ ಎಪಿಸೋಡ್
ಕುವೆಂಪು ಕವನಗಳ ಓದು–೧೩ ಎಪಿಸೋಡ್
ಪಂಪ ಭಾರತ ಪ್ರಸಂಗಗಳು – ೯ ಎಪಿಸೋಡ್
ಆಣೆ ಪ್ರಮಾಣಗಳ ಓದು–೧೦
ಕನಕದಾಸರ ರಾಮಧಾನ್ಯ ಪ್ರಸಂಗ–೧
ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಸೀತಾ ಪರಿತ್ಯಾಗ ಪ್ರಸಂಗ–೬
ಡಿ.ಎನ್. ಶಂಕರ ಭಟ್ – ಭಾಷೆಯ ಬಗೆಗೆ ನೀವೇನು ಬಲ್ಲಿರಿ–೪೧
ಸಿ.ಎಚ್. ರಾಜಶೇಖರ್– ಸಮಗ್ರ ಬುದ್ಧ ಸಾಹಿತ್ಯ ಮಾಲೆ–೩೦
ಕೆ.ವಿ. ನಾರಾಯಣ– ನುಡಿಯರಿಮೆ ಬರಹಗಳು–೨೬
ಕೆ.ವಿ. ನಾರಾಯಣ– ಕನ್ನಡ ಜಗತ್ತು : ಅರ್ಧ ಶತಮಾನ – ೯೧
ದೇವನೂರು ಮಹಾದೇವ – ಎದೆಗೆ ಬಿದ್ದ ಅಕ್ಷರ–೨೯
ಬಿ.ವಿ. ವೀರಭದ್ರಪ್ಪ – ವೇದಗಳಲ್ಲಿ ಜನಸಾಮಾನ್ಯರು–೪೦

ಗೂಗಿ ವಾ ಥಿಯಾಂಗೊ ವೈಚಾರಿಕ ಬರಹಗಳು–೧೩
(ಅನುವಾದ : ಎಚ್.ಎಸ್. ನಾಗಭೂಷಣ)

ಮುರಳಿಧರ ಜಗತಾಪ – ಸಮಾಜ ಸುಧಾರಕ ಮಹಾತ್ಮ ಫುಲೆ – ೨೭
(ಅನುವಾದ : ಅಕಿಂಚನ)

ಬರ್ಟ್ರೆಂಡ್ ರಸೆಲ್ – ಸುಖ ಸಾಧನೆ – ೬೪
(ಅನು : ಯೋಗನರಸಿಂಹಮ್)

ರೈನರ್ ಮಾರಿಯಾ ರಿಲ್ಕ್ – ಯುವಕವಿಗೆ ಬರೆದ ಪತ್ರಗಳು – ೧೦
(ಅನು : ಓ.ಎಲ್. ನಾಗಭೂಷಣ ಸ್ವಾಮಿ)

ರವೀಂದ್ರನಾಥ ಠಾಕೂರ್ ಕವನಗಳ ಓದು–೧೬

ಬ್ರೆಕ್ಟ್ ಕವನಗಳ ಓದು–೧೯

ಕನ್ನಡ ಬಯ್ಗುಳ ಓದು–ಪಿಎಚ್.ಡಿ. ಬರಹ–೨೦

---

**ವಿಳಾಸ :** ಸಿ.ಪಿ.ನಾಗರಾಜ, 75, 5ನೇ ಕ್ರಾಸ್, 'ಎ' ಬ್ಲಾಕ್, ಕೃಷ್ಣ ಗಾರ್ಡನ್, ಆರ್.ವಿ. ಕಾಲೇಜು ಅಂಚೆ, ಬೆಂಗಳೂರು–560 059. ಮೊ : 9986347521
e-mail : ngy7777@gmail.com